# ಪಾ. ವೆಂ. ಆಚಾರ್ಯ



# ಪದಾರ್ಥ ಚಿಂತಾಮಣಿ



**PADARTHA CHINTAMANI** (Kannada)
*A collection of 157 dissertations on words, their meanings, ramifications and forms written by P. V. Acharya*

**Fifth Print : 2011** **Pages : 352** **Price : ₹ 225**

*Paper used for this book :* 70 gsm NS Maplitho 18.6 Kgs (1/8 Demy Size)

ಮೊದಲನೇ ಮುದ್ರಣ : 1991
ಮರುಮುದ್ರಣಗಳು : 1998, 2006, 2010
ಐದನೇ ಮುದ್ರಣ : 2011



**ಬೆಲೆ : ₹ 225**

ಮುಖಪುಟ : ನವಕರ್ನಾಟಕ ವಿನ್ಯಾಸ

ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - 560 001
ದೂರವಾಣಿ : 22203580, 30578022 ಫ್ಯಾಕ್ಸ್ : 30578023
e-mail : navakarnataka@gmail.com
URL : www.navakarnataka.com
http://navakarnataka.blogspot.com

ಶಾಖೆಗಳು

| | | | |
|---|---|---|---|
| ಗಾಂಧಿನಗರ | ಕೆ. ಎಸ್. ರಾವ್ ರಸ್ತೆ | ರಾಮಸ್ವಾಮಿ ವೃತ್ತ | ಸ್ಟೇಷನ್ ರಸ್ತೆ |
| ಬೆಂಗಳೂರು-9 | ಮಂಗಳೂರು - 1 | ಮೈಸೂರು - 24 | ಗುಲ್ಬರ್ಗ-2 |
| ✆ 22251382 | ✆ 2441016 | ✆ 2424094 | ✆ 224302 |

**0505113112** **ISBN 978-81-7302-348-4**

Printed by R. S. Rajaram at Navakarnataka Printers, No. 167 & 168, 10th Main III Phase, Peenya Industrial Area, Bangalore - 560 058 and published by him for Navakarnataka Publications (P) Ltd., Embassy Centre, 11, Crescent Road, P. B. 5159, Bangalore - 560 001. Typeset at Trilok Typesetters, Chamarajpet, Bangalore - 560 018

# ನುಡಿನಮನ

ಭಾಷೆಯ ಸಂದರ್ಭದಲ್ಲಿ ನಾವು ಯಾವುದಕ್ಕೆ 'ಪದ' ಎಂದು ಹೇಳುತ್ತೇವೆಯೊ ಅದಕ್ಕೆ ಎರಡು ಮುಖಗಳುಂಟು. ಇವು ಒಂದೇ ನಾಣ್ಯದ ಎರಡು ಮುಖಗಳು. ಒಂದು ಅದರ ರೂಪ; ಇನ್ನೊಂದು ಅದರ ಅರ್ಥ. ಕನ್ನಡದಲ್ಲಿನ 'ಮರ' ಎಂಬ ಸಾಮಾನ್ಯ ಪದವನ್ನು ತೆಗೆದುಕೊಂಡರೆ, ಯಾವ ಯಾವ ಧ್ವನಿಗಳಿಂದ ಅದು ಸಿದ್ಧಿಸಿದೆ ಎನ್ನುವುದು ಅದರ ರೂಪ. ಮ್ ಅ ರ್ ಅ ಎಂಬ ಧ್ವನಿಗಳು ಆ ಕ್ರಮದಲ್ಲಿ ಕೂಡಿಕೊಂಡು 'ಮರ' ಎಂಬ ಪದ ಸಿದ್ಧಗೊಂಡಿದೆ. ಇದರಲ್ಲಿ ಯಾವ ಬದಲಾವಣೆಯಾದರೂ ಪದ 'ಮರ' ವಾಗಿ ಉಳಿಯುವುದಿಲ್ಲ. ಇದು ಆ ಪದದ ರೂಪ. 'ಮರ' ಎಂದರೆ ಏನು ? 'ಮರ' ಎಂದ ಕೂಡಲೆ ನಮ್ಮ ಮನಸ್ಸಿನಲ್ಲಿ ಕೆಲವು ಭಾವನೆಗಳು ಬರುತ್ತವೆ; ಚಿತ್ರಗಳು ಮೂಡುತ್ತವೆ. ಅದು ಪ್ರಶ್ನೆಗೆ ಉತ್ತರ. ಮರ ಎಂದೊಡನೆ ನಮಗೆ ಹುಲ್ಲಿನ ನೆನಪಾಗುವುದಿಲ್ಲ; ಹೂವಿನ ನೆನಪಾಗುವುದಿಲ್ಲ; ಹಣ್ಣಿನ ನೆನಪಾಗುವುದಿಲ್ಲ. ಮರ ಎನ್ನುವ ಮಾತು ಏನನ್ನು ಪ್ರತಿನಿಧಿಸುತ್ತದೋ ಅದನ್ನು ಬಿಟ್ಟು ಬೇರೆ ಯಾವುದೂ ಮನಸ್ಸಿನೆದುರು ಬರುವುದಿಲ್ಲ. ಒಂದು ಪದಕ್ಕೆ ಪ್ರತಿಕ್ರಿಯೆಯಾಗಿ ಯಾವುದು ನಮ್ಮೆದುರು ನಿಲ್ಲುತ್ತದೋ ಅದೇ ಆ ಪದದ ಅರ್ಥ. ಪದ ಅರ್ಥಗಳ ಸಂಬಂಧ ಇಷ್ಟೇ ಸುಲಭವಾಗಿದ್ದಿದ್ದರೆ, ಸರಳವಾಗಿದ್ದಿದ್ದರೆ ಆ ಕುರಿತು ತೊಂದರೆಯೇ ಇರುತ್ತಿರಲಿಲ್ಲ! ಆದರೆ ವಾಸ್ತವವಾಗಿ ಹಾಗಿಲ್ಲ. ಆದ್ದರಿಂದಲೇ ಪದ ಅರ್ಥಗಳ ಸಂಬಂಧ ಭಾಷಾವಿಜ್ಞಾನದ ಆಚೆಗೂ ಹೋಗಿದೆ; ತಾನೇ ಒಂದು ಶಾಸ್ತ್ರವಾಗಿ ಬೆಳೆದು ನಿಂತಿದೆ; ಇತರ ಶಾಸ್ತ್ರಗಳೊಡನೆ ನಿಕಟ ಸಂಬಂಧ ಬೆಳೆಸಿದೆ.

ಪದ ಅರ್ಥಗಳ ಸಂಬಂಧ ತತ್ತ್ವಶಾಸ್ತ್ರ ಮತ್ತು ಮನಶ್ಶಾಸ್ತ್ರಗಳೊಡನೆ ನಿಕಟ ಸಂಬಂಧ ಹೊಂದಿದೆ. ತರ್ಕಶಾಸ್ತ್ರ, ಸಮಾಜಶಾಸ್ತ್ರ, ಮಾನವಶಾಸ್ತ್ರ, ಇತಿಹಾಸ ಮೊದಲಾದವೂ ಈ ಸಂದರ್ಭದಲ್ಲಿ ನಮ್ಮ ನೆರವಿಗೆ ಬರುತ್ತವೆ. ಪದ ಮತ್ತು ಅರ್ಥಗಳ ಸಂಬಂಧವನ್ನು ಕುರಿತ ಶಾಸ್ತ್ರ (ಇದನ್ನು ಅರ್ಥ ಮೀಮಾಂಸೆ ಎಂದು ಕರೆಯುವುದು ಸೂಕ್ತವೇನೊ. ಏಕೆಂದರೆ, ಅರ್ಥಶಾಸ್ತ್ರ ಎಂದೊಡನೆಯೇ ನಮ್ಮ ಅರ್ಥ ಬೇರೆಯಾಗಿಬಿಡುತ್ತದೆ!) ಯಾಕೆ ಒಂದು ಸಮಸ್ಯೆಯಾಗಿದೆ ಎಂಬುದನ್ನು ತಿಳಿಯುವುದು ಅಷ್ಟೇನೂ ಕಷ್ಟವಲ್ಲ. ''ಹಸು ಪದದ ಅರ್ಥವೇನು ?'' ಎಂದು ಒಂದು ಹಳೆಯ ಪ್ರಶ್ನೆಯನ್ನೇ ನೋಡಿ. ಯಾವುದು ಹಸು ? ಇದು ಯಾವುದಾದರೂ ಒಂದು ಪ್ರಾಣಿಯೇ ? ನಾವು ಹಸು ಎಂದು ಕರೆಯುವ ಪ್ರಾಣಿಗಳ ಸಮೂಹವೆ ? ಒಂದು ಹಸು ಇನ್ನೊಂದು ಹಸುವಿನಂತಿರುವುದಿಲ್ಲ. ಹಸು ಎಂದೊಡನೆಯೆ ನಮ್ಮೆದುರು ಬರುವ ಚಿತ್ರ ಯಾವುದು ? ಬಣ್ಣವೆ, ಬಾಲವೆ, ಕೋಡೆ, ಹೊಟ್ಟೆಯೆ, ಕೆಚ್ಚಲೆ, ಯಾವುದು ? ಇದರಲ್ಲಿ ಯಾವುದೂ ಖಚಿತವಲ್ಲದಿದ್ದರೂ ನಾವು ಈ ಮೊದಲು ನೋಡಿರದ ಪ್ರಾಣಿಯನ್ನು ಹಸು ಎಂದು ಗುರುತಿಸಲಾರೆವೆ ? ಈ ಬಗೆಯ ಪ್ರಶ್ನೆಗಳಿಗೆ ಉತ್ತರ ಹುಡುಕುತ್ತಿರುವಂತೆಯೇ ನಾವು ತತ್ತ್ವಶಾಸ್ತ್ರದ ಗೋಜಲಿನಲ್ಲಿ ಸಿಕ್ಕಿಕೊಳ್ಳುತ್ತೇವೆ! ಇದು ಇಂದು ನಿನ್ನೆಯ ಕಥೆಯಲ್ಲ, ಬಹಳ ಪ್ರಾಚೀನವಾದದ್ದು; ತುಂಬ ಜಟಿಲವಾದದ್ದು. ಫಲವಾಗಿ ಸಂಪ್ರದಾಯದ ಹಾಗೂ ವಾಸ್ತವದ ಪ್ರತ್ಯೇಕ

ಪಂಥಗಳೇ ಕಾಣಿಸಿಕೊಂಡವು. ಈ ಕುರಿತ ಚರ್ಚೆಗೆ ಇನ್ನೂ ತೆರೆ ಬಿದ್ದಿಲ್ಲ.

ಭಾಷೆ ನಿಂತ ನೀರಲ್ಲ; ಸತತವಾಗಿ ಪ್ರವಹಿಸುವಂಥದು. ಹಾಗೆಯೇ ಪದಗಳ ರೂಪಗಳಾಗಲಿ, ಅರ್ಥಗಳಾಗಲಿ ಖಚಿತವಾಗಿ ನಿಂತಿರುವುದಿಲ್ಲ. ರೂಪಗಳಲ್ಲಿ ವ್ಯತ್ಯಾಸವಾಗಬಹುದು; ಅರ್ಥಗಳಲ್ಲಿ ವ್ಯತ್ಯಾಸವಾಗಬಹುದು; ಎರಡರಲ್ಲಿಯೂ ವ್ಯತ್ಯಾಸವಾಗಬಹುದು. ಒಂದು ಭಾಷೆಯೊಡನೆ ಇನ್ನೊಂದು ಭಾಷೆಯ ಸಂಬಂಧ ಮೊದಲಿನಿಂದಲೂ ಏರ್ಪಟ್ಟುಕೊಂಡೇ ಬಂದಿದೆ. ಸಂಪರ್ಕ ಸಾಧ್ಯತೆಗಳು ಕಡಮೆ ಇದ್ದಾಗ ಈ ಸಂಬಂಧ ತೆಳುವಾಗಿತ್ತು; ಸಾಧ್ಯತೆಗಳು ಹೆಚ್ಚುತ್ತ ಬಂದಂತೆ ಸಂಬಂಧ ಗಾಢವಾಗುತ್ತಲೂ ಬಂತು. ಭಾಷೆ ಒಂದು ಸಾಮಾಜಿಕ ವ್ಯವಸ್ಥೆಯಾಗಿರುವುದರಿಂದ ಅದು ಯಾವತ್ತೂ ದ್ವೀಪಜೀವಿಯಾಗಿ ನಿಲ್ಲುವುದು ಸಾಧ್ಯವಿಲ್ಲ. ಸಾಮಾಜಿಕ ಸಂಬಂಧ, ಪ್ರಭಾವಗಳಂತೆಯೇ ಭಾಷಿಕ ಸಂಬಂಧ, ಪ್ರಭಾವಗಳೂ ಬೆಳೆಯುತ್ತವೆ. ಒಂದು ಭಾಷೆ ಇನ್ನೊಂದು ಭಾಷೆಯಿಂದ ತೆಗೆದುಕೊಳ್ಳುತ್ತದೆ; ಮತ್ತೊಂದು ಭಾಷೆಗೆ ಕೊಡುತ್ತದೆ. ಈ ಕೊಡು ಕೊಳ್ಳುವಿಕೆಯಿಂದ ಅರ್ಥಮೀಮಾಂಸೆಯ ಸ್ವರೂಪ ಹೆಚ್ಚು ಹೆಚ್ಚು ಸಂಕೀರ್ಣಗೊಳ್ಳುತ್ತದೆ. ವ್ಯಾಕರಣ ವಿಜ್ಞಾನದಲ್ಲಿ ಮೊದಲಿನಿಂದಲೂ ಇದರ ಕಡೆ ಗಮನ ಕೊಡಲಾಗಿದೆ.

ಇದೆಲ್ಲದರ ಪರಿಣಾಮವಾಗಿ ಅರ್ಥಮೀಮಾಂಸೆಯಲ್ಲಿ ನಾವು ಅನೇಕ ಅಂಶಗಳ ಕಡೆಗೆ ಗಮನಹರಿಸಬೇಕಾಗಿದೆ. ಒಂದು ಪದಕ್ಕೆ ಒಂದು ಅರ್ಥಕ್ಕಿಂತ ಹೆಚ್ಚು ಅರ್ಥಗಳಿರಬಹುದು. ಯಾವುದೇ ಭಾಷೆಯ ಅರ್ಥಕೋಶವನ್ನು ತೆಗೆದು ನೋಡಿದರೆ ಅಲ್ಲಿ ಒಂದು ಪದಕ್ಕೆ ಹಲವು ಅರ್ಥಗಳನ್ನು ಕೊಟ್ಟಿರುತ್ತಾರೆ. 'ಆಣೆ' ಎಂದರೆ ಒಂದು ನಾಣ್ಯವಾಗಬಹುದು; ಪ್ರತಿಜ್ಞಾಸೂಚಕ ಮಾತೂ ಆಗಬಹುದು. ಬೇರೆ ಬೇರೆ ಪದಗಳು ಒಂದೇ ಅರ್ಥವನ್ನು ಕೊಡಬಹುದು. ನಾವು ಬಳಸುತ್ತಿರುವ 'ಮುಗಿಲು,' 'ಮೋಡ' ಪದಗಳನ್ನು ನೆನಪಿಸಿಕೊಳ್ಳಬಹುದು. ಕೆಲವು ಪದಗಳಲ್ಲಿ ಅರ್ಥದ ಬೇರೆ ಬೇರೆ ಸ್ತರಗಳನ್ನು ಕಾಣಬಹುದು. 'ಹುಡುಗ', 'ಹುಡುಗಿ' ಪದಗಳು ವಯಸ್ಸು, ಲಿಂಗಗಳನ್ನು ಸೂಚಿಸುತ್ತವೆ; ಹಾಗೆಯೇ 'ಮುದುಕ', 'ಮುದುಕಿ'. ಕೆಲವು ಪದಗಳು, ಬೇರೆ ಪದಗಳೊಂದಿಗೆ ಬಂದಾಗ, ಸಂದರ್ಭಾನುಸಾರ ತಮ್ಮ ಮೂಲ ಅರ್ಥಕ್ಕಿಂತ ಬೇರೆಯಾದ ಅರ್ಥವನ್ನು ಕೊಡುತ್ತವೆ. ''ಕಾಲಿಗೆ ಬುದ್ಧಿ ಹೇಳು'' ಎಂಬ ಮಾತುಗಳನ್ನೇ ನೋಡಿ. ಕೆಲವು ಪದಗಳ ಅರ್ಥವನ್ನು ಬೇರೆ ಪದಗಳ ಅರ್ಥದಲ್ಲಿಯೂ ಕಾಣಬಹುದು. 'ಮರ' ಎನ್ನುವುದರಲ್ಲಿ 'ಗಿಡ' ಸೇರಿರುತ್ತದೆ; 'ಅಶ್ವತ್ಥ' ಎನ್ನುವುದರಲ್ಲಿ 'ಮರ' ಕೂಡಿರುತ್ತದೆ! ಒಂದು ಭಾಷೆಯ ಪದ ಇನ್ನೊಂದು ಭಾಷೆಗೆ ಬಂದಾಗ ತನ್ನ ಅರ್ಥವನ್ನು ಬದಲಾಯಿಸಿಕೊಳ್ಳುತ್ತದೆ. 'ಅವಸರ'ದಂಥ ಎಷ್ಟೋ ಸಾಮಾನ್ಯ ಸಂಸ್ಕೃತ ಪದಗಳನ್ನು ಇದಕ್ಕೆ ಉದಾಹರಿಸಬಹುದು. ಕಾಲ ಕಾಲಕ್ಕೆ ಪದಗಳ ಅರ್ಥ ಬದಲಾಗುತ್ತದೆ. ಒಂದು ಕಾಲದಲ್ಲಿ ಅಪ್ಪನಾಗಿದ್ದ 'ಅಮ್ಮ' ಪದ ಇನ್ನೊಂದು ಕಾಲದಲ್ಲಿ 'ತಾಯಿ'ಯಾಗುತ್ತದೆ. ಪದ ಅರ್ಥಗಳ ನಡುವಿನ ಸಂಬಂಧದ ಸಂಕೀರ್ಣತೆಗೆ ಇವು ಸಾಕ್ಷಿ.

ಭಾಷೆಯ ಪ್ರತಿಯೊಂದು ಪದಕ್ಕೂ ಅದರದೇ ಆದ ಒಂದು ಚರಿತ್ರೆ ಇರುತ್ತದೆ; ಕಥೆ ಇರುತ್ತದೆ. ಭಾಷೆಯ ಚರಿತ್ರೆಗೆ ಅದರ ಪದಗಳ ಈ ಸ್ವರೂಪದಿಂದಾಗಿ ಸ್ವಾರಸ್ಯ ಬರುತ್ತದೆ. ಪದಗಳ ಬದುಕು ಭಾಷೆಗೆ ಸಾಕಷ್ಟು ಸೊಗಸನ್ನು ತರುತ್ತದೆ. ಒಂದು ಪದದ ಬದುಕು ಎಂದರೆ ಒಬ್ಬ ಮನುಷ್ಯನ ಬದುಕಿನಂತೆಯೇ! ಅದು ಹುಟ್ಟುತ್ತದೆ, ಹೋರಾಡುತ್ತದೆ, ಸಾಯುತ್ತದೆ. ಭಾಷೆಯ ಚರಿತ್ರೆಯಲ್ಲಿ, ಅರ್ಥಮೀಮಾಂಸೆಯ

ಅಧ್ಯಯನದಲ್ಲಿ ಇದಕ್ಕೆ ಬೇಕಾದಷ್ಟು ಸಾಕ್ಷ್ಯಾಧಾರಗಳು ದೊರೆಯುತ್ತವೆ. ಪದಗಳ ಈ ಬಗೆಯ ಅಧ್ಯಯನ ಇಂಗ್ಲಿಷಿನಲ್ಲಿ ಸಾಕಷ್ಟು ನಡೆದಿದೆ. ಟ್ರೆಂಚ್, ವೇಂಡ್ರೇಸ್, ಟಕ್ಕರ್, ಬ್ರೀಲ್, ಕಿಟ್ರಿಜ್, ಗ್ರೀನಫ್, ಅರ್ನೆಸ್ಟ್‌ವೀಕ್ಲಿ, ಐಫರ್ ಬ್ರೌನ್ ಮೊದಲಾದವರು ಈ ದಿಕ್ಕಿನಲ್ಲಿ ತುಂಬ ಕೆಲಸ ಮಾಡಿದ್ದಾರೆ. ಎಷ್ಟರ ಮಟ್ಟಿಗೆ ಈ 'ಪದಾರ್ಥ ಅಧ್ಯಯನ' ನಡೆದಿದೆ ಎಂದರೆ, 'ವರ್ಡ್‌ಲೋರ್' (wordlore, ಪದಪರಂಪರೆ) ಎಂಬ ಹೆಸರಿನಲ್ಲಿ ಇದು ಪ್ರತ್ಯೇಕ ಸ್ಥಾನವನ್ನೇ ಗಳಿಸಿದೆ.

ನಮ್ಮ ಭಾರತೀಯ ಭಾಷೆಗಳಲ್ಲಿ ಈ ಬಗೆಯ ಕೆಲಸ ಇಲ್ಲವೆನ್ನುವಷ್ಟರ ಮಟ್ಟಿಗೆ ವಿರಳ. ಇದಕ್ಕೆ ಕಾರಣವಿಲ್ಲದೆ ಇಲ್ಲ. ಇಂಗ್ಲಿಷಿನಂಥ ಭಾಷೆಯಲ್ಲಿ ಈ ಬಗೆಯ ಅಧ್ಯಯನಕ್ಕೆ ಅಗತ್ಯವಾದ ಸಾಮಗ್ರಿ ಸಿದ್ಧಗೊಂಡಿದೆ. ಬಗೆ ಬಗೆಯ ನಿಘಂಟುಗಳು ಅಲ್ಲಿ ಸಿದ್ಧವಾಗಿವೆ. ಒಂದು ಪದ ಭಾಷೆಗೆ ಮೊದಲು ಯಾವಾಗ ಬಂತು? ಆಮೇಲೆ ಕಾಲಕಾಲಕ್ಕೆ ಹೇಗೆ ಬದಲಾಯಿತು ಎನ್ನುವುದನ್ನು ಹೇಳುವುದಕ್ಕೆ ಆಧಾರಗಳು ಸುಲಭವಾಗಿ ದೊರೆಯುತ್ತವೆ. ಅವನ್ನು ಬಳಸಿಕೊಳ್ಳುವುದಷ್ಟೆ 'ವರ್ಡ್‌ಲೋರ್' ವಿದ್ವಾಂಸರು ಮಾಡಬೇಕಾದ ಕೆಲಸ. ನಮ್ಮಲ್ಲಾದರೊ, ಇದಕ್ಕೆ ಸಂಪೂರ್ಣ ವಿರುದ್ಧವಾದ ಪರಿಸ್ಥಿತಿ. ಬಹಳ ಪಾಲು ಭಾಷೆಗಳಲ್ಲಿ ಅಧಿಕೃತವಾದ ನಿಘಂಟುಗಳೇ ಇಲ್ಲ. ಹೀಗಿರುವಾಗ ಬೇರೆ ಬೇರೆ ರೀತಿಯ ನಿಘಂಟುಗಳನ್ನು ಹೇಗೆ ನಿರೀಕ್ಷಿಸಬಹುದು? ಪ್ರಾಚೀನ ಗ್ರಂಥಗಳು ಎಲ್ಲವೂ ಅಚ್ಚಾಗಿಲ್ಲ. ಉಪಭಾಷಾ ಸಮೀಕ್ಷೆಗಳು ನಡೆಯದೆ ಆಡುನುಡಿಯಲ್ಲಿ ಉಳಿದು ಹೋಗಿರುವ, ಕಳೆದು ಹೋಗುತ್ತಿರುವ ಪದಸಂಪತ್ತು ಬಳಕೆಗೆ ಸಿಕ್ಕುತ್ತಿಲ್ಲ. ಬಹು ಭಾಷೆಗಳನ್ನು ಬಲ್ಲ ವಿದ್ವಾಂಸರೂ ಅಷ್ಟಾಗಿ ಇಲ್ಲ. ಈ ಮೊದಲಾದ ಕಾರಣಗಳಿಂದ ನಮ್ಮಲ್ಲಿ ಬೆಳೆಯಬೇಕಾದಷ್ಟು ಮಟ್ಟಿಗೆ 'ವರ್ಡ್‌ಲೋರ್' ಬೆಳೆದಿಲ್ಲ; ಆ ಅಧ್ಯಯನ ನಡೆದಿಲ್ಲ. ಇದು ಇಲ್ಲಿ ಕನ್ಯನೆಲ. ಪ್ರತಿಯೊಬ್ಬನೂ ಆರಂಭದಿಂದಲೇ ತೊಡಗಬೇಕು. ತನ್ನದೇ ಆದ ಸಿದ್ಧತೆಗಳನ್ನು ಮಾಡಿಕೊಳ್ಳಬೇಕು. ಕೆಲವು ವರ್ಷಗಳ ಹಿಂದೆ ತಮಿಳಿಗೆ ಸಂಬಂಧಿಸಿದಂತೆ ಇಂಥದೊಂದು ಕೆಲಸ ಕೈಗೊಂಡಿದ್ದ ಡಾ. ಆರ್. ಪಿ. ಸೇತುಪಿಳ್ಳೆಯವರು ಹೇಳಿದ್ದ ಮಾತುಗಳು ನೆನಪಿಗೆ ಬರುತ್ತಿವೆ: ''ಇಂಥ ಕೆಲಸ ಮಾಡಲು ಅಗತ್ಯವಾದ ಸಾಮಗ್ರಿ ತಮಿಳು ವಿದ್ಯಾರ್ಥಿಗಳಿಗೆ ಲಭ್ಯವಿಲ್ಲ. ಆದ್ದರಿಂದ ಈ ಅಧ್ಯಯನ ಲೇಖಕನ ಸ್ವಂತ ಓದನ್ನು ಆಧರಿಸಿದೆ. ಉದಾಹರಣೆಗಳನ್ನು ಪ್ರತಿಯೊಂದು ಶತಮಾನದ, ಪ್ರತಿಯೊಬ್ಬ ಲೇಖಕನ ಕೃತಿಗಳಿಂದ ಆಯ್ದು ತಮಿಳು ಸಾಹಿತ್ಯದ ಉದ್ದಕ್ಕೂ ಪದಗಳು ಪಡೆದ ಬದಲಾವಣೆಗಳನ್ನು ಸೂಚಿಸಿದೆ.'' ನನಗೆ ತಿಳಿದಂತೆ ತಮಿಳಿನಲ್ಲಿ ಇನ್ನೊಬ್ಬರು ಇಂಥ ಕೆಲಸ ಮಾಡಲಿಲ್ಲ!

ಕನ್ನಡದಲ್ಲಂತೂ ಈ ಬಗೆಯ ಕೆಲಸ ಆಗಿಯೇ ಇಲ್ಲ. ತಮಗೆ ಸಮಸ್ಯೆಗಳನ್ನೊಡ್ಡಿದ ಕೆಲವು ಪದಗಳ ಇತಿಹಾಸವನ್ನು ಕೆದಕಲು, ನಿಜರೂಪವನ್ನು ಕಂಡುಹಿಡಿಯಲು ಡಿ. ಎಲ್. ನರಸಿಂಹಾಚಾರ್, ತೀ. ನಂ. ಶ್ರೀಕಂಠಯ್ಯ, ಸೇಡಿಯಾಪು ಕೃಷ್ಣಭಟ್ಟರಂಥ ವಿದ್ವಾಂಸರು ಬಿಡಿ ಲೇಖನಗಳನ್ನು ಬರೆದರು. ನರಸಿಂಹಾಚಾರ್ಯರು 'ಶಬ್ದವಿಹಾರ' ಎಂಬ ಒಂದು ಪುಟ್ಟ ಪುಸ್ತಕವನ್ನೇ ಪ್ರಕಟಿಸಿದ್ದರು (೧೯೫೬). ಆರ್. ನರಸಿಂಹಾಚಾರ್ಯರು ಕನ್ನಡ ಭಾಷೆಯ ಚರಿತ್ರೆ ಬರೆಯುವಾಗ ಕೆಲವು ಪದಗಳ ಸ್ವಾರಸ್ಯದ ಸೂಚನೆ ಕೊಟ್ಟರು. ಶಂ. ಬಾ. ಜೋಶಿ ಅವರ ಬರಹಗಳಲ್ಲಿ ಒಮ್ಮೊಮ್ಮೆ ಈ ಬಗೆಯ ಶಬ್ದವಿವೇಚನೆಯನ್ನು ಕಾಣಬಹುದು. ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರೀ, ಡಾ. ಎಂ. ಎಂ. ಕಲಬುರ್ಗಿ,

ಡಾ. ಎಂ. ಚಿದಾನಂದಮೂರ್ತಿ, ಡಾ. ಹಂಪ ನಾಗರಾಜಯ್ಯ ಮೊದಲಾದ ಇಂದಿನ ಸಂಶೋಧಕರು ಕೆಲವರು ಅನೇಕ ಹಳೆಯ ಪದಗಳ ಸರಿಯಾದ ರೂಪ ನಿರ್ಧರಿಸುವುದರಲ್ಲಿ, ಅರ್ಥ ನಿಷ್ಕರ್ಷಿಸುವುದರಲ್ಲಿ ತಕ್ಕಷ್ಟು ಕೆಲಸ ಮಾಡಿದ್ದಾರೆ. ಕೆಲವು ಪಂಡಿತ ಪತ್ರಿಕೆಗಳಲ್ಲಿ ಇದಕ್ಕಾಗಿಯೇ ಅಂಕಣಗಳು ನಡೆದಿರುವುದೂ ಉಂಟು. ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನಲ್ಲಿ ಪದಗಳ ಬಳಕೆಯ ಕ್ರಮವನ್ನು ಸ್ಥೂಲವಾಗಿ ನೋಡಬಹುದು; ಖಚಿತವಾಗಿ ಕಾಣಲಾಗದು. ಇದೆಲ್ಲವೂ ವಿದ್ವತ್ ಪ್ರಪಂಚದ ಕೆಲಸ. ನಮ್ಮಲ್ಲಿ ಯಾವುದೇ ಕ್ಷೇತ್ರದಲ್ಲಾಗಲಿ, ವಿದ್ವತ್ತಿನ ಪರಿಶ್ರಮ ಸುಲಭವಾಗಿ, ಸರಳವಾಗಿ ಸಾಮಾನ್ಯ ಜನರಿಗೆ ತಲಪುವ ಕೆಲಸ ನಡೆದಿರುವುದು ವಿರಳ. 'ವರ್ಡ್‌ಲೋರ್' ಇದಕ್ಕೆ ಹೊರತಲ್ಲ. ಪದ ಪ್ರಪಂಚದ ಸ್ವಾರಸ್ಯಗಳನ್ನು ಜನರಿಗೆ ಮುಟ್ಟಿಸುವ ಕೆಲಸ ಆಗಿಯೇ ಇಲ್ಲ ಎಂದರೆ ಉತ್ಪ್ರೇಕ್ಷೆಯಾಗುವುದಿಲ್ಲ. ಅದಕ್ಕೆ ಬೇಕಾದ ಶಕ್ತರು ಇರಲಿಲ್ಲವೆಂದಲ್ಲ; ಆದರೆ ಅವರು ಇತ್ತ ಗಮನ ಕೊಡಲಿಲ್ಲ, ಅಷ್ಟೆ.

ಪ್ರಸ್ತುತ ಪುಸ್ತಕ 'ಪದಾರ್ಥ ಚಿಂತಾಮಣಿ' ಈ ದಿಕ್ಕಿನಲ್ಲಿ ಒಂದು ಮಹತ್ವದ ಹೆಜ್ಜೆ. ಇದನ್ನು ರಚಿಸಿರುವವರು ನಮ್ಮ ನಾಡಿನ ವಿರಳ ಬಹುಶ್ರುತರಲ್ಲಿ ಒಬ್ಬರಾದ ಪಾ. ವೆಂ. ಆಚಾರ್ಯ ಅವರು. ವಿವಿಧ ಹೆಸರುಗಳಲ್ಲಿ ಬರೆಯುತ್ತಿದ್ದ ಅವರು 'ಲಾಂಗೂಲಾಚಾರ್ಯ' ಎಂಬ ಹೆಸರಿನಿಂದಲೇ ಪ್ರಸಿದ್ಧರು. ಆ ಹೆಸರಿನಿಂದಲೇ ಅವರು ಪ್ರಕಟಿಸಿರುವ ನಾಲ್ಕಾರು ವ್ಯಂಗ್ಯ ವಿಡಂಬನೆಯ ಪ್ರಬಂಧ ಪುಸ್ತಕಗಳು ಕನ್ನಡಕ್ಕೆ ಸಂದ ಒಳ್ಳೆಯ ಕೊಡುಗೆಗಳಾಗಿವೆ. ಕನ್ನಡ ಮತ್ತು ತುಳು ಭಾಷೆಗಳಲ್ಲಿ ಅವರು ಕವನ ಸಂಕಲನಗಳನ್ನೂ ಪ್ರಕಟಿಸಿದ್ದಾರೆ. ನಾನು ಚಿಕ್ಕ ಹುಡುಗನಾಗಿದ್ದಾಗ ಓದಿದ್ದ ಅವರ 'ರಶಿಯಾದ ರಾಜ್ಯಕ್ರಾಂತಿ' ಇನ್ನೂ ನೆನಪಿನಲ್ಲಿ ನಿಂತಿದೆ! ಅವರು ರೂಪಿಸಿದ 'ಕಸ್ತೂರಿ' ಮಾಸ ಪತ್ರಿಕೆ ಯಾರಿಗೆ ಗೊತ್ತಿಲ್ಲ? ಅದನ್ನು ಅವರು ಕನ್ನಡದ ಅತಿ ವಿಶಿಷ್ಟ ನಿಯತಕಾಲಿಕವನ್ನಾಗಿ ಮಾಡಿದ್ದರು. ಅದರಲ್ಲಿ ವಿವಿಧ ಅಂಕಣಗಳನ್ನು ಜೋಡಿಸಿ ಜ್ಞಾನಾಸಕ್ತ ಕನ್ನಡಿಗರಿಗೆ ಉಪಕಾರವೆಸಗಿದ್ದರು. ಕನ್ನಡ ಓದುಗರು ಅದನ್ನು ಮರೆಯುವಂತೆಯೇ ಇಲ್ಲ.

'ಕಸ್ತೂರಿ'ಯಲ್ಲಿ ಅವರು ಪರಿಚಯಿಸಿದ ಒಂದು ಅಂಕಣವೆಂದರೆ 'ನಿಮ್ಮ ಶಬ್ದ ಭಾಂಡಾರ ಬೆಳೆಯಲಿ.' ಮೂಲತಃ 'ರೀಡರ್ಸ್ ಡೈಜೆಸ್ಟ್' ಮಾಸಿಕದಿಂದ ಪ್ರೇರಣೆ ಗೊಂಡದ್ದಾದರೂ, ಈ ಅಂಕಣ ಕನ್ನಡ ಓದುಗರ ಶಬ್ದಶಕ್ತಿಯನ್ನು ಬೆಳೆಸುವಲ್ಲಿ ನೆರವಾಗುತ್ತ ಬಂದಿದೆ. ಪ್ರತಿ ತಿಂಗಳೂ ಈ ಅಂಕಣದಲ್ಲಿ ಹತ್ತು ಹನ್ನೆರಡು ಶಬ್ದಗಳನ್ನು ಕೊಟ್ಟು ಪ್ರತಿಯೊಂದಕ್ಕೂ ನಾಲ್ಕು ನಾಲ್ಕು ಅರ್ಥಗಳನ್ನು ಕೊಡಲಾಗುವುದು. ಮುಂದಿನ ಪುಟದಲ್ಲಿ ಸರಿಯಾದ ಅರ್ಥವನ್ನು ಹೇಳಲಾಗಿರುತ್ತದೆ. ಓದುಗರು ಉತ್ತರಗಳನ್ನು ನೋಡದೆ, ಮೊದಲು ತಾವೇ ಸರಿಯುತ್ತರಗಳನ್ನು ಗುರುತು ಮಾಡಿಕೊಂಡು ಆಮೇಲೆ ಅವನ್ನು ಸರಿಯುತ್ತರಗಳೊಡನೆ ಹೋಲಿಸಬೇಕು. ತಮ್ಮ ಶಬ್ದಶಕ್ತಿಯನ್ನು ಅಳೆದು ಕೊಳ್ಳಲು ಅವರಿಗೆ ಇದೊಂದು ಮಾರ್ಗ. ಉತ್ತರಗಳಲ್ಲಿ ಆ ಶಬ್ದಗಳಿಗೆ ಸಂಬಂಧಿಸಿದ ವಿವರಗಳೂ ಇರುವುದರಿಂದ, ಶಬ್ದಗಳ ಸ್ವರೂಪವನ್ನು ತಿಳಿದುಕೊಳ್ಳಲು ಇದೊಂದು ಅವಕಾಶ. ಈ ಅಂಕಣ 'ಕಸ್ತೂರಿ'ಯಲ್ಲಿ ಈಗಲೂ ಪ್ರಕಟವಾಗುತ್ತಿದೆ. ಇದನ್ನು ಸಿದ್ಧಪಡಿಸುವವರು ಆಚಾರ್ಯರೆಂದೇ ನನ್ನ ತಿಳಿವಳಿಕೆ.

ಕಳೆದ ಹತ್ತು ಹನ್ನೆರಡು ವರ್ಷಗಳಿಂದ 'ಕಸ್ತೂರಿ'ಯಲ್ಲಿಯೇ ಆಚಾರ್ಯರು ಬರೆಯುತ್ತಿರುವ ಇನ್ನೊಂದು ಪುಟ್ಟ ಅಂಕಣ – 'ಪದಾರ್ಥ-ಚಿಂತಾಮಣಿ.' ಹೆಸರೇ

ಹೇಳುವಂತೆ ಅದು ಪದ ಮತ್ತು ಅರ್ಥಗಳನ್ನು ಕುರಿತ ಜಿಜ್ಞಾಸೆ. ಇತ್ತೀಚಿನ 'ಕಸ್ತೂರಿ'ಯಲ್ಲಿ ಈ ಅಂಕಣದ ೧೪೭ನೇ ಕಂತು ಪ್ರಕಟಗೊಂಡಿದೆ. ಈಗ ನಮ್ಮೆದುರಿಗಿರುವ ಪುಸ್ತಕ ಈ ಅಂಕಣ ಬರಹಗಳ ಒಂದು ಸಂಗ್ರಹ. ಅಂಕಣದ ೮೮ ಕಂತುಗಳು ಇದರಲ್ಲಿ ಕೂಡಿವೆ. ಈ ಪದಜಿಜ್ಞಾಸೆಯನ್ನು ನಾನು ಆರಂಭದಿಂದಲೂ ಕುತೂಹಲ ಆಸಕ್ತಿಗಳಿಂದ ಓದಿಕೊಂಡು ಬಂದಿದ್ದೇನೆ. ಅದು ನನಗೆ ಸಂತೋಷವನ್ನು ಕೊಟ್ಟಿದೆ. ಅನೇಕ ಸಂದರ್ಭಗಳಲ್ಲಿ, ಆಲೋಚನೆಗೆ ಹಚ್ಚಿ ಒಂದು ನಿಘಂಟಿನಿಂದ ಇನ್ನೊಂದು ನಿಘಂಟಿಗೆ ಹೋಗುವಂತೆಯೂ ಮಾಡಿದೆ. ಈ ಬರಹದ ಒಂದೊಂದು ಕಂತೂ ಸಾಮಾನ್ಯವಾಗಿ ಎರಡೆರಡು ಪುಟಗಳದ್ದು. ಪ್ರತಿಯೊಂದು ಕಂತಿನಲ್ಲಿಯೂ ನಿತ್ಯಬಳಕೆಯಲ್ಲಿರುವ ನಾಲ್ಕಾರು ಪದಗಳನ್ನು ಅಥವಾ ಪದಗುಚ್ಛಗಳನ್ನು ಕುರಿತಂತೆ ಸಮಾಲೋಚಿಸಲಾಗುತ್ತದೆ. ಆ ಪದಗಳ ಬಗೆಗೆ ನಮಗೆ ತಿಳಿದಿರದ ಎಷ್ಟೋ ಸಂಗತಿಗಳು ಈ ಬರಹದಲ್ಲಿರುತ್ತವೆ. ಈ ಸಂಗತಿಗಳು ರೂಪಕ್ಕೆ ಸಂಬಂಧಿಸಿರಬಹುದು; ಅರ್ಥಕ್ಕೆ ಸಂಬಂಧಿಸಿರಬಹುದು; ಭಾಷೆಗಳ ಪರಸ್ಪರ ಸಂಬಂಧಗಳನ್ನೇ ಕುರಿತಿರಬಹುದು. ಇದು ಕನ್ನಡ 'ವರ್ಡ್‌ಲೋರ್'ಗೆ ಸಂಬಂಧಿಸಿದ ಮೊತ್ತ ಮೊದಲ ಪುಸ್ತಕ.

ಪ್ರತಿಯೊಂದು ಪದಕ್ಕೂ ಅದರದೇ ಆದ ಚರಿತ್ರೆಯುಂಟು, ಐತಿಹ್ಯವುಂಟು, ಕಥೆಯುಂಟು. 'ಪದಾರ್ಥ-ಚಿಂತಾಮಣಿ'ಯಲ್ಲಿ ಕಾಣಿಸಿಕೊಳ್ಳುವ ಪ್ರತಿಯೊಂದು ಪದವನ್ನೂ ಈ ದೃಷ್ಟಿಗಳಿಂದ ಕಾಣಲಾಗಿದೆ. ಇಲ್ಲಿನ ಒಂದೊಂದು ಪದವನ್ನೂ ಬಹಳ ಸ್ಥೂಲವಾಗಿ ಪರಿಶೀಲಿಸಲಾಗಿದೆ. ಲೇಖಕರ ದೃಷ್ಟಿ ಚರಿತ್ರೆಯ ನಿರೂಪಣೆಯಲ್ಲ; ಸ್ವಾರಸ್ಯ ಕಥನ. ಹಾಗೆಂದರೆ ಕಲ್ಪನೆಯೆಂದು ಭಾವಿಸಬಾರದು. ಎಲ್ಲದಕ್ಕೂ ಆಧಾರವಿರುತ್ತದೆ. ಕೆಲವು ಸಲ ನಮ್ಮ ವ್ಯಾಖ್ಯಾನ ತಪ್ಪಾಗಬಹುದು; ಇನ್ನು ಕೆಲವು ಸಲ ಬಹುದೂರದ ಸಂಬಂಧಗಳು ಏರ್ಪಡಬಹುದು; ಮತ್ತೆ ಕೆಲವು ಸಲ ಸಂಬಂಧಗಳು ತಪ್ಪಿಸಿಕೊಳ್ಳಬಹುದು; ಅನೇಕ ಸಲ, ಸಂಕ್ಷಿಪ್ತತೆಯ ಕಾರಣದಿಂದ ಬೇಕಾದ ಮಾಹಿತಿಗಳನ್ನೆಲ್ಲ ಕೊಡಲಾಗದಿರಬಹುದು. ಒಟ್ಟಿನಲ್ಲಿ ಇಲ್ಲಿ ನಂಬಲರ್ಹವಾದ ವಿವೇಚನೆಯಿದೆ; ಸಾಧಾರವಾದ ಮಾಹಿತಿಯಿದೆ.

ಪದಪ್ರಪಂಚ ತುಂಬ ಸ್ವಾರಸ್ಯವಾದದ್ದು; ಅಷ್ಟೇ ಜಟಿಲವಾದದ್ದು. ಅಲ್ಲಿ ಪ್ರತಿಯೊಂದಕ್ಕೂ ಕಾರಣ ಹೇಳಲಾಗುವುದಿಲ್ಲ; ವಿವರಣೆ ಕೊಡಲಾಗುವುದಿಲ್ಲ. ಪದ ಅರ್ಥಗಳ ಬೆಳವಣಿಗೆಗೆ, ಸಂಬಂಧಗಳಿಗೆ ತಾರ್ಕಿಕವಾಗಿ ಉತ್ತರವಿಲ್ಲವಾದಾಗ ಕಲ್ಪನೆ ಗರಿಗೆದರಬಹುದು. ಅದರಿಂದ ಪ್ರಯೋಜನವಿಲ್ಲ. ಪ್ರತಿಯೊಂದಕ್ಕೂ ಏನಾದರೊಂದು ಕಾರಣ ಇದ್ದೇ ಇರುತ್ತದೆ. ಅದನ್ನು ತಿಳಿಯುವುದು ಸದ್ಯಕ್ಕೆ ನಮ್ಮ ಶಕ್ತಿಗೆ ಮೀರಿದ್ದಾಗಿರುತ್ತದೆ, ಅಷ್ಟೆ. 'ದೇವ' ಮತ್ತು 'ಅಸುರ' ಶಬ್ದಗಳ ಚರ್ಚೆಯಲ್ಲಿ ಆಚಾರ್ಯರು ಎರಡು ಸೋದರ ಭಾಷೆಗಳಲ್ಲಿ, ಜನಾಂಗಗಳಲ್ಲಿ ಜ್ಞಾತಿ ಶಬ್ದಗಳಲ್ಲಿ ಕಂಡುಬರುವ ಪರಸ್ಪರ ವಿರುದ್ಧ ಅರ್ಥಗಳಿಗೆ ಆಶ್ಚರ್ಯ ವ್ಯಕ್ತಪಡಿಸಿದ್ದಾರೆ. ಸಮರ್ಪಕವಾಗಿ ವಿವರಿಸಲು ಆಗದಿದ್ದರೂ ಇದೊಂದು ಸಾಮಾನ್ಯ ಬೆಳವಣಿಗೆ. ಈ ಸಂದರ್ಭದಲ್ಲಿ ನೆನಪಿಗೆ ಬರುವ ಒಂದು ಉದಾಹರಣೆಯೆಂದರೆ, ಸಂಸ್ಕೃತದ 'ಧೂಮಃ' ಮತ್ತು ಗ್ರೀಕಿನ 'ಥುಮೋಸ್' ಜ್ಞಾತಿ ಪದಗಳು. ಗ್ರೀಕ್ ಪದದ ಅರ್ಥ 'ಆತ್ಮ' ಎಂದು! ಹಾಗೆಯೇ ಸಂಸ್ಕೃತದ 'ಆತ್ಮ' ಮತ್ತು ಗ್ರೀಕಿನ 'ಆಟ್ಮೋಸ್' ಜ್ಞಾತಿಪದಗಳು. ಇಲ್ಲಿ ಗ್ರೀಕ್ ಪದದ ಅರ್ಥ 'ಹೊಗೆ'! ಭಾರತೀಯ ಭಾಷೆಗಳಲ್ಲಿಯೂ ಇದಕ್ಕೆ ಸಾಕಷ್ಟು ಉದಾಹರಣೆಗಳು ದೊರೆಯುತ್ತವೆ. ಸಂಸ್ಕೃತದ 'ವಾಟಿಕಾ' ಗುಜರಾತಿ ಮತ್ತು ಬಂಗಾಳಿ ಭಾಷೆಗಳಲ್ಲಿ 'ಬಾಡಿ' ಆಗುತ್ತದೆ.

ಆದರೆ ಅರ್ಥ ಮಾತ್ರ ಗುಜರಾತಿಯಲ್ಲಿ 'ಉದ್ಯಾನ', ಬಂಗಾಳಿಯಲ್ಲಿ 'ಮನೆ.' 'ಉಪನ್ಯಾಸ' ಹಿಂದಿಯಲ್ಲಿ 'ಕಾದಂಬರಿ', ಕನ್ನಡದಲ್ಲಿ 'ಭಾಷಣ'! ಎಂಥ ಸ್ವಾರಸ್ಯ ಪ್ರಪಂಚ ಇದು. ಮಕ್ಕಳು ತಂದೆತಾಯಿಗಳನ್ನು ಕರೆಯುವ, ತಂದೆತಾಯಿಗಳನ್ನು ಸೂಚಿಸುವ ಪದಗಳು – ಅಪ್ಪ, ಅಮ್ಮ, ಅಬ್ಬ, ಪಾ, ಮಾ, ಪಿತೃ, ಮಾತೃ ಮೊದಲಾದವು – ತುಟಿಗೆ ಸಂಬಂಧಿಸಿಯೇ ಉತ್ಪಾದಿತವಾದ ಧ್ವನಿಗಳನ್ನು ಒಳಗೊಂಡವು. ಇದಕ್ಕೆ ಕಾರಣ ಮಗು ತಾಯಿಯ ಮೊಲೆ ಚೀಪುವಾಗ ತುಟಿಗಳಿಂದ ಉಂಟಾಗುವ ದನಿಗಳನ್ನೇ ಅದು ಮೊದಲು ಅನುಕರಿಸಿ, ಆ ಅನುಕರಣೆಯ ಫಲವನ್ನು ತನಗೆ ಸಮೀಪದವರಾದ ತಾಯಿತಂದೆಗಳನ್ನು ಗುರುತಿಸಲು ಬಳಸುತ್ತದೆ ಎಂದು ರೋಮನ್ ಯಾಕೂಬ್‌ಸನ್ ಎಂಬ ಪ್ರಸಿದ್ಧ ವಿದ್ವಾಂಸ ಅಭಿಪ್ರಾಯಪಡುತ್ತಾನೆ!

ಶತಮಾನಗಳ ಹಿಂದೆ 'ಅಮ್ಮ' ಎಂಬ ಶಬ್ದ 'ತಂದೆ'ಯನ್ನು ಸೂಚಿಸುತ್ತಿತ್ತು; ತಮಿಳು, ತೆಲುಗುಗಳಲ್ಲಿ ಇಂದಿಗೂ ಅದು ಜೀವಂತವಾಗಿದೆ. ''ಕನ್ನಡದಲ್ಲಿ ಕೂಡ ಹಳೇ ಮೈಸೂರು ಪ್ರದೇಶದಲ್ಲಿ ಆಡು ನುಡಿಯಲ್ಲಿ ಗಂಡಸರನ್ನು ಏನಮ್ಮಾ ಎಂದು ಗೆಳೆತನ ಅಥವಾ ನಸು ವಿನೋದದಲ್ಲಿ ಸಂಬೋಧಿಸುವುದು ಇದೆ'' ಎಂದು ಆಚಾರ್ಯರು ಹೇಳುತ್ತಾರೆ. ''ಅದು ಹಳಗನ್ನಡದ ಅವಶೇಷವಾಗಿರಬೇಕು'' ಎಂಬುದು ಅವರ ಅಭಿಪ್ರಾಯ. ಈ ಬಳಕೆ ನನಗೆ ತಿಳಿದಂತೆ ಸಾರ್ವತ್ರಿಕವಾದುದಲ್ಲ; ಹೆಚ್ಚಾಗಿ ನಗರಗಳಲ್ಲಿ ಶಾಲಾ ಕಾಲೇಜುಗಳ, ಹಾಸ್ಟೆಲ್ಲುಗಳ ಹುಡುಗರಲ್ಲಿ ಪ್ರಚಲಿತವಾಗಿದೆ. ಅಲ್ಲಿ ಅದು ಹಳಗನ್ನಡದ ಅವಶೇಷಕ್ಕಿಂತ ಮಿಗಿಲಾಗಿ ಲೇವಡಿಯ ಹಾಗೂ ವಿನೋದದ ಮಾತೇ ಇರಬೇಕು.

''ನಮ್ಮ ಕೂಸುಗಳು ಹಾಲುಣ್ಣುತ್ತವೆ'' ಎಂಬುದು ನಿಜ. ಅವು ಮೊಲೆಯನ್ನು 'ಉಣ್ಣುತ್ತವೆ' ಹಾಗೂ 'ತಿನ್ನುತ್ತವೆ,' ಅಷ್ಟೇ ಅಲ್ಲ, 'ಕುಡಿಯುತ್ತವೆ' ಕೂಡ! ಉಣ್ಣುವುದು, ತಿನ್ನುವುದು, ಕುಡಿಯುವುದು ನಮ್ಮಲ್ಲಿ ಇದೊಂದನ್ನು ಮಾತ್ರ! ''ನಾವು ಲಂಚ ತಿನ್ನಬಹುದೇ ಹೊರತು ಲಂಚವುಣ್ಣಲಾರೆವು'' ಎಂದು ಆಚಾರ್ಯರು ಹೇಳುತ್ತಾರೆ. ಆದರೆ ಹಳೇ ಮೈಸೂರು ಭಾಗದಲ್ಲಿ ಲಂಚವುಣ್ಣುವವರೂ ಇದ್ದಾರೆಂಬುದನ್ನು ನಾನು ಅವರ ಗಮನಕ್ಕೆ ತರಬೇಕು. ಹಾಗೆಯೇ 'ಕಸಬರಿಗೆ,' 'ಪೊರಕೆ' ಇವುಗಳ ಸಂಬಂಧವನ್ನೂ ಇನ್ನಷ್ಟು ವಿವೇಚಿಸಬೇಕು.

'ಬೋಳೀಮಗ' ಶಬ್ದದ ಬಗೆಗೆ ಬರೆಯುವಾಗ ಆಚಾರ್ಯರು 'ಬ್ರಾಹ್ಮಣ ಬೈಗಳು' ಎಂಬ ಸಾಂಸ್ಕೃತಿಕ ವಿಶೇಷವನ್ನು ಉಲ್ಲೇಖಿಸುತ್ತಾರೆ. ಭಾಷೆಯಲ್ಲಿ ಅರ್ಥ ಪ್ರಧಾನವಾಗಿ ಸಾಮಾಜಿಕ ಸ್ವರೂಪದ್ದು; ಸಾಂಸ್ಕೃತಿಕ ಸಂಬಂಧದ್ದು. ನಾನು ಮಹಾರಾಜರವರ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದ ದಿನಗಳಲ್ಲಿ ಪ್ರಚಲಿತವಾಗಿದ್ದ ಒಂದು ಕಥೆ ಈ ಸಂದರ್ಭದಲ್ಲಿ ನೆನಪಿಗೆ ಬರುತ್ತದೆ.

ಆ ಕಾಲೇಜಿನಲ್ಲಿ ಒಬ್ಬ ಇಂಗ್ಲಿಷ್ ಪ್ರಾಧ್ಯಾಪಕರಿದ್ದರು. ಅವರು ಇಂಗ್ಲೆಂಡಿನಿಂದ ಬಂದವರು. ಅವರನ್ನು ನೋಡಿದಾಗಲೆಲ್ಲ ಒಬ್ಬ ಹುಡುಗ 'ಬೋಳೀಮಗ' ಎನ್ನುತ್ತಿದ್ದ. ಹೀಗೆ ನಾಲ್ಕಾರು ಸಲ ಆದಮೇಲೆ, ಆ ಪ್ರಾಧ್ಯಾಪಕರಿಗೆ ಆ ಮಾತು ಬಾಯಿಪಾಠವಾಯಿತು. ಅದರ ಅರ್ಥ ತಿಳಿಯಲು ಅವರಲ್ಲಿ ಕುತೂಹಲ ಬೆಳೆಯಿತು. ಒಮ್ಮೆ ಅವರು ಒಬ್ಬ ಉರ್ದು ಅಧ್ಯಾಪಕರನ್ನು ಕೇಳಿದರು. ಆ ಅಧ್ಯಾಪಕರು ಅದಕ್ಕೆ ಅರ್ಥ ಹೇಳಲು ಸಂಕೋಚಪಟ್ಟು, ಅದು ಕನ್ನಡ ಮಾತೆಂದೂ, ತಮಗೆ ಅರ್ಥ ತಿಳಿಯದೆಂದೂ ಹೇಳಿದರು! ಆ ಇಂಗ್ಲಿಷ್ ಪ್ರಾಧ್ಯಾಪಕರು ಕನ್ನಡ ಅಧ್ಯಾಪಕರೊಬ್ಬರನ್ನು ಕೇಳಿದರು. ಅವರಿಗೂ ಸಂಕೋಚವಾಗಿ ಅದು ಸಂಸ್ಕೃತ ಎಂದರು. ಸಂಸ್ಕೃತ ಅಧ್ಯಾಪಕರು ಮಾತ್ರ ನಿಜವಾದ ಅರ್ಥ ಹೇಳಿದರು! ಅದನ್ನು

ಕೇಳಿ ಆ ಪ್ರಾಧ್ಯಾಪಕರಿಗೆ ತುಂಬ ಸಂತೋಷವಾಯಿತು. ಸತ್ಯವಾದ ತಮ್ಮ ಹುಟ್ಟಿನ ವಿಚಾರ ಈ ಹುಡುಗನಿಗೆ ಹೇಗೆ ತಿಳಿಯಿತು ಎನ್ನುವುದು ಅವರಿಗೆ ಆಶ್ಚರ್ಯದ ಸಮಸ್ಯೆಯೇ ಆಯಿತು! ಅವರು ನಿಜವಾಗಿಯೂ ಒಬ್ಬ ವಿಧವೆಯ ಮಗನಾಗಿದ್ದರು! ಇದೊಂದು ಜನಪದ ಕಥೆಯೇ ಇರಬಹುದು. ಆದರೆ ಇದರಿಂದ ಹೊರಡುವ ಭಾಷೆ-ಸಮಾಜಗಳ ಸಂಬಂಧ ಗಮನಾರ್ಹವಾದದ್ದು.

ಇದೊಂದು ಅಧ್ಯಯನಪೂರ್ಣ ಪುಸ್ತಕ. ಸಾಹಿತ್ಯ ಹಾಗೂ ಸಾಹಿತ್ಯೇತರ ಕ್ಷೇತ್ರಗಳಲ್ಲಿ ಆಚಾರ್ಯರು ಪಡೆದಿರುವ ಅಪಾರ ತಿಳಿವಳಿಕೆಗೆ ಇದು ಸಾಕ್ಷಿ. ಇದರಲ್ಲಿ ಅವರ ಊಹಾಶಕ್ತಿ ಮತ್ತು ತಾರ್ಕಿಕ ಶಕ್ತಿಗಳೂ ನಿಚ್ಚಳವಾಗಿ ಕಾಣಿಸಿಕೊಳ್ಳುತ್ತವೆ. ಇದರಲ್ಲಿ ಚರಿತ್ರೆಯಿದೆ, ಭೂಗೋಳವಿದೆ, ವಿಜ್ಞಾನವಿದೆ, ಸಮಾಜಶಾಸ್ತ್ರವಿದೆ. ಹಾಗೆ ನೋಡಿದರೆ ಇದರಲ್ಲಿ ಇಲ್ಲದ್ದು ಏನು? ಎಲ್ಲ ಶಾಸ್ತ್ರಗಳೂ ಭಾಷೆಯನ್ನೆ ಅವಲಂಬಿಸಬೇಕು ತಾನೆ? ಮನುಷ್ಯನ ಎಲ್ಲ ಚಟುವಟಿಕೆಗಳಿಗೂ ಭಾಷೆಯೇ ಆಧಾರ. ಆದ್ದರಿಂದ ಈ ಭಾಷೆಯ ಬೆಳವಣಿಗೆಯಲ್ಲಿ, ಬದಲಾವಣೆಯಲ್ಲಿ ಎಲ್ಲ ಶಾಸ್ತ್ರಗಳೂ ಭಾಗವಹಿಸುವುದು ಸಹಜವಾಗಿಯೇ ಇದೆ. ಭಾಷೆಯಲ್ಲಿರುವ ಪದಗಳು ಕಾಲ ದೇಶಗಳ ಹಾಸು ಹೊಕ್ಕಿನಲ್ಲಿ ಸಿಕ್ಕಿಕೊಂಡು ರೂಪಾಂತರಗೊಳ್ಳುತ್ತಿರುತ್ತವೆ. ಆದ್ದರಿಂದಲೇ ಭಾಷೆಯೆನ್ನುವುದು ಕಾವ್ಯದ ಪಳೆಯುಳಿಕೆ ಎನ್ನಿಸಿರುವುದು. 'ಪದಾರ್ಥ ಚಿಂತಾಮಣಿ'ಯನ್ನು ಓದುವಾಗ ಇದು ಮತ್ತೆ ಮತ್ತೆ ಅನುಭವಕ್ಕೆ ಬರುತ್ತದೆ; ಬರೀ ಕಾವ್ಯದ ಪಳೆಯುಳಿಕೆಯಲ್ಲ, ಯಾವಯಾವದೋ ಕಾಲದ ಬದುಕಿನ ಪಳೆಯುಳಿಕೆಯೂ ಹೌದು ಎನ್ನಿಸುತ್ತದೆ. ಇದೊಂದು ಅಪರೂಪದ ಪುಸ್ತಕ. ಇಂಥದೊಂದು ಪುಸ್ತಕವನ್ನು ಪ್ರಕಟಿಸಿ ಲೇಖಕರೂ ಪ್ರಕಾಶಕರೂ ಕನ್ನಡ ಓದುಗರ ಚಿರಕೃತಜ್ಞತೆಗೆ ಪಾತ್ರರಾಗಿದ್ದಾರೆ.

ಮೇಲುನೋಟಕ್ಕೆ ಲಘುವಾದುದೆಂದು ತೋರುವ, ಆಂತರ್ಯದಲ್ಲಿ ಬಹುಶ್ರುತ ಪಾಂಡಿತ್ಯವನ್ನು ಅಡಗಿಸಿಟ್ಟುಕೊಂಡಿರುವ ಈ ಪುಸ್ತಕದಿಂದ ಆಚಾರ್ಯರು ಕನ್ನಡದ 'ವರ್ಡ್‌ಲೋರ್' (ಪದಪರಂಪರೆ) ಅಧ್ಯಯನಕ್ಕೆ ನಾಂದಿ ಹಾಡಿದ್ದಾರೆ. ಈ 'ಪದಾರ್ಥ ಚಿಂತಾಮಣಿ'ಯ ಎರಡನೆಯ ಭಾಗವೂ ಬೇಗನೆ ಪ್ರಕಟಗೊಳ್ಳಲಿ ಎಂದು ನಾನು ಹಾರೈಸುತ್ತೇನೆ.

ಲೇಖಕರಾದ ಪಾಂ. ವೆಂ. ಆಚಾರ್ಯರು ನನಗೆ ಹಿರಿಯರು; ತುಂಬ ಪ್ರಿಯರಾದವರು. ನನ್ನ ಗೌರವ, ಅಭಿಮಾನಗಳಿಗೆ ಪಾತ್ರರಾದ ಕೆಲವೇ ಕೆಲವರಲ್ಲಿ ಅವರೊಬ್ಬರು. ತಮ್ಮ ಈ ಪುಸ್ತಕಕ್ಕೆ 'ಮುನ್ನುಡಿ' ಬರೆದುಕೊಂಡಬೇಕೆಂದು ಕೇಳಿ ಅವರು ನನ್ನಲ್ಲಿ ತಮಗಿರುವ ಪ್ರೀತಿಯನ್ನು ತೋರಿಸಿದ್ದಾರೆ. ಅವರ ಹೃದಯವಂತಿಕೆಗೆ ನಾನು ಕೃತಜ್ಞನಾಗಿದ್ದೇನೆ. ಆದರೆ ಅವರ ಪುಸ್ತಕಕ್ಕೆ 'ಮುನ್ನುಡಿ' ಬರೆಯಲು ನಾನು ಯಾರು? ಈ ಬರಹ ಆಚಾರ್ಯರಲ್ಲಿ ನಾನಿಟ್ಟಿರುವ ಗೌರವವನ್ನು ನುಡಿಗಳ ಮೂಲಕ ವ್ಯಕ್ತಪಡಿಸಿ ನಮಿಸುವ ಒಂದು ಅವಕಾಶ. ಆ ಕೆಲಸವನ್ನು ಒಂದು ಗೌರವವೆಂದೇ ಭಾವಿಸಿ ತುಂಬ ಸಂತೋಷದಿಂದ ನಿರ್ವಹಿಸಿದ್ದೇನೆ. ಅಂತೆಯೇ ಇದು 'ನುಡಿನಮನ.' ನನ್ನ ಮಾತುಗಳು ಆಚಾರ್ಯರಿಗೆ ಮೆಚ್ಚುಗೆಯಾದರೆ ನನ್ನ ಶ್ರಮ ಸಾರ್ಥಕವೆಂದು ತಿಳಿಯುತ್ತೇನೆ.

ಮೇ ೧, ೧೯೯೧ ಹಾ. ಮಾ. ನಾಯಕ
'ಗೋಧೂಳಿ,' ಜಯಲಕ್ಷ್ಮೀಪುರ,
ಮೈಸೂರು – ೫೭೦ ೦೧೨.

# ಎರಡು ಮಾತು

ಈ ಪುಸ್ತಕವನ್ನು ಓದುಗರ ಕೈಯಲ್ಲಿಡುವಾಗ ಹೇಳಬೇಕಾದ್ದು ಹೆಚ್ಚಿಗೆ ಇಲ್ಲ. ಇದು ಪಾಂಡಿತ್ಯಪೂರ್ಣ ಕೃತಿಯಲ್ಲ. (ನಾನು ಯಾವ ಪದವಿಯುಳ್ಳವನಲ್ಲ – ಪಂಡಿತನಲ್ಲ.) ಇದು ವ್ಯವಸ್ಥಿತ ಥೀಸಿಸ್ ಅಲ್ಲ. ಕವಿಯಾಗಿ, ಲೇಖಕನಾಗಿ, ಪತ್ರಿಕೋದ್ಯೋಗಿಯಾಗಿ, ಶಬ್ದಗಳ ಬಗ್ಗೆ ಮೊದಲಿನಿಂದಲೂ ಕುತೂಹಲ ಇಟ್ಟುಕೊಂಡಿದ್ದ ನನಗೆ ನಿವೃತ್ತಜೀವನದಲ್ಲಿ ಪದಗಳಿಗೂ ಅರ್ಥಗಳಿಗೂ ಇರುವ ಸಂಬಂಧಗಳನ್ನು ಹಿಂಜಿ ನೋಡುವ ಹವ್ಯಾಸ ಸುಮಾರು ಹದಿನೈದು ವರ್ಷಗಳ ಹಿಂದೆ ಒಂದು ಗೀಳಾಗಿ ಅಮರಿಕೊಂಡಿತು. ಅದರಲ್ಲಿ ನನ್ನನ್ನು ತೊಡಗಿಸಿಕೊಂಡಾಗ ಈ ಪದಾರ್ಥಲೋಕ ನಾನೆಣಿಸಿಕೊಂಡದ್ದಕ್ಕಿಂತಲೂ ರಂಗುರಂಗಿನದಾಗಿ ಕಂಡಿತು. ಮೊದಲು ನನ್ನ ಲಹರಿಯನ್ನು ಉತ್ತೇಜಿಸಿದ ಕೆಲ ಪದಗಳನ್ನು ಬೆಂಬತ್ತಿ ನನಗೆ ಲಭ್ಯವಿದ್ದ ನಿಘಂಟು, ಕೋಶ, ಇತಿಹಾಸ, ಲಕ್ಷಣ ಇತ್ಯಾದಿ ಗ್ರಂಥಗಳ ಸಹಾಯದಿಂದ ಅವುಗಳ ಜಾತಕ ಸಾಮಗ್ರಿ ಕಲೆ ಹಾಕಿದೆ. ತೊಡಗಿದ್ದು ಕುತೂಹಲದಿಂದ; ಅವುಗಳ ಬಗ್ಗೆ ಬರೆದರೆ ಹೇಗೆ ಎಂಬ ವಿಚಾರ ಬಂದುದ್ದು ಆಮೇಲೆ.

ಸರಿ ಒಂದೆರೆಡು ಚಿಕ್ಕಲೇಖನಗಳನ್ನು ಬರೆದು ನನ್ನ ಕಿರಿಯ ಮಿತ್ರರೂ ಆಗ ''ಕಸ್ತೂರಿ'' ಪತ್ರಿಕೆಯ ಸಹಸಂಪಾದಕರೂ ಆಗಿದ್ದ (ಈಗ ದಿವಂಗತ) ಮಾಧವ ಮಹಿಷಿಯವರ ಹತ್ತಿರ ಕೊಟ್ಟು ಇವು ಟಿಕ್‌ಕರಿಸಬಲ್ಲವೇ ಎಂದು ಕೇಳಿದೆ. ಅವರು ಓದಿ ನೋಡಿ ''ನೋಡುವಾ'' ಎಂದರು. ಮುಂದಿನ ''ಕಸ್ತೂರಿ'' ಸಂಚಿಕೆಯಲ್ಲಿ ಒಂದನ್ನು ಪ್ರಕಟಿಸಿಯೂ ಬಿಟ್ಟರು. ಪರಿಣಾಮ ಆಶ್ಚರ್ಯಕರವಾಗಿತ್ತು. ಆ ಲೇಖನ ಪ್ರಕಟವಾದೊಡನೆ ಅಕಸ್ಮಾತ್ತಾಗಿ ಭೆಟ್ಟಿಯಾದ ಪರಿಚಿತರು, ಗೆಳೆಯರು ಆ ಲೇಖನದ ಬಗ್ಗೆಯೇ ಪ್ರಸ್ತಾವಿಸಿದರು. ವಿಶೇಷವೆಂದರೆ ಕವಿಶ್ರೇಷ್ಠ ಬೇಂದ್ರೆಯವರನ್ನು ಯಾವುದಕ್ಕಾಗಿಯೋ ಕಾಣಲು ಹೋಗಿದ್ದೆ. ಅವರೂ ''ಪದಾರ್ಥ-ಚಿಂತಾಮಣಿ''ಯನ್ನೇ ಪ್ರಸ್ತಾವಿಸಿದರು. ಹದಿನಾಲ್ಕು ವಯಸ್ಸಿನ ಶಾಲಾ ಹುಡುಗನೊಬ್ಬ ಯಾವುದೋ ಮದುವೆ ದಿಬ್ಬಣದೊಡನೆ ಹುಬ್ಬಳ್ಳಿಗೆ ಬಂದವ ಮುದ್ದಾಮಾಗಿ ನನ್ನನ್ನು ಹುಡುಕಿಕೊಂಡು ಬಂದ. ''ಪದಾರ್ಥ ಚಿಂತಾಮಣಿಯ''ಯ ಮೂರನೆಯದೋ ನಾಲ್ಕನೆಯದೋ ಲೇಖನವನ್ನು ಓದಿದ್ದ ಅವನು ಅದನ್ನು ಬಹಳ ಮೆಚ್ಚಿಕೊಂಡಿದ್ದ. ಅನೇಕ ವಿದ್ವಾನ್ ಸಾಹಿತಿಗಳೂ ''ಪದಾರ್ಥ ಚಿಂತಾಮಣಿ''ಯಿಂದ ನನ್ನನ್ನು ಗುರುತಿಸತೊಡಗಿದರು. 'ಲಾಂಗೂಲಾಚಾರ್ಯ'ನಾಗಿ ಕಾಲು ಶತಮಾನದಿಂದ ಗುರುತಿಸಲ್ಪಡುತ್ತಿದ್ದವನನ್ನು ಈ ''ಚಿಂತಾಮಣಿ'' ವಿಮೋಚನೆಗೊಳಿಸಿ ಬಿಟ್ಟಿತು. ''ಧನ್ಯೋಽಹಂ'' ಎಂದುಕೊಂಡೆ. ಲೇಖನಮಾಲೆ ಮುಂದುವರಿಯಿತು.

ಈ ಲೇಖನಗಳನ್ನು ಗ್ರಂಥವಾಗಿ ಪ್ರಕಟಿಸಬೇಕೆಂದು ಕೆಲ ಗೆಳೆಯರೂ ಸಾಹಿತಿಗಳೂ ಸೂಚಿಸುತ್ತ ಬಂದಿದ್ದಾರೆ. ಪ್ರಕಾಶಕರೂ ಕೇಳುತ್ತಿದ್ದುದುಂಟು. ಕೊನೆಗೆ ನನ್ನ ಹಳೇಮಿತ್ರ, ಅಭಿಮಾನಿ, ವಿಜ್ಞಾನ ಲೇಖಕ ಶ್ರೀ ಜಿ. ಟಿ. ನಾರಾಯಣರಾಯರ ಕೊಡುಗೆಯನ್ನು ಸ್ವೀಕರಿಸಿದೆ. ಹೊಸದಾಗಿ ಪ್ರಕಾಶರಂಗಕ್ಕಿಳಿದ ಅವರು ಗಂಭೀರ ಪುಸ್ತಕಗಳ ಪ್ರಕಟಣೆಯನ್ನೇ ಉದ್ದೇಶವಾಗಿಟ್ಟುಕೊಂಡಿದ್ದಾರೆ. ನನ್ನ ಪುಸ್ತಕವನ್ನು ಹೊರತಂದು ಅವರಿಗೆ ನಷ್ಟ

ವಾಗಲಿಕ್ಕಿಲ್ಲವೆಂಬ ಆಶೆಯನ್ನು ತಳೆದಿದ್ದೇನೆ. ಇದು ಮೊದಲು ಯೋಚಿಸಿದ ಗಾತ್ರವನ್ನು ಮೀರಿದೆ. ಈವರೆಗೆ ಬರೆದಿರುವ ಲೇಖನಗಳಲ್ಲಿ ಸುಮಾರು ಅರೆವಾಸಿಯಷ್ಟು ಇಲ್ಲಿ ಗ್ರಂಥಸ್ಥವಾಗುತ್ತಿವೆ.

ಇಲ್ಲಿ ವಿವೇಚಿಸಿದ ವಿಷಯಗಳನ್ನು ಕುರಿತ ಆಧಾರ ಸಾಮಗ್ರಿಯನ್ನು ಟಿಪ್ಪಣಿ ರೂಪದಲ್ಲಿ ಕೊಡಬೇಕೆಂದಿದ್ದೆ. ಆ ಕೆಲಸಕ್ಕಿಳಿದಾಗ ಟಿಪ್ಪಣಿಗಳೇ ಗ್ರಂಥದ ಮೂರರಲ್ಲೊಂದು ಭಾಗದಷ್ಟಾಗಬಹುದೆಂದು ಅಂದಾಜಾಯಿತು. (ಲೇಖನಗಳಿಗಾಗಿ ನಾನು ಅಷ್ಟು ಸಾಮಗ್ರಿ ಕಲೆ ಹಾಕಿದ್ದೆ.) ಆದ್ದರಿಂದ ಅದನ್ನು ಕೈಬಿಟ್ಟೆ. (ಬಹುತರ ಟಿಪ್ಪಣಿಗಳು ತಯಾರಾದ ಮೇಲೆ ತಾನೆ ಈ ಅರಿವು ಬಂದದ್ದು.) ಡಾ. ಹಾಮಾನಾ ಹಾರೈಸಿದಂತೆ ಈ ಮಾಲೆಯ ಉಳಿದ ಲೇಖನಗಳ ಇನ್ನೊಂದು ಭಾಗ ಪ್ರಕಟವಾಗುವ ಸುಯೋಗ ಬಂದರೆ ಟಿಪ್ಪಣಿಗಳು ಅಲ್ಲಿ ಎಡೆ ಪಡೆದಾವೆಂಬ ಆಶೆಯಿದೆ. ''ಭವಿತವ್ಯತೆಯೇ, ತಥಾಸ್ತು ಎನ್ನು !''

ಆಗಲೇ ಹೇಳಿದ್ದೇನೆ – ಇದು ಪಾಂಡಿತ್ಯಪೂರ್ಣ ಕೃತಿಯಲ್ಲ. [ಅಂಥ ಒಂದು ಕೃತಿ ಮದ್ರಾಸ್ ವಿಶ್ವವಿದ್ಯಾಲಯದಿಂದ ಪ್ರಕಟವಾಗಿದೆ. ಡಾ. ಶಂಕರ ಕೆದಿಲಾಯರು ಕನ್ನಡದಲ್ಲಿ ಸೇರಿಕೊಂಡಿರುವ ಅರಬ್ಬಿ-ಪಾರಸೀಕ ಪದಗಳನ್ನು ವ್ಯವಸ್ಥಿತವಾಗಿ, (ಇಂಗ್ಲಿಷಿನಲ್ಲಿ) ವಿವೇಚಿಸಿದ್ದಾರೆ.] ಇದು ನಿರುಕ್ತ ಶಾಸ್ತ್ರೀಯ ಚರ್ಚೆಯೂ ಅಲ್ಲ. ಆ ರಂಗದಲ್ಲಿ ಆದ ಕೆಲಸವನ್ನು ಸಾಹಿತ್ಯ ಪರಿಷತ್ತಿನ ಬೃಹತ್ ಕನ್ನಡ ನಿಘಂಟು ಪ್ರತಿಬಿಂಬಿಸುತ್ತಿದೆ. ನಾನು ಇಲ್ಲಿ ಶಬ್ದಗಳನ್ನು ಬೇರೆ ದೃಷ್ಟಿಯಿಂದ ನೋಡಿದ್ದೇನೆ. ನಾನು ಶಬ್ದಮೂಲವನ್ನು ಶೋಧಿಸುವುದರಿಂದ ತೃಪ್ತನಾಗಿಲ್ಲ. ಅವು ಬೇರೆ ಯಾವ ಯಾವ ಐತಿಹಾಸಿಕ, ನರವಂಶ ಚರಿತ್ರದ, ಅರ್ಥವ್ಯವಸ್ಥೆಯ, ಸಂಸ್ಕೃತಿ ಸಂಪ್ರದಾಯಗಳ, ಜನಾಂಗವಲಸೆಯ ಬಗ್ಗೆ ಗುಟ್ಟು ಹೇಳುತ್ತವೆ ಎಂದು ವಿಚಾರಿಸಿದ್ದೇನೆ. ಮನುಷ್ಯನ ವಿಚಾರರೀತಿಯಲ್ಲಿರುವ ಸಾಮ್ಯ ವೈಷಮ್ಯಗಳನ್ನು ಬೇರೆ ಭಾರತೀಯ ವಿದೇಶೀಯ ಭಾಷೆಗಳ ಪದಗಳ ವಿಕಾಸದೊಡನೆ ಹೋಲಿಸಿದ್ದೇನೆ. ಈ ಪ್ರಕಾರ ಇದು ಬರೇ ಶಬ್ದ ಮೂಲ ವಿಕತ್ಥನವಾಗಿಲ್ಲ.

ಈ ಪುಸ್ತಕದ ಕೊರತೆಗಳನ್ನು ನಾನು ಬಲ್ಲೆ. ನಾನು ಬಹುತರವಾಗಿ ಹುಬ್ಬಳ್ಳಿ ಧಾರವಾಡಗಳಲ್ಲಿ ದೊರಕಬಹುದಾದ ಪುಸ್ತಕಾಲಯ ಸಹಾಯವನ್ನೇ ಹೆಚ್ಚು ಅವಲಂಬಿಸಿ ಕೆಲಸ ಮಾಡಬೇಕಾಗಿ ಬಂದದ್ದು ಕೆಲ ಮೇರೆಗಳೊಳಗೆ ನಾನು ಕೆಲಸ ಮಾಡುವಂತೆ ಮಾಡಿತು. ಆದ್ದರಿಂದ ನಾನು ಬಯಸಿದಷ್ಟು ವ್ಯಾಪಕವಾದ ವಿವೇಚನೆ ಸಾಧ್ಯವಾಗಲಿಲ್ಲ. ನನ್ನ ಊಹಾಪೋಹಗಳು ಕೆಲವರನ್ನು ಒಪ್ಪಿಸಲಿಕ್ಕಿಲ್ಲ. ಉದಾಹರಣೆಗೆ ''ಮಾರ್ಗ'' ಶಬ್ದದ ವಿವೇಚನೆ ವೈಯಾಕರಣರಿಗೆ ಸೇರಲಿಕ್ಕಿಲ್ಲ (ವಿದ್ವಾನ್ ಸೇಡಿಯಾಪು ಕೃಷ್ಣಭಟ್ಟರಿಗೆ ಅದು ಸರಿಯೆನಿಸಿದ್ದರೂ). ಕೆಲವೆಡೆ ನನ್ನ ಮಾಹಿತಿ ಸಾಲದಾಯಿತು. ಉದಾಹರಣೆಗೆ 'ಸುಡಿನಮನ'ದಲ್ಲಿ ಡಾ. ಹಾಮಾನಾ ತೋರಿಸಿದಂತೆ ಲಂಚ ತಿನ್ನುವವರು ಮಾತ್ರವಲ್ಲ, ಲಂಚ ಉಣ್ಣುವವರೂ ಕರ್ನಾಟಕದಲ್ಲಿ ಇದ್ದಾರಂತೆ! ಶಬ್ದಗಳನ್ನು ಬೆಂಬತ್ತುವಲ್ಲಿ ಎಷ್ಟೆಷ್ಟು ಕರ್ಪುಗಳು ಬಾಯ್ದೆರೆದುಕೊಂಡಿರುತ್ತವೆ ನೋಡಿ. ಕೆಲವು ಗೃಹೀತ ಹೇಳಿಕೆಗಳು ಆಮೇಲೆ ವಿವಾದಾಸ್ಪದವಾಗುತ್ತವೆ. ಉದಾಹರಣೆಗೆ ಲಕ್ಷ್ಮೀಶ ಕವಿ ಹೆಬ್ಬಾರ ಕುಲದವನೆಂಬುದು ಬರೇ ಕಲ್ಪನೆಯೆಂದು ಡಾ. ಸೀತಾರಾಮ ಜಾಗೀರದಾರರು ಈಚೆಗೆ ಪ್ರತಿಪಾದಿಸಿದ್ದಾರೆ.

ಇಂಥ ವಿವಾದಾಂಶಗಳೂ ತಪ್ಪು ತೊಡಕುಗಳೂ ಈ ಬಗೆಯ ರಚನೆಗಳಲ್ಲಿ ಅನಿವಾರ್ಯ.

ಆದರೆ ನಾನು ಸತ್ಯವನ್ನು ಪ್ರತಿಪಾದಿಸಲು ಸಾಕಷ್ಟು ಹೋಮ್‌ವರ್ಕ್ ಮಾಡಿದ್ದೇನೆಂಬುದೇ ನನ್ನ ಸಮಾಧಾನ. ಭಾಷಾಶಾಸ್ತ್ರ ಪರಿಣತರಾದ ಡಾ. ಹಾಮಾನಾ ಈ ಪುಸ್ತಕಕ್ಕೆ ಮುನ್ನುಡಿ ಬರೆಯಲೊಪ್ಪಿದ್ದು ನಾನಿಟ್ಟ ಹೆಜ್ಜೆಗಳು ಸರಿದಾರಿಯಲ್ಲಿವೆಯೆಂಬ ನಂಬಿಕೆ ತಂದಿದೆ. ಅದು ಮೀರಿ ''ಶಬ್ದಪಾರಮಾರ್ಗಮಶಕ್ಯಂ'' ಎಂದು ಕೇಶಿರಾಜ ಹೇಳಿದ್ದಾನಲ್ಲ.

ಇನ್ನುಳಿದದ್ದು ಕೃತಜ್ಞತೆಯ ಮಾತು –

ಈ ಲೇಖನ ಮಾಲೆಯನ್ನು ಮೂಲತಃ ಪ್ರಕಟಿಸಲು ಒಪ್ಪಿ ಇಂದಿಗೂ ಅದಕ್ಕೆ ಸ್ಥಾನ ಕೊಡುತ್ತಿರುವ ''ಕಸ್ತೂರಿ''ಯ ಬಂಧುಗಳಿಗೆ

ಇದನ್ನು ಗ್ರಂಥರೂಪದಲ್ಲಿ ಪ್ರಕಟಿಸುತ್ತಿರುವ ಧೈರ್ಯಶಾಲಿ ಶ್ರೀ ಜಿ. ಟಿ. ನಾರಾಯಣ ರಾಯರಿಗೆ ;

ಪ್ರತ್ಯಕ್ಷ ಪರಿಚಯಕ್ಕಿಂತಲೂ ಮುಂಚಿನಿಂದ ನನ್ನಲ್ಲಿ ಅಭಿಮಾನವಿಟ್ಟು, ಈಗ ಈ ಪುಸ್ತಕಕ್ಕೆ ಮುನ್ನುಡಿ ಬರೆದುಕೊಟ್ಟು ಅದರ ಗೌರವ ಹೆಚ್ಚಿಸಿದ ವಿದ್ವಾಂಸರೂ ಸಹೃದಯರೂ ಆಗಿರುವ ಡಾ. ಹಾ. ಮಾ. ನಾಯಕರಿಗೆ ;

ಈ ಲೇಖನಗಳ ಬಗ್ಗೆ ಸಾಂದರ್ಭಿಕವಾಗಿ ಒಳ್ಳೇ ಮಾತುಗಳನ್ನಾಡುತ್ತ ಬಂದ ಡಾ. ಶಂ. ಬಾ. ಜೋಶಿ, ಡಾ. ಕೆ. ಕೃಷ್ಣಮೂರ್ತಿ, ಡಾ. ಜಿ. ಎಸ್. ಶಿವರುದ್ರಪ್ಪ ಮೊದಲಾದವರಿಗೆ; ಕಾಲಕಾಲಕ್ಕೆ ಇವುಗಳ ಬಗ್ಗೆ ಪ್ರತಿಕ್ರಿಯೆ ತೋರಿಸುತ್ತಿದ್ದ ಗೆಳೆಯ ಶ್ರೀ ಗೌರೀಶ ಕಾಯಕಿಣಿ, ಹಿರಿಯರಾದ ಶ್ರೀ ಪಿ. ವಿ. ಜೋಶಿ ಮೊದಲಾದ ಬಲ್ಲವರಿಗೆ ;

ಇವುಗಳ ಬಗ್ಗೆ ಯುಕ್ತ ಸಲಹೆಗಳನ್ನಿತ್ತ ಡಾ. ಶ್ರೀನಿವಾಸ ಹಾವನೂರರಿಗೆ ;

ನನ್ನ ಜಿಜ್ಞಾಸೆಗಳಿಗೆ ಪ್ರಾಂಜಲತೆಯಿಂದ ಉತ್ತರ ಕೊಡುತ್ತ ಬಂದ ಡಾ. ಕೆ. ಕೃಷ್ಣಮೂರ್ತಿ, ಪ್ರೊ. ಕೆ. ಎಸ್. ನಾರಾಯಣಾಚಾರ್ಯ, ವಿದ್ಯಾವಾಚಸ್ಪತಿ ಬನ್ನಂಜೆ ಗೋವಿಂದಾಚಾರ್ಯರಿಗೆ ;

ಮುಖಚಿತ್ರ ಬರೆದುಕೊಟ್ಟ ಕಲಾವಿದ ಶ್ರೀ ಕೆ. ಬಿ. ಕುಲಕರ್ಣಿಯವರಿಗೆ ;

ಹಿಂದಿಯ ಕೆಲ ಆಕರಗ್ರಂಥಗಳನ್ನೊದಗಿಸಿದ ಹಾಗೂ ಕೊಂಕಣಿ ಪದಗಳ ವಿವರಣೆ ಕೊಟ್ಟ ಶ್ರೀ ಕೆ. ವಿ. ಪೈ (ಹುಬ್ಬಳ್ಳಿ) ಅವರಿಗೆ ;

ಮತ್ತು ಹರ್ಷ ಪ್ರಿಂಟರ್ಸ್‌ನ ಕಾರ್ಮಿಕ ಬಂಧುಗಳಿಗೆ ನಾನು ಋಣಿ.

ಜೂನ್ ೫, ೧೯೯೧
೮೪ ಕೆಎಚ್‌ಬಿ ಕಾಲೋನಿ
ವಿಶ್ವೇಶ್ವರನಗರ
ಹುಬ್ಬಳ್ಳಿ – ೫೮೦ ೦೩೨

**ಪಾ. ವೆಂ. ಆಚಾರ್ಯ**

# ಹೀಗೊಂದು ಮುನ್ನುಡಿ

ಕೆಲವರಿರುತ್ತಾರೆ : ಪದ-ಅರ್ಥಗಳ ಚಿಂತೆಯೇ ಇಲ್ಲದೆ ಹಾಯಾಗಿ ಬದುಕುವವರು.

ಪದ-ಅರ್ಥಗಳ ಚಿಂತೆಗೆ ಮಣಿಯದವರು.

ಊಟಕ್ಕೆ ಕುಳಿತಾಗ ತಾಟಿಗೆ ಬಡಿಸುವ 'ಪದಾರ್ಥ'ಗಳ ಬಗೆಗೆ ಮಾತ್ರ ಚಿಂತಿಸುವವರು.

'ಝೋಂತ'ಕ್ಕೆ 'ಝೋಂತ'ವೆ ಅರ್ಥವಾದವರು.
ಮತ್ತೆ ಕೆಲವರಿರುತ್ತಾರೆ : ಪದ-ಅರ್ಥಗಳ ಚಿಂತೆಯಲ್ಲೆ ಸಂತಸ ಕಾಣುವವರು.

ಅರ್ಥವಾಗುವವರು; ಬಹಳ ಮಂದಿಗೆ ಅರ್ಥವಾಗದವರು.

ಪಾವೆಂ ಈ ಎರಡನೆಯ ಗುಂಪಿಗೆ ಸೇರಿದವರು. ಶಬ್ದಸಾಗರದ ಆಳಕ್ಕೆ ಧುಮುಕಿದವರು. ಅರ್ಥದ ಅಪೂರ್ವ ಚಿಂತಾಮಣಿಗಳನ್ನು ಹೆಕ್ಕಿ ತಂದವರು. ತಂದು ನಮಗಿತ್ತವರು.

ಕಡಲನ್ನು ಈಸಿ ದಡ ಸೇರಿದರೇನು ಬಂತು ?

ಉಪ್ಪುನೀರು ಕುಡಿದದ್ದೇ ಬಂತು. ತೋಳು ನೋಯಿಸಿಕೊಂಡದ್ದೇ ಬಂತು.

ಆದರೆ ಜನ ಕೊಂಡಾಡುತ್ತಾರೆ : ಇವರು ಪಾರಂಗತರು; ಪಾರೀಣರು; ಪಾರವಾರೀಣರು.

ಮುತ್ತು ಸಿಗಲಿಲ್ಲ. ಬಿರುದು ಸಿಕ್ಕಿತು.

ಆಳಕ್ಕೆ ಇಳಿಯಬೇಕು. ಮುತ್ತುಗಳನ್ನು ಹೆಕ್ಕಿ ತರಬೇಕು. ಕಡಲ ಒಡಲನ್ನು ಕಡೆಯಬೇಕು; ಒಳಗಿನ ಗುಟ್ಟನ್ನು ಒಡೆಯಬೇಕು. ಆಗ ಪಟ್ಟ ಶ್ರಮ ಸಾರ್ಥಕ.

ಅಂಥವರನ್ನು ಯಾರೂ ಗುರುತಿಸುವುದಿಲ್ಲ; ಯಾರೂ ಬಿರುದು ನೀಡಿ ಪುರಸ್ಕರಿಸುವುದಿಲ್ಲ. ಏಕೆಂದರೆ ಅವರು ಪಾರಂಗತರಲ್ಲ.

ಶಬ್ದ ಸಾಗರದಲ್ಲು ಹಾಗೆಯೆ : ಇಲ್ಲಿ ಪಾರಂಗತರಿದ್ದಾರೆ. ಜನ ಅವರನ್ನು ಗುರುತಿಸುತ್ತಾರೆ. ತಲಸ್ಪರ್ಶಿಗಳು ವಿರಳರಾಗಿದ್ದಾರೆ. ಇದ್ದವರನ್ನೂ ಗುರುತಿಸುವವರಿಲ್ಲ. ನಮಗೆ ಬೇಕಿಲ್ಲ ಪಾರಂಗತರು. ಬೇಕಾಗಿದ್ದಾರೆ ತಲಸ್ಪರ್ಶಿಗಳು.

೧೩ನೆಯ ಶತಕದಲ್ಲಿ ತುಳುನಾಡಿನಲ್ಲಿ ಬದುಕಿದ್ದ ಅಗ್ರಮಾನ್ಯ ವಿದ್ವಾಂಸ ತ್ರಿವಿಕ್ರಮ ಪಂಡಿತರು ಈ ಮಾತನ್ನು ಹೇಳಿದ್ದುಂಟು :

> ''ನಹಿ ಮಣಿಗಣಮಾರ್ಗಣಪರಾ ನಿಪುಣಧಿಯೋಽನುಪದಂ
> ಸ್ವಪರಗುಪ್ತಿಪಾಟನಪಟವೋಽಧಿಜಲಧಿ ಲಹರೀಪಟಲ-
> ಪರಿವೃತ್ತಿಪರಿಗಣನಕೌತುಕೇನ ಸಮಯಮತಿಪಾತಯಂತಿ''.

(ಜಾಣರು ಹೆಜ್ಜೆಹೆಜ್ಜೆಗೆ ಮುತ್ತು ಅರಸುತ್ತಾರೆ – ಕಡಲ ಜಂತುಗಳಿಂದ ತಮ್ಮನ್ನು ರಕ್ಷಿಸಿಕೊಳ್ಳುತ್ತ – ಕಡಲಾಳಕ್ಕಿಳಿದು. ಅವರು ಕಡಲ ಮೇಲಣ ತೆರೆಗಳನ್ನು ಎಣಿಸುತ್ತ ವ್ಯರ್ಥ ಕಾಲಹರಣ ಮಾಡುವುದಿಲ್ಲ.)

ಪಾವೆಂ ಇಂಥ ಒಬ್ಬ ಅಪೂರ್ವ ವ್ಯಕ್ತಿ. ಅದಕ್ಕೆಂದೆ ಅವರ ಚಿಂತನಕ್ರಮ ನಮಗೆ ಮಹತ್ತ್ವದ್ದಾಗುತ್ತದೆ.

●

ಸಂಸ್ಕೃತ ಕವಿ ಮುರಾರಿ ಕೂಡ ಹೇಳುತ್ತಾನೆ :

> ''ಅಬ್ಧಿರ್ಲ್ಲಂಘಿತ ಏವ ವಾನರ ಭಟೈಃ
> ಕಿಂತ್ವಸ್ಯ ಗಂಭೀರತಾಂ
> ಆಪಾತಾಳನಿಮಗ್ನಪೀವರತನುಃ
> ಜಾನಾತಿ ಮಂಥಾಚಲಃ''

ಕಪಿಗಳು ಕಡಲನ್ನೇನೋ ದಾಟಿದರು. ಆದರ ಆಳ ಅವರಿಗೇನು ಗೊತ್ತು ? ಪಾತಾಳದಾಳಕ್ಕಿಳಿದು ಕಡಲನ್ನು ಕಡೆದ ಮಂದರಗಿರಿಗೆ ಮಾತ್ರವೇ ಅದರ ಆಳ ಗೊತ್ತು.

ಬಹಳ ಮಂದಿ ಕವಿಗಳೂ ಹಾಗೆಯೆ : ಅವರು ಸಾಹಿತ್ಯದ ಕಡಲನ್ನು ದಾಟಿರಬಹುದು : ದಾಟಿ ಆಚೆಯ ತಡಿ ಕಂಡಿರಬಹುದು. ಕಡಲ ಆಳವನ್ನರಿತ ಕವಿ ತಾನೊಬ್ಬನೆ ಎನ್ನುತ್ತಾನೆ ಮುರಾರಿ.

ಅವನ ಈ ಬಡಾಯಿಗಾಗಿಯೆ 'ಮುರಾರಿಗೆ ಮೂರನೆಯ ದಾರಿ' ಎಂಬ ಮಾತು ರೂಢಿಯಲ್ಲಿ ಬಂತು :

> ''ಮುರಾರೇಃ ತೃತೀಯಃ ಪಂಥಾಃ.''

ಸಾಮಾನ್ಯರದೊಂದು ದಾರಿ. ಸಾಮಾನ್ಯ ಪಂಡಿತರದೊಂದು ದಾರಿ. ಮುರಾರಿಯದು ಮೂರನೆಯ ದಾರಿ.

ಊರಿಗೊಂದು ದಾರಿಯಾದರೆ ಪೋರನಿಗೊಂದು ದಾರಿ. ಯಾರೂ ನಡೆಯದ, ನಡೆದು ಸವೆಯದ ದಾರಿ.

ಮುರಾರಿಯ ಮಾತು ಮುರಾರಿಗೆ ಅನ್ವಯವಾದೀತು; ಆಗದೆಯೂ ಹೋದೀತು. ಪಾವೆಂ ಅವರಿಗಂತು ಖಂಡಿತವಾಗಿ ಅನ್ವಯವಾಗುತ್ತದೆ.

ಉಳಿದವರು ನಡೆದು ಸವೆಸಿದ ದಾರಿಯಲ್ಲಿ ಅವರು ನಡೆದವರೇ ಅಲ್ಲ. ಅವರದ್ದೂ "ತೃತೀಯಃ ಪಂಥಾಃ." ಅವರದು ಮೂರಾಬಟ್ಟೆ ಅಲ್ಲ; ಮೂರನೆಯ ದಾರಿ ಹೌದು.

•

ಅವರು ಬದುಕಿನ ಕೊನೆಯ ಕ್ಷಣದ ತನಕವೂ ಹೊಸ ಹಾದಿಯನ್ನರಸುತ್ತ ನಡೆದರು. ಹೊಸತನ್ನು ಹುಡುಕಿದರು. ಹೊಸತನ್ನು ಕೊಟ್ಟರು.

ಯಾರೂ ಸಾಧಿಸದ್ದನ್ನು ಸಾಧಿಸುವುದು ಅವರ ಅಭಿಜಾತ ಗುಣವಾಗಿತ್ತು. ಈ 'ಪದಾರ್ಥ ಚಿಂತಾಮಣಿ' ಅದಕ್ಕೊಂದು ಅಪೂರ್ವ ನಿದರ್ಶನ.

ತಲಸ್ಪರ್ಶಿಯಾದ ಚಿಂತನೆ, ಸೂಕ್ಷ್ಮಾತಿಸೂಕ್ಷ್ಮವನ್ನೂ ಗ್ರಹಿಸಬಲ್ಲ ದುರ್ಬೀನು ದೃಷ್ಟಿ , ನಿಶಿತವಾದ ತಾರ್ಕಿಕ ಪ್ರಜ್ಞೆ ಮತ್ತು ಕರಾರುವಾಕ್ಕಾದ ನಿರೂಪಣೆ ಪಾವೆಂ ಅವರ ವೈದುಷ್ಯದ ಮೂಲ ದ್ರವ್ಯಗಳು. ಅವರ ಬರವಣಿಗೆಯುದ್ದಕ್ಕೂ ಈ ವೈಶಿಷ್ಟ್ಯವನ್ನು ನಾವು ಗುರುತಿಸಬಹುದು.

ಅವರು ಲಾಂಗೂಲಾಚಾರ್ಯರಾಗಿ ಲಘುಪ್ರಬಂಧಗಳನ್ನು ಬರೆದಾಗಲೂ ಈ ಮೂಲದ್ರವ್ಯಗಳನ್ನು ಉಳಿಸಿಕೊಂಡೇ ಬರೆದವರು.

ಪ್ರಬಂಧದ ಚೌಕಟ್ಟು ಲಘುವಾದರೂ ಕಟ್ಟು ಲಘುವಲ್ಲ. ಅವರು ಲಘುವಾಗಿ ಲಾಂಗೂಲ ಆಡಿಸುತ್ತಲೆ ವಿಷಯವನ್ನು ಸಮಗ್ರವಾಗಿ ಜಾಲಾಡಿಸಿ ಬಿಡುತ್ತಾರೆ. ನಗುನಗುತ್ತಲೇ ನಮ್ಮನ್ನು ಗಂಭೀರ ಚಿಂತನೆಗೆ ಒಳಪಡಿಸಿ ಬಿಡುತ್ತಾರೆ. ವಿಷಾದಕ್ಕೂ ನಗೆಯ ಲೇಪ.

ಆಡು ಮುಟ್ಟದ ಸೊಪ್ಪಿಲ್ಲ ಎನ್ನುತ್ತಾರೆ. ಆದರೂ ಆಡುಸೋಗೆ ಉಂಟು. ಪಾವೆಂ ಮುಟ್ಟದ ವಿಷಯವಿಲ್ಲ ಎನ್ನುವುದಕ್ಕೆ ಮಾತ್ರ ಅಪವಾದವಿಲ್ಲ.

ಪಾವೆಂ ಪ್ರಪಂಚದಲ್ಲಿ ಆಡುಸೋಗೆಯೇ ಇಲ್ಲ. ಅವರು ಬದುಕಿನಲ್ಲಿ ಕೈತುಂಬ 'ಸಂಪಾದನೆ' ಮಾಡಿದವರಲ್ಲ. ಆದರೆ ಅವರೊಬ್ಬ ಶ್ರೇಷ್ಠ ಸಂಪಾದಕರಂತು ಹೌದು. ಅವರ ಸಂಪಾದನೆಯಿಂದ ಅವರು ಶ್ರೀಮಂತರಾಗಲಿಲ್ಲ. ಕನ್ನಡ ಸಾಹಿತ್ಯ ಶ್ರೀಮಂತವಾಯಿತು.

•

ಪಾವೆಂ ಕೊನೆಯುಸಿರ ತನಕವೂ ತನ್ನ ಚಿಂತನ ಪ್ರಕ್ರಿಯೆಗೆ ವಿಶ್ರಾಂತಿ ನೀಡಿದವರಲ್ಲ.

ಒಂದು ಘಟನೆಯನ್ನು ನಾನು ಇಲ್ಲಿ ಉಲ್ಲೇಖಿಸಬೇಕು :

ನಾನು ಹುಬ್ಬಳ್ಳಿಗೆ ಹೋಗಿದ್ದೆ. ಹುಬ್ಬಳ್ಳಿಗೆ ಹೋಗಿ ಪಾವೆಂ ಅವರನ್ನು ಕಾಣದೆ ಬರುವುದುಂಟೆ ? ಅಮೆರಿಕಕ್ಕೆ ಹೋಗಿ ಡಿಸ್ನೆ ಲ್ಯಾಂಡ್ ನೋಡದೆ ಬರುವುದುಂಟೆ ? ಅವರ ಮನೆಗೂ ಹೋಗಿ ಮಾತಾಡಿಸಿ ಬಂದಿದ್ದೆ. ಹೊರಡುವ ದಿನ ಒಂದು ಪ್ರಸಂಗ ನಡೆಯಿತು.

ನಾನು ಊರಿಗೆ ಹೊರಡುವಂದೇ ಪಾವೆಂ ಕೂಡ ಉಡುಪಿಗೆ ಬರುವವರಿದ್ದರು. ಅದಕ್ಕಾಗಿ ಒಂದು ಟ್ಯಾಕ್ಸಿಯನ್ನು ಅವರು ಗೊತ್ತುಪಡಿಸಿದ್ದರು. ಆಯತಕಾಲದಲ್ಲಿ ಟ್ಯಾಕ್ಸಿಯವನು ಕೈ ಕೊಟ್ಟ. ಪಾವೆಂ ಕೊಂಚ ಗೊಂದಲಕ್ಕೊಳಗಾದರು. ಅಂದು ಅವರು ಹೊರಡುವುದು ಅನಿವಾರ್ಯವಿತ್ತು.

ನನಗೆ ಸುದ್ದಿ ತಿಳಿಯಿತು. ಅವರ ಅಡಚಣೆ ನನಗೆ ಲಾಭವಾಯಿತು. ನನ್ನ ಜತೆ ಬರುವಂತೆ ನಾನು ಅವರನ್ನು ಆಹ್ವಾನಿಸಿದೆ. ನಾವು ಜತೆಯಾಗಿ ಕಾರಿನಲ್ಲಿ ಪಯಣ ಹೊರಟೆವು.

ರಾತ್ರಿ ಬೆಳಗಿನ ತನಕ ದಾರಿಯುದ್ದಕ್ಕೂ ಪಾವೆಂ ಆಚಾರ್ಯರು ಮಾತನಾಡಿದರು : ರಾಜಕೀಯದ ಬಗ್ಗೆ, ವಿಜ್ಞಾನದ ಬಗ್ಗೆ, ಶಬ್ದಶಾಸ್ತ್ರದ ಬಗ್ಗೆ, ಅರ್ಥಶಾಸ್ತ್ರದ ಬಗ್ಗೆ, ಇತಿಹಾಸದ ಬಗ್ಗೆ, ಪುರಾಣಗಳ ಬಗ್ಗೆ, ಆಧ್ಯಾತ್ಮದ ಬಗ್ಗೆ.

ಚರ್ಚೆಯ ಭರದಲ್ಲಿ ದಾರಿ ಸಾಗಿದ್ದೇ ತಿಳಿಯಲಿಲ್ಲ. ಇರುಳು ಕಳೆದದ್ದೂ ತಿಳಿಯಲಿಲ್ಲ. ಉಡುಪಿ ಬಂದಾಗಲೇ ದಾರಿ ಸಾಗಿದ ಎಚ್ಚರ.

ಅದು ಎಂದೂ ಮರೆಯಲಾಗದ ರಾತ್ರಿ : ''ಅವಿದಿತಗತಯಾಮಾ ರಾತ್ರಿರೇವ ವ್ಯರಂಸೀತ್''

ಉಡುಪಿ ಬಂತು. ಆಚಾರ್ಯರು ಮಗನ ಮನೆಯಲ್ಲಿಳಿದರು.
ನಾನು ನನ್ನ ಮನೆಗೆ ತೆರಳಿದೆ.

ಎರಡು ದಿನ ಕಳೆದಿತ್ತೋ ಇಲ್ಲವೋ. ಒಂದು ಬೆಳಗಿನ ಜಾವ ಆಚಾರ್ಯರು ನಮ್ಮ ಮನೆಗೆ ಬಂದರು. ರಾತ್ರಿಯಿಡೀ ತಲೆ ತಿಂದ ಯಾವುದೋ ಶಬ್ದದ ನಿರ್ವಚನದ ಬಗ್ಗೆ ಅವರಿಗೆ ಚರ್ಚಿಸಬೇಕಾಗಿತ್ತು. ಬೆಳಗಾಗುವುದೇ ತಡ; ಹೊರಟುಬಿಟ್ಟರು.

ಅವರು ಬಂದಾಗ ನನಗಿನ್ನೂ ಬೆಳಗಾಗಿರಲಿಲ್ಲ.

ಅವರು ಬಂದರು ಎಂದು ಬೆಳಗಾಯಿತು.

ಲಗುಬಗೆ ಹಾಸಿಗೆಯಿಂದೆದ್ದು ಬಂದೆ.

ಚಹಾಪಾನದ ಜತೆ ಗಂಭೀರ ಚರ್ಚೆ.

ಶಬ್ದದ ಬೇರನ್ನು ಹಿಡಿದು ಜಗ್ಗಾಡಿದೆವು.

ವಿಷಯ ಸಂಗ್ರಹಿಸಿ ಅವರು ಹೊರಟರು. ನಾನು ಒಳನಡೆದೆ.ಎರಡು ನಿಮಿಷ

ಕಳೆದಿರಬಹುದು. ಮತ್ತೆ ಸ್ಕೂಟರಿನ ಸದ್ದು. ಹೊರಬಂದು ನೋಡಿದರೆ ಮತ್ತೆ ಆಚಾರ್ಯರು ಪ್ರತ್ಯಕ್ಷ! ನನ್ನನ್ನು ಕಂಡವರೇ ಹೇಳಿದರು : ''ನೋಡಿ. ಎಂಥ ಮರೆವು. ಎರಡು ಪದಗಳ ಬಗ್ಗೆ ಚರ್ಚಿಸಬೇಕು ಎಂದು ಬಂದಿದ್ದೆ. ಒಂದರ ಬಗ್ಗೆ ಚರ್ಚಿಸಿ ಹೊರಟುಬಿಟ್ಟೆ. ಅರ್ಧ ದಾರಿ ಸಾಗಿದ ಮೇಲೆ ಮರೆತೆ ಎನ್ನುವುದು ನೆನಪಾಯಿತು. ಆ ಶಬ್ದದ ಇತ್ಯರ್ಥವೂ ಆಗಿ ಬಿಡಬೇಕು. ಅದಕ್ಕಾಗಿ ಮತ್ತೆ ಬಂದೆ.''

ಮತ್ತೆ ಕುಳಿತೆವು. ಮತ್ತೆ ಚರ್ಚೆ ನಡೆಯಿತು. ಅವರ ಹಸಿವು ಹಿಂಗಿತೋ ಇಲ್ಲವೋ ಗೊತ್ತಿಲ್ಲ. ನನ್ನ ಅನ್ನಿಸಿಕೆಗಳನ್ನಂತು ಹೇಳಿದೆ. ಅವರು ಸುಲಭಕ್ಕೆ ಬಿಟ್ಟು ಕೊಡುವವರಲ್ಲ. ನಾನು ಏನು ಹೇಳಿದರೂ 'ಅದು ಹಾಗೆಯೇ ಏಕಾಗಬೇಕು ? ಹೀಗೇಕೆ ಆಗಿರಬಾರದು ?' ಎನ್ನುವವರು.

ಸಂಭಾಷಣೆಯ ನಡುವೆ ಅವರ ಸಮಸ್ಯೆಯನ್ನು ತೋಡಿಕೊಂಡರು : ''ನಾನಿರುವುದು ಹುಬ್ಬಳ್ಳಿಯಲ್ಲಿ. ಹುಬ್ಬಳ್ಳಿ-ಧಾರವಾಡಗಳಲ್ಲಿ ವಿಶ್ವವಿದ್ಯಾಲಯವಿದೆ; ಕಾಲೇಜುಗಳಿವೆ; ಪುಸ್ತಕಾಲಯಗಳಿವೆ. ಆದರೂ ಪದಾರ್ಥಚಿಂತನೆಗೆ ಬೇಕಾದ ಆಕರಗ್ರಂಥಗಳು ಸಿಗದೆ ಒದ್ದಾಡುತ್ತಿದ್ದೇನೆ. ಕೆಲವೊಮ್ಮೆ ಖಚಿತವಾದ ನಿರ್ಧಾರಕ್ಕೆ ಬರಲಾಗದೆ ತಿಣುಕಾಡಬೇಕಾಗುತ್ತದೆ.''

ಹೇಗಿದೆ ? ನಮ್ಮ ಪುಸ್ತಕಾಲಯಗಳಲ್ಲಿ ಬಿದ್ದಿರುವ ಪುಸ್ತಕಗಳನ್ನೆ ಓದುವವರಿಲ್ಲ. ಆದರೆ ಆಚಾರ್ಯರಿಗೆ ಅಲ್ಲಿದ್ದ ಪುಸ್ತಕಗಳು ಸಾಕಾಗಲಿಲ್ಲ.

ಅಥವಾ ಅಲ್ಲಿದ್ದ ಪುಸ್ತಕಗಳು ಅವರಿಗೆ ಬೇಕಿರಲಿಲ್ಲ. ಅವರಿಗೆ ಬೇಕಿದ್ದ ಪುಸ್ತಕಗಳು ಅಲ್ಲಿರಲಿಲ್ಲ.

ಅಂತೂ ಬಹಳ ಹೊತ್ತು ಶಬ್ದದ ಬೇರು ಹಿಡಿದು ಜಗ್ಗಾಡಿದೆವು. ಎಳೆದಾಗ ಒಂದೆಳೆ ಕೈಗೆ ಸಿಕ್ಕಿತು. ಸಿಕ್ಕಿದ್ದು ಬೇರೋ ಬರಿಯ ಬಿಳಲೋ ಗೊತ್ತಿಲ್ಲ.

ಇದು ಎಂಥ ಜ್ಞಾನತೃಷೆ! ಎಂಥ ತಣಿಯದ ಜಿಜ್ಞಾಸೆ!

●

ಮತ್ತೆ ಆಚಾರ್ಯರನ್ನು ಬೀಳ್ಕೊಟ್ಟು ನಾನು ಒಳನಡೆದೆ. ಆದರೆ ಅದೇ ಕೊನೆಯ ಬೀಳ್ಕೊಡುಗೆಯಾಗುತ್ತದೆ ಎಂದು ನಾನೆಣಿಸಿರಲಿಲ್ಲ.

ನಾವು ಮನೆಯಲ್ಲಿ ಭೇಟಿಯಾದ ಒಂದೆರಡು ದಿನಗಳಲ್ಲೇ ಆಚಾರ್ಯರು ಹುಬ್ಬಳ್ಳಿಗೆ ತೆರಳಿದರು. ಅಲ್ಲಿಂದ, ಮತ್ತೆಂದೂ ಮರಳದ ತಾಣಕ್ಕೆ ತೆರಳಿದರು. ಪದಾರ್ಥ ಚಿಂತಾಮಣಿ ಅನಾಥವಾಯಿತು! ಅದರ ಮೂರನೆಯ ಭಾಗವನ್ನು ನಾವೆಂದೂ ಕಾಣುವಂತಿಲ್ಲ.

●

ಶಬ್ದದ ಮೂಲವನ್ನರಸುವುದು ತುಂಬ ರೋಚಕವಾದ ಸಂಗತಿ.
ಒಮ್ಮೆ ಅದರ ಬೆನ್ನು ಹತ್ತಿದರೆ ಸಾಕು. ಮತ್ತೆ ಅದೇ ನಮ್ಮ ಬೆನ್ನು ಹತ್ತುತ್ತದೆ.

ಸ್ತ್ರೀಮೂಲ, ನದೀ ಮೂಲ, ಋಷಿಮೂಲ ಹುಡುಕಬಾರದು ಎನ್ನುತ್ತಾರೆ.
ಮೂಲ ತಿಳಿದರೆ ಇದ್ದ ಗೌರವ ಕಮ್ಮಿಯಾದೀತು ಎನ್ನುವ ಭಯ.

ಆದರೆ ಶಬ್ದಮೂಲ ಹುಡುಕಬೇಕು. ಹುಡುಕಿದಾಗ ಆ ಪುಟ್ಟ ಶಬ್ದದ
ಒಡಲೊಳಗೆ ಇಡಿಯ ಬ್ರಹ್ಮಾಂಡ ಹುದುಗಿರುವುದನ್ನು ಕಂಡು ಒಮ್ಮೊಮ್ಮೆ
ನಾವು ದಿಗಿಲುಗೊಳ್ಳುವಂತಾಗುತ್ತದೆ.

ಒಂದೊಂದು ಶಬ್ದವೂ ಆ ಭಾಷೆಯನ್ನಾಡುವ ಜನಾಂಗದ
ಸಾಂಸ್ಕೃತಿಕ ಇತಿಹಾಸಕ್ಕೆ ಕನ್ನಡಿ ಹಿಡಿಯುತ್ತದೆ. ಚರಿತ್ರೆಯ ಪುಟಗಳಲ್ಲಿ ದಾಖಲಾಗದ
ಸಂಗತಿಗಳನ್ನು ಶಬ್ದದ ಬೇರುಗಳಲ್ಲಿ ಹುಡುಕಬಹುದು.

'ದೇವರ' ಶಬ್ದದ ಬೇರನ್ನು ಹುಡುಕುತ್ತ ಯಾಸ್ಕ ಹೇಳಿದ: ''ದ್ವಿತೀಯೋ ವರೋ
ಭವತಿ'' ಇದರ ಪರಿಣಾಮವಾಗಿ ಹೆಣ್ಣು ಗಂಡುಗಳ ಸಂಬಂಧದ ಬಗೆಗಿನ
ಪ್ರಾಚೀನ ಕಲ್ಪನೆಯ ಒಂದು ಇತಿಹಾಸವೆ ನಮ್ಮ ಮುಂದೆ
ತೆರೆದುಕೊಳ್ಳುವಂತಾಯಿತು.

ಈ ಬೇರು ಹುಡುಕುವುದು ಅಷ್ಟೊಂದು ಸುಲಭವೇನೂ ಅಲ್ಲ.
ಇದೊಂದು ಶೈವಪುರಾಣದ ಲಿಂಗ ಮೂಲಾನ್ವೇಷಣೆ. ಕಂಡೆ ಎಂದುಕೊಂಡವರು ಬಹಳ
ಮಂದಿ ಉಂಟು. ಕಂಡವರು ಕಡಿಮೆ. ಇವು ಕಂಡೂ ಕಾಣದ ನೋಟಗಳು.
ಕಂಡಕಂಡವರು ಕಾಣುವುದು ಸಾಧ್ಯವಿಲ್ಲ.

ಇರುವುದು ಒಂದು. ಕಾಣುವುದು ಇನ್ನೊಂದು.

ಬುಡದ ಗುಣವೇ ಗಿಡದಲ್ಲಿರುವುದಿಲ್ಲ.

ಬುಡದಲ್ಲಿ ದ್ವಿವೇದಿ ಇತ್ತು. ಬೆಳೆಯುತ್ತ ದುಬೇ ಆಯಿತು ಎಂದಾಗ ಅಷ್ಟೊಂದು
ಅಚ್ಚರಿಯೆನಿಸಲಿಕ್ಕಿಲ್ಲ. ಆದರೆ ಉಪಾಧ್ಯಾಯರ ಕತೆ ಕೇಳಿ.

'ಉಪಾಧ್ಯಾಯ' ಇತ್ತು. ಉವಜ್ಝಾಯ ಆಯಿತು. ಓಝಾ ಆಯಿತು.
ಕೊನೆಗೆ ಝಾ ಮಾತ್ರ ಉಳಿಯಿತು. ರೂಪಾಂತರದಲ್ಲಿ ಮೂಲದ ಯಾವ ಅಕ್ಷರವೂ
ಉಳಿಯಲಿಲ್ಲ. ಎಂಥ ವಿಚಿತ್ರ !

ಕನ್ನಡದ ದಿಂಬಿನ ಕತೆಯೇನು ಕಮ್ಮಿ ರೋಚವೆ ?
ತಲೆಗೆ + ಇಂಬು = ತಲೆಗಿಂಬು ಆಯಿತು.

ಅರ್ಥದ ಚಿಂತೆ ಇಲ್ಲದವರ ಬಾಯಿಯಲ್ಲಿ ತಲೆಗಿಂಬು ಹೋಗಿ
ತಲೆದಿಂಬಾಯಿತು.

ಕೊನೆಗೆ ತಲೆಯೂ ಹೋಗಿ ಬರಿಯ ದಿಂಬು ಉಳಿಯಿತು ! ಕನ್ನಡ

ಭಾಷೆಯಲ್ಲೊಂದು ಹೊಸ ಶಬ್ದ ಹುಟ್ಟಿಕೊಂಡಿತು : ದಿಂಬು ! ಏನು ಹಾಗಂದರೆ ? ಗೊತ್ತಿಲ್ಲವೇನು ? ಎಂಥವರಯ್ಯಾ ನೀವು ! ದಿಂಬು ಎಂದರೆ ದಿಂಬು !

●

ಶಬ್ದನಿರುಕ್ತಿಯ ಮೂಲಕ ಅದರ ಮೂಲವನ್ನು ಬಗೆಯುವ ಪ್ರಯತ್ನವನ್ನು ಮಾಡಿದ ಮೊದಲಿಗರಲ್ಲಿ ಯಾಸ್ಕನದು ದೊಡ್ಡ ಹೆಸರು. ವೈಯಾಕರಣರ ಅಸಹಜ ನಿರ್ವಚನದಿಂದ ಶಬ್ದದ ಸಹಜನಿರ್ವಚನದೆಡೆಗೆ ನಮ್ಮ ಗಮನ ಸೆಳೆದ ಕೀರ್ತಿ ಅವನಿಗೆ ಸಲ್ಲಬೇಕು.

ಅನಂತರದ ಸಂಸ್ಕೃತ ಪಂಡಿತರು ವ್ಯಾಕರಣಕ್ಕೆ ಜೋತು ಬಿದ್ದರು. ನಿರುಕ್ತ ಹಿಂದೆ ಬಿತ್ತು. ಮತ್ತೆ ಇದನ್ನು ಪೂರ್ಣಪ್ರಮಾಣದಲ್ಲಿ ಬಳಸಿಕೊಂಡವರು ೧೩ನೆಯ ಶತಮಾನದಲ್ಲಿದ್ದ ಆಚಾರ್ಯ ಮಧ್ವರು.

ಮತ್ತೆ ಸ್ಥಳ ಪುರಾಣಕರ ಕೈಯಲ್ಲಿ ನಿರುಕ್ತಿ ಹೊಲೆಗೆಟ್ಟಿತು. ಅವರು ತಮ್ಮ ತಮ್ಮ ಕ್ಷೇತ್ರಗಳ ವೈಭವೀಕರಣಕ್ಕಾಗಿ ಭಾಷಾಜ್ಞಾನವೇ ಇಲ್ಲದ ಕೆಟ್ಟ ನಿರ್ವಚನಗಳನ್ನು ಹುಟ್ಟುಹಾಕಿದರು.

ಉದಾ : ಉಡುಪಿ, ತೀರ್ಥಹಳ್ಳಿ.

'ಒಡಿಪು' ಎಂಬ ತುಳು ಶಬ್ದ ಸಂಸ್ಕೃತ ಪಂಡಿತರ ಕೈಯಲ್ಲಿ ಉಡುಪಿಯಾಯಿತು. ಅದಕ್ಕೊಂದು ಹೊಸ ನಿರ್ವಚನ ಹುಟ್ಟಿಕೊಂಡಿತು : 'ಉಡುಪ' ಎಂದರೆ ಚಂದ್ರ. 'ಉಡುಪಿ' ಎಂದರೆ ಚಂದ್ರಮೌಳೀಶ್ವರ ! ತುಳು ಶಬ್ದಕ್ಕೆ ಸಂಸ್ಕೃತ ನಿರ್ವಚನ.

ಇನ್ನು ತೀರ್ಥಹಳ್ಳಿಯ ಕಥೆ ಕೇಳಿ. ಪರಶುರಾಮನ ಹತ್ಯಾಕಾಂಡದ ಪಾಪ ಈ ಹಳ್ಳಿಯ ನದಿಯಲ್ಲಿ ಮಿಂದಾಗ ಪರಿಹಾರವಾಯಿತಂತೆ ! ಈ ಹಳ್ಳಿಯಲ್ಲಿ ಪಾಪ ತೀರಿತು. ಆದರಿಂದ ಇದು 'ತೀರಿತುಹಳ್ಳಿ'ಯಾಗಿ 'ತೀರ್ಥಹಳ್ಳಿ'ಯಾಯಿತಂತೆ. ಸಂಸ್ಕೃತ ಶಬ್ದಕ್ಕೆ ಕನ್ನಡ ನಿರ್ವಚನ !

ಹೀಗೆ ಇತಿಹಾಸವನ್ನು ತೆರೆದಿಡುವ ನಿರ್ವಚನದಿಂದಲೆ ಇತಿಹಾಸದ ಬಾಗಿಲನ್ನು ಶಾಶ್ವತವಾಗಿ ಮುಚ್ಚುವ ಪ್ರಯತ್ನವೂ ನಡೆಯಿತು.

●

ಕನ್ನಡದಲ್ಲಂತು ಶಬ್ದ ಮೂಲದ ಅನ್ವೇಷಣೆ ನಡೆದದ್ದು ತೀರ ವಿರಳ. ವ್ಯಾಪಕವಾಗಿ ಇಂಥ ಪ್ರಯತ್ನ ನಡೆಯಲೇ ಇಲ್ಲ. ಪಾವೆಂ ಆಚಾರ್ಯರು ಅಂಥ ಹೊಸ ಜಾಡಿನಲ್ಲಿ ನಡೆದರು. ನಡೆದು ನಡುದಾರಿಯಲ್ಲಿ ನಮ್ಮ ಕೈಬಿಟ್ಟು ತೆರಳಿದರು.

ಆದರೂ ಅವರು  ಈ ಎರಡು ಸಂಪುಟಗಳಲ್ಲಿ ೧೫೬ ಪರಿಚ್ಛೇದಗಳಲ್ಲಿ ಸಂಗ್ರಹಿಸಿದ ಮಾಹಿತಿ ಸಣ್ಣದೇನೂ ಅಲ್ಲ. ೮೯ ರಿಂದ ೧೫೮ರ ತನಕದ ೬೬ ಪರಿಚ್ಛೇದಗಳು ಈ ಎರಡನೆಯ ಭಾಗದಲ್ಲಿ ಬಂದಿವೆ. ಇಲ್ಲಿ ಬಂದ ಕೆಲವು ನಿರ್ವಚನಗಳಿಗೆ ಪೂರಕವಾಗಿ ನನ್ನ ಕೆಲವು ಅನ್ನಿಸಿಕೆಗಳನ್ನೂ ಇಲ್ಲಿ ಸೇರಿಸುತ್ತಿದ್ದೇನೆ – ತೀರ್ಮಾನದ ಹೊಣೆಯನ್ನು ಚಿಂತಕರ ಪಾಲಿಗೆ ಬಿಟ್ಟು.

•

ಅಡಿಯ ಅಡಿಗ ಎಂದರೆ ಸೇವಕ. ಹೀಗೆ ದೇವರ ಪೂಜಾರಿಗಳು ಅಡಿಗ ಎಂಬ ಹೆಸರು ಧರಿಸುತ್ತಾರೆ. (ಪು. ೧೭೭. ಪಂ. ೨೯-೩೦)

ಅಡಿಗ ಎಂದರೆ ಸೇವಕ ಎಂಬ ಅರ್ಥವಿದೆ ನಿಜ. ದೇವರ ಚಾಕರಿಯವರನ್ನು ದೇವಾಡಿಗರು ಎನ್ನುತ್ತಾರೆ. ಆದರೆ ದೇವರ ಪೂಜಾರಿಗಳು ಅಡಿಗರು ಆದದ್ದು ತೀರ ಇತ್ತೀಚೆಗೆ ಎಂದು ಕಾಣುತ್ತದೆ.

ಇದರ ಪೂರ್ವರೂಪ ಅಡಿಗಳು. ಇದು ಅಡಿ ಶಬ್ದದ ಬಹುವಚನದ ರೂಪ. ಅಡಿಗಳು ಅಡಿಗರು ಆದದ್ದು ನಿರ್ವಚನ ಮರೆತ ಅರ್ವಾಚೀನರ ಕೈಯಲ್ಲಿ.

ದೊಡ್ಡವರನ್ನು 'ಪಾದ' ಶಬ್ದದಿಂದ ಕರೆಯಬೇಕು ಎನ್ನುವುದೂ ಸಂಸ್ಕೃತದ ರೂಢಿ. ಅದಕೆಂದೆ ಆಚಾರ್ಯ ಪುರುಷರು ಭಗವತ್ಪಾದರಾದರು. ಸನ್ಯಾಸಿಗಳು ಶ್ರೀ ಪಾದರಾದರು. ಈ ಶ್ರೀಪಾದರೆ ಕನ್ನಡದಲ್ಲಿ ಶ್ರೀಕಾರ ಕಳೆದುಕೊಂಡು 'ಅಡಿ'ಗಳಾದರು. ದೊಡ್ಡವರು ದೇವರಿಗೆ ಹತ್ತಿರದವರು ಎನ್ನುವುದು ಅದರ ಅರ್ಥವಿದ್ದಿರಬೇಕು.

•

ಕಚಡಾ ಯಾವ ಭಾಷೆಯಿಂದ ಕನ್ನಡಕ್ಕೆ ಬಂತು. ಪಾರಸೀಕ ಅರಬ್ಬೀ ಮೂಲದಿಂದ ಬಂದದ್ದೆಂದು ಸುನೀತಿ ಕುಮಾರ ಚಟರ್ಜಿಯವರ ಅಂಬೋಣ. ದ್ರಾವಿಡ ಭಾಷೆಯ ಕಸ-ಗಸಿ ಇತ್ಯಾದಿಗಳಿಂದಲೆ ಏಕೆ ಬಂದಿರಬಾರದು ಎನ್ನುವುದು ಆಚಾರ್ಯರ ಶಂಕೆ (ಪು. ೧೭೯)

ಇಲ್ಲಿ ಒಂದು ಶಂಕೆ : ಸಂಸ್ಕೃತದಲ್ಲಿ 'ಕಚ್ಚರ' ಎಂಬ ಶಬ್ದವಿದೆ. ಕೊಳೆಯಾದದ್ದು ಎಂದೇ ಅದರ ಅರ್ಥ. ಇದರಿಂದ ಮರಾಠಿಯ ಕಚರಾ ಹಿಂದಿಯ ಖಚರಾ ಕನ್ನಡದ ಕಚಡಾ ಅಥವಾ ಖಚಡಾ ಆಗಿರಬಹುದೆ ? ಅಥವಾ ದೇಸಿಯಿಂದ ಸಂಸ್ಕೃತಕ್ಕೆ ಹೋಯಿತೆ ? ವಿದ್ವಾಂಸರು ತೀರ್ಮಾನ ಮಾಡಬೇಕಾದ ಸಂಗತಿ.

•

"ಸಾಂಪ್ರದಾಯಿಕ ಹಿಂದೂ ಸಾಹಿತ್ಯದಲ್ಲಿ ಬೌದ್ಧ-ಜೈನರ ಬಗ್ಗೆ ತುಂಬಾ ಗೊಂದಲ ಇದೆ. ಉದಾಹರಣೆಗೆ "ಬತ್ತಲೆ ನಿಂತಿದ್ದ ಬುದ್ಧನಿಗೆ" ಎಂಬ ದಾಸರ ಮಂಗಲ ಪದ. ಬುದ್ಧ ಬತ್ತಲೆ ನಿಂತಿರಲಿಲ್ಲ; ಅದು ಜೈನರ ಸಂಪ್ರದಾಯ ಎಂದು ಆಗ ಹಿಂದೂಗಳಿಗೆ ಸರಿಯಾಗಿ ತಿಳಿದಿರಲಿಲ್ಲ." (ಪು. ೨೦೩. ಪಂ. ೧೬-೧೯)

ಜೈನಧರ್ಮ ವ್ಯಾಪಕವಾಗಿ ಬೆಳೆದದ್ದು ಕನ್ನಡದ ನೆಲದಲ್ಲಿ. ಕನ್ನಡ ಸಾಹಿತ್ಯಕ್ಕೆ ಜೈನರ ಕೊಡುಗೆ ಅನನ್ಯವಾದದ್ದು. ಗೊಮ್ಮಟನ ನಾಲ್ಕು ಬೃಹತ್ ಬತ್ತಲೆ ಮೂರ್ತಿಗಳಿರುವುದು ಕರ್ನಾಟಕದಲ್ಲಿ. ಹೀಗಿದ್ದೂ ಬತ್ತಲೆ ನಿಂತವನು ಬುದ್ಧ ಅಲ್ಲ ಬಾಹುಬಲಿ ಎನ್ನುವುದು ಪುರಂದರದಾಸರಿಗೆ ತಿಳಿದಿರಲಿಲ್ಲ ಎಂದರೆ ನಂಬುವುದು ಕಷ್ಟ!

ಬೌದ್ಧಧರ್ಮವನ್ನು ಅರಿತು ಗೌರವಿಸುತ್ತಿದ್ದ ಹರ್ಷ ಚಕ್ರವರ್ತಿ ತನ್ನ ನಾಟಕವೊಂದರಲ್ಲಿ ಹೇಳುತ್ತಾನೆ: "ಬುದ್ಧೋಜಿನಃ ಪಾತು ವಃ". ಬೌದ್ಧನೆಂದು ನಂಬಲಾದ ಕೋಶಕಾರ ಅಮರಸಿಂಹ ಬುದ್ಧನ ಹೆಸರುಗಳಲ್ಲಿ 'ಜಿನ' ಶಬ್ದವನ್ನು ಸೇರಿಸುತ್ತಾನೆ: "ಮಾರಜಿತ್ ಲೋಕಜಿತ್ ಜಿನಃ". ಇನ್ನೊಬ್ಬ ಕೋಶಕಾರ 'ಜಿನ' ಎಂದರೆ ಮಹಾವೀರನೂ ಹೌದು; ಬುದ್ಧನೂ ಹೌದು ಎನ್ನುತ್ತಾನೆ: "ಜಿನೋಽರ್ಹತಿ ಚ ಬುದ್ಧೇ ಚ" ಬುದ್ಧ ಜಿನನ ಮಗ ಎನ್ನುತ್ತದೆ ಭಾಗವತ. "ಬುದ್ಧೋ ನಾಮ್ನಾ ಜಿನಸುತಃ" ಇದನ್ನು ವಿವರಿಸುತ್ತ ಆಚಾರ್ಯಮಧ್ವರು – ಬುದ್ಧನ ತಂದೆ ಶುದ್ಧೋದನನಿಗೆ 'ಜಿನ' ಎಂಬ ಹೆಸರಿತ್ತು – ಎಂದು ಹೇಳುತ್ತಾರೆ: "ಶುದ್ಧೋದನಸ್ತ್ವೇವ ಜಿನೇತಿ ಚೋಕ್ತಃ"

ಮೇಲುನೋಟಕ್ಕೆ ಇವೆಲ್ಲ ಜೈನ ಬೌದ್ಧ ಧರ್ಮಗಳ ಅಂತರ ತಿಳಿಯದ ಗೊಂದಲದಂತೆ ಕಾಣುತ್ತದೆ. ಆದರೆ ಇಲ್ಲೆಲ್ಲೂ ಗೊಂದಲವಿಲ್ಲ. 'ಜಿನ' ಎನ್ನುವುದು ರೂಢನಾಮವಲ್ಲ. ಇಂದ್ರಿಯಗಳನ್ನು ಗೆದ್ದವನು ಎಂಬರ್ಥದ ಗೌರವನಾಮ. ಒಂದು ಬಗೆಯ ಬಿರುದು. ಈ ಎಚ್ಚರ ಪ್ರಾಚೀನರಿಗೆ ಚೆನ್ನಾಗಿತ್ತು. ಜಿನ ಮತ್ತು ಬುದ್ಧರ ಇತಿಹಾಸ ಮತ್ತು ಧರ್ಮಗಳನ್ನು ಸರಿಯಾಗಿ ತಿಳಿದಿದ್ದ ವಿದ್ವಾಂಸರೇ ಜಿನ-ಬುದ್ಧ ಪದಗಳನ್ನು ವ್ಯಾಮಿಶ್ರವಾಗಿ ಬಳಸುವುದನ್ನು ನಾವು ಕಾಣುತ್ತೇವೆ.

ಪ್ರಾಚೀನ ಸಾಹಿತ್ಯದಲ್ಲಿ ಬುದ್ಧನನ್ನು ಜಿನ ಎಂದು ಕರೆದದ್ದುಂಟು. ಆದರೆ ಜಿನನನ್ನು ಬುದ್ಧ ಎಂದು ಕರೆದದ್ದಿಲ್ಲ. ಪುರಂದರದಾಸರು ಬತ್ತಲೆ ನಿಂತಿಹ ಬುದ್ಧನಿಗೆ ಎಂದರು. ಏನು ಇದರ ಅರ್ಥ?

ಬುದ್ಧನಿಗೆ ಐತಿಹಾಸಿಕ ಮುಖವಿದ್ದಂತೆ ಪೌರಾಣಿಕ ಮುಖವೊಂದುಂಟು. ಪುರಾಣಗಳ ಪ್ರಕಾರ ತ್ರಿಪುರಾಸುರರನ್ನು ಮೋಹಗೊಳಿಸುವುದು ಬುದ್ಧಾವತಾರದ ಉದ್ದೇಶಗಳಲ್ಲಿ ಒಂದು. ಅದಕ್ಕಾಗಿ ಅವನು ಅಸುರಸ್ತ್ರೀಯರ ಮುಂದೆ ಬತ್ತಲೆಯಾಗಿ ನಿಂತ ಎಂದು ಪುರಾಣಗಳು ಹೇಳುತ್ತವೆ. ಗಯೆಯಲ್ಲಿ ಬುದ್ಧನಾಗಿ ಅಹಿಂಸೆಯನ್ನು ಬೋಧಿಸಿದ್ದು ಐತಿಹಾಸಿಕವಾಗಿ ದಾಖಲಾದ

ಕಥೆಯಾದರೆ ಇದರ ಜತೆಗೆ ಈ ಒಂದು ಕಥೆಯನ್ನು ಪೌರಾಣಿಕರು ಹೇಳುತ್ತಾರೆ. ಹೀಗೆ ಬತ್ತಲಾದವನು ಜೈನಧರ್ಮದ ಮೂಲ ಪುರುಷ ಅಲ್ಲ. ಶುದ್ಧೋದನನ ಮಗ ಬುದ್ಧನೇ. ಪುರಾಣಗಳಲ್ಲಿ ಅಪಾರಶ್ರದ್ಧೆಯಿದ್ದ ಪುರಂದರದಾಸರು ಈ ಪೌರಾಣಿಕ ಅಂಶವನ್ನು ತನ್ನ ಪದ್ಯದಲ್ಲಿ ಉಲ್ಲೇಖಿಸಿದ್ದಾರೆ. ಇದರಿಂದ ಅವರಿಗೆ ಬೌದ್ಧ-ಜೈನ ಸಂಪ್ರದಾಯಗಳ ಅಂತರ ತಿಳಿದಿರಲಿಲ್ಲ ಎಂದು ಹೇಳಲಾಗುವುದಿಲ್ಲ.

●

*''ಈಚೆಗೆ ಮಲೆಯಾಳಿಗಳ ಸಂಪರ್ಕದಿಂದ ವಣಕ್ಕಂ ಎಂಬ ನಮಸ್ಕಾರಾರ್ಥಕ ಶಬ್ದ ಕನ್ನಡಿಗರಿಗೂ ಪರಿಚಿತವಾಗುತ್ತಿದೆ.'' (ಪು. ೨೧೦. ಪಂ. ೩೨)*

ಮಲೆಯಾಳಿಗಳು ಮಾತ್ರವಲ್ಲ. ತಮಿಳರೂ ವಣಕ್ಕಂ ಎಂದೇ ಹೇಳುತ್ತಾರೆ.

●

*''ತೀರ್ಥ ಶಬ್ದ ಋಗ್ವೇದದಷ್ಟು ಹಳೆಯದು. ಮೂಲತಃ 'ತೃ ತರಣೇ' ಅಂದರೆ ದಾಟುವುದು ಎಂಬರ್ಥದ ಧಾತುವಿನಿಂದ ಹುಟ್ಟಿದ ಶಬ್ದ ಅದು'' (ಪು. ೨೫೭. ಪಂ. ೨೯-೩೦)*

ವಾಸ್ತವವಾಗಿ ತೀರ್ಥ ಶಬ್ದ ''ತೀರ ಕರ್ಮಸಮಾಪ್ತೌ' ಎಂಬ ಧಾತುವಿನಿಂದ ನಿಷ್ಪನ್ನವಾದದ್ದು. ದಾಟಿದವನು, ಕರ್ತವ್ಯವನ್ನು ಮಾಡಿ ಮುಗಿಸಿದವನು ತೀರ್ಥ. ಈ 'ತೀರ' ಧಾತುವಿನಿಂದಲೆ ಕನ್ನಡದ 'ತೀರು', 'ತೀರಿಸು' ಬಂದಿದೆ.

ಕರ್ತವ್ಯಕರ್ಮಗಳನ್ನು ಮುಗಿಸಿದವನು, ಎತ್ತರಕ್ಕೇರಿದವನು, ಆದಕ್ಕೆಂದೆ ಸಮಾಜದಲ್ಲಿ ಗಣ್ಯನಾದವನು, ಪವಿತ್ರನಾದವನು ಎಂದೆಲ್ಲ ಅರ್ಥವಿಸ್ತಾರ ಈ ಪದಕ್ಕೆ ಬಂತು.

ಒಟ್ಟಿನಲ್ಲಿ 'ತೀರ್ಥ' ಎಂದರೆ ಆದರ್ಶ ವ್ಯಕ್ತಿ; ಗೌರವಾರ್ಹ ವ್ಯಕ್ತಿ, ಮಗನಿಗೆ ತಂದೆ ಗೌರವಾರ್ಹ ಆದರ್ಶ ವ್ಯಕ್ತಿ. ಆದಕೆಂದೆ ಅವನು ತೀರ್ಥರೂಪನಾದ, ಸಮಾಜಕ್ಕೆ ಪೀಠಾಧಿಪತಿಯಾದ ಸನ್ಯಾಸಿ ತೀರ್ಥನಾದ. ತೀರ್ಥಾಭಿಷೇಕದಿಂದ ಪಟ್ಟಕ್ಕೇರಿಸುವ ಪ್ರಕ್ರಿಯೆಯೂ ಸನ್ಯಾಸಿಯ ತೀರ್ಥನಾಮಕ್ಕೆ ಕಾರಣವಾಗಿರಬೇಕು. ವಾಸ್ತವವಾಗಿ ಇದೊಂದು ವಿಚಿತ್ರ ಶಬ್ದ. ಸಂಸ್ಕೃತದಲ್ಲಿ ಇದರ ಅರ್ಥದ ಹರವು ದಿಗಿಲು ಬರಿಸುವಂಥದು :

ಶಾಸ್ತ್ರ ಉಪದೇಶಕನಾದ ಗುರು ತೀರ್ಥ. ಶಾಸ್ತ್ರವೂ ತೀರ್ಥ. ಯಜ್ಞ ತೀರ್ಥ, ಪುಣ್ಯಕ್ಷೇತ್ರ – ಪುಣ್ಯ ಜಲಗಳೂ ತೀರ್ಥ. ಸ್ನಾನಘಟ್ಟವೂ ತೀರ್ಥ. ಉಪಾಯಜ್ಞನಾದ ಮಂತ್ರಿಯೂ ತೀರ್ಥ. ಉಪಾಯವೂ ತೀರ್ಥ. ಅಚ್ಚರಿಯ ಸಂಗತಿಯೆಂದರೆ ಹೆಣ್ಣಿನ ಋತುಸ್ರಾವವೂ ತೀರ್ಥ !

ಇಲ್ಲಿ ಎಲ್ಲ ಕಡೆಯೂ ಯಾವುದೋ ಒಂದನ್ನು ತೀರಿಸುವ, ಪಾರುಗಾಣಿಸುವ ಕ್ರಿಯೆ ಇದೆ ಎನ್ನುವುದು ಗಮನಾರ್ಹ. ಪೂಜ್ಯ, ಪವಿತ್ರ ಎನ್ನುವ ಅರ್ಥ ಅನಂತರ ಬಂದದ್ದು. ಹೆಣ್ಣಿನ ರಜಸ್ಸು ಸೃಷ್ಟಿಕ್ರಿಯೆಗೆ ನಾಂದಿಯಾಗಿ ಪವಿತ್ರವಸ್ತುವಾಯಿತು.

•

''ತಾವರೆಗಿರುವ ಹೆಸರುಗಳಲ್ಲಿ ಪುಂಡ್ರ, ಪುಂಡರೀಕ ಎಂಬವು ಬಿಳಿದಾವರೆಗೆ ಸಲ್ಲುತ್ತವೆ.'' (ಪು. ೨೬೦. ಪಂ. ೨೨-೨೩)

ಸಂಸ್ಕೃತ ಕೋಶಕಾರರು ಹೀಗೆ ಅರ್ಥ ಹೇಳುತ್ತಾರೇನೋ ನಿಜ. ಆದರೆ ಪ್ರಾಚೀನ ಸಂಸ್ಕೃತದಲ್ಲಿ ಕೆಂದಾವರೆ ಎಂಬ ಅರ್ಥದಲ್ಲಿ ಪುಂಡರೀಕ ಶಬ್ದದ ಪ್ರಯೋಗವನ್ನು ಕಾಣುತ್ತೇವೆ. ಉದಾ : ''ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ'' (ಕೆಂದಾವರೆಯಂಥ ಕಣ್ಣು) ''ಏಕಪುಂಡರೀಕಂ ಧಾರಯತಿ'' (ಒಂದು ಕೆಂದಾವರೆ ಮುಡಿದಂತೆ ಕನಸು ಕಂಡರೆ ಅದು ಮೃತ್ಯುಸೂಚಕ.)

•

''ಸಂಸ್ಕೃತದಲ್ಲಿ ಆತಪತ್ರ ಎಂಬುದು ಕೊಡೆಗಿರುವ ಒಂದು ಪದ. ''ಆತಪ'' ಎಂದರೆ ಬಿಸಿಲು; ''ತ್ರ'' ಎಂಬುದು ಕಾಪಾಡು ಎಂಬರ್ಥದ ಪ್ರತ್ಯಯ ( ?ಧಾತು). ಅರ್ಥಾತ್ ಬಿಸಿಲಿನಿಂದ ನಿಮ್ಮನ್ನು ರಕ್ಷಿಸುವುದು ಕೊಡೆಯ ಕೆಲಸ; ಮಳೆಯಿಂದಲ್ಲ.'' (ಪು. ೩೧೧. ಪಂ. ೨೦-೨೩)

ನನಗೆ ಒಂದು ಗುಮಾನಿಯಿದೆ : ಪ್ರಾಚೀನ ಕಾಲದಲ್ಲಿ ಬಿಸಿಲಿಗೆ ಹಿಡಿಯುವ 'ಕೊಡೆ'ಯೇ ಬೇರೆ; ಮಳೆಗೆ ಹಿಡಿಯುವ 'ಕೊಡೆ'ಯೇ ಬೇರೆ ಇದ್ದಿರಬೇಕು. ಬಿಸಿಲಿಗೆ ಹಿಡಿಯುವ ಚಪ್ಪಟೆಯಾದ 'ಕೊಡೆ' ಮಳೆಗೆ ಉಪಯೋಗವಾಗುತ್ತಿರಲಿಲ್ಲ. ಆದಕ್ಕೆ ಇಡಿಯ ಮೈಮುಚ್ಚುವಂಥ 'ಗೊರಬು'ಗಳನ್ನು ಉಪಯೋಗಿಸುತ್ತಿದ್ದರು. ಇದೇ ಛತ್ರ : ಮೈಯನ್ನು ಸುತ್ತ ಆಚ್ಛಾದಿಸುವಂಥದು.

ಹೀಗೆ ಬಿಸಿಲಿನ ಕೊಡೆ 'ಆತಪತ್ರ'. ಮಳೆಯ ಕೊಡೆ 'ಛತ್ರ'. ಕಾಲಕ್ರಮೇಣ ಬಿಸಿಲಿಗೂ ಮಳೆಗೂ ಏಕರೀತಿಯ 'ಕೊಡೆ' ಬಂದಾಗ ಈ ಎರಡೂ ಶಬ್ದಗಳೂ ಏಕಾರ್ಥಕವಾಗಿರಬೇಕು.

ಹಾಗೆಯೇ ಆತಪತ್ರ ಎನ್ನುವುದು ಆತತ+ಪತ್ರ ಎನ್ನುವುದರ ರೂಪಾಂತರವಾಗಿರುವ ಸಾಧ್ಯತೆಯೂ ಇದೆ : ಆತತ = ಹರವಿ ಹೆಣೆದ, ಪತ್ರ = ಎಲೆ. ತಾಡೋಲೆಯ ಎಲೆಗಳನ್ನು ಹರವಿ ಹೆಣೆಯುತ್ತಿದ್ದ ಈ 'ತತ್ರ'ಗಳೇ ಆತ ಪತ್ರಗಳು. ಈಗ 'ಆತ ಪತ್ರ' ಎಂದರೆ ಬರಿಯ ಬಿಸಿಲಿನಿಂದ ರಕ್ಷಿಸುವಂಥದಲ್ಲ; ಮಳೆಯಿಂದ ರಕ್ಷಿಸುವಂಥದು ಕೂಡ.

•

*ಈ ಮಾತುಗಳನ್ನು ನಾನು ಪಾವೆಂ ಆಚಾರ್ಯರ ಜತೆ ಹಂಚಿಕೊಳ್ಳಬೇಕಿತ್ತು. ಆದರೆ ವಿಧಿ ಅದಕ್ಕೆ ಅವಕಾಶ ನೀಡಲಿಲ್ಲ. ಅದಕ್ಕಾಗಿ ನಿಮ್ಮ ಮುಂದೆ ತೋಡಿಕೊಳ್ಳುತ್ತಿದ್ದೇನೆ.*

*ಪಾವೆಂ ಆಚಾರ್ಯರಿಂದ ಇಂಥ ಚಿಂತಾಮಣಿಯ ಸರಮಾಲೆ ನಿರಂತರವಾಗಿ ಬರಬೇಕಿತ್ತು. ಕನ್ನಡ ವಾಗ್ದೇವಿಯ ಕೊರಳಿಗೆ ಅದು ಅಪೂರ್ವ ಸರಮಾಲೆಯಾಗುತ್ತಿತ್ತು. ಈ ಕೊರತೆಯನ್ನು ತುಂಬುವವರು ಯಾರು ? ಈಗ ಮಣಿಯಿರದ ಬರಿಯ ಚಿಂತೆ ನಮ್ಮದು.*

**- ಬನ್ನಂಜೆ ಗೋವಿಂದಾಚಾರ್ಯ**

# ಪ್ರಕಾಶಕರ ನುಡಿ

ಶ್ರೀ ಪಾ. ವೆಂ. ಆಚಾರ್ಯರ 'ಪದಾರ್ಥ ಚಿಂತಾಮಣಿ'ಯ ಮೊದಲನೇ ಆವೃತ್ತಿಯ ಒಂದನೇ ಭಾಗವನ್ನು ಮಂಗಳೂರಿನ ದತ್ತಾತ್ರೇಯ ಪ್ರಕಾಶನದವರು, ಎರಡನೇ ಭಾಗವನ್ನು ಸುಬ್ರಹ್ಮಣ್ಯದ ಪ್ರಮತಿ ಪ್ರಕಾಶನದವರು ಪ್ರಕಟಿಸಿದ್ದರು. ಎರಡನೇ ಆವೃತ್ತಿಯನ್ನು ನವಕರ್ನಾಟಕ ಪ್ರಕಟಿಸಬೇಕೆಂದು ಸಲಹೆ ಮಾಡಿದವರು ನಮ್ಮ ಹಿತೈಷಿಗಳಾದ ಶ್ರೀ ಜಿ. ಟಿ. ನಾರಾಯಣ ರಾವ್. ಶ್ರೀಮತಿ ಆಚಾರ್ಯರಿಗೂ ನಮ್ಮನ್ನು ಸಂಪರ್ಕಿಸುವಂತೆ ಸೂಚಿಸಿದ್ದರು. ಪಾ. ವೆಂ. ರವರ ಈ ಅಪೂರ್ವ ಕೃತಿಯನ್ನು ಪ್ರಕಟಿಸಲು ನಮಗೂ ಸಂತೋಷವೇ. ಆದರೆ ಎರಡು ಭಾಗಗಳ ಬದಲು ಓದುಗರಿಗೆ ಒಂದೇ ಆವೃತ್ತಿಯಲ್ಲಿ ಲಭಿಸಿದರೆ ಅನುಕೂಲ ಎಂಬುದು ನಮ್ಮ ಅಭಿಪ್ರಾಯ. ಇದನ್ನು ಸಮ್ಮತಿಸಿದವರು ಶ್ರೀಮತಿ ಲಕ್ಷ್ಮೀದೇವಿ ಆಚಾರ್ಯ ಹಾಗೂ ಶ್ರೀ ಎಂ. ವಿ. ಪಾಡಿಗಾರು.

ಎರಡನೇ ಭಾಗಕ್ಕೆ ಮುನ್ನುಡಿ ಬರೆದಿರುವ ಶ್ರೀ ಬನ್ನಂಜೆ ಗೋವಿಂದಾಚಾರ್ಯರಿಗೆ, ಒಂದೇ ಆವೃತ್ತಿಯಲ್ಲಿ ಪ್ರಕಟಿಸುವ ಬಗ್ಗೆ ಒಲವು ತೋರಿದ ಪ್ರೊ|| ಜಿ. ವೆಂಕಟಸುಬ್ಬಯ್ಯನವರಿಗೆ, ಶ್ರೀ ಜಿ. ಟಿ. ನಾರಾಯಣ ರಾವ್ ಅವರಿಗೆ, ಪ್ರಮತಿ ಪ್ರಕಾಶನದ ಶ್ರೀ ಲಕ್ಷ್ಮೀಶ ತೋಳ್ಪಾಡಿ ಅವರಿಗೆ, ಅಗತ್ಯ ಸಹಕಾರ ನೀಡಿದ ಶ್ರೀಮತಿ ಲಕ್ಷ್ಮೀದೇವಿ ಆಚಾರ್ಯ ಹಾಗೂ ಶ್ರೀ ಎಂ. ವಿ. ಪಾಡಿಗಾರು ಅವರಿಗೆ ನವಕರ್ನಾಟಕದ ಕೃತಜ್ಞತೆಗಳು ಸಲ್ಲುತ್ತವೆ.

ಶ್ರೀ ಪಾ. ವೆಂ. ಆಚಾರ್ಯರ ಇತರ ಕೃತಿಗಳು, ಪುಸ್ತಕ ರೂಪದಲ್ಲಿ ಬರದೆ ಉಳಿದಿರುವವುಗಳು, ಪ್ರಕಟವಾಗಿ ಓದುಗರಿಗೆ ಲಭ್ಯವಾಗಬೇಕೆಂಬುದು ನಮ್ಮ ಆಶಯ.

**ಆರ್. ಎಸ್. ರಾಜಾರಾಮ್**

ನವಕರ್ನಾಟಕ ಪ್ರಕಾಶನ

# ಪಾ. ವೆಂ. ಆಚಾರ್ಯ

## ಪಾಡಿಗಾರು ವೆಂಕಟರಮಣಾಚಾರ್ಯ

ಕವಿ ಕತೆಗಾರ ಹರಟೆಗಾರ ವಿಮರ್ಶಕ ಪತ್ರಿಕೋದ್ಯೋಗಿ

**ಹುಟ್ಟಿದ್ದು :** ೧೯೧೫ ಉಡುಪಿ

**ತಂದೆ ತಾಯಿ :** ಪಾಡಿಗಾರು ಲಕ್ಷ್ಮೀನಾರಾಯಣಾಚಾರ್ಯ ಮತ್ತು ಸೀತಮ್ಮ. ಕಡುಬಡತನದಲ್ಲಿ ಎಸ್‌ಎಸ್‌ಎಲ್‌ಸಿ ವರೆಗೆ ವ್ಯಾಸಂಗ. ಉತ್ತಮವಾಗಿ ತೇರ್ಗಡೆಯಾದರೂ ಬಡತನದಿಂದ ಓದು ನಿಲುಗಡೆ.

**ಕೆಲಸ :** ಶಾಲಾಮಾಸ್ತರ್, ಅಂಗಡಿ ಗುಮಾಸ್ತ, ಕಂಪೆನಿ ಸೆಕ್ರೆಟರಿ, ಪ್ರೆಸ್ ಮೆನೇಜರ್, ಅಕೌಂಟೆಂಟ್, ಹೋಟೆಲ್ ಬಿಲ್‌ರೈಟರ್ (ಉಡುಪಿ, ಮದ್ರಾಸ್.)
೧೯೪೨ರಲ್ಲಿ ಹುಬ್ಬಳ್ಳಿಗೆ ಆಗಮನ. ಸಂಯುಕ್ತ ಕರ್ನಾಟಕ ಪ್ರಿಂಟಿಂಗ್ ಸೂಪರಿಂಟೆಂಡೆಂಟ್, 'ಕರ್ಮವೀರ' ಉಪಸಂಪಾದಕ, 'ಕಸ್ತೂರಿ' ಪ್ರಥಮ ಸಂಪಾದಕ. ೧೯೭೫ರಲ್ಲಿ ನಿವೃತ್ತಿ. ಈಗ ನಿವೃತ್ತಿ ಜೀವನ.

**ಬರವಣಿಗೆ :** ೧೧ನೇ ವಯಸ್ಸಿನಲ್ಲೇ ಪದ್ಯರಚನೆ ಆರಂಭ. ೧೫ನೇ ವಯಸ್ಸಿನಲ್ಲಿ ಬಂಗಾಲಿ ಕಲಿತು, ರವೀಂದ್ರರ ಗೀತಾಂಜಲಿ ಪಠನ. ೧೯೩೩ರಿಂದ ಕವಿತೆಗಳು. ರಾಷ್ಟ್ರಬಂಧು, ಪ್ರಬುದ್ಧಕರ್ಣಾಟಕ, ಜಯಕರ್ನಾಟಕಗಳಲ್ಲಿ ಪ್ರಕಟಿತ. 'ಅಂತರಂಗ'ದ ಸಂಪಾದಕ ಬಳಗದಲ್ಲಿ ಸೇರ್ಪಡೆ. ಕಥೆ, ಕವಿತೆ ಪ್ರಕಟನೆ. ಆಗಲೇ ತುಳು ಕವಿತೆ ರಚನಾರಂಭ.
೧೯೫೦ರಲ್ಲಿ ಲಾಂಗೂಲಾಚಾರ್ಯ ಎಂಬ ಹೆಸರಿನಲ್ಲಿ ಕರ್ಮವೀರದಲ್ಲಿ ಹರಟೆ-ಲಘುಬರಹ ಬರವಣಿಗೆಯಿಂದ ಪ್ರಸಿದ್ಧಿ. ಕರ್ಮವೀರದಲ್ಲಿ ಹಲ ವಿಮರ್ಶೆಗಳು.

**ಪುಸ್ತಕ ಪ್ರಕಟನೆ :** ಕನ್ನಡ : ಕವಿತೆ 'ನವನೀರದ,' 'ಕೆಲವು ಪದ್ಯಗಳು,' ತುಳು ಕವಿತೆ : 'ಬಯ್ಯ ಮಲ್ಲಿಗೆ.' ರಾಜಕೀಯ, ಇತಿಹಾಸ; 'ರಶಿಯದ ರಾಜ್ಯಕ್ರಾಂತಿ,' 'ಸ್ವಾತಂತ್ರ್ಯದ ೨೫ ಪರ್ವಗಳು. ಲಘು ಬರಹಗಳು : 'ಪ್ರಹಾರ,' 'ಲೋಕದಡೊಂಕು,' 'ವಿಪರೀತ,' 'ವಕ್ರದೃಷ್ಟಿ.' ಅನುವಾದ; ಸುಭಾಷಿತ ಚಮತ್ಕಾರ.

**ಮನ್ನಣೆಗಳು :** 'ನವನೀರದ'ಕ್ಕೆ ಮುಂಬಯಿ ಸರಕಾರದ ಬಹುಮಾನ. ಪತ್ರಿಕೋದ್ಯಮಕ್ಕೆ ರಾಮಯ್ಯ ಪ್ರಶಸ್ತಿ, ಸಾಹಿತ್ಯ ಪರಿಷತ್ತಿನ ವಜ್ರಮಹೋತ್ಸವ ಪದಕ ಪ್ರಶಸ್ತಿ. ಲಘು ಬರಹಕ್ಕೆ ಕರ್ನಾಟಕ ಸಾಹಿತ್ಯ ಅಕಾಡಮಿ ಪ್ರಶಸ್ತಿ, ವರ್ಧಮಾನ ಪ್ರಶಸ್ತಿ, ಮೈಸೂರಿನಲ್ಲಿ ಸಾರ್ವಜನಿಕ ಸನ್ಮಾನ ಮತ್ತು ನಿಧಿದಾನ.

# ಪದಾರ್ಥ ಚಿಂತಾಮಣಿ

## ಭಾಗ – ೧

೧

ಶ್ರೇಷ್ಠನಾದವನನ್ನು ಕುರಿತು **ಪುಂಗವ** ಎಂದು ವಿಶೇಷಿಸಿ ಹೇಳುವುದುಂಟು: ಮುನಿಪುಂಗವ, ನರಪುಂಗವ ಇತ್ಯಾದಿ. ಪುಂಗವ ಅಂದರೆ ಮೂಲದಲ್ಲಿ **ಹೋರಿ** ಎಂದರ್ಥ: 'ಪುಮಾನ್ ಗೌಃ' – ಗಂಡು ದನ. ಇದೇ ಅರ್ಥದ **ವೃಷಭ** ಎಂಬುದನ್ನು ಕೂಡ ಶ್ರೇಷ್ಠ ಎಂಬರ್ಥದಲ್ಲಿ ಸಂಸ್ಕೃತದಲ್ಲಿ ಬಹಳ ಪ್ರಾಚೀನದಿಂದ ಬಳಸಿದ್ದಾರೆ. ಪುರುಷರ್ಷಭ – ಅಂದರೆ ಮನುಷ್ಯರಲ್ಲಿ ಶ್ರೇಷ್ಠ. ಕನ್ನಡದ ಹೋರಿ ಶ್ರೇಷ್ಠ ಎಂಬರ್ಥದಲ್ಲಿ ಬಳಕೆಯಾದದ್ದು ಅಷ್ಟಾಗಿ ಕಾಣಿಸುವುದಿಲ್ಲ.

ಶ್ರೇಷ್ಠನಾದ ಮನುಷ್ಯನನ್ನು ಹೋರಿ ಎಂದು ವಿಶೇಷಿಸುವುದು ನಮಗೀಗ ತುಸು ಆಭಾಸವಾಗಿ ಕಾಣಿಸಬಹುದು. ಈಗಿನ ಕಾಲದಲ್ಲಿ ಹೋರಿಯೆಂಬುದು ಸ್ತ್ರೀಲಂಪಟ ಎಂಬ ಕೆಟ್ಟ ಅರ್ಥವನ್ನು ಕೊಡುತ್ತದೆ. ಆದರೆ ಆರ್ಯರು ಮುಖ್ಯವಾಗಿ ಪಶುಪಾಲನ ವೃತ್ತಿಯಲ್ಲಿದ್ದ ಯುಗದಲ್ಲಿ ತುರುಹಿಂಡಿನಲ್ಲಿ ಹೋರಿಗೆ ಬಹಳ ಆರ್ಥಿಕ ಮಹತ್ವವಿತ್ತೆಂದು ನೆನೆದರೆ ಇದು ಆಶ್ಚರ್ಯವೆನಿಸಬೇಕಿಲ್ಲ.

ಉತ್ತಮ ಎಂದು ಅರ್ಥ ಕೊಡುವ **ಶ್ರೇಷ್ಠ** ಶಬ್ದದಿಂದ **ಶ್ರೇಷ್ಠಿ** ಹುಟ್ಟಿತು. ಅದೇ ಕನ್ನಡದ **ಸೆಟ್ಟಿ**. ಎಲ್ಲರಿಗಿಂತಲೂ ಬ್ರಾಹ್ಮಣರು ಶ್ರೇಷ್ಠರು ಎನ್ನುತ್ತಿದ್ದ ಕಾಲದಲ್ಲಿ ವೈಶ್ಯರು ಶ್ರೇಷ್ಠಿಗಳು ಹೇಗಾದರು ? ಶ್ರೇಷ್ಠಿ ಎಂಬುದು ಮೊದಮೊದಲು ವರ್ತಕರ ಶ್ರೇಣಿ ಅಥವಾ ಸಂಘದ ಪ್ರಮುಖನಿಗೆ ವ್ಯಾಪಾರಿ ಸಂಘದ ಹಿರಿಯ ಎಂಬರ್ಥದಲ್ಲಿ ಪ್ರಚಾರಕ್ಕೆ ಬಂತು. ಆಮೇಲೆ ಒಟ್ಟಿನಲ್ಲೇ ಎಲ್ಲ ವ್ಯಾಪಾರಿಗಳಿಗೂ ಅನ್ವಯಿಸಿತು. ವರ್ತಕರು ಕಾಸುಗಳ್ಳರು. ಆದ್ದರಿಂದ ಕಾಸು ಗಂಟುಹಾಕುವವರನ್ನು ಯಾವ ಜಾತಿಯೇ ಇರಲಿ, ವೃತ್ತಿಯೇ ಇರಲಿ ಸೆಟ್ಟಿಯೆನ್ನುವುದು ವ್ಯಂಗ್ಯಾರ್ಥದಲ್ಲಿ ಬಳಕೆಗೆ ಬಂತು. 'ಸೆಟ್ಟಿಯ ಬಳ್ಳಂ ಕಿರಿದು' ಎಂದು ಪಂಪನ ಕಾಲದಲ್ಲಿ ಗಾದೆ ಇತ್ತು. ತೂಕ ಅಳತೆಗಳಲ್ಲಿ ಆಗಲೂ ವರ್ತಕರು ತಗಲು ಮಾಡುತ್ತಿದ್ದರೆಂದಾಯಿತು. ಕಾಸುಗಳ್ಳನಾದ ಶ್ರೀನಿವಾಸನನ್ನು ದಾಸರು 'ತಿಮ್ಮಪ್ಪ ಸೆಟ್ಟಿ' ಎಂದು ಕರೆದಿದ್ದಾರೆ. ಶ್ರೇಷ್ಠಿಯೆಂಬ ಹೆಚ್ಚುಗಾರಿಕೆಯ ಶಬ್ದ ಕೊನೆಗೆ ಮೋಸಗಾರಿಕೆಗೆ, ಜಿಪುಣತನಕ್ಕೆ ಪ್ರತೀಕವಾಗಿ ಹೀಗೆ ಅರ್ಥಹ್ರಾಸ ಹೊಂದಿತು.

ಸೆಟ್ಟರ ಮಾತು ಬಂದಾಗ **ಮಾರಾಟ**ದ ನೆನಪಾಗುವುದು ಸಹಜ. ಮಾರಾಟ ಶಬ್ದವೂ ಮನುಷ್ಯನ ಆರ್ಥಿಕ ನಾಗರಿಕತೆ ನಡೆದುಬಂದ ದಾರಿಯ ಒಂದು ಮೈಲುಗಲ್ಲನ್ನು ಸೂಚಿಸುತ್ತದೆ. **ಮಾಱು** ಎಂದರೆ ಅದಲು ಬದಲು ಮಾಡುವುದು ಎಂದೇ ಅಭಿಧಾರ್ಥ. ಹಣದ ಪ್ರಸಾರ ವ್ಯಾಪಕವಾಗುವ ಮುಂಚೆ ವ್ಯಾಪಾರವೆಂದರೆ ಒಂದು ಸರಕು ಕೊಟ್ಟು ಇನ್ನೊಂದನ್ನು ಪಡೆಯುವುವಲ್ಲವೆ? **ಮಾರಾಟ** ಆ ಕಾಲದಲ್ಲಿ ಹುಟ್ಟಿಕೊಂಡ ಶಬ್ದ.

ಇಂಗ್ಲೀಷಿನ **barter** ಗೆ, ಸಂಸ್ಕೃತದ ವಿನಿಮಯಕ್ಕೆ ಸಮಾನವಾದದ್ದು, ಮುಂದೆ ಹಣದ ಮೂಲಕವೇ ವ್ಯವಹಾರವಾಗುವುದು ಎಲ್ಲ ಕಡೆ ರೂಢಿಗೆ ಬಂದರೂ ಮಾರಾಟ ಶಬ್ದ ಉಳಿದುಕೊಂಡಿತು. ಆದರೆ ಹಿಂದಣ ಕವಿಗಳ ಪ್ರಯೋಗಗಳಲ್ಲಿ ಅದು ವಿನಿಮಯ ಎಂಬರ್ಥವನ್ನು ಉಳಿಸಿಕೊಂಡಿದೆ. 'ಮರುಳನ್ ಅಳೆಗೆ ಮಾಣಿಕಮಂ ಮಾರುವ ತೆರದಿಂ' – ಮಾಣಿಕ್ಯವನ್ನು ಮಜ್ಜಿಗೆಗೆ ವಿನಿಮಯ ಮಾಡಿಕೊಂಡ ಮೂರ್ಖರೂ ಹಣಕ್ಕಾಗಿ ಕವಿತೆ ಬರೆಯುವವರೂ ಒಂದೇ ತರದವರು ಎಂದು ನೇಮಿಚಂದ್ರ ಕವಿ ಹೇಳುತ್ತಾರೆ.

೨

ಯಾವೊಂದು ವಿಷಯದಲ್ಲಿ ಚತುರನಾಗಿರುವವನನ್ನು **ಕುಶಲ** ಎಂದು ವಿಶೇಷಿಸುವುದುಂಟು. ಕಾರ್ಯಕುಶಲ, ವಾದಕುಶಲ ಇತ್ಯಾದಿ. ಇದು ಎಲ್ಲಿಂದ ಬಂತು? ಬಹುಶಃ ಸಂಸ್ಕೃತದ **ಕುಶ**ದಿಂದ. ಈ ಶಬ್ದಕ್ಕೆ ಎರಡು ಅರ್ಥಗಳು. ಒಂದು ಆರ್ಯ ಧರ್ಮದಲ್ಲಿ ಪವಿತ್ರವೆನಿಸುವ ದರ್ಭೆಯೆಂಬ ಹುಲ್ಲು. ಇನ್ನೊಂದು, ನೇಗಿಲಿನ ಮೊನೆ. ಕುಶ ಹುಲ್ಲಿನ ತುದಿಯೂ ಬಹಳ ಮೊನೆಯೇ. ಆದ್ದರಿಂದ ಹರಿತವಾದ ಬುದ್ಧಿಯುಳ್ಳವನನ್ನು **ಕುಶಾಗ್ರಮತಿ** ಅಂದರೆ ದರ್ಭೆಯ ತುದಿಯಂತೆ ತೀಕ್ಷ್ಣವಾದ ಮಿದುಳುಳ್ಳವ ಎನ್ನುವ ರೂಢಿ ಇದೆ. ಅಥವಾ **ನೇಗಿಲ ಮೊನೆ**ಯಂತೆ ಕಠಿಣವಾದ ವಿಷಯಗಳನ್ನು ಕತ್ತರಿಸಬಲ್ಲದ್ದು ಎಂದೂ ಹೇಳಬಹುದು. ಆದರೆ ಆರ್ಯರಿಗೆ ನೇಗಿಲ ಮೊನೆಗಿಂತ ಹಿಂದೆಯೇ ಕುಶತೃಣದ ಪರಿಚಯ ಇತ್ತೆಂದು ತೋರುತ್ತದೆ.

**ಕುಶಲ**ಕ್ಕೆ ಇನ್ನೊಂದು ಅರ್ಥವೂ ಇದೆ. ಕ್ಷೇಮ, ಸುಖ, ಮಂಗಲ ಇತ್ಯಾದಿ. ಇದು ಈ ಮೇಲೆ ಹೇಳಿದ ಅರ್ಥದ್ದೇ ವಿಸ್ತರಣೆ ಆಗಿರಬಹುದು. ಚುರುಕಾಗಿದ್ದವನಿಗೆ ಕ್ಷೇಮ ಇರುತ್ತದೆ ಅಲ್ಲವೆ? ಆದರೆ ಇದು ಬೇರೆಯೇ ಮೂಲದಿಂದ ಬಂದಿದ್ದರೂ ಇರಬಹುದು. ಹಿಂದುಸ್ತಾನಿಯಿಂದ ಕನ್ನಡದಲ್ಲಿಯೂ ನುಸುಳಿಕೊಂಡ **ಖುಶ್** (ಸುಖ, ಸಂತೋಷ) ಎಂಬ ಪಾರಸೀಕ ಶಬ್ದವೊಂದುಂಟು. ಪಾರಸೀಕ ಮತ್ತು ಸಂಸ್ಕೃತ ಭಾಷೆಗಳು ಸೋದರ ಭಾಷೆಗಳೆಂದು ಇಲ್ಲಿ ನೆನೆದುಕೊಳ್ಳಬಹುದು.

**ಕುಶಾಲು** ಎನ್ನುವ ಇನ್ನೊಂದು ಶಬ್ದ ಕನ್ನಡದಲ್ಲಿ ಬಳಕೆಗೆ ಬಂದಿದೆ. ವಿನೋದ, ಆನಂದ ಎಂಬರ್ಥ ಅದಕ್ಕೆ ಇದೆ. **ಖುಶಾಲು** ಎಂಬ ಮಹಾಪ್ರಾಣಯುಕ್ತ ರೂಪವೂ ಅದಕ್ಕೆ ಇದೆ. ಕುಶಾಲಿಗೆ ಹೇಳಿದೆ – ಅಂದರೆ ವಿನೋದಕ್ಕಾಗಿ ಹೇಳಿದೆ, ಗಂಭೀರವಾಗಿ ಅಲ್ಲ. **ಕುಶಾಲಾಗಿ** ಇದ್ದಾನೆ ಅಂದರೆ ಯಾವ ಚಿಂತೆಯೂ ಇಲ್ಲ, ಮಜವಾಗಿದ್ದಾನೆ. **ಕುಶಾಲ್ ತೋಫು** ಎಂದರೆ ಗೌರವ ಅಥವಾ ಸಂತೋಷ ಪ್ರದರ್ಶನಕ್ಕೆ ಹಾರಿಸಿದ ಫಿರಂಗಿ. ಇದು ಹಿಂದುಸ್ತಾನಿ ಮೂಲಕ ಬಂದ ಪಾರಸೀಕ **ಖುಶ್–ಹಾಲ್** (ಸಂತೋಷ ಸ್ಥಿತಿ) ಶಬ್ದ. ಈ ಶಬ್ದ ಕ್ರಿ.ಶ. ೧೮೦೦ರಷ್ಟು ಹಿಂದೆಯೇ ಜಿನಭಾರತವೆಂಬ ಕಾವ್ಯದಲ್ಲಿ ಪ್ರಯೋಗವಾದದ್ದು ಕಾಣುತ್ತದೆ.

ನಮ್ಮ ಪೂರ್ವಿಕರು ಶಬ್ದಗಳ ವಿಷಯದಲ್ಲಿ ಮಡಿವಂತರಾಗಿರಲಿಲ್ಲ ಎಂಬುದಕ್ಕೆ ಇನ್ನೊಂದು ಉದಾಹರಣೆ ತಕ್ಕಡಿಯೆಂಬರ್ಥದ **ತ್ರಾಸು** ಎಂಬ ಪದ. ಇದು ೧೨ನೇ

ಶತಮಾನದಷ್ಟು ಹಿಂದೆಯೇ ಕನ್ನಡ ಕಾವ್ಯದಲ್ಲಿ ಕಂಡುಬರುತ್ತದೆ. **ತ್ರಾಸಿನೊಳಿಟ್ಟು** ತೂಗುವ ಮಾತು ಅಲ್ಲಿದೆ. ಇದು ಹೊರನೋಟಕ್ಕೆ ಸಂಸ್ಕೃತವೆಂದೇ ತೋರೀತು. ಆದರೆ ಇದರ ಮೂಲ ಪಾರಸೀಕ **ತರಾಜೂ**. ಸಂಸ್ಕೃತದ ತ್ರಾಸದಿಂದ ಕನ್ನಡಕ್ಕೆ ಬಂದ **ತ್ರಾಸು** ಎಂಬುದು ಕಷ್ಟ, ಒತ್ತಡ ಎಂಬರ್ಥದ್ದು.

**ತ್ರಾಸು** ಇಸ್ಲಾಮಿ ವಿಸ್ತರಣೆಯ ಪ್ರಭಾವದಿಂದ ಬಂದಿರದೆ ವಿದೇಶಗಳೊಡನೆ ಪ್ರಾಚೀನದಿಂದ ಇದ್ದ ಕರ್ನಾಟಕದ ವ್ಯಾಪಾರದೊಡನೆ ಬಂದದ್ದು, ಆದರೆ **ಫೌಜು** ಅಥವಾ **ಪೌಜು** ಎಂಬುದು ಇಸ್ಲಾಮಿ ಮಿಲಿಟರಿ ಪ್ರಭಾವದಿಂದ ಕನ್ನಡಕ್ಕೆ ಸಾಕಷ್ಟು ಹಿಂದಿನ ಕಾಲದಲ್ಲೇ ಬಂದ ಅರಬೀ ಪದ. ಇದರ ಅರ್ಥ ಸೈನ್ಯ ಅಥವಾ ದಂಡು. ಕ್ರಿ.ಶ. ೧೬೦೦ ರವನಿರಬೇಕೆಂದು ತರ್ಕಿಸಲಾದ **ಲಕ್ಷ್ಮೀಶ** ಕವಿ ತನ್ನ ಜೈಮಿನಿ ಭಾರತದಲ್ಲಿ ಅದನ್ನು ತುರುಕರದೆಂಬ ಯಾವ ಶಂಕೆಯೂ ಇಲ್ಲದೆ ಪ್ರಯೋಗಿಸುತ್ತಾನೆ. ಸೈನ್ಯಾಧಿಕಾರಿ ಎಂಬರ್ಥವುಳ್ಳ **ಫೌಜದಾರ**ವನ್ನು ಸ್ವಲ್ಪ ಅರ್ಥ ವಿಸ್ತಾರ ಮಾಡಿ ಪೋಲೀಸ್ ಪಡೆಯ ಅಧಿಕಾರಿ ಎಂಬರ್ಥದಲ್ಲಿ ಉತ್ತರ ಕರ್ನಾಟಕದಲ್ಲಿ ಬಳಸುತ್ತಾರೆ.

೩

**ದೇವ** ಮತ್ತು **ಅಸುರ** ಶಬ್ದಗಳು ನಮಗೆಲ್ಲ ತಿಳಿದಂತೆ ಕ್ರಮವಾಗಿ **ಒಳ್ಳೆ** ಮತ್ತು **ಕೆಟ್ಟ**, **ಅಲೌಕಿಕ, ಅತಿಮಾನುಷ** ಶಕ್ತಿಗಳನ್ನು ಪ್ರತಿನಿಧಿಸುತ್ತವೆ. ಸಂಸ್ಕೃತದ ಸೋದರ ಭಾಷೆಗಳಾದ ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳಲ್ಲಿಯೂ ಸತ್ ಶಕ್ತಿಗಳಿಗೆ **ದೇವ**ದ ಜ್ಞಾತಿ ಶಬ್ದಗಳೇ ಸಲ್ಲುತ್ತವೆ; ಗ್ರೀಕಿನಲ್ಲಿ **ಥಿಯೋಸ್** (Theos) ಲ್ಯಾಟಿನ್ನಿನಲ್ಲಿ **ದೀವಸ್** (Deus) ಪದಗಳು ದೇವತಾರ್ಥವಾಗಿವೆ. ಇದು ಆಶ್ಚರ್ಯವಲ್ಲ. ದೇವ, ದೀವಸ್ ಇತ್ಯಾದಿಗಳು ಪ್ರಕಾಶಾರ್ಥಕಗಳಾಗಿವೆ.

ಆದರೆ, ಆಶ್ಚರ್ಯ ಇದು: ನಮ್ಮ ನೆರೆಯ ನಿಕಟತಮ ಆರ್ಯಬಂಧುಗಳಾದ ಇರಾಣಿಗಳಿಗೆ **ದೇವ** ಅಥವಾ **ದಏವ** ಎಂಬ ಶಬ್ದ ನಮ್ಮ ದೈತ್ಯ ಅಥವಾ ಅಸುರ ಶಬ್ದದಂತೆ ದುಷ್ಟ ಶಕ್ತಿಗಳ ಪ್ರತೀಕವಾಗಿದೆ, ಮತ್ತು ನಮ್ಮ ಅಸುರ ಶಬ್ದದ ಜ್ಞಾತಿಯಾದ **ಅಹುರ** ಎಂಬುದು ಒಳ್ಳೇ ದಿವ್ಯ ಶಕ್ತಿಗಳನ್ನು ಪ್ರತಿನಿಧಿಸುತ್ತದೆ. (ಇರಾಣದ ಜೆಂದ್ ಭಾಷೆಯಲ್ಲಿ ಸಂಸ್ಕೃತದ ಸಕಾರ 'ಹ' ಕಾರವಾಗುತ್ತದೆ.) ಈ ಪ್ರಕಾರ ಪುರಾತನ ಇರಾಣದ ಅವೆಸ್ತಾ ಧರ್ಮದ ಅನುಯಾಯಿಗಳಾದ ನಮ್ಮ ದೇಶದ ಪಾರ್ಸಿಗಳಿಗೆ **ಅಹುರಮಜ್‌ದಾ** ಸತ್‌ಶಕ್ತಿಗಳಲ್ಲಿ ಸರ್ವಶ್ರೇಷ್ಠನಾದವನು. ಅವನ ಶತ್ರು **ಅಹ್ರಿಮನ್** ದುಷ್ಟಶಕ್ತಿಗಳಲ್ಲಿ ಸೈತಾನನಂಥವನು. ಇವನೇ ಭಾರತೀಯಾರ್ಯರ **ಅರ್ಯಮನ್**. ಅರ್ಯಮನಿಗೆ ನಮ್ಮಲ್ಲಿ ಸೂರ್ಯನೆಂದೂ ಪಿತೃದೇವತೆಗಳ ಅಧಿಪತಿಯೆಂದೂ ಅರ್ಥವಿದೆ.

ಹೀಗೆ ಎರಡು ಸೋದರ ಭಾಷೆ – ಜನಾಂಗದಲ್ಲಿ ಈ ಶಬ್ದಗಳಿಗೆ ಪರಸ್ಪರ ವಿಪರೀತಾರ್ಥ ಹೇಗೆ ಉಂಟಾಯಿತು? ಈ ರಹಸ್ಯವನ್ನು ಇನ್ನೂ ಜಟಿಲಗೊಳಿಸುವ ಇನ್ನೊಂದು ಅಂಶವಿದೆ. ಅದೆಂದರೆ ಋಗ್ವೇದದ ಪುರಾತನ ಭಾಗಗಳಲ್ಲಿ **ಅಸುರ** ಶಬ್ದಕ್ಕೆ ದುಷ್ಟ ಅರ್ಥವಿಲ್ಲ; ಬಲಿಷ್ಠ, ಆತ್ಮಶಕ್ತಿಯ ಪ್ರತೀಕ ಎಂದು ಅರ್ಥವಿದೆ.

ಈ ವೈಪರೀತ್ಯಕ್ಕೆ ಕಾರಣವನ್ನು ಊಹಿಸುವುದಾದರೆ, ಹಿಂದೊಂದು ಕಾಲದಲ್ಲಿ ಒಟ್ಟಾಗಿ

ಜೀವಿಸುತ್ತಿದ್ದ ಭಾರತೀಯ ಮತ್ತು ಇರಾಣಿ ಆರ್ಯ ಪಂಗಡಗಳಲ್ಲಿ ಯಾವುದೋ ಕಾರಣಕ್ಕಾಗಿ ಹೋರಾಟವಾಗಿ ಅದು ಧಾರ್ಮಿಕ ಕಲ್ಪನೆಗಳ ವೈಷಮ್ಯವಾಗಿ ರೂಪುಗೊಂಡಿರಬೇಕು. ಈ ಜಗಳ ತೀರ ಉಲ್ಬಣಕ್ಕೆ ಹೋಗಿ ಸಂಪೂರ್ಣ ವಿಚ್ಛೇದದಲ್ಲಿ ಮುಗಿದಿರಬೇಕು. ಪುರಾಣಗಳಲ್ಲಿ ಬರುವ ದೇವಾಸುರ ಯುದ್ಧಗಳು ಆರ್ಯರ ಈ ಪಂಗಡ–ಹೋರಾಟದ ಅಲೌಕಿಕೀಕರಣವಾಗಿರಬಹುದು. ಅದರ ಕೊನೆಗೆ ಪಂಗಡಗಳು ಒಡೆದು ಬೇರೆ ಬೇರೆ ಕಡೆ ನೆಲಸಿ ತಮ್ಮ ದೈವತಗಳನ್ನು ಪರಸ್ಪರ ವಿರುದ್ಧವಾಗಿ ಮಾಡಿಕೊಂಡಿರಬಹುದು. ಸಂಸ್ಕೃತದಲ್ಲಿ **ಅಸುರರಿಗೆ ಪೂರ್ವದೇವಾಃ** (ಮುಂಚೆ ದೇವತೆಗಳಾಗಿದ್ದವರು) ಎಂಬ ಶಬ್ದವೂ ಇದೆಯೆಂಬುದು ಅರ್ಥಪೂರ್ಣ.

ಈ ಮುರುಗಡೆ ಮತ್ತು ತಿರುವುಮುರುವಿನ ಐತಿಹಾಸಿಕ ಘಟನೆ ಎಂದು ನಡೆದಿರಬಹುದು ? ಹೇಳುವುದು ಕಷ್ಟ. ಆದರೆ ಯೌರೋಪ್ಯಾರ್ಯ ಭಾಷೆಗಳಲ್ಲಿ ಅಲೌಕಿಕ ಸತ್‌ಶಕ್ತಿಗಳಿಗೆ **ದೇವ** ಶಬ್ದದ ಜ್ಞಾತಿ ಶಬ್ದಗಳೇ ಇವೆಯೆಂದು ಗಮನಿಸಿದರೆ ಒಂದು ಊಹೆ ಮಾಡಬಹುದು. ಸುರಾಸುರ ತಿರುವುಮುರುವು ಯೌರೋಪ್ಯಾರ್ಯ ಪಂಗಡಗಳು ಬೇರೆಯಾದನಂತರ, ಮತ್ತು ಋಗ್ವೇದದ ಹಳೇ ಭಾಗಗಳ ರಚನೆ ಆದನಂತರ ನಡೆದಿರಬೇಕು. ಋಗ್ವೇದ ರಚನೆ ಕ್ರಿ.ಪೂ. ೧೫೦೦ರಲ್ಲಿ ಆದದ್ದು ನಿಜವಿದ್ದರೆ (ಇದು ಖಂಡಿತವಿಲ್ಲ) ಆ ತೇದಿಯ ಸಮೀಪದಲ್ಲಿ ಎಂದೋ ಆಗಿರಬಹುದು. ಪಾರ್ಸಿಗಳ ವೇದವೆನಿಸಿದ ಅವೆಸ್ತ ಅದೇ ಸುಮಾರಿಗೆ, ಇಲ್ಲ ಸ್ವಲ್ಪ ಅನಂತರ, ರಚನೆಯಾಗಿರಬಹುದು. ಆದರೆ ಸುರ, ಅಸುರ, ದೇವ ಶಬ್ದಗಳ ಈ ವೈಪರೀತ್ಯ ಒಂದೇ ಬಳಗದ ಪಂಗಡಗಳ ಹೋರಾಟದ ಕಥೆ ಹೇಳುತ್ತದೆಂಬುದು ಸುಮಾರಾಗಿ ಖಚಿತ.

ಇರಾಣಿ ಆರ್ಯರು ದೇವರನ್ನು ಅಸುರರನ್ನಾಗಿ ಮಾಡಿದ ಈ ಕಥೆಗೊಂದು ಉಪ ಕಥೆಯೂ ಇದೆ. ಕ್ರಿ.ಶ. ೭ನೇ ಶತಮಾನದ ಅನಂತರ ಇರಾಣವನ್ನು ಇಸ್ಲಾಮ್ ಧರ್ಮ ಆಕ್ರಮಿಸಿಕೊಂಡ ಮೇಲೆ ತಮ್ಮ ದೇಶಕ್ಕಿಂತ ಧರ್ಮವನ್ನು ಹೆಚ್ಚೆಂದು ಬಗೆದ ಇರಾಣಿಗಳು ದೇವಭೂಮಿಯಾದ ಭಾರತಕ್ಕೇ ಬಂದು ಆಶ್ರಯ ಪಡೆದರು.

೪

ಪ್ರತಿಭಟನಾ ಚಳುವಳಿಗಳ ಈ ಯುಗದಲ್ಲಿ ಚಳುವಳಿಗಳು ಪ್ರಯೋಗಿಸುವ ನಾನಾ ಉಪಾಯಗಳ ಅಭಿವ್ಯಕ್ತಿಗಾಗಿ ಶಬ್ದಗಳು ಇಲ್ಲಿಯೇ ಹುಟ್ಟುತ್ತಿವೆ, ಹೊರಗಿನಿಂದಲೂ ಬರುತ್ತಿವೆ. ಲಿಖಿತ ಭಾಷೆಯಲ್ಲಿ ಅಲ್ಲದಿದ್ದರೂ ಜನರ ಬಾಯಲ್ಲಿ ಗಟ್ಟಿಯಾಗಿ ನೆಲೆಯೂರಿದ ಶಬ್ದಗಳಲ್ಲಿ **ಬಾಯ್‌ಕಾಟ್** ಎಂಬುದೊಂದು. ಬಾಯಿಕಟ್ಟು ಎನ್ನುವ ಕನ್ನಡ ಶಬ್ದವನ್ನೇ ಹೋಲುವ ಈ ಪದ ಬಂದದ್ದು ಇಂಗ್ಲೀಷಿನಿಂದ. ಇದರ ಅರ್ಥ ಬಹಿಷ್ಕರಿಸುವುದು. ಈ ಶಬ್ದದ ಕಥೆ ಸ್ವಾರಸ್ಯವಾದದ್ದು. ಕ್ಯಾಪ್ಟನ್ ಬಾಯ್‌ಕಾಟ್ ಎಂಬೊಬ್ಬ ನಿವೃತ್ತ ಇಂಗ್ಲೀಷ್ ಸೈನ್ಯಾಧಿಕಾರಿಯನ್ನು ಆಯರ್ಲಂಡಿನ ಮೇಯೋಕೌಂಟಿಯಲ್ಲಿ ಗೇಣೀ ವಸೂಲಿಗೆ ನೇಮಿಸಲಾಗಿತ್ತು. ಅವನು ತನ್ನ ಕೆಲಸವನ್ನು ಎಷ್ಟು ನಿರ್ದಯದಿಂದ ನೆರವೇರಿಸಿದನೆಂದರೆ ಅವನನ್ನು ತಾಳಲಾರದ ಗೇಣಿದಾರರು ಸೇರಿ ಆ ಊರಿನಲ್ಲಿ ಅವನಿಗೆ ಅನ್ನ ನೀರು ಕೂಡ ಸಿಗದ ಹಾಗೆ ಸಂಪೂರ್ಣ ಬಹಿಷ್ಕರಿಸಿದರು. ಬಡಪಾಯಿ ಕಡೆಗೆ ಕೆಲಸ ಬಿಟ್ಟು ಇಂಗ್ಲೆಂಡಿಗೆ

ಮರಳಿದನು. ಇದು ನಡೆದದ್ದು ೧೮೮೦ ಡಿಸೆಂಬರಿನಲ್ಲಿ. ಅಂದಿನಿಂದ ಸಂಘಟಿತ ಸಂಪೂರ್ಣ ಬಹಿಷ್ಕಾರಕ್ಕೆ ಬಾಯ್‌ಕಾಟನ ಹೆಸರೇ ಬಿದ್ದುಬಿಟ್ಟಿತು.

ಚಳುವಳಿ ಯುಗದಲ್ಲಿ ಕನ್ನಡ ಭಾಷೆಯೊಳಗೆ ನುಸುಳಿದ ಇನ್ನೊಂದು ಶಬ್ದ **ಹರತಾಳ**. ಆದರೆ ಇದು ಹರನಿಗಾಗಲಿ ತಾಳಕ್ಕಾಗಲಿ ಸಂಬಂಧಿಸಿದ ಶಬ್ದವಲ್ಲ. ಹಿಂದಿಯ **ಹಡತಾಲ** ಅಥವಾ **ಹರತಾಲ** ಎಂಬುದು ಕನ್ನಡದಲ್ಲಿ ಹರತಾಳವಾಗಿದೆ. ಹಿಂದಿಯಲ್ಲಿ ಅದು ಪೇಟೆಯನ್ನು ಮುಚ್ಚುವುದು ಮತ್ತು ಕೆಲಸ ನಿಲ್ಲಿಸುವುದು (= ಮುಷ್ಕರ) ಎಂಬ ಎರಡೂ ಅರ್ಥಗಳಲ್ಲಿ ಪ್ರಯೋಗಿಸಲ್ಪಡುತ್ತದೆ. ಅದರ ಮೂಲ ಬಹುಶಃ **ಹಟ್ಟ** ಅಥವಾ **ಹಾಟ** (= ಅಂಗಡಿ ಪೇಟೆ) + ತಾಲ (= ಬೀಗ) ಎಂದಿದ್ದು ಅನಂತರದಲ್ಲಿ ಕೆಲಸಗಾರರ ಮುಷ್ಕರಕ್ಕೂ ಅನ್ವಯಿಸಲ್ಪಟ್ಟಿರಬಹುದು.

ಕಾರ್ಮಿಕರು ಪ್ರತಿಭಟನಾರ್ಥ ಕೆಲಸ ನಿಲ್ಲಿಸುವುದಕ್ಕೆ ಕನ್ನಡದಲ್ಲಿ **ಸಂಪು** ಮತ್ತು **ಮುಷ್ಕರ** ಎಂಬೆರಡು ಶಬ್ದಗಳು ರೂಢಿಗೆ ಬಂದಿವೆ. ಮೊದಲನೆಯದು ತುಂಬ ಕನ್ನಡವಾಗಿ, ಎರಡನೆಯದು ತೀರ ಸಂಸ್ಕೃತವಾಗಿ ಕಾಣಿಸುತ್ತವೆ. ಆದರೆ ಎರಡೂ ಸರಿಯಲ್ಲ. **ಸಂಪು** ಮರಾಠಿಯಿಂದ ಆಮದಾದದ್ದು. **ಮುಷ್ಕರ** ಸಂಸ್ಕೃತದಿಂದ ಉತ್ಪತ್ತಿಯಾದದ್ದಲ್ಲ. (**ಮುಷ್ಕ** ಶಬ್ದ ಸಂಸ್ಕೃತದಲ್ಲಿದ್ದರೂ ಇದರ ಅರ್ಥ ಪುರುಷರ **ಅಂಡ** ಎಂದು.) **ಮುಷ್ಕರ** ತೆಲುಗು–ತಮಿಳು–ಮಲೆಯಾಳಿಯಿಂದ ಬಂತು. ಅಲ್ಲಿ ಅದಕ್ಕೆ ಮೊಂಡಾಟಿಕೆ, ಹಟ, ಧಾರ್ಷ್ಟ್ಯ ಇತ್ಯಾದಿ ಅರ್ಥ. ಮುಷ್ಕರವೂ ಒಂದು ಮೊಂಡುತನವಲ್ಲವೆ ?

ತೀರ ಈಚೆಗೆ ಬಂದದ್ದು **ಘೇರಾವ್**. ಮೊದಲ ನೋಟಕ್ಕೇ ಕಾಣುವಂತೆ ಇದು ಹಿಂದೀ ಶಬ್ದ. ಇದರ ಅರ್ಥ **ಮುತ್ತಿಗೆಹಾಕು** ಎಂದು.

ಚಳುವಳಿಗಳಲ್ಲಿ ಕೇಳಿಬರುವ ಘೋಷಣೆಗಳಲ್ಲಿ ಮುಖ್ಯವಾದವು **ಜಿಂದಾಬಾದ್** ಮತ್ತು **ಮುರ್ದಾಬಾದ್**. ಇವುಗಳನ್ನು ಕ್ರಮವಾಗಿ ಇಂಗ್ಲೀಷಿನ long live (ಚಿರಕಾಲ ಬದುಕಲಿ!) down with (ಹಾಳಾಗಲಿ!) ಎಂಬವಕ್ಕೆ ಸಮಾನಾರ್ಥದಲ್ಲಿ ಬಳಸುತ್ತಾರೆ. ಎರಡೂ ಹಿಂದುಸ್ತಾನಿ ಮೂಲಕ ಬಂದ ಪಾರಸೀ ಮೂಲದ ಪದಗಳು. **ಜಿಂದಾ** ಅಂದರೆ ಬದುಕಿದವ (= ಸಂಸ್ಕೃತ **ಜೀವಂತ**) ಮತ್ತು **ಮುರ್ದಾ** ಅಂದರೆ ಸತ್ತವ (= ಸಂ. ಮೃತ).

೫

ಯಾವೊಂದು ಸಂಸ್ಕೃತ ಅಥವಾ ಕನ್ನಡ ಶಬ್ದಕೋಶವನ್ನು ನೋಡಿದರೆ **ಕಾಶ್ಮೀರ** ಶಬ್ದಕ್ಕೆ ಎರಡಾದರೂ ಅರ್ಥಗಳು ಗೋಚರಿಸುತ್ತವೆ. ಒಂದು ಆ ಹೆಸರಿನ ದೇಶ ; ಇನ್ನೊಂದು ನಾವು ಈಗ **ಕುಂಕುಮ–ಕೇಸರಿ** ಅಥವಾ ಬರೇ **ಕೇಶರ** ಎಂದು ಕರೆಯುವ ಆ ಪರಿಮಳದ ಪುಷ್ಪ ಕೇಶರ. ಕೇಶರಕ್ಕೆ ಇರುವ **ಕಾಶ್ಮೀರ**ವೆಂಬ ಹೆಸರು ಭಾರತ ದೇಶದಲ್ಲಿ ಆ ಪದಾರ್ಥ ಎಲ್ಲಿಂದ ಬರುತ್ತಿತ್ತೆಂಬುದಕ್ಕೆ ಖಚಿತವಾದ ಐತಿಹಾಸಿಕ ದಾಖಲೆಯಾಗುತ್ತದೆ. ಇಂದು ಕೇಶರವನ್ನು ನಾವು ಸ್ಪೇನಿನಿಂದಲೂ ತರಿಸುತ್ತೇವೆ. ಭಾರತಕ್ಕೂ ಯುರೋಪಿಗೂ ರೋಮನ್ ಸಾಮ್ರಾಜ್ಯದ ಕಾಲದಿಂದಲೂ ವ್ಯಾಪಾರವಿತ್ತು. ಆದರೆ ಅಲ್ಲಿಂದ ನಾವು ತರಿಸುತ್ತಿದ್ದ ದ್ರವ್ಯಗಳಲ್ಲಿ ಕೇಶರ ಇರಲಿಲ್ಲ. ಕಾಶ್ಮೀರವೊಂದೇ ಕೇಶರದ ಮೂಲಾಕರವಾಗಿತ್ತು. ಮತ್ತೊಂದು ವಿಶೇಷವೆಂದರೆ **ಕುಂಕುಮ** ಶಬ್ದದ ಪ್ರಾಥಮಿಕ ಅರ್ಥ ಕಾಶ್ಮೀರ ಕೇಶರವೆಂದೇ

ಹೊರತು ನಮ್ಮ ಮಹಿಳೆಯರು ಹಣೆಗಿಟ್ಟುಕೊಳ್ಳುವ ಅರಿಷಿಣ ಪುಡಿಗೆ ಸುಣ್ಣ ಬೆರೆಸಿ ತಯಾರಿಸಿದ ಕೆಂಪು ಪುಡಿಯೆಂದಲ್ಲ. ಈ **ಕುಂಕುಮ** ಆ **ಕುಂಕುಮದ** ಅಗ್ಗದ ನಕಲಿಯಾದರೂ ಇರಬಹುದು.

ಭಾರತೀಯ ಭಾಷೆಗಳ ಕೋಶಗಳಲ್ಲಿ ಕಾಶ್ಮೀರಕ್ಕೆ ಈ ಅರ್ಥವಿದ್ದರೆ, ಇಂಗ್ಲೀಷಿನ ಯಾವುದೇ ಚಿಕ್ಕ ಕೋಶದಲ್ಲಿ ನಿಮಗೆ **ಕಾಶ್ಮೀರ (Cashmere)** ಎಂಬ ಶಬ್ದ ಸಿಕ್ಕಿಯೇ ಸಿಕ್ಕುವುದಾದರೂ ಅದರ ಅರ್ಥ ಕಾಶ್ಮೀರದ **ಉಣ್ಣೆಯ ಶಾಲು** ಎಂಬುದಾಗಿರುತ್ತದೆ. ನಮ್ಮ ದೇಶದಲ್ಲೆಲ್ಲ ಶತಮಾನಗಳ ಕಾಲದಿಂದ ಕಾಶ್ಮೀರದ ಉಣ್ಣೆಯ ಕಸೂತಿ ಶಾಲುಗಳನ್ನು ಪಂಡಿತರಿಗೆ ಹೊದಿಸಿ ಗೌರವಿಸುವ ಪರಿಪಾಠವಿದ್ದರೂ ಅವುಗಳಿಗೆ ಆ ದೇಶವಾಚಕ ನಾಮ ಇಲ್ಲದಿದ್ದದು ಆಶ್ಚರ್ಯ.

ದೇಶವಾಚಕ ಶಬ್ದಗಳಿಂದ ಪ್ರಸಿದ್ಧವಾಗಿರುವ ಬೇರೆ ಪದಾರ್ಥಗಳೂ ಇವೆ. **ಸೈಂಧವ** ಶಬ್ದ ಸಿಂಧೂ ದೇಶದ್ದು ಎಂಬರ್ಥ ಕೊಡುತ್ತದೆ. **ಸೈಂಧ್ರಲವಣ** ಎಂಬ ಹೆಸರು ನಮ್ಮ ಹಳ್ಳಿಗರಿಗೂ ಪರಿಚಿತ. ಇದರ ನಿಜ ರೂಪ **ಸೈಂಧವ ಲವಣ.** ಬರೇ **ಸೈಂಧವ** ಎಂದರೂ ಅದೇ. ಔಷಧದಲ್ಲಿ ಉಪಯೋಗಿಸುವ ಒಂದು ಖನಿಜ ಉಪ್ಪು ಅದು. ಇದೇ ಶಬ್ದಕ್ಕೆ ಕುದುರೆ ಎಂಬ ಅರ್ಥವೂ ಇದೆ. ಸಿಂಧೂ ದೇಶದಲ್ಲಿ ಹಿಂದೆ ಸಾಕಿ ರಫ್ತು ಮಾಡುತ್ತಿದ್ದ ವಿಶಿಷ್ಟ ಕುದುರೆ ಅದು.

ಕೋಶಗಳಲ್ಲಿ **ಚೀನಕ್ಕೆ** ಕೂಡ ಅನೇಕಾರ್ಥಗಳನ್ನು ಕೊಡುತ್ತಾರೆ. **ಚೀನ** ಅಥವಾ **ಚೀನಾಂಬರ** ಎಂದರೆ **ರೇಶ್ಮೆಬಟ್ಟೆ.** ರೇಶ್ಮೆಯ ಮೂಲಸ್ಥಾನ ಆ ದೇಶ ಎಂಬ ಇಂದಿನ ತಿಳಿವಳಿಕೆಗೆ ಈ ಶಬ್ದ ಪ್ರಮಾಣವನ್ನು ಒದಗಿಸುತ್ತದೆ. **ಚೀನಕ** ಎಂಬೊಂದು **ಕರ್ಪೂರ** ಇದೆ. **ಕರ್ಪೂರವೂ** ಚೀನದ್ದೇ ಕೊಡುಗೆ. (ಕರ್ಪೂರ ವೃಕ್ಷ ಮುಖ್ಯವಾಗಿ ಬೆಳೆಯುವುದು **ಫೊರ್ಮೋಸಾ** ದ್ವೀಪದಲ್ಲಿ.) ಅಲ್ಲಿಂದ ಚೀನದ ಮೂಲಕ ಅದು ನಮಗೆ ಬರುತ್ತಿತ್ತು. ಯುರೋಪಿಯನ್ ಭಾಷೆಗಳ camphor ಎಂಬುದು ಅರಬ್ಬೀ ಭಾಷೆಯ **ಕಾಫೂರ್** ಎಂಬ ಶಬ್ದದ್ದೇ ಅಪಭ್ರಂಶ. ಅರಬ್ಬಿಯ **ಕಾಫೂರ್** ಮತ್ತು ಸಂಸ್ಕೃತದ **ಕರ್ಪೂರ** ಎರಡೂ ಬೇರೊಂದು ಮೂಲದಿಂದ ಬಂದಿರಬಹುದು.

ಆದರೆ ಪಾಶ್ಚಾತ್ಯ ದೇಶಗಳಲ್ಲಿ **ಚೀನ** ಎಂದರೆ ಪಿಂಗಾಣಿ ಪಾತ್ರೆ. ಅದಕ್ಕೂ ಚೀನ ಪ್ರಸಿದ್ಧ. ಆದರೆ ಪ್ರಾಚೀನ ಭಾರತ ಅದಕ್ಕೆ ಗಿರಾಕಿಯಾಗಿದ್ದಿರಲಿಕ್ಕಿಲ್ಲ.

ಮತ್ತೆ **ಕೇರಳ.** ಅಶೋಕನ ಕಾಲಕ್ಕೂ ಹಿಂದೆ ಈ ಹೆಸರಿಂದ ಪ್ರಸಿದ್ಧವಾದ ರಾಜ್ಯದ ಹೆಸರು **ಖಗೋಲ** ಶಾಸ್ತ್ರ ಎಂಬರ್ಥವನ್ನೂ ಕೊಡುತ್ತದೆ. ಖಗೋಲ ಮತ್ತು ಜ್ಯೋತಿಷ ಶಾಸ್ತ್ರಕ್ಕೆ **ಕೇರಳ** ಪ್ರಾಚೀನದಿಂದ ಹೆಸರಾಗಿತ್ತೆಂದು ಇದು ತೋರಿಸುತ್ತದೆ. ಭಾರತದ ಅದ್ವಿತೀಯ ಗಣಿತ–ಖಗೋಲ ಪ್ರವೀಣ **ಆರ್ಯಭಟ** ಇದ್ದದ್ದು ಪಾಟಲೀಪುತ್ರದಲ್ಲಾದರೂ ಅವನು ಮೂಲತಃ ಕೇರಳದವನಿರಬಹುದೆಂದು ಒಂದು ಊಹೆ ಉಂಟು. ಕೇರಳದಲ್ಲೇ ಅವನ ಗ್ರಹಗಣಿತ ಹೆಚ್ಚು ಪ್ರಚುರವಾಗಿದೆ.

೬

ವಿಕ್ರಮ **ಶಕ,** ಶಾಲಿವಾಹನ **ಶಕ,** ಮತ್ತು ಯುರೋಪಿಯನ್ನರ ಅಭಿಯೋಗದ ಅನಂತರ ಕ್ರಿಸ್ತ **ಶಕ** ಎಂಬ ವರ್ಷಗಣನಾಪದ್ಧತಿಗಳು ನಮ್ಮಲ್ಲಿ ರೂಢಿಯಲ್ಲಿವೆ. **ಶಕ** ಶಬ್ದಕ್ಕೆ

ಯಾವನಾದರೊಬ್ಬ ಮಹಾಪುರುಷನ ಹೆಸರಿನಲ್ಲಿ ಪ್ರಾರಂಭವಾದ ವರ್ಷ ಪದ್ಧತಿಯೆಂಬ ಅರ್ಥ ಬಂದು ಹೋಗಿದೆ. ಅದರ ಕಥೆ ಕುತೂಹಲದ್ದು.

ಕಪ್ಪು ಸಮುದ್ರದ ಉತ್ತರ ಈಶಾನ್ಯ ಪ್ರದೇಶಗಳಲ್ಲಿದ್ದ **ಶಕ**ರೆಂಬ ಜನರು ಕ್ರಿಸ್ತಪೂರ್ವದಲ್ಲೇ ಭಾರತದ ವಾಯವ್ಯ ಭಾಗದ ಮೇಲೆ ದಾಳಿ ಮಾಡಿ ಅನೇಕ ಪ್ರದೇಶಗಳನ್ನು ವಶಪಡಿಸಿಕೊಂಡು ಆಳತೊಡಗಿದ್ದರು. ಯುರೋಪಿನಲ್ಲಿ ಈ ಜನರನ್ನು ಸೀಥಿಯನ್ನರೆಂದು ಕರೆಯುತ್ತಾರೆ. ಅಲ್ಲಿಯೂ ಇಲ್ಲಿಯೂ ಇವರು ಯುದ್ಧ ಮತ್ತು ರಾಜ್ಯ ನೀತಿಯಲ್ಲಿ ತಮ್ಮ ಕ್ರೌರ್ಯದಿಂದ ಬಹಳ ದ್ವೇಷಪಾತ್ರರಾಗಿದ್ದರು. (ಅವರನ್ನು ಸೋಲಿಸಿ ಹಿಂದಕ್ಕಟ್ಟಿದ್ದಕ್ಕಾಗಿ ಶಕಾರಿ ವಿಕ್ರಮಾದಿತ್ಯನು ನಮ್ಮ ಪೂರ್ವಜರಿಗೆ ಅತ್ಯಂತ ಪ್ರೀತಿಪಾತ್ರ ರಾಜನಾಗಿದ್ದನು.) ಮಾಲವ ದೇಶದವರೆಗೂ ಕಾಲು ಚಾಚಿದ್ದ ಶಕರು ಉಪಯೋಗಿಸುತ್ತಿದ್ದ ವರ್ಷಗಣನಾಪದ್ಧತಿ **ಶಕ** ವರ್ಷವೆನಿಸುತ್ತಿತ್ತು. ಅದು ಪ್ರಾರಂಭವಾದದ್ದು ಕ್ರಿಸ್ತವರ್ಷ ೭೮ರಿಂದ.

ಕಾಲಾಂತರದಲ್ಲಿ ಶಕರ ರಾಜ್ಯ ಹೋಯಿತು. ಅವರು ಇಲ್ಲಿಯ ಜನಸಾಗರದಲ್ಲಿ ಸೇರಿಹೋದರು. ಅವರ ಮೇಲಿನ ದ್ವೇಷವೂ ಮರೆತುಹೋಯಿತು. ಅವರು ಆರಂಭಿಸಿದ ವರ್ಷಗಣನಾಪದ್ಧತಿ ಮಾತ್ರ ಉಳಿಯಿತು. ಇದಕ್ಕೆ ಕಾರಣವೆಂದರೆ ಇಲ್ಲಿ ಒಂದೊಂದು ಪ್ರದೇಶದಲ್ಲಿಯೂ ಒಂದೊಂದು ರಾಜ್ಯದಲ್ಲಿಯೂ ಒಬ್ಬೊಬ್ಬ ರಾಜನು ಪಟ್ಟಕ್ಕೆ ಬಂದಂದಿನಿಂದ ಅವನ ಹೆಸರಿನಲ್ಲಿ ವರ್ಷಗಳನ್ನು ಲೆಕ್ಕಿಸುತ್ತಿದ್ದುದರಿಂದ ತುಂಬಾ ಗೊಂದಲವುಂಟಾಗಿದ್ದುದು. ಶಕರು ಒಬ್ಬೊಬ್ಬ ರಾಜನಿಂದಲೂ ವರ್ಷಗಳನ್ನೆಣಿಸದೆ ಒಂದು ವಿಶಿಷ್ಟ ವರ್ಷದಿಂದ (ಕ್ರಿಸ್ತವರ್ಷ ೭೮) ಎಣಿಸುತ್ತಿದ್ದರು. ಅದರಿಂದ ಅದು ಅನುಕೂಲವಾಗಿದ್ದು ಸರ್ವಗ್ರಾಹ್ಯವಾಯಿತು. ಎಷ್ಟು ಸರ್ವಗ್ರಾಹ್ಯವೆಂದರೆ ಇದು ನಮ್ಮ ಅತ್ಯಂತ ದ್ವೇಷಾಸ್ಪದ ಜನಾಂಗದಿಂದ ಪ್ರಾರಂಭವಾದದ್ದೆಂಬುದೂ ಮರೆತುಹೋಗಿ, ಎಲ್ಲ ವರ್ಷಗಣನಾ ಪದ್ಧತಿಗಳಿಗೂ ಶಕವೆಂದೇ ಹೆಸರಾಯಿತು. ಹೀಗೆ ಉತ್ತರಭಾರತದಲ್ಲಿ ಕ್ರಿಸ್ತಪೂರ್ವ ೫೮ರಿಂದ ನಡೆಯುತ್ತಿತ್ತೆಂದು ಭಾವಿಸಲಾದ ವಿಕ್ರಮ ವರ್ಷವನ್ನು ವಿಕ್ರಮ **ಶಕ**ವೆಂದೇ ಕರೆಯಲಾರಂಭವಾಯಿತು. **ಶಕಾರಿ** ವಿಕ್ರಮಾದಿತ್ಯನಿಗೆ ಒಳ್ಳೆಯ ಉಡುಗೊರೆ ಇದು ! ಮುಂದೆ ಕ್ರಿಸ್ತವರ್ಷವೂ ಕ್ರಿಸ್ತ **ಶಕ**ವೆಂದೇ ಪ್ರಸಿದ್ಧಿಗೆ ಬಂತು. ಕ್ರಿಸ್ತಶಕ ೧೦೭೬ರಲ್ಲಿ ಕರ್ನಾಟಕದ ಚಾಲುಕ್ಯ ವಿಕ್ರಮಾದಿತ್ಯನು ತನ್ನ ಹೆಸರಲ್ಲೇ ಒಂದು ವರ್ಷಗಣನೆಯನ್ನು ತೊಡಗಿಸಿಬೇಕೆಂದು ಮಾಡಿದಾಗ ಅದೂ ಚಾಲುಕ್ಯ ವಿಕ್ರಮ **ಶಕ**ವೆಂದೇ ಹೆಸರು ಪಡೆಯಿತು. (ಆದರೆ ಅದು ಬಹುಕಾಲ ಟಿಕಾಯಿಸಲಿಲ್ಲ). ಅಷ್ಟು ಮಾತ್ರವಲ್ಲ, ಯಾವನಾದರೂ ಮಹಾಪುರುಷನು ಬಹುಕಾಲ ನೆನಪಿಡುವ ಮಹತ್ಕಾರ್ಯ ಮಾಡಿದರೆ ಅವನನ್ನು **ಶಕಪುರುಷ** ಎಂದು ವಿಶೇಷಿಸುವವರೆಗೂ ಶಕರ ಅಚ್ಚು ನಮ್ಮ ಮೇಲೆ ಒತ್ತಿಬಿಟ್ಟಿದೆ.

ಪ್ರಾರಂಭದ ಹತ್ತು ಶತಮಾನ ಕಾಲ ಇದನ್ನು ಶಾಸನಗಳಲ್ಲಿ **ಶಕ** ವರ್ಷವೆಂದೇ ಹೆಸರಿಸಿದ್ದು ಕಾಣಿಸುತ್ತದೆ. ಆ ಮೇಲೆ ಯಾರೋ ಯಾಕೋ ಏನೋ ಇದನ್ನು ಶಾಲಿವಾಹನ ಶಕವೆಂದು ಕರೆಯತೊಡಗಿದರು. ನಿಜಕ್ಕೂ ಶಾತವಾಹನ ಅಥವಾ ಶಾಲಿವಾಹನರಿಗೂ ಈ ಶಕಕ್ಕೂ ಏನೂ ಸಂಬಂಧವಿಲ್ಲ.

ನರರ ದುಷ್ಕರ್ಮಗಳು ಅವರೊಡನೆ ನಶಿಸುವುವು .<br>
ಸತ್ಕರ್ಮಗಳು ಮಾತ್ರ ಚಿರಕಾಲ ಉಳಿಯುವುವು

– ಎಂಬ ವಾಕ್ಯವನ್ನು ಶಕವರ್ಷದ ಕಥೆ ಸತ್ಯವಾಗಿಸಿದೆ.

೭

ಜಗತ್ತಿನ ಜನಸಂಖ್ಯೆಯ ಬಹು ದೊಡ್ಡ ಭಾಗದ ಮುಖ್ಯ ಆಹಾರ **ಅಕ್ಕಿ**. ಪೂರ್ವ ಅಥವಾ ದಕ್ಷಿಣ ಭಾರತವೇ ಅಕ್ಕಿಯ ಮೂಲ ಸ್ಥಾನವೆಂದು ಸಸ್ಯೇತಿಹಾಸಕಾರರು ನಂಬಿದ್ದಾರೆ. ಎಲ್ಲ ದಕ್ಷಿಣ ದ್ರಾವಿಡ ಭಾಷೆಗಳಲ್ಲಿ ಅದಕ್ಕೆ ಒಂದನ್ನೊಂದು ಹೋಲುವ ಪದಗಳಿವೆ. ಮೂಲ ದ್ರಾವಿಡದಲ್ಲಿ ಅದಕ್ಕೆ **ಅರ್ಕಿ** ಎಂದು ಹೆಸರಿರಬೇಕೆಂದು ಶಬ್ದಶಾಸ್ತ್ರಜ್ಞರ ಊಹೆ. ಇಲ್ಲಿಂದ ಅಕ್ಕಿ ಜಗತ್ತಿನ ಎಲ್ಲ ಕಡೆ ಯಾತ್ರೆ ಮಾಡಿತು. ಅದರೊಡನೆ ಅದರ ಹೆಸರು ಕೂಡ. ಇಂಗ್ಲೀಷಿನ **ರೈಸ್** (rice), ಫ್ರೆಂಚಿನ **ರೈಜ್** (riz) ಎಂಬ ಅಕ್ಕಿಯ ಹೆಸರುಗಳು ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳ **ಒರೈಜಾ, ಒರೈಜಾನ್** (oryza, oryzon) ದಿಂದ ಹುಟ್ಟಿದವು : ಗ್ರೀಕು ಆ ಶಬ್ದವನ್ನು ಅರಬರ **ರೂಜ್, ಅರೂಜ್**‌ನಿಂದ ಎರವಲು ತೆಗೆದುಕೊಂಡಿತ್ತು. ಅರಬ್ಬಿ ಭಾಷೆ ಅದನ್ನು ದ್ರಾವಿಡ **ಅರ್ಕಿ**ಯ ತಮಿಳು ರೂಪವಾದ **ಅರಿಶಿ(ಚಿ)** ಯಿಂದ ತೆಗೆದುಕೊಂಡಿತ್ತು. ಅಕ್ಕಿಯನ್ನು ಯುರೋಪಿಗೆ ಪರಿಚಯ ಮಾಡಿಕೊಟ್ಟವರು ಪ್ರಾಚೀನ ಕಾಲದಿಂದ ಇಲ್ಲಿಗೆ ವ್ಯಾಪಾರಕ್ಕೆ ಬರುತ್ತಿದ್ದ ಅರಬರೆಂಬ ಕಥೆಯನ್ನು ಈ ನಾಮಯಾತ್ರೆ ಹೇಳುತ್ತದೆ.

**ಅಕ್ಕಿ**ಯನ್ನು ೧೩ನೇ ಶತಮಾನದಲ್ಲಿ ದ್ರಾವಿಡದಿಂದ ಅರಬ್ಬಿ ಮೂಲಕ ತೆಗೆದುಕೊಂಡ ಯುರೋಪಿಯನ್ ಭಾಷೆಗಳು ಭತ್ತದ ಹೆಸರನ್ನು ತೆಗೆದುಕೊಳ್ಳಲಿಲ್ಲ. ಭತ್ತಕ್ಕೆ ದ್ರಾವಿಡದಲ್ಲಿರುವುದು **ನೆಲ್ಲು** ಎಂಬ ಶಬ್ದ. ಆದರೆ ಇಂಗ್ಲೀಷಿನಲ್ಲಿ ಭತ್ತಕ್ಕಿರುವ **ಪ್ಯಾಡಿ** (paddy) ಎಂಬ ಹೆಸರು ಮಲಯಿ ಭಾಷೆಯಿಂದ ಬಂದದ್ದು. ಆ ಭಾಷೆಯಲ್ಲಿ ಭತ್ತಕ್ಕೆ **ಪಾದಿ** ಎಂದು ಅಭಿದಾನ.

ಹಲಸಿಗೆ ಇಂಗ್ಲೀಷಿನಲ್ಲಿ **ಜ್ಯಾಕ್** (jack) ಎಂದು ಹೆಸರು ತಾನೆ. ಮಲೆಯಾಳಿ ಭಾಷೆಯಲ್ಲಿ ಹಲಸಿನ ಹಣ್ಣಿಗೆ **ಚಕ್ಕಪಳಂ** (ಪಳಂ = ಹಣ್ಣು) ಎಂದು ಹೆಸರು. ಪೋರ್ಚುಗೀಸ್ ಪಾದ್ರಿಗಳು ೧೪ನೇ ಶತಮಾನದಲ್ಲಿ **ಚಕ್ಕ**ವನ್ನು ತಮ್ಮ ಬಾಯಿಗೆ ಸರಿಯಾಗಿ **ಚಾಕ** ಮಾಡಿಕೊಂಡು ಯುರೋಪಿಗೆ ಒಯ್ದರು. ಇಂಗ್ಲೀಷರು ಅದನ್ನು ತಮ್ಮ ಬಾಯಿಗೆ ಹೊಂದುವಂತೆ **ಜ್ಯಾಕ್** ಮಾಡಿಕೊಂಡರು.

ಮಾವಿನ ಹಣ್ಣಿನ ಕಥೆಯೂ ಹಾಗೆಯೆ. ಕನ್ನಡ, ಮಲೆಯಾಳಿ, ತಮಿಳು ಎಲ್ಲದರಲ್ಲಿಯೂ **ಮಾಂಗಾಯಿ** ಎಂದು ಕರೆಯುವುದನ್ನು ಮಲಯಿ ಭಾಷೆಯಲ್ಲಿ **ಮಾಂಗಾ** ಅನ್ನುತ್ತಾರೆ. ಪೋರ್ಚುಗೀಸರು ೧೬ನೇ ಶತಮಾನದಲ್ಲಿ ಅದನ್ನು **ಮಾಂಗಾ** ಎಂಬ ಹೆಸರಿನೊಡನೆ ತಮ್ಮಲ್ಲಿಗೆ ಒಯ್ದುದ್ದನ್ನು ಇಂಗ್ಲೀಷರು **ಮ್ಯಾಂಗೊ** ಎಂದು ಬದಲಿಸಿಕೊಂಡರು.

**ಹುಣಸೇಹಣ್ಣಿನ** ವಿಚಾರ ಮಾತ್ರ ಸ್ವಲ್ಪ ಬೇರೆ. ಅದೂ ಈ ದೇಶದಿಂದಲೇ ಪಶ್ಚಿಮಕ್ಕೆ ಹೋದದ್ದು. ಒಯ್ದವರೂ ಅರಬರೇ. ಆದರೆ ಹುಣಸೇಹಣ್ಣು ನೋಡುವುದಕ್ಕೆ ಅವರ ದೇಶದ ಖರ್ಜೂರದ ಹಣ್ಣಿನ ಹಾಗೇ ಇದೆ. ಖರ್ಜೂರಕ್ಕೆ ಅರಬ್ಬೀ ಭಾಷೆಯಲ್ಲಿ **ತಮರ್** ಎಂದು ಹೆಸರು. ಅವರು ಹುಣಸೇ ಹಣ್ಣನ್ನು **ತಮರ್ – ಹಿಂದ್**–ಹಿಂದುಸ್ತಾನದ ಖರ್ಜೂರ ಎಂದು ಕರೆದರು. ಅದು ಇಂಗ್ಲೀಷರ ಭಾಷೆಯಲ್ಲಿ **ಟೆಮರಿಂಡ್** (tamarind) ಆಯಿತು.

ವಿದೇಶದಿಂದ ಬಂದ ಒಂದು ಪದಾರ್ಥವನ್ನು ಹೋಲುವಂಥಾದ್ದು ನಮ್ಮ ದೇಶದಲ್ಲಿ

ಇದ್ದರೆ ಹುಣಸೇಹಣ್ಣಿಗೆ ಅರಬರು ನಾಮಕರಣ ಮಾಡಿದಂತೆ ನಮ್ಮ ದೇಶದ ಪದಾರ್ಥದ ಹೆಸರನ್ನು ಇಡುವುದು ಭಾಷೆಗಳಲ್ಲಿ ಕಂಡುಬರುವ ಒಂದು ಲಕ್ಷಣ. ಅಮೇರಿಕದ ಮೂಲ ನಿವಾಸಿಯಾದ **ಗೋಡಂಬಿ**ಯನ್ನು ಪೋರ್ಚುಗೀಸರು ಪಶ್ಚಿಮ ಕರಾವಳಿಗೆ ತಂದರು. ಅದಿಲ್ಲಿ ಬಹುಬೇಗ ಹಬ್ಬಿತು. ಅದಕ್ಕೆ ಅಮೇರಿಕದ ತುಪಿ ಮೂಲನಿವಾಸಿ ಭಾಷೆಯಲ್ಲಿ **ಕಾಜು** ಎಂದು ಹೆಸರು. ಅದೇ ಇಂಗ್ಲೀಷಿನ **ಕ್ಯಾಶ್ಯು** (cashew). ಆದರೆ ಕರಾವಳಿ ಕನ್ನಡಿಗರು ಮೊದಲಿಂದ ನಮ್ಮ ಮಲೆಗಳಲ್ಲಿ ಬೆಳೆಯುತ್ತಿದ್ದ **ಕೇರು** ಎಂಬ ಬೀಜದ ಹಣ್ಣನ್ನು ಈ ವಿದೇಶೀ ಫಲ ಹೋಲುವುದೆಂದು ಗಮನಿಸಿ ಅದಕ್ಕೆ **ಗೇರು** ಎಂದು ಹೆಸರು ಕೊಟ್ಟರು. ಅಂಥ ದೇಶಿ ಫಲ ಅರಿಯದ ಪ್ರದೇಶದವರು **ಕಾಜು** ಎಂಬ ಹೆಸರನ್ನೇ ಎರವಲು ಪಡೆದರು. ಉದಾಹರಣೆಗೆ ಹಿಂದಿಯವರು, ಮರಾಠಿಯವರು ತಮ್ಮಲ್ಲಿ ಸಿಗುವ ಮಾವಿನಹಣ್ಣನ್ನು – **ಅಂಬೆ** – ನೆನೆದುಕೊಂಡು ಇದಕ್ಕೆ ಸಿಹಿ ಅಂಬೆ ಎಂಬರ್ಥದಲ್ಲಿ **ಗೋಡ+ಅಂಬೆ = ಗೋಡಂಬೆ** ಎಂದು ನಾಮಕರಣ ಮಾಡಿದರು.

೮

**ಕಬ್ಬಿಣ** ಇಲ್ಲದ ಒಂದು ಕಾಲ ಮನುಷ್ಯ ನಾಗರಿಕತೆಯಲ್ಲಿ ಇತ್ತೆಂದರೆ ಹೌದೇ? ಎಂದು ಕೇಳುವಷ್ಟು ಮಟ್ಟಿಗೆ ಆ ಲೋಹ ನಮಗೆ ಬಳಕೆಯಾಗಿಬಿಟ್ಟಿದೆ. ಆಧುನಿಕ ತಾಂತ್ರಿಕ ಯುಗವೇ ಕಬ್ಬಿಣದ ಕಂಬದ ಮೇಲೆ ನಿಂತಿದೆ.

ಆದರೆ ನಿಜಕ್ಕೂ ಕಬ್ಬಿಣ ಮನುಷ್ಯನಿಗೆ ವಶವಾದದ್ದು ಬಹಳ ತಡವಾಗಿ. ಕ್ರಿ.ಪೂ. ೨೫೦೦ ರಿಂದ ೧೭೫೦ ರವರೆಗೆ ಮೆರೆದ ಸಿಂಧೂ ಕೊಳ್ಳದ ನಾಗರಿಕತೆಯ ಅವಶೇಷಗಳ ಅಗತೆಯಲ್ಲಿ ಕಬ್ಬಿಣದ ಸಾಧನಗಳು ದೊರೆತಿಲ್ಲ. ಆದರೆ ತಾಮ್ರ, ಕಂಚು, ಚಿನ್ನದ ವಸ್ತುಗಳು ಸಿಕ್ಕಿವೆ. **ಕಬ್ಬಿಣ** ಶೋಧವಾದದ್ದು ಬಹುಶಃ ಕ್ರಿ.ಪೂ. ೧೮೦೦–೧೨೦೦ರ ನಡುವೆ; ಎಲ್ಲೆಡೆ ಬಳಕೆಗೆ ಬಂದದ್ದು ಬಹುಶಃ ಕ್ರಿ.ಪೂ. ೧೦೦೦ ದಲ್ಲಿ.

ಇದಕ್ಕೆ ಪ್ರಮಾಣವಾಗಿ **ಕಬ್ಬಿಣದ** ಹೆಸರನ್ನು ವಿಶ್ಲೇಷಿಸಬಹುದು. ಕಬ್ಬಿಣ ಪದದ ಮೂಲ ರೂಪ **ಕರ್ಪೊನ್ > ಕಬ್ಬೊನ್** = ಕರೇ ಹೊನ್ನು. **ಹೊನ್ನು** (ಪೊನ್) ಮನುಷ್ಯನಿಗೆ ಮೊದಲು ಪರಿಚಿತ. **ಕಬ್ಬಿಣ** ಬಂದಮೇಲ ಅದನ್ನು ಹೊನ್ನಿಗೆ ಹೋಲಿಸಿ ಇದು **ಕರ್‌ಪೊನ್** ಎಂದು ಹೆಸರಿಟ್ಟ.

**ಪೊನ್** ಅಥವಾ **ಹೊನ್ನು** ಎಂದರೆ ಈಗ ಬಂಗಾರವೆಂದೇ ಅರ್ಥವಾಗುತ್ತದೆ. ಆದರೆ ಆದಿಯಲ್ಲಿ ಹೊನ್ನಿಗೆ ಒಟ್ಟು **ಲೋಹ**ವೆಂದಷ್ಟೇ ಅರ್ಥವಿದ್ದಂತೆ ತೋರುತ್ತದೆ. **ಪೊನ್** ಎಂಬುದಕ್ಕೆ ಬಹುಶಃ **ಹೊಳೆಯುವ** ಅಥವಾ **ಸುಂದರ** ಎಂದು ಮೂಲ ಅರ್ಥ (ಉದಾ: ಹಳೆಗನ್ನಡದಲ್ಲಿ **ಪೊಂಗ** ಅಂದರೆ **ಚೆನ್ನ** ಅಥವಾ **ಸುಂದರ**). ಮನುಷ್ಯನಿಗೆ ಪ್ರಪ್ರಥಮ ಪರಿಚಯವಾದ ಲೋಹ **ತಾಮ್ರ**ವೆಂದು ಪುರಾತತ್ವದ ಅಗತೆಗಳಲ್ಲಿ ಸಿದ್ಧವಾಗಿದೆ. ಅತಿ ಪ್ರಾಚೀನ ತಾಮ್ರದ ಸಾಧನಗಳು (ಕ್ರಿ.ಪೂ. ೪೫೦೦ ರಲ್ಲಿ ಮಾಡಿದವು) ಯುರೋಪಿನ ಡಾನ್ಯೂಬ್ ನದೀ ತೀರದ ಅಗತೆಗಳಲ್ಲಿ ದೊರೆತಿವೆ. ಕ್ರಿ.ಪೂ. ೩೫೦೦ರ ಬಂಗಾರದ ಒಡವೆಗಳು ಬಲ್ಗೇರಿಯದಲ್ಲಿ ಸಿಕ್ಕಿವೆ. ಅವೇ ಈವರೆಗೆ ಲಭಿಸಿದ ಅತಿ ಪುರಾತನ ಬಂಗಾರದ ವಸ್ತುಗಳು. ಈ ಎರಡು ಲೋಹಗಳ ನಡುವೆ ತವರ ಕಂಡುಹಿಡಿಯಲ್ಪಟ್ಟು ತಾಮ್ರ–ತವರಗಳ

ಎರಕದಿಂದ **ಕಂಚು** ನಿರ್ಮಾಣವಾಯಿತು. ಕಂಚಿನ ಉಪಕರಣಗಳು ಈ ಅವಧಿಯ ಅವಶೇಷಗಳಲ್ಲಿ ಸಾಕಷ್ಟು ದೊರೆತಿವೆ.

ಹೀಗೆ **ಪೊನ್** ಎಂಬುದು ಮೂಲತಃ **ತಾಮ್ರ**ವನ್ನೇ ಸೂಚಿಸುತ್ತಿದ್ದಿರಬಹುದು. ಇನ್ನೂ ಹೆಚ್ಚು ಲೋಹಗಳು ಪ್ರವೇಶಿಸಿದಂತೆ ಅದಕ್ಕೆ ವಿಶೇಷಣಗಳನ್ನು ಜೋಡಿಸುತ್ತ ಹೊಸ ಹೆಸರುಗಳನ್ನು ಸೃಷ್ಟಿಸಿರಬೇಕು. ಲೋಹಗಳಲ್ಲೆಲ್ಲ ಅತ್ಯಂತ ಸುಂದರವೂ ಹೊಳಪುಳ್ಳದ್ದೂ ಆದ ಚಿನ್ನಕ್ಕೇ **ಪೊನ್** ಎಂಬ ಹೆಸರು ಕಾಯಂ ಆಗಿರಬೇಕು.

**ಚೆಂಬು** ಅಂದರೆ **ತಂಬಿಗೆ** ಎಂದು ಈಗ ಅರ್ಥವಾಗುತ್ತದೆ. ಇದರ ರೂಪ ಬಹುಶಃ **ಚೆಂಬೊನ್** (ಚೆಂ + ಪೊನ್) = ಕೆಂಪು ಲೋಹ ಎಂದಷ್ಟೇ. ತಮಿಳಿನಲ್ಲಿ ಚೆಂಬು ತಾಮ್ರ ಬಂಗಾರ ಎರಡರ ಪಾತ್ರಗಳಿಗೂ ಅನ್ವಯಿಸುತ್ತದೆ. ಕೆಂಪಾದ ಲೋಹಕ್ಕೆ ಅನ್ವಯಿಸುವ ಶಬ್ದವೆಲ್ಲ ಲೋಹಗಳ ತಂಬಿಗೆಗಳಿಗೆ ನಡೆಯತೊಡಗಿತು.

ಲೋಹಗಳ ಶೋಧದ ಈ ಆನುಪೂರ್ವಿಗೆ ಕಾರಣಗಳಿವೆ. **ಬಂಗಾರ** ಶುದ್ಧ ಸ್ಥಿತಿಯಲ್ಲೇ ಸಿಗುವ ಲೋಹ. ತಾಮ್ರದ ಅದುರು ಸಂಯುಕ್ತ ಸ್ಥಿತಿಯಲ್ಲೇ ಸಿಕ್ಕಿದರೂ ಅದನ್ನು ಶುದ್ಧೀಕರಿಸುವುದು ಸುಲಭ. ಕಬ್ಬಿಣದ ಅದುರನ್ನು ಶುದ್ಧೀಕರಿಸುವುದಕ್ಕೆ ಹೆಚ್ಚು ಜಟಿಲ ವಿಧಾನಗಳೂ ಹೆಚ್ಚಿನ ಉಷ್ಣತೆಯೂ ಬೇಕು. ಹೀಗಾಗಿ ಈ ಲೋಹ ಮನುಷ್ಯನಿಗೆ ವಶವಾಗಲು ತಡವಾಯಿತು.

ಮನುಷ್ಯ ನಾಗರಿಕತೆಯಲ್ಲಿ ಲೋಹಗಳ ಪಾತ್ರ ಎಷ್ಟು ದೊಡ್ಡದೆಂದರೆ ನಾಗರಿಕತೆಯ ಉತ್ಕ್ರಾಂತಿಯನ್ನು ಈ ಲೋಹಗಳ ಯುಗಗಳಾಗಿ ವಿಭಜಿಸಲಾಗಿದೆ. ಲೋಹಗಳೇ ಗೊತ್ತಿಲ್ಲದ ಯುಗ **ಶಿಲಾಯುಗ.** ತಾಮ್ರ ಕಂಡುಹಿಡಿದು ಅದರ ಮತ್ತು ಕಲ್ಲಿನ ಆಯುಧೋಪಕರಣಗಳನ್ನು ಬಳಸಿದ್ದು **ತಾಮ್ರ-ಶಿಲಾಯುಗ.** ಅದರ ಕವಲೇ **ಕಾಂಸ್ಯ** (ಕಂಚು) **ಯುಗ.** ಕಡೆಗೆ **ಕಬ್ಬಿಣದ ಯುಗ.**

೬

**ಹಾರುವ** ಎನ್ನುವುದು ಇಂದು **ಬ್ರಾಹ್ಮಣ**ನಿಗೆ ತುಸು ತಿರಸ್ಕಾರದಿಂದ ಅನ್ವಯಿಸುವ ಮಾತು. ಒಂದು ಪದ ಒಳ್ಳೇ ಅರ್ಥದಿಂದ ಕೀಳು ಅರ್ಥಕ್ಕೆ ಅವನತಿ ಹೊಂದುವುದಕ್ಕೆ ಇದೊಂದು ಉದಾಹರಣೆ. ಹಾರುವ ಶಬ್ದದ ಪ್ರಾಚೀನ ರೂಪ **ಪಾರ್ವನ್. ಪಾರ್** ಎಂಬುದು ನೋಡು ಎಂಬರ್ಥ ಕೊಡುವ ದ್ರಾವಿಡ ಶಬ್ದ. ಅರ್ಥ ವಿಸ್ತರಣೆಯಿಂದ ಅದು **ಜ್ಞಾನದೃಷ್ಟಿ**ಯಿಂದ ನೋಡುವುದನ್ನೂ ಸೂಚಿಸುತ್ತದೆ. ಹೀಗೆ **ಪಾರ್ವನ್** ಜ್ಞಾನದೃಷ್ಟಿಯುಳ್ಳವ ಎಂಬ ಉದಾತ್ತ ಅರ್ಥವನ್ನು ಕೊಡುತ್ತದೆ. ಬ್ರಾಹ್ಮಣ ಜ್ಞಾನಿ ಎಂಬುದರಿಂದ ಅವನು ಪಾರ್ವ, ಹಾರುವ ಎನಿಸಿದ. ಆದರೆ ಬ್ರಾಹ್ಮಣ ಶಬ್ದ ಕನ್ನಡದಲ್ಲಿ ಹೆಚ್ಚು ಬಳಕೆಗೆ ಬಂದನಂತರ **ಹಾರುವ** ತುಚ್ಛೀಕಾರದ ಪದವಾಯಿತು.

**ಬ್ರಾಹ್ಮಣ** ಶಬ್ದಕ್ಕೆ ಬ್ರಹ್ಮಜ್ಞಾನವನ್ನು ಅರಸುವವನು ಎಂಬರ್ಥ ಹೇಳಲಾಗಿದೆ. ಬ್ರಹ್ಮ ಶಬ್ದಕ್ಕೆ ಪರಮಾತ್ಮ ಎನ್ನುವುದು ದ್ವಿತೀಯಾರ್ಥ. ಪ್ರಾಥಮಿಕ ಅರ್ಥ **ಬೃಹತ್** = ದೊಡ್ಡದು ಎಂದು. **ಬೃಹತ್** ಎಂಬುದು **ಮಹತ್**ನ ಹಾಗೆಯೇ ಆರ್ಯ ಭಾಷೆಗಳಿಗೆ ಸಾಮಾನ್ಯವಾದ ಪದ. ಇಂಗ್ಲೀಷಿನ big ಇದರದ್ದೇ ಒಂದು ರೂಪ. ಬ್ರಾಹ್ಮಣ ಸಮಾಜಕ್ಕೆ ದೊಡ್ಡವ

ಎಂಬ ಎಣಿಕೆಯಿಂದ ಅವನಿಗೆ ಆ ಹೆಸರು ಬಂದಿರಬಹುದು. ಯಜ್ಞದಲ್ಲಿ **ಪ್ರಧಾನ ಪುರೋಹಿತನಿಗೂ** ಬ್ರಹ್ಮ ಎಂದು ಕರೆಯುತ್ತಿದ್ದರು. ಅದೇ ಅರ್ಥವಿಸ್ತರಣೆ ಹೊಂದಿ ಬ್ರಾಹ್ಮಣ ಪದ ಹುಟ್ಟಿರಲೂಬಹುದು. ನಮ್ಮ ಪಾರ್ವ > ಹಾರುವನಿಗೆ ಅಧೋಗತಿ ಒದಗಿದ ಹಾಗೆ ಬ್ರಾಹ್ಮಣನಿಗೂ **ಬೊಮ್ಮನ್** ಎಂಬ ಅಪಭ್ರಂಶ ಮೂಲಕ ಕೀಳು ಅವಸ್ಥೆ ಬಂದಿದೆ.

ಪಾರ್ವ > ಹಾರುವನಿಗೆ ಒಳ್ಳೇ ಅರ್ಥ ಇದ್ದಾಗ **ಹೆಬ್ಬಾರ** ಎಂದರೆ **ಹಿರೇ ಹಾರುವ**. ಊರಿನ ಅಗ್ರಹಾರದ ಬ್ರಾಹ್ಮಣರ ಹಿರಿಯನಿಗೆ ಹೆಬ್ಬಾರ ಎಂಬ ಅಭಿದಾನ. ಎಲ್ಲವೂ ತಲೆಯಿಂದ ತಲೆಗೆ ಇಳಿದು ಬರುವ ನಮ್ಮಲ್ಲಿಯ ರೂಢಿಯಂತೆ **ಹೆಬ್ಬಾರುವತನ** ಕೂಡ ವಂಶಪರಂಪರೆಯಿಂದ ನಡೆದು ಬಂದು ಕೆಲವು ಕುಲಗಳೇ **ಹೆಬ್ಬಾರ** ಎಂದು ಹೆಸರಾದುವು. ಕನ್ನಡ ಸಾಹಿತ್ಯದಲ್ಲಿ ಹೆಸರಾದವರಲ್ಲಿ **ಲಕ್ಷ್ಮೀಶ ಕವಿ** ಒಬ್ಬ ಹೆಬ್ಬಾರ. ಆಧುನಿಕ ಕಾಲದಲ್ಲಿ ಸಾಹಿತಿ ಶ್ರೀ ಬಿ. ಎಚ್. ಶ್ರೀಧರರೂ ಹೆಬ್ಬಾರರೇ. ಶ್ರೀವೈಷ್ಣವ ಬ್ರಾಹ್ಮಣರಲ್ಲಿ **ಹೆಬ್ಬಾರ ಬ್ರಾಹ್ಮಣರು** ಎಂಬೊಂದು ಕವಲು ಇದೆ. ಯಾವ ಕಾರಣದಿಂದಲೋ ಈಗ ಉತ್ತರ ಕರ್ನಾಟಕದಲ್ಲಿ ಹೆಬ್ಬಾರರ ಸುದ್ದಿ ಇಲ್ಲ.

ಕರ್ನಾಟಕದ ಜೈನರಲ್ಲಿ, ಬಂಟರಲ್ಲಿ ಮತ್ತು ಹವ್ಯಕ ಬ್ರಾಹ್ಮಣರಲ್ಲಿ **ಹೆಗ್ಗಡೆ** ಎಂಬ ಕುಲನಾಮ ಇದೆ. ಇದು ಹಿಂದೆ **ಪೆರ್ಗಡೆ** ಎಂಬ ರೂಪದಲ್ಲಿತ್ತು. ಹೆಗ್ಗಡೆ ಎಂದರೆ **ಹಿರಿಯ ಗಡೆ**. **ಗಡೆ** ಎಂದರೇನೆಂದು ಸರಿಯಾಗಿ ತಿಳಿಯದು. ಪರಿಷತ್ತಿನ ಹಿರಿಯ ನಿಘಂಟಿನಲ್ಲಿ **ಕಡೆ** ಅಥವಾ **ಗಡೆ** ಶಬ್ದಕ್ಕೆ **ಪೆರ್ಗಡೆ**ಗೆ ಹೊಂದುವ ಅರ್ಥ ಕಾಣಿಸುವುದಿಲ್ಲ. ಪ್ರಾಚೀನ ಕಾವ್ಯ, ಶಾಸನಗಳಲ್ಲಿ **ಸಂಧಾನಕರ್ತರು** ಎಂಬರ್ಥದಲ್ಲಿ ಪೆರ್ಗಡೆ ಪದ ಪ್ರಯೋಗವಾಗಿದೆ (ಉದಾ : ಪೆರ್ಗಡೆಗಳನಟ್ಟಿ). **ಗಡೆ**ಗೆ **ಗಳೆ** ಎಂದೂ ಅರ್ಥ ಹೇಳಿದೆ. **ಗಳೆ** ಎಂದರೆ ಬಿದಿರ ಕೋಲು, ಅಳತೆಕೋಲು(ಗಳು) ಎಂದೂ ಅರ್ಥವುಂಟು. ಅಧಿಕಾರ ದಂಡಧಾರಿ ಎಂಬುದು ಗಡೆಯ ಅರ್ಥವೇ ? ದಕ್ಷಿಣ ಕನ್ನಡದ ಕನ್ನಡ ಮಾತನಾಡುವ ಪ್ರದೇಶದಲ್ಲಿ **''ಏನ್ ಗಡೆ ?''** ಎಂದು ಸಂಬೋಧಿಸುವುದನ್ನು ನಾನು ಕೇಳಿದ್ದೇನೆ. ಇದು ರಾಜಕೀಯ ಅಧಿಕಾರಿಯೆಂಬರ್ಥದಲ್ಲಿ ನಾವೀಗ ''ಸಾಹೇಬರೇ'' ಎನ್ನುವಂತೆ ವಾಡಿಕೆಗೆ ಬಂದು ಆ ಮೇಲೆ ಅರ್ಥಹ್ರಾಸ ಹೊಂದಿದ ಪದವೋ ಅಥವಾ ಹಳಗನ್ನಡದಲ್ಲಿ ಪದೇ ಪದೇ ಕೇಳಿಬರುವ ಗಡ (= ಅಂತೆ) ಎಂಬ ಶಬ್ದದ್ದೇ ಒಂದು ಗ್ರಾಮ್ಯ ರೂಪವೋ ಊಹಿಸುವುದು ಕಷ್ಟ.

ಅಂತೂ **ಹೆಗ್ಗಡೆ**ಗಳು ಮೂಲತಃ ಸರಕಾರ ಅಥವಾ ಅರಸರ ನಿಯೋಗಿಗಳಾಗಿ ಕೆಲಸ ಮಾಡುವ ಅಧಿಕಾರಿಗಳಾಗಿರಬಹುದು.

## ೧೦

**ಕ್ಯಾಲಿಕೊ** ಹೆಸರು ಯಾರು ಕೇಳಿಲ್ಲ? ಪುಸ್ತಕಗಳಿಗೆ ಬೈಂಡ್ ಹಾಕುವುದಕ್ಕೆ ಉಪಯೋಗಿಸುವ ವಿಶಿಷ್ಟ ಬಟ್ಟೆ ಅದು. ಬೈಂಡಿಂಗ್ ಕಲೆಯೊಡನೆ ಈ ಹೆಸರೂ ಪಡುವಣ ದೇಶದಿಂದಲೇ ಇಲ್ಲಿಗೆ ಬಂತೆಂದು ನೀವೆಣಿಸಿದ್ದರೆ ಅದು ತಪ್ಪು. ಕ್ಯಾಲಿಕೊ ಬಟ್ಟೆಯೂ ಅದರ ಹೆಸರೂ ಇಲ್ಲಿಂದಲೇ ಅಲ್ಲಿಗೆ ಹೋಗಿ ಆಮೇಲೆ ಅಲ್ಲಿಂದ ಇಲ್ಲಿಗೆ ಬಂದದ್ದು. ಕೇರಳದ **ಕಲ್ಲಿಕೋಟೆ** (ಕೋಜಿಕೋಡ್)ಯ ಮೂಲಕ ಮೊದಲು ಯುರೋಪಿಗೆ ರಫ್ತಾದ ಈ ಒರಟು ಗಟ್ಟಿ ಬಟ್ಟೆ ಪ್ರಥಮತಃ ೧೫೪೦ ರಲ್ಲಿ ಯುರೋಪಿಯನ್ ಸಾಹಿತ್ಯದಲ್ಲಿ ಉಲ್ಲೇಖ

ಪಡೆದಿದೆ. Calicut cloth ಎಂಬುದೇ ಅಪಭ್ರಂಶವಾಗಿ ಕ್ಯಾಲಿಕೊ ಆಗಿರಬೇಕು. ಬಗೆ ಬಗೆಯ ಬಣ್ಣಗಳಲ್ಲಿ ಇಲ್ಲಿಂದ ರಫ್ತಾಗುತ್ತಿದ್ದ ಕ್ಯಾಲಿಕೊ ಒಂದು ಕಾಲದಲ್ಲಿ ಪಾಶ್ಚಾತ್ಯ ದೇಶಗಳಲ್ಲಿ ತುಂಬ ಫ್ಯಾಶನೇಬಲ್ ಎನಿಸಿತ್ತು. ಇದರಿಂದ ಮಾಡಿದ ದುಸ್ತನ್ನೇ ತೊಟ್ಟು ವಿಶಿಷ್ಟ ನೃತ್ಯ ಕೂಟಗಳನ್ನು ಏರ್ಪಡಿಸಲಾಗುತ್ತಿತ್ತು. ಅದಕ್ಕೆ **ಕ್ಯಾಲಿಕೊ ಬಾಲ್** ಎಂದು ಹೆಸರಿತ್ತು. ಕ್ಯಾಲಿಕೊ ಬಟ್ಟೆ ೧೭ನೇ ಶತಮಾನದ ಕೊನೆಗೆ ಎಷ್ಟು ಜನಪ್ರಿಯವಾಗಿತ್ತೆಂದರೆ ಇಂಗ್ಲೆಂಡಿನಲ್ಲಿ ಸ್ಥಳೀಯ ನೇಯ್ಗೆ ಉದ್ದಿಮೆಗೆ ರಕ್ಷಣೆ ಕೊಡುವುದಕ್ಕಾಗಿ ೧೭೧೪ರಲ್ಲಿ ಕ್ಯಾಲಿಕೊ ಬಟ್ಟೆಯ ಮಾರಾಟವನ್ನೇ ಪ್ರತಿಬಂಧಿಸುವ ಕಾನೂನು ಆಯಿತಂತೆ.

**ಉಕ್ಕು** ತಯಾರಿಸುವ ತಂತ್ರಗಳನ್ನು ನಮಗೆ ಕಲಿಸುವುದಕ್ಕೆ ವಿದೇಶಿಯರ ನೆರವು ಕೋರುತ್ತಿರುವ ಈ ಕಾಲದಲ್ಲಿ ಕೇವಲ ೨೦೦ ವರ್ಷಗಳ ಹಿಂದೆ ಯುರೋಪಿಗೆ ದಕ್ಷಿಣ ಭಾರತದ ಉತ್ತಮ ಶ್ರೇಣಿಯ ಉಕ್ಕು ಕರ್ನಾಟಕದ ಮೂಲಕ ರಫ್ತಾಗುತ್ತಿತ್ತೆಂಬುದು ಸೋಜಿಗದ ಸುದ್ದಿಯಾಗಬಹುದು. ಇಂಗ್ಲೀಷ್ ಕೋಶಗಳಲ್ಲಿ wootz ಎಂಬ ಶಬ್ದ ಇದೆ. ಅದರ ಮೂಲ ರೂಪ wook ಎಂದೂ ಅದು ಕನ್ನಡದ ಉಕ್ಕು ಪದದ ಆಂಗ್ಲೀಕರಣವೆಂದೂ ಮೊತ್ತಮೊದಲು ಅದರ ಉಲ್ಲೇಖ ೧೭೯೫ರಲ್ಲಿ ಇಂಗ್ಲೆಂಡಿನಲ್ಲಿ ಕಂಡುಬರುತ್ತದೆಂದೂ ಕೋಶಗಳು ಹೇಳುತ್ತವೆ. ಈ wootz ಉಕ್ಕು ಬಲು ಗಟ್ಟಿಯಾಗಿದ್ದು ಚೂರಿ ಮೊದಲಾದ ಕಟ್ಲೆರಿ ಸಾಮಾನುಗಳ ತಯಾರಿಕೆಯಲ್ಲಿ ಬಳಕೆಯಾಗುತ್ತಿತ್ತು.

ಹೋಟೆಲು ಹೊಕ್ಕವರೆಲ್ಲ ಕರಿಯನ್ನು ಕೇಳಿ ತಿಂದು ಬಲ್ಲರು. ಇದು ಇಂಗ್ಲೀಷಿನ ಶಬ್ದವೆಂದು ನಾವು ಸರಿಯಾಗಿಯೇ ಭಾವಿಸುತ್ತೇವೆ. ಸಸ್ಯ ಮತ್ತು ಮಾಂಸ ಅಡುಗೆಯಲ್ಲಿ ಮಸಾಲೆ ಹಾಕಿ ತಯಾರಿಸಿದ ಮೇಲೋಗರ ಅಥವಾ ದ್ರವಪಲ್ಯ ಅದು. ೧೫೯೮ರಲ್ಲಿ ಇಂಗ್ಲೀಷಿನಲ್ಲಿ ಮೊದಲು ಕಾಣಿಸಿಕೊಳ್ಳುವ ಈ ಪದ ಪೋರ್ಚುಗೀಸ್ ಭಾಷೆಯ ಮೂಲಕ ದಕ್ಷಿಣ ಭಾರತದಿಂದಲೇ ಪ್ರಯಾಣ ಮಾಡಿತು. ಕನ್ನಡದಲ್ಲಿ, ತಮಿಳಿನಲ್ಲಿ **ಕಱಿ**ಯೆಂದರೆ ಕರಿಯುವುದು. ಮಸಾಲೆ ಸಾಮಾನು ಎಣ್ಣೆ ಸಹಿತ ಹುರಿದು ಕುಟ್ಟಿ ಇಟ್ಟ ಸಾಂಬಾರ ಪುಡಿಯನ್ನು ಇಂಗ್ಲೀಷಿನಲ್ಲಿ curry powder ಎನ್ನುತ್ತಾರೆ. ಕೆಲವು ಬಿಳಿಯರಿಗೆ ಅ- ಗ ಸವಿ ಹತ್ತಿದ್ದುಂಟು. ತಮಿಳು ಕನ್ನಡಗಳ ಉಲ್ಲೇಖವನ್ನು ಆಕ್ಸ್‌ಫರ್ಡ್ ಇಂಗ್ಲೀಷ್ ಕೋಶ ಮಾಡಿದರೂ ಇವೆರಡೂ ಭಾಷೆಗಳಲ್ಲಿ ಮೂಲತಃ ತೆಳ್ಳನ್ನ ಭಾಜಿಗೆ ಆ ಹೆಸರು ಪ್ರಚಾರದಲ್ಲಿಲ್ಲ. ಅದಕ್ಕೆ ತುಳುವಿನಲ್ಲಿ **ಕಜಿಪು** (ಕನ್ನಡ ಱ = ತುಳು ಜ) ಎಂದು ಹೆಸರುಂಟೆಂಬುದರಿಂದಲೂ ಪಶ್ಚಿಮ ಕರಾವಳಿಯಲ್ಲಿ ಮೊದಲು ಬಿಡಾರ ಹೂಡಿದ ಪೋರ್ಚುಗೀಸರೇ ಇದನ್ನು ಮೊದಲು ಯುರೋಪಿಗೆ ಒಯ್ದರೆಂಬುದರಿಂದಲೂ ಅದು ಮಂಗಳೂರಿನಲ್ಲಿ ಅವರು ಹೆಕ್ಕಿಕೊಂಡ ಪದವಾಗಿರಲೂಬಹುದು.

೧೧

**ಕುದುರೆ** ಎಂಬುದು ಬಹಳ ಚಂದದ ಕನ್ನಡ ಶಬ್ದವಾಗಿ ಕಾಣುತ್ತದೆ. ಕನ್ನಡದಲ್ಲಿ ಲಿಖಿತ ದಾಖಲೆಗಳು ಎಷ್ಟು ಹಿಂದಿನಿಂದ ದೊರೆಯುತ್ತವೋ ಅಷ್ಟು ಹಿಂದಿನಿಂದ ಈ ಶಬ್ದ ಸಿಗುತ್ತದೆ. ಸಾಲದ್ದಕ್ಕೆ ದ್ರಾವಿಡ ಭಾಷೆಗಳಲ್ಲೆಲ್ಲ ಇದಕ್ಕೆ ಜ್ಞಾತಿ ಶಬ್ದಗಳುಂಟು. ತಮಿಳಿನಲ್ಲಿ **ಕುದಿರೆ** ಇದೆ : ಮಲೆಯಾಳಿಯಲ್ಲಿ **ಕುದುರ**; ತುಳುವಿನಲ್ಲಿಯೂ **ಕುದುರೆ**. ತೆಲುಗಿಗೆ ಹೋದರೆ

ತುಸು ವ್ಯತ್ಯಾಸ ಕಾಣಿಸಿದರೂ ಗುರುತು ಸಿಗುವಂಥ **ಗುದ್ರ**, ಗುರ್ರ ಇವೆ ; ಅದಕ್ಕೂ ಉತ್ತರದ ನಾಯ್ಕಿ, ಕೋಲಾಮಿ, ಪರ್ಜಿಗಳಲ್ಲಿ ಕೂಡ ಗುರ್ರಕ್ಕೆ ಹತ್ತಿರವಾದ ಪದಗಳು ಇವೆ. ಸಂಸ್ಕೃತದಲ್ಲಿ ಕುದುರೆಗೆ ಪ್ರಾಚೀನ ಶಬ್ದ **ಅಶ್ವ** ಎಂಬುದು. ಆದರೆ ಮುಂದೆ **ಘೋಟ** ಎಂಬೊಂದು ಶಬ್ದ ಪ್ರಯೋಗದಲ್ಲಿ ಬರತೊಡಗಿತು. ಅದೇ ಹಿಂದಿಯಲ್ಲಿ **ಘೋಡಾ** ಆಯಿತು. ಇದಲ್ಲದೆ ವೈದಿಕ ಯಜ್ಞ ಸಂಬಂಧದಲ್ಲಿ ಉಪಯೋಗಿಸುವ **ಶಾಲಿಹೋತ್ರ** ಎಂಬ ಕುದುರೆಯ ಪ್ರಸ್ತಾಪ ಬರುತ್ತದೆ. ಇದರಲ್ಲಿ **ಹೋತ್ರ** ಎಂಬುದು **ಘುತ್ರದ್ದೇ** ಒಂದು ರೂಪವೆಂದು ಭಾಷಾ ಶಾಸ್ತ್ರಿಗಳು ಹೇಳುತ್ತಾರೆ. ಹೀಗೆ **ಕುದುರೆ** ಮತ್ತು ಅದರ ರೂಪಾಂತರಗಳೆಲ್ಲ ದೇಶ್ಯ ಶಬ್ದಗಳೆಂದೇ ಕೋಶಗಳಲ್ಲಿ ತೋರಿಸಿದ್ದಾರೆ.

ಆದರೆ ಪ್ರಸಿದ್ಧ ದ್ರಾವಿಡ ಭಾಷಾ ವಿದ್ವಾಂಸರಾದ ಸುನೀತಿಕುಮಾರ ಚಟರ್ಜಿಯವರೂ ಡಾ. ಎಸ್. ಎಂ. ಕತ್ರೆಯವರೂ ಕೆಲ ವರ್ಷಗಳ ಹಿಂದೆ **ಕುದುರೆಯ** ಬೆನ್ನು ಹತ್ತಿ ಆ ಶಬ್ದದ ಮೂಲ ಇಜಿಪ್ತಿನಲ್ಲಿದೆಯೆಂಬ ತೀರ್ಮಾನಕ್ಕೆ ಬಂದರು. ಉತ್ತಮ ಕುದುರೆ ದಕ್ಷಿಣ ಭಾರತಕ್ಕೆ ಅತ್ತ ಕಡೆಯಿಂದ ಆಮದಾಗುತ್ತಿತ್ತು. ಇಜಿಪ್ಶಿಯನ್ ಭಾಷೆಯಲ್ಲಿ **ಹ್ತ್ರ್** (htr) ಎಂದರೆ ಕುದುರೆಯೆಂದೇ ಅರ್ಥವಲ್ಲ; ಒಟ್ಟು ಭಾರ ಹೊರುವ ಪ್ರಾಣಿಗೆ ಹಾಗೆ ಹೆಸರು. ಅದರಲ್ಲಿ ಕತ್ತೆಯೂ ಸೇರಿತು. **ಹ್ತ್ರ್** ಪದದ **ಹಕಾರದ** ವಿಶಿಷ್ಟ ಉಚ್ಚಾರದಿಂದಾಗಿ ಅದು ಒಂದು ಕಡೆ **ಹೋತ್ರ>ಘೋಟ>ಘೋಡಾ** ಆದರೆ, ದ್ರಾವಿಡ ಭಾಷೆಗಳಲ್ಲಿ **ಗುದ್ರ, ಗುರ್ರ, ಕುದುರೆ, ಕುದಿರೆ** ಇತ್ಯಾದಿ ಆಯಿತು. ವಿಶೇಷವೆಂದರೆ ಸಂಸ್ಕೃತದಲ್ಲಿ **ಕುದುರೆಗೆ ಅಶ್ವ** ಅಲ್ಲದೆ ಇನ್ನೂ ಅನೇಕ ಶಬ್ದಗಳಿವೆ. ಯಜುರ್ವೇದದಲ್ಲಿ ಬರುವ ಅಶ್ವಮೇಧಯಾಗದ ವಿಧಿಯಲ್ಲಿ ಇವೆಲ್ಲ ಉಲ್ಲೇಖ ಹೊಂದಿವೆ. ಆದರೆ ಅವೆಲ್ಲವೂ ಬಿದ್ದು ಹೋಗಿ ವಿದೇಶಿ ಶಬ್ದವೊಂದು ಸಂಸ್ಕೃತಜನ್ಯ ಮತ್ತು ದ್ರಾವಿಡ ಭಾಷೆಗಳಲ್ಲಿ ಸೇರಿಕೊಂಡಿದ್ದು ಬಹಳ ಸ್ವಾರಸ್ಯದ ಸಂಗತಿ. **ಅಶ್ವಕ್ಕಿಂತ ಘೋಟ** ಉಚ್ಚಾರಕ್ಕೆ ಸುಲಭವೆಂದೋ ವಿದೇಶಿ ಕುದುರೆ ವ್ಯಾಪಾರಿಗಳ ಪ್ರಭಾವದಿಂದಲೋ ಈ ಪದ **ದ್ರಾವಿಡ** ಮೂಲಕ ಭಾರತದಲ್ಲೆಲ್ಲ ಗಟ್ಟಿಯಾಗಿ ನೆಲೆಯೂರಿಬಿಟ್ಟಿತು.

ಭಾರವಾಹಕ ಪ್ರಾಣಿ **ಹ್ತ್ರ್** ಎಂಬುದು **ಕುದುರೆ, ಘೋಡಾ** ಆಗಿ ಇಲ್ಲಿ ಕಾಲೂರಿದ್ದರೆ, ಆಧುನಿಕ ಗ್ರೀಸಿನಲ್ಲಿ **ಗದೈರೋಸ್** ಕತ್ತೆಯ ಹೆಸರಾಗಿ ಅದೇ ಶಬ್ದ ಬಳಕೆಗೆ ಬಂದಿದೆ ಎಂದು ಚಟರ್ಜಿ ಹೇಳುತ್ತಾರೆ. ಅಂತೂ ಕುದುರೆಯೂ ಅದೇ ಕತ್ತೆಯೂ ಅದೇ! ಮತ್ತೆ ಕನ್ನಡದ **ಕಟ್ಟೆ, ಕರ್ತೆ, ಕತ್ತೆಯೂ ಹ್ತ್ರ್‌**ದ್ದೇ ರೂಪ ಇರಬಹುದಲ್ಲ!

ಇಷ್ಟಾಗಿ **ಹ್ತ್ರ್** ಕೂಡ ಮೂಲ ಇಜಿಪ್ಶಿಯನ್ ಪದವಲ್ಲ. ಏಶಿಯದಿಂದ ಕುದುರೆ ಸೈನ್ಯದೊಡನೆ ಇಜಿಪ್ತನ್ನು ಆಕ್ರಮಿಸಿದ ಹಿಕ್ಸೋಸ್ ಎಂಬ ಏಶಿಯನ್ ಜನಾಂಗದಿಂದಾಗಿ ಕ್ರಿಸ್ತಪೂರ್ವ ೧೭ನೇ ಶತಮಾನದಲ್ಲಿ ಅದು ಇಜಿಪ್ಶಿಯನ್ ಭಾಷೆಯಲ್ಲಿ ಸೇರಿಕೊಂಡಿತು.

೧೨

ಒಂದು ಭಾಷೆಯಲ್ಲಿ ಒಂದು ಕಾಲದಲ್ಲಿದ್ದ ಶಬ್ದಗಳು ಕಾಲಾಂತರದಲ್ಲಿ ಯಾಕೆ ಬಳಕೆ ತಪ್ಪಿ ಹೋಗುತ್ತವೆ ಮತ್ತು ಇನ್ನೊಂದು ಅದೇ ಭಾಷೆಯದೋ ಬೇರೊಂದರದೋ ಯಾಕೆ ಅದರ ಸ್ಥಳದಲ್ಲಿ ರೂಢಿಗೆ ಬರುತ್ತದೆ ಎಂದು ಹೇಳುವುದು ತೀರ ಕಷ್ಟ. ಅಶ್ವದ ಬದಲು ಪರದೇಶದಿಂದ ಸದ್ದಿಲ್ಲದೆ ಬಂದು ಭಾರತೀಯ ಭಾಷೆಗಳಲ್ಲಿ ಸೇರಿಕೊಂಡ

**ಹ್ತ್ರ್>ಕುದುರೆ**ಯ ಬಗ್ಗೆ ೧೧ ರಲ್ಲಿ ಹೇಳಿದೆ. ಅಂಥದೇ ಇನ್ನೊಂದು ಒಳ್ಳೇ ಶಬ್ದ ಕನ್ನಡದಿಂದ ಲುಪ್ತವಾದುದನ್ನು ಇಲ್ಲಿ ಹೇಳುತ್ತೇನೆ. ಅದೇ **ಇಲ್**. ಈ ಶಬ್ದ ಹಿಂದೆ ದಕ್ಷಿಣ ದ್ರಾವಿಡ ಭಾಷೆಗಳಲ್ಲೆಲ್ಲ ಮನೆ ಎಂಬರ್ಥದಲ್ಲಿ ವಾಡಿಕೆಯಲ್ಲಿತ್ತು. ಆದರೆ ಇಂದು ಕನ್ನಡದಲ್ಲಿ ಇದು ಪೂರ್ತಿ ಕಣ್ಮರೆಯಾಗಿ ಮನೆ ಬಂದಿದೆ; ತಮಿಳಿನಲ್ಲಿ ಉಳಿದಿದ್ದರೂ ಈಗ ಅದರ ಸ್ಥಳದಲ್ಲಿ ಸಾಮಾನ್ಯರ ಮಾತಿನಲ್ಲಿ **ವೀಟ್ಟ್** (ಕನ್ನಡ ಬೀಡು) ಶಬ್ದವೇ ಹೆಚ್ಚು ಚಾಲ್ತಿಗೆ ಬಂದಿದೆ; ಮಲೆಯಾಳದಲ್ಲಿ ಆಢ್ಯರ ಮನೆಗೆ ಮಾತ್ರ **ಇಲ್ಲಂ** ಎಂದು ಹೆಸರಾಗಿದೆ. ತೆಲುಗಿನಲ್ಲಿ ಮತ್ತು ತುಳುವಿನಲ್ಲಿ ಮಾತ್ರ ಮೊದಲಿನ ಸಾಮಾನ್ಯ ಅರ್ಥದಲ್ಲೇ ಅದನ್ನು ಬಳಸುತ್ತಾರೆ. ಮಧ್ಯ ದ್ರಾವಿಡ ಭಾಷೆಯಾದ ಗೋಂಡಿಯಲ್ಲಿ ಅದರದೇ ರೂಪಾಂತರವಾದ **ಇದ್ದು** ಇದೆ.

ಕನ್ನಡದಿಂದ ಇದು ತುಂಬ ಪ್ರಾಚೀನದಲ್ಲೇ ಕಣ್ಮರೆಯಾಯಿತು. ನಮ್ಮ ಪ್ರಾಚೀನತಮ ಕಾವ್ಯಗಳಲ್ಲಿ ಕೂಡ ಇದು ಆ ಅರ್ಥದಲ್ಲಿ ಸ್ವತಂತ್ರವಾಗಿ ಪ್ರಯೋಗವಾಗಿಲ್ಲ. ಆದರೆ ಅದು ಇತ್ತೆಂಬುದಕ್ಕೆ ನಿಸ್ಸಂದಿಗ್ಧವಾದ ಅವಶೇಷಗಳು ಸಾಕ್ಷಿ ಹೇಳುತ್ತವೆ. ಉದಾಹರಣೆಗೆ **ಬಾಗಿಲು**. ಇದರ ಆದ್ಯರೂಪ **ವಾಯಿಲ್ = ವಾಯ್ + ಇಲ್** ಅಂದರೆ **ಇಲ್**ಇನ **ಬಾಯಿ**. ನಾವು ಮನೆಯ ಹಿಂದಣ ಸ್ಥಳಕ್ಕೆ **ಹಿತ್ತಿಲು** ಅನ್ನುತ್ತೇವಲ್ಲ, ಅದು **ಪಿಂತೆ** (= ಹಿಂದೆ)+**ಇಲ್** ಅಂದರೆ ಮನೆಯ ಹಿಂದೆ. ಕನ್ನಡದಲ್ಲಿ ಕಾಣಿಸದಿದ್ದರೂ ಹಿತ್ತಿಲಿಗೆ ವಿರುದ್ಧವಾಗಿ **ಮುಂದಿಲ್** = **ಇಲ್**ಇನ **ಮುಂದೆ** (= ಅಂಗಳ) ಎಂಬ ಶಬ್ದ ತುಳುವಿನಲ್ಲಿ ಇಂದಿಗೂ ಇದೆ. ಹಾಗೆಯೆ ಹಳೆಯ ಕಾವ್ಯಗಳಲ್ಲಿ ಸ್ವರ್ಗ ಎಂಬರ್ಥದಲ್ಲಿ ಬರುವ **ಬರ್ದಿಲ್** ಎಂಬುದು **ಬರ್ದವರ** = ಸತ್ತವರ ಇಲ್. ಅಲ್ಲಿರುವವರು **ಬರ್ದಿಲರು** = ದೇವತೆಗಳು. ತಮಿಳಿನಲ್ಲಿ **ಕೋಯಿಲ್** ಎಂದರೆ **ಕೋ** = ದೇವರು, ಅರಸ + **ಇಲ್** = ದೇವಾಲಯ ಅಥವಾ ಅರಮನೆ.

ಸ್ವತಂತ್ರ ರೂಪದಲ್ಲಿ ಇಲ್ ಕನ್ನಡದಿಂದ ಬಹಳ ಹಿಂದೆ ಕಣ್ಮರೆಯೇ ಆಯಿತೆಂದರೂ ಕೊಲ್ಹಾಪುರದ ೧೨ನೇ ಶತಮಾನದ ಒಂದು ಶಾಸನದಲ್ಲಿ **ಇಲುಮಟ** = ಮನೆ ಮಠ ಎಂಬ ಪ್ರಯೋಗ ಸಿಗುತ್ತದೆ. ಇಂದು ಕೂಡ ಯಾವುದಾದರೂ ಗಡಿ ಭಾಗದ ಆಡುಮಾತಿನಲ್ಲಿ ಅದು ಜೀವಂತ ಇದ್ದರೂ ಇರಬಹುದು. ಶಿಷ್ಟ ಭಾಷೆಯಲ್ಲಿ ಮಾತ್ರ ಇಲ್ಲ; ಪದ್ಯದಲ್ಲಿ ಅದನ್ನು ತಿರುಗಿ ಬಳಕೆಗೆ ತರಲು ಈ ಶತಮಾನದಲ್ಲಿ ಒಂದೆರಡು ಪ್ರಯತ್ನಗಳಾದರೂ ಅದಕ್ಕೆ ಜೀವ ಬರಲಿಲ್ಲ.

ಇಲ್ ಸ್ಥಳದಲ್ಲಿ ತಮಿಳಿನಲ್ಲಿ **ವೀಟ್ಟ್** = **ಬೀಡು** ಶಬ್ದ ಬಳಕೆಗೆ ಬಂದಿದೆ ಎಂದೆನಲ್ಲ. ಈ **ಬೀಡು** ಮೂಲದಲ್ಲಿ ಕನ್ನಡದಲ್ಲಂತೂ ಶಾಶ್ವತವಾದ ವಾಸಸ್ಥಾನ ಎಂಬರ್ಥದಲ್ಲಿರಲಿಲ್ಲ; ತಾತ್ಕಾಲಿಕ ನೆಲೆ = ಮುಕ್ಕಾಮು ಅಥವಾ ಶಿಬಿರ ಎಂಬರ್ಥದಲ್ಲಿ ಅದನ್ನು ಬಳಸುತ್ತಿದ್ದಂತೆ ಶಾಸನಗಳಿಂದ ಕಂಡುಬರುತ್ತದೆ. ಅನಂತರ ಸರಕಾರಿ ಅಧಿಕಾರಿಗಳ ನೆಲೆಗೆ (ಉದಾ: ಬಲ್ಲಾಳರ ಬೀಡು) ಎಂಬರ್ಥವನ್ನು ಅದು ಕೊಡುತ್ತಿತ್ತು. ಭಾಷೆಗಳಲ್ಲಿ ಶಬ್ದಾರ್ಥ ಮಾರ್ಪಾಡುಗೊಳ್ಳುವುದಕ್ಕೆ ಇದೊಂದು ನಿದರ್ಶನ.

೧೩

ಭಾಷೆಯಿಂದ ಭಾಷೆಗೆ ಜಿಗಿಯುವುದು ಶಬ್ದಗಳ ಒಂದು ಸ್ವಭಾವ. ಆದರೆ ಹೀಗೆ ವಲಸೆ ಬಂದ ಪದಗಳು ಹೊಸ ಭಾಷೆಯಲ್ಲಿ ಮೂಲ ಭಾಷೆಯ ಅರ್ಥವನ್ನೇ ಕೊಡುತ್ತವೆ

ಎಂದಿಲ್ಲ. ಸಂಸ್ಕೃತದ **ಅವಸರ** ಶಬ್ದಕ್ಕೆ ಈಗ ಕನ್ನಡದಲ್ಲಿ **ಗಡಿಬಿಡಿ, ತ್ವರೆ** ಎಂಬರ್ಥ ಸಾಮಾನ್ಯವಾಗಿದೆ. ಆದರೆ ಸಂಸ್ಕೃತದಲ್ಲಿ ಅದಕ್ಕಿರುವುದು **ಸಂದರ್ಭ, ಅವಕಾಶ, ವೇಳೆ** ಎಂಬರ್ಥ. ಕನ್ನಡದಲ್ಲಿ ಅದಕ್ಕೆ ಸುಮಾರು ವಿರುದ್ಧ ಎನ್ನಬಹುದಾದ ಅರ್ಥ ಹೇಗೆ ಬಂತು? ಎಂದು ಬಂತು? ಬಹುಶಃ ೧೭ನೇ ಶತಮಾನದಲ್ಲಿ ಮೊತ್ತಮೊದಲಾಗಿ ಈ ಶಬ್ದಕ್ಕೆ ಈ ಅರ್ಥ ಬಂದಂತೆ ತೋರುತ್ತದೆ. ಅರಮನೆಯ ಸೇವಕ ವರ್ಗದಲ್ಲಿ ಪ್ರಭುವಿನ ಅಪ್ಪಣೆಯೇನಾಗುತ್ತದೆಂದು ಕಾಯುತ್ತ ಇದ್ದು, ಅಪ್ಪಣೆಯಾದೊಡನೆ ಕಾರ್ಯಕ್ಕೆ ಚಾಲನೆ ಕೊಡುವ **ಅವಸರದವನು** ಎಂಬ ಸೇವಕನೊಬ್ಬ ಇದ್ದ. ಅಲ್ಲಿ ಮೂಲತಃ ಅವಸರ ಎಂದರೆ ತಕ್ಕ **ವೇಳೆಯೆಂದೇ** ಅರ್ಥ ಇದ್ದಿರಬಹುದಾದರೂ ಅಪ್ಪಣೆಯನ್ನು ತತ್‌ಕ್ಷಣ ಪಾಲಿಸುವುದು ಸೇವಕನ ಕೆಲಸವಾದ್ದರಿಂದ **ಅವಸರದವನ** ಕೆಲಸಕ್ಕೆ ತ್ವರೆ ಎಂಬರ್ಥ ಮೆಲ್ಲಗೆ ಬಂದಿರಬೇಕು. ಉಡುಪಿಯ ಕೃಷ್ಣದೇವಾಲಯದಲ್ಲಿಯ ನವವಿಧ ಪೂಜೆಗಳಲ್ಲಿ **ಅವಸರ** ಪೂಜೆಯೊಂದು. ಇದು ಎರಡು ಮುಖ್ಯ ಪೂಜೆಗಳ **ನಡುವೆ** ಜರುಗುವ ಚಿಕ್ಕ ಪೂಜೆ; ಸ್ವಾಭಾವಿಕವಾಗಿ ಇದು ಬಹಳ ಬೇಗನೆ ಮುಗಿದು ಹೋಗುತ್ತದೆ. **ಅವಸರ** ಶಬ್ದಕ್ಕೆ ಸಂಸ್ಕೃತದಲ್ಲಿಲ್ಲದ ಅರ್ಥ ಕನ್ನಡದಲ್ಲಿ ಹೇಗೆ ಬಂತೆಂಬುದಕ್ಕೆ ಇದೂ ಒಂದು ದಿಗ್ದರ್ಶಿಯಾಗುತ್ತದೆ. ಕೃಷ್ಣನ ಪೂಜಾ ಸಂಪ್ರದಾಯಗಳು ೧೬–೧೭ನೇ ಶತಮಾನಗಳ ಸಂಧಿಯಲ್ಲಿ ರೂಪಿಸಲ್ಪಟ್ಟವು.

**ಟೀಕೆ,** ಎಂದರೆ ಈಗ **ಆಕ್ಷೇಪಣೆ, ನಿಂದೆ** ಎಂಬರ್ಥ ಸುಮಾರಾಗಿ ಕನ್ನಡದಲ್ಲಿ ಗಟ್ಟಿಯಾಗಿಬಿಟ್ಟಿದೆ. ಅದರಿಂದ **ಟೀಕಿಸು** ಎಂಬ ಕ್ರಿಯಾಪದವೂ ರೂಪುಗೊಂಡಿದೆ. ಇದಕ್ಕಾದರೂ ಸಂಸ್ಕೃತದಲ್ಲಿರುವ ಅರ್ಥ **ವ್ಯಾಖ್ಯಾನ, ಅರ್ಥವಿವರಣೆ** ಎಂಬುವೇ ಹೊರತು **ಆಕ್ಷೇಪ** ಎಂದಲ್ಲ. ಪಂಪಾದಿ ಕವಿಗಳೂ ಅರ್ಥವಿವರಣೆಯೆಂಬರ್ಥದಲ್ಲಿಯೇ **ಟೀಕು** ಎಂಬ ಪದಪ್ರಯೋಗ ಮಾಡಿದ್ದಾರೆ. ಈ ಶತಮಾನದಲ್ಲಿ **ಟೀಕೆಗೆ** ಅರ್ಥವಿವರಣೆ ಎಂಬರ್ಥದ ಸಂಗಡ **ಗುಣದೋಷ** ವಿಮರ್ಶೆ ಎಂಬರ್ಥವೂ ಉಂಟಾಗಿ ಅಲ್ಲಿಂದ ಬರೇ **ದೋಷವಿಮರ್ಶೆ** ಎಂಬೊಂದೇ ಅರ್ಥ ನೆಲೆಯಾಯಿತು. ಮರಾಠಿ ಪ್ರಭಾವದಿಂದ ಉತ್ತರ ಕರ್ನಾಟಕದಲ್ಲಿ ಮೊದಲು ಇದು ಬಳಕೆಗೆ ಬಂತು.

**ಮಂಡರಿನ್** (mandarin) ಎಂಬೊಂದು ಶಬ್ದ ಇಂಗ್ಲೀಷಿನಲ್ಲಿ ಸ್ವಲ್ಪ ನೀಚಾರ್ಥದಲ್ಲಿ **ಹಿರಿಯ ಸರಕಾರಿ ನೌಕರ, ನೌಕರಶಾಹಿ, ಶುಷ್ಕಪಂಡಿತ** ಎಂಬರ್ಥದಲ್ಲಿ ನುಸುಳಿದೆ. ಇದನ್ನು **ಪೋರ್ತುಗೀಸರು** ಮಲಯಿ ಭಾಷೆಯಿಂದ ಯುರೋಪಿಗೆ ಆಮದು ಮಾಡಿದರು. ಮಲಯದಲ್ಲಿ ಆ ಶಬ್ದ ಚೀನದ ಪಂಡಿತವರ್ಗ, ನೌಕರಶಾಹಿ ಎಂದು ಅರ್ಥ ಕೊಡುತ್ತದೆ. ಚೀನದಲ್ಲಿ ನೌಕರಶಾಹಿಯನ್ನು ಪಂಡಿತವರ್ಗದಿಂದಲೇ ಆರಿಸುತ್ತಿದ್ದರು. ಆದರೆ ಈ ಶಬ್ದ ಚೀನದ್ದೂ ಅಲ್ಲ, ಮಲಯದ್ದೂ ಅಲ್ಲ. ಇದು ಸಂಸ್ಕೃತದಿಂದ ಮಲಯಿ ಭಾಷೆಗೆ ಇನ್ನೂ ಅನೇಕ ಶಬ್ದಗಳೊಡನೆ ಹೋದ **ಮಂತ್ರಿ** ಶಬ್ದದ ಅಪಭ್ರಂಶ. ಮಲಯದ ಬಹುಸಂಖ್ಯಾತರು ಇಂದು ಇಸ್ಲಾಮ್ ಅನುಯಾಯಿಗಳಾದರೂ ಅದು ಕೆಲವೇ ಶತಮಾನಗಳ ಹಿಂದಿನವರೆಗೂ ಭಾರತದ ಪ್ರಬಲ ಸಾಂಸ್ಕೃತಿಕ ಪ್ರಭಾವಕ್ಕೆ ಒಳಗಾಗಿತ್ತೆಂಬ ತಥ್ಯವನ್ನು ನೆನೆದುಕೊಳ್ಳಬೇಕು.

೧೪

ಮದುವೆಯೆಂಬುದು ಮನುಷ್ಯಲೋಕದ ಬಹು ಪುರಾತನ ಸಂಸ್ಥೆ. ಆದರೆ ಬೇರೆಬೇರೆ

ಭಾಷೆಗಳಲ್ಲಿ ಅದನ್ನು ನಿರ್ದೇಶಿಸುವುದಕ್ಕೆ ಇರುವ ಶಬ್ದಗಳ ತಳ ಶೋಧನೆಗೆ ಇಳಿದರೆ ಆ ಸಂಸ್ಥೆಯ ಬೆಳವಣಿಗೆಯ ಬಗ್ಗೆ ಬಹಳ ಸ್ವಾರಸ್ಯವಾದ ಅಂಶಗಳು ಹೊರಪಡುತ್ತವೆ.

ಕನ್ನಡದ **ಮದುವೆಯ** ಮೂಲಾರ್ಥವನ್ನು ಶಬ್ದಶಾಸ್ತ್ರಜ್ಞರು ಜೋಡಿಸುವಿಕೆ, ಕೂಡಿಸುವಿಕೆ ಎಂದು ತರ್ಕಿಸಿದ್ದಾರೆ. ಆ ಅರ್ಥದ **ಮಡು, ಮಣ** ಎಂಬ ದ್ರಾವಿಡ ಧಾತುವಿನಿಂದ ಅದು ಹುಟ್ಟಿರಬೇಕು. ತಮಿಳಿನಲ್ಲಿ **ಮಣಂ,** ತೆಲುಗಿನಲ್ಲಿ **ಮನುವು** ಕನ್ನಡ **ಮದುವೆಗೆ** ಸಂವಾದಿಯಾಗಿವೆ. ತುಳುವಿನಲ್ಲಿ **ಮದಿಮೆ,** ಅದರಿಂದ **ಮದಲಗಿತ್ತಿ** (= ವಧು) **ಮದವ** (= ಮದುವಣಿಗ) ಇತ್ಯಾದಿ ಶಬ್ದಗಳೂ ಕವಲೊಡೆದಿವೆ.

ಸಂಸ್ಕೃತದಲ್ಲಿ ಮದುವೆಗೆ **ವಿವಾಹ, ಉದ್ವಾಹ, ಪರಿಣಯ, ಪಾಣಿಗ್ರಹಣ, ಉಪಯಾಮ** ಇತ್ಯಾದಿ ಶಬ್ದಗಳಿದ್ದರೂ **ವಿವಾಹ** ಅತಿ ಹೆಚ್ಚು ಬಳಕೆಯಲ್ಲಿದೆ. ಈ ಶಬ್ದ **ವಹ್** = ಹೊತ್ತುಕೊಂಡು ಹೋಗು ಎಂಬ ಧಾತುವಿನಿಂದ ಹುಟ್ಟಿದ್ದು. **ವಾಹನ** ಇದರದೇ ನಾಮರೂಪ. ವೇದಕಾಲದಿಂದಲೇ **ವಿವಾಹ** ಮದುವೆಯನ್ನು ಸಂಕೇತಿಸುತ್ತದೆ. ಆದರೂ ಧಾತ್ವರ್ಥವನ್ನು ನೋಡಿದರೆ ಹೆಣ್ಣನ್ನು ಅಪಹರಿಸಿ ಒಯ್ದು ಮದುವೆ ಮಾಡಿಕೊಳ್ಳುವ ಬಹುಪುರಾತನ ರೂಢಿಯ ಕಡೆ ಈ ಶಬ್ದ ಬೆರಳು ತೋರಿಸುವಂತೆ ಅನಿಸುತ್ತದೆ. **ಉದ್ವಾಹ** ಎಂಬ ಅದರ ಇನ್ನೊಂದು ಪರ್ಯಾಯ ಪದ ಈ ಶಂಕೆಯನ್ನು ಇನ್ನೂ ಬಲಪಡಿಸುತ್ತದೆ. ಧರ್ಮಶಾಸ್ತ್ರಕಾರರು ಇಂಥ ಮದುವೆಗೆ **ರಾಕ್ಷಸೀ** ವಿವಾಹ ಎಂದು ಮುದ್ರೆ ಒತ್ತಿದರೂ **ರಾಕ್ಷಸಧ್ವಂಸಿಯಾದ** ಕೃಷ್ಣನ ಕುಲದವರಾದ ಯಾದವರಲ್ಲಿ ಇದು ಬಹು ರೂಢಿಯಾಗಿತ್ತೆಂದೂ ಪ್ರಾಯಕ್ಕೆ ಬಂದ ಯಾದವ ಹುಡುಗಿಯರು ಕೂಡ ಇಂಥ ಮದುವೆಯನ್ನೇ ಮೆಚ್ಚುತ್ತಿದ್ದರೆಂದೂ ಅರ್ಥವಾಗುತ್ತದೆ. ಶಾಸ್ತ್ರಜ್ಞರಲ್ಲಿ ಹಿರಿಯನೆನಿಸಿದ ಭೀಷ್ಮನೇ ಸ್ವಯಂವರ ಮಂಟಪದಿಂದ ಹುಡುಗಿಯರನ್ನು ಅಪಹರಿಸಿ ತಂದು ತಮ್ಮಂದಿರಿಗೆ ಮದುವೆ ಮಾಡಿದನಲ್ಲ!

ಇದರೊಡನೆ ಹೋಲಿಸಿದರೆ **ಪಾಣಿಗ್ರಹಣ, ಪರಿಣಯ** ಸೌಮ್ಯ ವಿಧಾನಗಳು. **ಪಾಣಿಗ್ರಹಣವೆಂದರೆ** ಕೈ ಹಿಡಿಯುವುದು ; **ಪರಿಣಯವೆಂದರೆ** ಸುತ್ತ ಕರೆದೊಯ್ಯುವುದು. ಇವೆರಡೂ ವಿವಾಹ ವಿಧಿಯ ಅಂಗಗಳನ್ನು ಸೂಚಿಸುತ್ತವೆ. ಹೋಮದ ಬೆಂಕಿಯ ಸುತ್ತ ವರನು ವಧುವನ್ನು ಕೈ ಹಿಡಿದು ಕರೆದೊಯ್ಯುವುದು ವೈದಿಕ ಕ್ರಮ. ಅದೇ ಸಪ್ತಪದಿ, ಪರಿಣಯ.

ಇಂಗ್ಲೀಷಿನಲ್ಲಿ wedding, marriage ಎಂಬ ಪದಗಳು ಪ್ರಚಲಿತವಾಗಿವೆ. Marriage ಶಬ್ದ ಲ್ಯಾಟಿನ್ನಿನಿಂದ ಫ್ರೆಂಚ್ ಮೂಲಕ ಇಂಗ್ಲೀಷಿಗೆ ಬಂದದ್ದು. Maris, mas ಅಂದರೆ **ಪುರುಷ** – ಆದ್ದರಿಂದ marriageಗೆ ಗಂಡನನ್ನು ಕೂಡಿಸಿ ಕೊಡುವುದು ಎಂಬ ಬಲು ಸೌಮ್ಯ ಅರ್ಥ ಹೊರಡುತ್ತದೆ. wedding ತುಸು ಹೆಚ್ಚು ಸ್ವಾರಸ್ಯವಾದದ್ದು. ಇದರ ಧಾತ್ವರ್ಥ **ಪಣತೊಡು, ಪಂಥವಿಡು** ಇತ್ಯಾದಿ. ಹೆಣ್ಣಿಗಾಗಿ ಗಂಡು ಪಣವಿಟ್ಟು ಅಂದರೆ **ಜಾಮೀನು** ಕೊಟ್ಟು (ಬಹುಶಃ ಅರ್ಥರೂಪದ್ದು), ಅಥವಾ ಇತರ ಉಮೇದ್ವಾರರೊಡನೆ ಮೇಲಾಟ ಹೂಡಿ ವಧುವನ್ನು "ಗೆದ್ದು" (ಏಲಂನಲ್ಲಿ ಗೆದ್ದಂತೆ) ತರುವುದು wedding. ಕನ್ಯಾಶುಲ್ಕ (ತೆರ)ವನ್ನೋ ಸ್ತ್ರೀಧನವನ್ನೋ (ಹೆಂಡತಿಯಾಗುವವಳಿಗೆ ಹಣ ಕೊಡುವುದು) ಕೊಟ್ಟು ಮದುವೆಯಾಗುವ ಪದ್ಧತಿಯನ್ನು ಇದು ಸೂಚಿಸುತ್ತದೆ. ನಮ್ಮ ಧರ್ಮಶಾಸ್ತ್ರಗಳು ಇದನ್ನು **ಆರ್ಷ** ವಿವಾಹವೆಂದು ಕರೆಯುತ್ತವೆ.

೧೫

**ದೇಶಾವರ**ದ ಪದ್ಧತಿ ಈಗ ಅಳಿಯುತ್ತಿದೆ. ಆದರೆ ನಮ್ಮ ಭಾಷೆಯಲ್ಲಿ ಇದು ಉಳಿದುಕೊಂಡಿದೆ. ಬಡ ಬ್ರಾಹ್ಮಣರ ಜೀವನೋಪಾಯಕ್ಕಾಗಿ ಊರೂರು ಸುತ್ತಿ ದಾತೃಗಳಿಂದ ಚಿಲ್ಲರೆ ಪಲ್ಲರೆ ವಂತಿಗೆ, ಸಹಾಯಧನ ಪಡೆಯುವುದು ದೇಶಾವರ. ಬಿಕ್ಕೆ ಬೇಡುವುದಕ್ಕಿಂತ ತುಸುವೇ ''ಮರ್ಯಾದೆ''ಯದಾದ ವೃತ್ತಿ ಇದು. ಯಜಮಾನರ ಮುಂದೆ ಮಾರುದ್ದ ಮೈಯನ್ನು ಗೇಣುದ್ದ ಮಾಡಿಕೊಂಡು ಹಲ್ಲು ಗಿಂಜುವುದು **ದೇಶಾವರಿ ನಗೆ**. ಎಲ್ಲ ದೀನ, ಸ್ವಾರ್ಥಪರ, ಕೃತಕ ನಗೆಗೆ ಈ ಹೆಸರು ಸಲ್ಲುತ್ತದೆ; ಆದರೆ **ದೇಶಾವರ** ಎಂದರೆ ಮೂಲತಃ ಏನು? ಇದು ನೋಡುವುದಕ್ಕೆ ಸಂಸ್ಕೃತದಂತೆ ಕಾಣುತ್ತದೆ. ವಾಸ್ತವಿಕವಾಗಿ ಹಾಗಿಲ್ಲ. ಬ್ರಹ್ಮಾವರ, ಮಾಯಾವರ ಇತ್ಯಾದಿಗಳಂತೆ ಇದು ಸ್ಥಳನಾಮವೂ ಅಲ್ಲ. ಇದು ಮರಾಠಿ ಶಬ್ದ. ಮಹಾರಾಷ್ಟ್ರದ ಕರಾವಳಿ ಜಿಲ್ಲೆಯಾದ ರತ್ನಾಗಿರಿ ಬಡ ಪ್ರದೇಶ. ಅಲ್ಲಿಯ ಬ್ರಾಹ್ಮಣರು ಕಡುಬಡವರು, ಚರಿತಾರ್ಥ ಸಾಗಿಸುವುದಕ್ಕೆ ಅವರಿಗೆ ಸಹ್ಯಾದ್ರಿ ಶ್ರೇಣಿ ದಾಟಿ ಹೋಗಿ ಅಲ್ಲಿ ಅನುಕೂಲವಂತರಿಂದ ತಿರುಪೆ ಎತ್ತಿ ತರುವುದು ಒಂದು ಮಾರ್ಗವಾಗಿತ್ತು. ಗಟ್ಟದ ಮೇಲಿನ ಪ್ರದೇಶವನ್ನು **ದೇಶ** ಎನ್ನುತ್ತಾರೆ. ಘಟ್ಟದ ಮೇಲೆ ಹೋಗುವುದಕ್ಕೆ ಅವರು **ದೇಶಾವರ ಜಾಣೇ** (''ದೇಶದ ಮೇಲೆ'' ಹೋಗುವುದು) ಎಂದು ಮರಾಠಿ ನುಡಿಕಟ್ಟಿಗನು ಸಾರವಾಗಿ ಹೇಳುತ್ತಿದ್ದರಂತೆ. ಅದೇ **ದೇಶಾವರ**ವಾಗಿ ಕರ್ನಾಟಕಕ್ಕೂ ದಾಟಿ ಭಾಷೆಯಲ್ಲಿ ಸೇರಿ ಹೋಗಿದೆ. ದೇಶಕ್ಕೆ ಪೇಶ್ವೆಗಳನ್ನೂ ಲೋಕಮಾನ್ಯ ತಿಲಕರನ್ನೂ ಕೊಟ್ಟ ರತ್ನಾಗಿರಿಯೇ ದೈನ್ಯದ ಪರಮಾವಧಿಯನ್ನು ಸೂಚಿಸುವ ಈ ಪದವನ್ನೂ ಕೊಟ್ಟಿತು!

ಹಳೆ ಕನ್ನಡದಲ್ಲಿ ಇದಕ್ಕೆ ಸಂವಾದಿಯಾಗಿ **ದೇಸಿಗ** ಎಂಬ ಪದವುಂಟು. ಈಗ ಪರದೇಶಿಗಳೆಂಬ ಶಬ್ದದಿಂದ ನಾವು ನಿರ್ಗತಿಕ ಜನರನ್ನು ನಿರ್ದೇಶಿಸುವಂತೆ ಹಿಂದೆ **ದೇಸಿಗ** ಪದದಿಂದ ಸೂಚಿಸುತ್ತಿದ್ದರು. ಈ ಅರ್ಥದಲ್ಲಿ ದೇಸಿಗ ಶಬ್ದದ ಪ್ರಯೋಗ 'ವಡ್ಡಾರಾಧನೆ' ಯಷ್ಟು (ಕ್ರಿ.ಶ. ೯ನೇ ಶತಮಾನ) ಹಳೆಯದು. ಊರೂರು ತಿರುಗಿ ಹೊಟ್ಟೆ ಹೊರೆಯುವ ದೇಸಿಗನ ವಿಚಾರ 'ವಡ್ಡಾರಾಧನೆ'ಯಲ್ಲಿ ಬಂದಿದೆ. ಸ್ವಾರಸ್ಯವೆಂದರೆ **ದೇಸಿಗ**ದ ಮೂಲವಾದ **ದೇಶಿಕ** ಎಂಬ ಸಂಸ್ಕೃತ ಶಬ್ದಕ್ಕೆ ಈ ಕೀಳು ಅರ್ಥ ಇಲ್ಲ. ಮಹಾಗುರು, ತತ್ತ್ವೋಪದೇಶಕ, ಪಂಡಿತ ಎಂಬ ಹಿರಿಮೆಯ ಅರ್ಥಗಳು ಸಂಸ್ಕೃತ **ದೇಶಿಕ**ಕ್ಕೆ ಇವೆ. ವೇದಾಂತ **ದೇಶಿಕ**ರು ಮಹಾ ಶ್ರೀವೈಷ್ಣವ ತತ್ತ್ವಜ್ಞಾನಿಗಳು. ದೇಶಸಂಚಾರಿ ಎಂಬ ಇನ್ನೊಂದರ್ಥ ಅದಕ್ಕಿದ್ದರೂ ಯಾಚಕ ಎಂಬ ಅರ್ಥ ಸಂಸ್ಕೃತದಲ್ಲಿ ಅದಕ್ಕೆ ಇಲ್ಲ.

ಇನ್ನು ದೇಶ ಶಬ್ದದಿಂದಲೇ ಹೊರಟ ಕನ್ನಡದ **ದೇಸಿ, ದೇಸಿಕಾರ, ದೇಸಿಕಾರ್ತಿ** ಶಬ್ದಗಳಿಗೆ ಮೇಲಿನ ಎರಡಕ್ಕಿಂತಲೂ ಭಿನ್ನವಾದ ಅರ್ಥಗಳು ಮೊಳೆತುಕೊಂಡಿವೆ. **ದೇಸಿ** ಎಂದರೆ ಒಂದು ದೇಶಕ್ಕೇ ವಿಶೇಷವಾದ ಮಾತಿನ, ಸಂಸ್ಕೃತಿಯ ಬೆಡಗು, ಸೊಗಸು. ಪಂಪ ತನ್ನ ಕಾವ್ಯದ **ದೇಸೆ**ತನವನ್ನು ಹೇಳಿಕೊಳ್ಳುತ್ತಾನೆ. **ದೇಸಿಕಾರ, ದೇಸಿಕಾರ್ತಿ**ಯೆಂದರೆ ಬೆಡಗುಗಾರ, ಬೆಡಗುಗಾರ್ತಿ ; ಒಟ್ಟಿನಲ್ಲಿ ಚೆಲುವ, ಚೆಲುವೆ.

ಶಬ್ದವ್ಯಾಪಾರದ ಗತಿ ನಿಜಕ್ಕೂ ಗಹನವಲ್ಲವೆ?

೧೬

ಒಂದು ವಿಶಿಷ್ಟ ಬಗೆಯ ಸೌಂದರ್ಯವನ್ನು ನಾವು **ಲಾವಣ್ಯ** ಎಂದು ಕರೆಯುತ್ತೇವೆ. ಹೆಚ್ಚಾಗಿ ಹೆಂಗಸಿನಲ್ಲಿರಬಹುದಾದ ಸೊಬಗು, ವಿಲಾಸ, ಮರ್ಯಾದೆ ಮೊದಲಾದ ಹಲವು ಗುಣಗಳ ಸಮ್ಮಿಲನವನ್ನು ಅದು ಸೂಚಿಸುತ್ತದೆ. ಆದರೆ ಈ ಪದದ ಮೂಲ ಅರ್ಥವೇನು ? ಮೇಲುನೋಟಕ್ಕೆ **ಲವಣ** (ಉಪ್ಪು)ದ ಭಾವ ಲಾವಣ್ಯ ಎನ್ನಬಹುದು. ಉಪ್ಪು ಖಾದ್ಯ ಪದಾರ್ಥಗಳಿಗೆ ಕೊಡುವ ವಿಶಿಷ್ಟ ರುಚಿಯ ಹೋಲಿಕೆ ಲಾವಣ್ಯದಲ್ಲಿದೆಯೆಂಬುದು ಅಸಂಗತವಲ್ಲ. ಆದರೂ ಉಪ್ಪಿನಂಥ ಕಟು ಪದಾರ್ಥದಿಂದ ಸ್ತ್ರೀಯರ ಅನಿರ್ವಚನೀಯ ಸೌಂದರ್ಯವನ್ನು ಧ್ವನಿಸಿರಬಹುದೇ ಎಂಬ ಸಂಶಯ ಬರುತ್ತದೆ. ಕೆಲ ನಿರುಕ್ತಿಕಾರರು **ಲವಣಕ್ಕೂ ಲಾವಣ್ಯಕ್ಕೂ** ಸಂಬಂಧವಿಲ್ಲ; ಅದು ರಮಣೀಯದ್ದೇ ಒಂದು ರೂಪಾಂತರ ಎಂದು ಹೇಳುವುದನ್ನು ಗಮನಿಸಬಹುದು. ವೈದಿಕ ಸಂಸ್ಕೃತದಲ್ಲಿ ರ ಕಾರವಿದ್ದಲ್ಲಿ ಮುಂದಿನ ಅಭಿಜಾತ ಸಂಸ್ಕೃತದಲ್ಲಿ **ಲ** ಕಾರ ಬರುವುದುಂಟು. ಉದಾಹರಣೆಗೆ ವೈದಿಕ ಸರಿರ ಅಭಿಜಾತ ಸಂಸ್ಕೃತದಲ್ಲಿ **ಸಲಿಲ**ವಾಗುತ್ತದೆ, ನನ್ನ ಮಟ್ಟಿಗೆ **ಲಾವಣ್ಯ ರಮಣೀಯತೆಯ** ರೂಪಾಂತರವೆಂಬುದೇ ಹೆಚ್ಚು ಯುಕ್ತವಾಗಿ ಕಾಣುತ್ತದೆ.

ಯಾವುದಾದರೊಂದು ಮಹತ್ವದ ಕೆಲಸಕ್ಕೆ ಪ್ರವೃತ್ತರಾಗುವಾಗ ಒಳ್ಳೇ **ಶಕುನ**ವಾಯಿತು ಅಥವಾ **ಅಪಶಕುನ**ವಾಯಿತು ಎನ್ನುತ್ತೇವೆ. ಮಂಗಲ ಕಾರ್ಯದ ನಡುವೆ ದೀಪ ನಂದಿದರೆ **ಅಪಶಕುನ**. ಬಲಗಣ್ಣು ಹಾರಿದರೆ **ಶುಭಶಕುನ** ಇತ್ಯಾದಿ. ಆದರೆ **ಶಕುನ** ಶಬ್ದದ ಮೂಲಾರ್ಥ **ಹಕ್ಕಿ** ಮತ್ತು **ಹಕ್ಕಿಯ ನುಡಿ** ಎಂದು. ನಸುಕಿನಲ್ಲಿ ಹಕ್ಕಿಯ ನುಡಿ ಕೇಳಿ 'ಅರ್ಥ' ಮಾಡಿಕೊಂಡು ಭವಿಷ್ಯ ಹೇಳುತ್ತ ತಿರುಗುವ ಬುಡುಬುಡಿಕೆಯವರು ಈಗಲೂ ಕಾಣಸಿಗುತ್ತಾರೆ. ಕಾರ್ಯಾರ್ಥವಾಗಿ ಹೊರಟಾಗ ಹಕ್ಕಿ ಎಡಕ್ಕೆ ಹಾರಿದರೆ ಕಾರ್ಯಹಾನಿ, ಬಲಕ್ಕೆ ಹಾರಿದರೆ ಕಾರ್ಯಸಿದ್ಧಿ ಇತ್ಯಾದಿಯಾಗಿ ಶಕುನಶಾಸ್ತ್ರ ಹೇಳುತ್ತದೆ. ಮೂಲದಲ್ಲಿ ಶುಭಾಶುಭ **ನಿಮಿತ್ತ**ವನ್ನು ಹಕ್ಕಿಯ ನಡೆನುಡಿಗಳಿಂದಲೇ ಹೇಳುತ್ತಿದ್ದರೆಂದೂ ಮುಂದೆ ಎಲ್ಲ ತರಹದ ನಿಮಿತ್ತಗಳಿಗೆ **ಶಕುನ**ವೆಂದೇ ಹೇಳುವುದು ರೂಢಿಯಾಯಿತೆಂದೂ ಸುಸಂಗತವಾಗಿ ತರ್ಕಿಸಬಹುದು.

ಈ ಶಬ್ದದ ಜಾಡು ಹಿಡಿದು ಹೋದರೆ ಮಾನವನ ಬಲು ಪ್ರಾಚೀನ, ಅಂದರೆ ಬೇಟೆಯಿಂದ ಬದುಕುವ ಯುಗದವರೆಗೂ ಹೋಗಬಹುದೆಂದು ತೋರುತ್ತದೆ. ಅರಣ್ಯದಲ್ಲಿ ಬೇಟೆಗೆ ಹೋಗುವವರಿಗೆ ಈಗಲೂ ಹಕ್ಕಿಗಳ ನಡೆ ನುಡಿ ಒಂದು ತರಹದ ಮಾರ್ಗಸೂಚಕವಾಗಿರುತ್ತದೆ. ಅವು ಅಡವಿಯ ಇತರ ಪ್ರಾಣಿಗಳಿಗೆ ಎಲ್ಲಕ್ಕಿಂತ ಮೊದಲು ಅಪಾಯದ ಎಚ್ಚರ ಕೊಡುತ್ತವೆ. ನುರಿತ ಬೇಟೆಗಾರ ಇದರ ಉಪಯೋಗ ಮಾಡಿಕೊಂಡು ತನ್ನ ಕಾರ್ಯದ ಸೋಲು ಗೆಲುವಿನ ಊಹೆಯನ್ನೂ ಕಟ್ಟಬಲ್ಲ. ಹೀಗೆ ಪ್ರಾಚೀನ ಮಾನವ **ಶಕುನ** ಅಥವಾ **ಶಕುನಿ**ಯ ವರ್ತನೆಗೆ ಒಂದು ಅಲೌಕಿಕ ಮಹತ್ವ ಕೊಡಲಾರಂಭಿಸಿದ್ದು ನಾಗರೀಕತೆಯ ಈ ಯುಗಕ್ಕೂ ಈ ನಂಬಿಕೆಗಳು ಇನ್ನೂ ವಿಸ್ತೃತ ರೂಪದಲ್ಲಿ ಮುಂದುವರಿದಿರಬಹುದು.

ಈ ಅರ್ಥದಲ್ಲಿ **ಶಕುನ** ಶಬ್ದ ಫಾರಸೀ ಭಾಷೆಗೂ ಹೋಗಿದೆ. ಅಲ್ಲಿ ಅದು **ಶಗೂನ** ಎಂಬ ರೂಪ ತಾಳಿದೆ. ಶಕುನ ಹೇಳುವವನನ್ನು **ಶಗೂನಿಯಾ** ಎಂದು ಆ ಭಾಷೆಯಲ್ಲಿ ಕರೆಯಲಾಗುತ್ತದೆ.

೧೭

ಒಂದು ಭಾಷೆಯಲ್ಲಿ ಸಂಬಂಧವಾಚಕ ಶಬ್ದಗಳು ಬಹಳ ಆದಿಕಾಲದವಾಗಿರುತ್ತವೆ. ಆ ಭಾಷೆ ಎಷ್ಟು ಕವಲೊಡೆದು ಎಷ್ಟು ದೂರದೂರ ಚದುರಿಹೋದರೂ ಸಂಬಂಧ ವಾಚಕಗಳು ಅಲ್ಪಸ್ವಲ್ಪ ವ್ಯತ್ಯಾಸಗಳೊಡನೆ ಹಾಗೆಯೆ ಉಳಿದುಬಿಡುತ್ತವೆ. ದ್ರಾವಿಡದ **ತಂದೆ, ತಾಯಿ, ಅಣ್ಣ, ತಂಗಿ, ಮಕ್ಕಳು** – ಮೊದಲಾದವು ಆ ವರ್ಗದ ಹೆಚ್ಚಿನ ಭಾಷೆಗಳಲ್ಲಿ ಹಾಗೆಯೇ ಉಳಿದುದು ಕಾಣುತ್ತದೆ. ''ಆರ್ಯ'' ಭಾಷೆಗಳಲ್ಲಿ **ಪಿತೃ, ಮಾತೃ, ಭ್ರಾತೃ** ಮೊದಲಾದವು ಅಟ್ಲಾಂಟಿಕ್ ತೀರದಿಂದ ಇರಾಣ, ಭಾರತದವರೆಗೆ ಸ್ವಲ್ಪ ಉಚ್ಚಾರಭೇದದೊಡನೆ ಉಳಿದುಕೊಂಡಿದೆ.

ಈ ಮೂಲ ಸಂಬಂಧವಾಚಿಗಳ ದೀರ್ಘಾಯುಷ್ಯ ಆಶ್ಚರ್ಯಕರವಲ್ಲ. ಆದರೆ ಅಷ್ಟು ಮೂಲಭೂತವಲ್ಲದ ಸಂಬಂಧವಾಚಿಗಳ ವ್ಯಾಪಕತೆ ಕೆಲವೊಮ್ಮೆ ಆಶ್ಚರ್ಯಕರವಾಗಿರುತ್ತದೆ. ಉದಾಹರಣೆಗೆ ಗಂಡ ಸತ್ತವಳನ್ನು ಸಂಸ್ಕೃತದಲ್ಲಿ **ವಿಧವಾ** ಎಂದು ಕರೆಯುತ್ತಾರಲ್ಲ. ಇದೇನು ಅಷ್ಟು ಮೂಲಭೂತ ಪದವಲ್ಲ. ಆದರೆ ಇದು ಇಂಗ್ಲೀಷಿನಲ್ಲಿ **ವಿಡೋ,** ಜರ್ಮನ್ ಭಾಷೆಯಲ್ಲಿ **ವಿತ್ವೇ,** ಪ್ರಾಚೀನ ಇಂಗ್ಲೀಷಿನಲ್ಲಿ **ವಿದೇವೇ,** ಪ್ರಾಚೀನ ಪಾರಸೀಕದಲ್ಲಿ **ವಿದುವಾ,** ಆಧುನಿಕ ಇರಾಣಿಯಲ್ಲಿ **ಬೇವಾ,** ಲ್ಯಾಟಿನ್ನಿನಲ್ಲಿ **ವಿದುವಾ** ಇತ್ಯಾದಿಯಾಗಿ ಕಾಣಿಸಿಕೊಳ್ಳುತ್ತದೆ. ಆಯಾ ಭಾಷೆಯ ನಿರುಕ್ತಿಕಾರರು ಈ ಶಬ್ದದ ನಿಷ್ಪತ್ತಿಯನ್ನು ಸ್ವಲ್ಪ ಬೇರೆಬೇರೆಯಾಗಿ ಹೇಳುತ್ತಾರಷ್ಟೇ. ಸಂಸ್ಕೃತದವರು **ವಿಧವಾ** ಶಬ್ದಕ್ಕೆ ವಿ (= ಇಲ್ಲ) **ಧವ** (= ಗಂಡ, ಒಡೆಯ) ಎಂದು ನಿರುಕ್ತಿ ಹೇಳಿದರೆ ಲ್ಯಾಟಿನ್ನಿನವರು ವಿದ್ = ಬೇರ್ಪಟ್ಟ ಎಂದಷ್ಟೇ ಹೇಳುತ್ತಾರೆ. ಸಂಸ್ಕೃತದ ದೃಷ್ಟಿಯಲ್ಲಿ ಕೂಡ ಈ ಬಗೆಯ ನಿರುಕ್ತಿ ಸಾಧ್ಯವಿದೆ. ವಿ (= ವಿಶೇಷವಾಗಿ) **ಧೂ** (= ನಾಶ ಹೊಂದು ತಪ್ಪಿಹೋಗು ಅರ್ಥಾತ್ ಬೇರ್ಪಟ್ಟು ಹೋಗು) ಎಂದು ವಿವರಿಸಬಹುದು.

ಸಂಬಂಧವಾಚಿಗಳ ದೀರ್ಘಾಯುಷ್ಯಕ್ಕೆ ನಾವು ಬೊಟ್ಟು ಕಚ್ಚುವಂತೆ ಕೆಲವೊಮ್ಮೆ ಅವು ಒಂದು ಭಾಷೆಯಿಂದ ಲೋಪವಾಗಿ ಬಿಡುವುದಕ್ಕೂ ಸೋಜಿಗಪಡಬೇಕಾಗುತ್ತದೆ ಸಂಸ್ಕೃತದಲ್ಲಿ ಮಗ, ಮಗಳು ಎನ್ನುವುದಕ್ಕೆ **ಪುತ್ರ, ಪುತ್ರಿ** ಎಂಬ ಶಬ್ದಗಳು ಬಹಳ ಕಾಲದಿಂದ ಬಳಕೆಯಲ್ಲಿವೆ. ಆದರೆ ಕೆಲ ಭಾಷಾ ಶಾಸ್ತ್ರಿಗಳ ಪ್ರಕಾರ ಇದು ಮೂಲತಃ ಸಂಸ್ಕೃತವಲ್ಲ, ಬಹುತರವಾಗಿ ದ್ರಾವಿಡದಿಂದ ಬಂದು ಸೇರಿಕೊಂಡು ಶಬ್ದ. ಮೂಲತಃ **ಸೂನು** ಮತ್ತು **ದುಹಿತೃ** ಎಂಬ ಪದಗಳು ಪುತ್ರ, ಪುತ್ರಿಗಳನ್ನು ಸೂಚಿಸುತ್ತಿದ್ದುವು. ವೇದದಲ್ಲೇ ಕಾಣಿಸುವ **ಸೂನು** ಶಬ್ದಕ್ಕೆ ಇಂಗ್ಲೀಷಿನಲ್ಲಿ **ಸನ್** (son) ಹಳೆ ಇಂಗ್ಲೀಷಿನಲ್ಲಿ **ಸುನು** (sunu) ಡಚ್‌ಭಾಷೆಯಲ್ಲಿ **ಝೂನ್** (zoon) ಜರ್ಮನ್ನಿನಲ್ಲಿ **ಸೋಹ್ನ್** (sohn) ಇತ್ಯಾದಿ ಪದಗಳು ಸಂವಾದಿಯಾಗಿವೆ. ಹಾಗೆಯೇ **ಮಗಳು** ಎಂಬರ್ಥದ ಸಂಸ್ಕೃತದ **ದುಹಿತೃ**ವಿಗೆ ಇಂಗ್ಲೀಷಿನ ಡಾಟರ್ (daughter), ಜರ್ಮನ್ನಿನ ತೋಖ್ಟರ್ (tochter), ಗ್ರೀಕಿನ ತೈಗತೀರ್ (thygather) ಇತ್ಯಾದಿಗಳಿವೆ. ಪುರಾತನ **ಸೂನು, ದುಹಿತೃ**ಗಳಿಗಿಂತ ಪರಭಾಷೆಯ **ಪುತ್ರ, ಪುತ್ರಿ** ಏಕೆ ಹೆಚ್ಚು ಬಳಕೆಗೆ ಬಂದುವೆಂದು ಹೇಳುವುದು ಕಷ್ಟ.

ಅಷ್ಟೇ ಆಶ್ಚರ್ಯಕರವೆಂದರೆ ಒಂದಕ್ಕೊಂದು ಸಂಪರ್ಕವೇ ಇಲ್ಲದ ದೂರಸ್ಥ ಭಾಷೆಗಳಲ್ಲಿ ಕೆಲ ಸಂಬಂಧವಾಚಕಗಳು ಇದ್ದುಬಿಡುವುದು. ದ್ರಾವಿಡ ಭಾಷೆಗಳಲ್ಲಿ **ಮಕ್** ಎಂಬುದು ಸಂತಾನಾರ್ಥಕ ಪದ. ಆದರಿಂದಲೇ **ಮಗ, ಮಗಳು, ಮಕ್ಕಳು** ಇತ್ಯಾದಿಗಳು

ಬಂದಿವೆ. ಆದರೆ ದ್ರಾವಿಡಕ್ಕೆ ಸಂಬಂಧವಿರದ ಆರ್ಯಗುಂಪಿನ ಪುರಾತನ ಕೆಲ್ಟಿಕ್ ಮತ್ತು ಅದರ ಇಂದಿನ ಉತ್ತರಾಧಿಕಾರಿಗಳಲ್ಲಿಯೂ mac ಎಂಬ ಪದ ಸಂತಾನಾರ್ಥಕವಾಗಿದೆ. Macdonald, Mackintosh ಇತ್ಯಾದಿ ಸ್ಕಾಟಿಶ್ ಅಡ್ಡ ಹೆಸರುಗಳಲ್ಲಿ ಅದು ತನ್ನ ಅಸ್ತಿತ್ವ ತೋರಿಸುತ್ತದೆ.

೧೮

**ರೈತ** ಶಬ್ದ ನಮ್ಮಲ್ಲಿ ಇಂದು ಎಷ್ಟು ವ್ಯಾಪಕವಾಗಿದೆಯೆಂದರೆ, ಅದನ್ನು ಅಚ್ಚ ಕನ್ನಡವೆಂದೇ ಭ್ರಮಿಸುವ ಸಂಭವವಿದೆ. ಸಾಮಾನ್ಯವಾಗಿ ಕೃಷಿಕ ಮತ್ತು ವಿಶೇಷವಾಗಿ ಗೇಣಿಗೆ ಜಮೀನು ಮಾಡುವವನೆಂದಾಗಲಿ ಕೆಲವು ಪ್ರದೇಶಗಳಲ್ಲಿ ಸ್ವತಂತ್ರವಾಗಿ ಸರಕಾರಕ್ಕೆ ಕಂದಾಯ ಕೊಟ್ಟು ಹೊಲಮಾಡುವ ಕೃಷಿಕನೆಂದಾಗಲಿ ಅದಕ್ಕೆ ಅರ್ಥಗಳು ಬಂದಿವೆ. **ರೈತವಾರಿ** ಎಂಬುದನ್ನು ಜಮೀನ್ದಾರಿಗೆ ವಿರುದ್ಧವಾದ ಆರ್ಥಿಕ ಸಂಬಂಧವನ್ನು ಸೂಚಿಸಲು ಬಳಸುವುದುಂಟು. ಹಿಂದೀ ಮುಂತಾದ ಉತ್ತರದ ಭಾಷೆಗಳಲ್ಲಿ ಈ ಪದ ಉಂಟು. ಆದರೆ ಪ್ರಾಚೀನ ಕೋಶಗಳಲ್ಲಿ ಇದನ್ನು ನಾವು ಕಾಣೆವು. ನಿಜಕ್ಕೂ ಇದು ಭಾರತದಲ್ಲಿ ಮುಸ್ಲಿಮ್ ಆಳಿಕೆಯದಾಗಿದೆ. ಅರಬ್ಬೀ ಭಾಷೆಯಲ್ಲಿ **ರಅಿಯ್ಯತ್** ಎಂದರೆ **ಅಧೀನ ಕೃಷಿಕ** ಅಥವಾ ಕೇವಲ **ಪ್ರಜೆ** ಎಂದರ್ಥ. ಪ್ರಧಾನವಾಗಿ ಕುರಿಗಾಹಿಗಳಿಗೆ ಅನ್ವಯಿಸುವ **ರಯಾ** ಶಬ್ದದಿಂದ ಅದು ಉದ್ಭವಿಸಿದೆ. ಅನಂತರದ ಕಾಲದಲ್ಲಿ ತಲೆ ತೆರಿಗೆಗೆ ಅರ್ಹನಾದ (ತುರ್ಕಿ ಸುಲ್ತಾನನ) ಮುಸ್ಲಿಮೇತರ ಪ್ರಜೆ ಎಂಬರ್ಥದಲ್ಲಿ ಅದು ಚಲಾವಣೆಗೆ ಬಂತು. ಬಹುಶಃ ಭಾರತದಲ್ಲಿಯೂ ಇದೇ ಅರ್ಥದಲ್ಲಿ – ಮುಸ್ಲಿಮ್ ರಾಜರ ಹಿಂದು ಪ್ರಜೆಗಳು – ಎಂಬುದರಿಂದ ಆರಂಭಿಸಿ ಅರ್ಥ ಸಂಕೋಚ ಹೊಂದಿ ಹಿಂದೂ ಕೃಷಿಕರಿಗೆ ಅದು ಅನ್ವಯಿಸಿರಬಹುದು. ಹಿಂದಿ ಬಂಗಾಲಿಗಳಲ್ಲಿ ಜಮೀನ್ದಾರರ ಒಕ್ಕಲುಗಳನ್ನು ಪ್ರಜಾ ಎಂದೂ ಕರೆಯುತ್ತಾರೆ. ಇಂಗ್ಲೀಷ್ ಭಾಷೆಯಲ್ಲಿ **ರೈತ** ಕ್ರಿ.ಶ. ೧೬೬೫ ರಲ್ಲಿ ಮೊದಲು ತಲೆಹಾಕಿತು.

ಮುಸ್ಲಿಮ್ ಆಳಿಕೆಯಲ್ಲಿ ವ್ಯಾವಹಾರಿಕ ಶಬ್ದಗಳು ಮಾತ್ರ ನಮ್ಮ ಭಾಷೆಗಳನ್ನು ಹೊಕ್ಕವೆಂದಲ್ಲ. ನಾವು ಚಿಕ್ಕವರಿದ್ದಾಗ್ಗೆ, ೪೦–೫೦ ವರ್ಷಗಳ ಹಿಂದೆ, ಹುಡುಗಿಯರು ಮೂಗಿನ ಮಧ್ಯದಿಂದ ಮೇಲ್ತುಟಿಯ ಮುಂದೆ ಜೋತಾಡುವ ಹರಳಿನ **ಬುಲಾಕು** ಎಂಬ ಆಭರಣವನ್ನು ಧರಿಸುತ್ತಿದ್ದರು. ಈ ಆಭರಣವಾಗಲಿ ಅದರ ಹೆಸರಾಗಲಿ ಕನ್ನಡದ್ದಂತೂ ಅಲ್ಲ, ಭಾರತೀಯ ಕೂಡ ಅಲ್ಲ. ಮೂಗಿನ ಯಾವ ಆಭರಣವೂ ಭಾರತೀಯವಲ್ಲ ಎಂದು ಸಂಶೋಧಕರು ಹೇಳುತ್ತಾರೆ. (ಪ್ರಾಚೀನ ಧಾರ್ಮಿಕ ವಿಧಿ ಗ್ರಂಥಗಳಲ್ಲಿ, ಶಿಲ್ಪಗಳಲ್ಲಿ, ಚಿತ್ರಗಳಲ್ಲಿ ಕಿವಿಯ ಆಭರಣ ಹೇಳಿದ್ದರೂ ಮೂಗಿನದು ಹೇಳಿಲ್ಲ.) ಅದು ಹೇಗೇ ಇರಲಿ **ಬುಲಾಕು** ತುರ್ಕಿ ಶಬ್ದ : ಹೆಂಗಸರು ಧರಿಸುವ ಮೂಗುತಿಯಲ್ಲಿ ಜೋತಾಡಿಸುವ ಮುತ್ತು ಎಂದು ಅದರ ಅರ್ಥವೆಂದು ಉರ್ದು ಕೋಶಗಳು ಹೇಳುತ್ತವೆ. ನಮ್ಮ ಆಭರಣಗಳ ಮೇಲೆ ಪ್ರಭಾವ ಬೀರುವಷ್ಟು ಮುಸ್ಲಿಮ್ ಸಂಸ್ಕೃತಿ ಇಲ್ಲಿ ಒಳಹೊಕ್ಕಿತ್ತು ಎಂದು ಈ ಶಬ್ದ ಸೂಚಿಸುತ್ತದೆ.

**ಬ್ಯಾಂಕಿಂಗ್** ಎಂದು ಕರೆಯುವ ಹಣದ ವ್ಯವಹಾರ ಭಾರತಕ್ಕೆ ಹೊಸದಲ್ಲ. ನಿಜ

ಕೇಳಿದರೆ ೧೮ನೆಯ ಶತಮಾನದಲ್ಲಿ ಭಾರತದ ಜಗತ್‌ಸೇಠರ ಹಣಕಾಸಿನ ವ್ಯವಹಾರದ ಕ್ರಮಗಳು ತತ್ಕಾಲದ ಯುರೋಪಿಯನ್ ಬ್ಯಾಂಕರರ ಪದ್ಧತಿಗಿಂತ ಎಷ್ಟೋ ಮುಂದುವರಿದವಾಗಿದ್ದವು. ಇಂದು ಅದೇ ಸಂಸ್ಥೆಗಳನ್ನು **ಬ್ಯಾಂಕು** ಎಂದು ಕರೆಯುತ್ತೇವೆ. ಇದು ದೇಶೀ ಶಬ್ದವಲ್ಲವೆಂದು ಮೊದಲ್ನೋಟಕ್ಕೆ ತಿಳಿಯುತ್ತದೆ. ಇದು ಬಂದದ್ದು ಯುರೋಪಿನಿಂದ. ಇಂಗ್ಲೀಷಿನಲ್ಲಿ bank, ಫ್ರೆಂಚಿನಲ್ಲಿ banque, ಇಟಲಿಯನ್ನಿನಲ್ಲಿ banca ಇತ್ಯಾದಿಯಾಗಿ ರೂಪ ಧರಿಸುವ ಈ ಶಬ್ದ ಜರ್ಮನಿಕ ಮೂಲದ್ದೆಂದು ಶಬ್ದಶಾಸ್ತ್ರಿಗಳು ಪತ್ತೆ ಹಚ್ಚಿದ್ದಾರೆ. ಆದರೆ ಇದರ ಅರ್ಥ ಮಾತ್ರ ಸ್ವಾರಸ್ಯವಾಗಿದೆ. ನಮಗೆ ಗೊತ್ತಿರುವ **ಬೆಂಚ್** (bench) ಶಬ್ದದ ಜ್ಞಾತಿಯಾದ ಅದರ ಅರ್ಥವೂ **ಬೆಂಚ್** ಅಂದರೆ ಉದ್ದನ್ನ **ಬೆಂಚು** ಎಂದೇ. ೧೫ನೇ ಶತಮಾನದಲ್ಲಿ ಹಣದ ವ್ಯವಹಾರ ಮಾಡುತ್ತಿದ್ದ ಯಹೂದ್ಯರು ಬೇರೆ ಬೇರೆ ಬೆಲೆಯ ನಾಣ್ಯಗಳನ್ನು ಒಂದು ಬೆಂಚಿನ ಮೇಲೆ ಇಟ್ಟುಕೊಂಡು ಕೊಡು ತೆಗೆದುಕೊಳ್ಳುವುದನ್ನು ಮಾಡುತ್ತಿದ್ದರು. ಆ ಬೆಂಚಿನ ಹೆಸರು ಇಡೀ ವ್ಯವಹಾರಕ್ಕೇ ಬಿತ್ತು; ಇಂಗ್ಲೀಷಿನಲ್ಲಿ ಅದು ಮೊತ್ತಮೊದಲು ಕ್ರಿ.ಶ. ೧೪೭೪ ರಲ್ಲಿ ಕಾಣಿಸಿಕೊಂಡಿತು.

## ೧೯

ಮನುಷ್ಯನ ಆದಿಮ ಅವಸ್ಥೆಯನ್ನು ನೆನವರಿಕೆಗೆ ತರುವ ಇನ್ನೊಂದು ಸಾಮಾನ್ಯ ಶಬ್ದ **ಮಾರ್ಗ**. ಈಗ ಅದರ ಅರ್ಥ **ದೊಡ್ಡ ರಸ್ತೆ** ಎಂದಾಗುತ್ತದೆ. **ರಾಜಮಾರ್ಗ** ಇತ್ಯಾದಿ ಪ್ರಯೋಗಗಳನ್ನು ನೋಡಬಹುದು. ಕಾವ್ಯ, ಸಂಗೀತಾದಿಗಳಲ್ಲಿ **ಮಾರ್ಗ** ಪೂರ್ವಪದವಾದರೆ (**ಮಾರ್ಗ** ಸಂಗೀತ, **ಮಾರ್ಗ** ಸಾಹಿತ್ಯ) ಅದು **ಜಾನಪದ** ಅಥವಾ **ದೇಶಿ**ಗಿಂತ ಹೆಚ್ಚು ನಾಗರೀಕ ಅಥವಾ ಶಾಸ್ತ್ರೀಯ ಅಥವಾ ಸುಸಂಸ್ಕೃತ (cultivated) ಎಂದು ಅಭಿಪ್ರಾಯವಾಗುತ್ತದೆ. ಮಾರ್ಗ ಎಂದರೆ ರೀತಿ, ವ್ಯವಸ್ಥೆ, ಸಂಪ್ರದಾಯ ಎಂದೂ ಅರ್ಥವಾಗುತ್ತದೆ. ಒಟ್ಟಿನಲ್ಲಿ ಮಾರ್ಗ ಶಬ್ದಕ್ಕೆ ಸಹಜಕ್ಕಿಂತ ಶಿಷ್ಟ ಎಂಬರ್ಥವೆ ಮುಖ್ಯವಾಗಿ ರೂಢವಾಗಿದೆ.

ಆದರೆ ಈ ಶಬ್ದದ ಮೂಲಕ್ಕೆ ಹೋದರೆ ಇದು ಮನುಷ್ಯನ ಪ್ರಯತ್ನದಿಂದಾಗದೇ ತಾನಾಗಿ ಆದ **ದಾರಿ**ಯನ್ನೇ ಸೂಚಿಸುತ್ತದೆ. ವಾಸ್ತವಿಕವಾಗಿ ಅಡವಿಯಲ್ಲಿ **ಮೃಗ**ಗಳು ಸಂಚರಿಸಿ ಮಾಡಿಕೊಂಡ **ಕಾಲ್ದಾರಿ**ಗಳೇ ಮೂಲತಃ ಮಾರ್ಗ ಎಂದು ಹೆಸರು ಪಡೆದಿರಬೇಕು. ಇಂಗ್ಲೀಷಿನ track ಶಬ್ದ ಸೂಚಿಸುವ ಅರ್ಥವನ್ನೇ **ಮಾರ್ಗ**ವೂ ಕೊಡುತ್ತಿರಬೇಕು. ಅರಣ್ಯದ ಪಶುಗಳು, ವಿಶೇಷವಾಗಿ ಜಿಗರೆ ಜಾತಿಯ ಪ್ರಾಣಿಗಳು ಋಗ್ವೇದದಲ್ಲಿ **ಮೃಗ** ಎನಿಸುತ್ತವೆ. ಅವುಗಳನ್ನು ಬೇಟೆಯಾಡುವವನು ಅಥರ್ವವೇದದಲ್ಲಿ **ಮೃಗಯು** ಎಂದು ಕರೆಯಲ್ಪಟ್ಟಿದ್ದಾನೆ. **ಮಾರ್ಗಣ** ಎಂದರೆ **ಬಾಣ**. ಮಹಾಭಾರತದಲ್ಲಿ ಈ ಅರ್ಥದಲ್ಲಿ ಆ ಶಬ್ದದ ಪ್ರಯೋಗವಾಗಿದೆ. ಹೀಗೆ ಬೇಟೆಯುಗದ ಶಬ್ದ **ಮಾರ್ಗ**, **ಮಾರ್ಗಣ**. ಪ್ರಾರಂಭದಲ್ಲಿ ಅಡವಿಯ ಪ್ರಾಣಿಗಳನ್ನು ಕೊಲ್ಲಲು ಬಳಸಿದ ಈ ಆಯುಧ ಮುಂದೆ ಎಲ್ಲ ಎಸೆಯುವ ಆಯುಧಗಳಿಗೂ ಅನ್ವಯಿಸಿತು.

ಸಂಸ್ಕೃತ ನಿರುಕ್ತಿಕಾರರು ಮಾರ್ಗಕ್ಕೆ ಕೊಡುವ ವ್ಯುತ್ಪತ್ತಿ ಮೇಲಿನ ವಿವೇಚನೆಗೆ ವಿರುದ್ಧವಾಗಿದೆ. ಅವರ ಪ್ರಕಾರ **ಮೃಗ್** ಧಾತುವಿನಿಂದ **ಮೃಗ** ಹುಟ್ಟಿದೆ. **ಮೃಗ್** ಅಂದರೆ

ಹುಡುಕು. ಬೇಟೆಗಾರ ಅದನ್ನು ಹುಡುಕಿ ಬೆನ್ನಟ್ಟುವುದರಿಂದ ಅದು **ಮೃಗ. ಮಾರ್ಗ್** ಅಂದರೂ ಹುಡುಕು, ಯತ್ನಿಸು. ಅದರಿಂದ **ಮಾರ್ಗ.** ಈ ಅರ್ಥವಿಧಾನ ಬಾಲದಿಂದ ತಲೆ ಕಡೆ ಹೋಗುವ ರೀತಿ ಎನಿಸುತ್ತದೆ. **ಮೃಗದಿಂದಲೇ ಮಾರ್ಗ್, ಮೃಗ್, ಮಾರ್ಗ** ಹುಟ್ಟಿರಬೇಕೆಂದು ಮೋನಿಯರ್ ವಿಲಿಯಮ್ಸ್ ಕೂಡ ಅಭಿಪ್ರಾಯ ಪಡುತ್ತಾನೆ. **ಮೃಗ** ಶಬ್ದ **ಮೃಗ್** ಧಾತುವಿನಿಂದ ಹುಟ್ಟಿದೆ. **ಉರಗ, ಖಗ, ಪನ್ನಗ** (ಹೊಟ್ಟೆಯಿಂದ ಸಾಗುವಂಥಾದ್ದು, ಆಕಾಶದಲ್ಲಿ ಸಾಗುವಂಥಾದ್ದು, ಕಾಲುಗಳಿಂದ ನಡೆಯದಂಥಾದ್ದು) ಮೊದಲಾದ ಪ್ರಾಣಿ ಜಾತಿಸೂಚಕ ಪದಗಳಂತೆ ಹುಟ್ಟಿರಬೇಕು. ನೆಲವನ್ನು ಗೊರಸುಗಳಿಂದ ಅಪ್ಪಳಿಸಿ ನಡೆಯುವ ಪ್ರಾಣಿಗಳೆಂಬುದರಿಂದ **ಮೃಗ** ಎಂಬುದಾಗಿ ಅವು ಕರೆಯಲ್ಪಟ್ಟಿರಬಹುದು. **ಮೃದ್** ಧಾತುವಿಗೆ ಮಣ್ಣು, ಒದ್ದು ನಡೆ ಇತ್ಯಾದಿ ಅರ್ಥಗಳಿವೆ.

ಬೇಟೆಗಾರ ಇಟ್ಟ **ಮಾರ್ಗ** ಎಂಬ ಹೆಸರು ರೀತಿ, ಕ್ರಮ, ಸಂಪ್ರದಾಯ ಇತ್ಯಾದಿಯಾಗಿ ಅರ್ಥವಿಸ್ತರಣೆ ಹೊಂದಿದ್ದು ಉಪನಿಷತ್ತಿನಲ್ಲಿ ಕಾಣಿಸುತ್ತದೆ. ನಡೆದು ಸವೆದ ದಾರಿ ಎಂಬುದರಿಂದ ಮಾರ್ಗ **ಸಂಪ್ರದಾಯಾರ್ಥಕ್ಕೆ** ಬೆಳೆದಿರಬಹುದು. ವಿಶೇಷವೆಂದರೆ ದಾರಿಯೆಂಬರ್ಥವುಳ್ಳ ಹೆಚ್ಚು ಕಡಿಮೆ ಎಲ್ಲ ಸಂಸ್ಕೃತ ಶಬ್ದಗಳೂ (ಪಥ, ಪದವಿ ಇತ್ಯಾದಿ) ಸಂಪ್ರದಾಯ, ರೀತಿ ಎಂಬರ್ಥವನ್ನು ಪಡೆದಿವೆ.

## ೨೦

ಭಾರತದ **ಸೀರೆ** ಜಗತ್ತಿನಲ್ಲೆಲ್ಲ ಜಯಭೇರಿ ಹೊಡೆಯುತ್ತಿದೆ. ಆದರೆ ಸೀರೆಯೆಂಬ ಶಬ್ದದ ಇತಿಹಾಸ ಏರಿಳಿತಗಳಿಂದ ಕೂಡಿದೆ. ಇಂದು ಅದು ಕೇವಲ **ಹೆಂಗಸರು ಉಡುವ** ಬಟ್ಟೆಯೆಂದು ಅರ್ಥ ಕೊಡುತ್ತದೆ. ಸಾಕಷ್ಟು ಪೌರುಷವಿಲ್ಲದವರಿಗೆ ಸೀರೆ ಉಟ್ಟುಕೊಂಡು ಬಾ ಅನ್ನುತ್ತೇವೆ. ಆದರೆ ಕೆಲವೇ ಶತಮಾನಗಳ ಹಿಂದೆ ಕೂಡ **ಗಂಡಸರುಡುವ** ಬಟ್ಟೆಗೂ ಸೀರೆಯೆಂದೇ ಹೆಸರಿತ್ತು. ಕುಮಾರವ್ಯಾಸ ಅದೇ ಅರ್ಥದಲ್ಲಿ ಅದನ್ನು ಎಲ್ಲೆಡೆ ಪ್ರಯೋಗಿಸಿದ್ದಾನೆ. ಆ ಮೇಲೆ ಅದು ಬರೇ ಹೆಂಗಸರ ಉಡುಗೆಗೆ ಮಾತ್ರ ಯಾಕೆ ಅನ್ವಯಿಸಿತೆಂದು ಗೊತ್ತಿಲ್ಲ. ಬಹುಶಃ ಗಂಡಸರ ಬಟ್ಟೆಗೆ **ಧೋತಿ** ಅಥವಾ **ಧೋತರ** ಎಂಬ ಪದ ಬಳಕೆಗೆ ಬಂದುದರಿಂದ **ಸೀರೆ** ಹೆಂಗಸರಿಗೇ ಮೀಸಲಾಯಿತು.

ಸೀರೆಯೆಂಬ ಪದ ಹೇಗೆ ಹುಟ್ಟಿತು? ಸಂಸ್ಕೃತ **ಚೀರ** ಶಬ್ದದ ತದ್ಭವ ಅದೆಂದು ಕೇಶಿರಾಜ ಗುರುತಿಸಿದ್ದಾನೆ. ವೈದಿಕ ಸಾಹಿತ್ಯದ ಕಡೆಕಡೆಗೆಯೇ ಸಂಸ್ಕೃತದಲ್ಲಿ **ಚೀರ** ಕಾಣಿಸುತ್ತದೆ. ತೈತ್ತಿರೀಯ ಅರಣ್ಯಕದಲ್ಲಿ **ಚೀರ** ಪದ ಉಂಟು. ಆಮೇಲೆ ಬೌದ್ಧ ಜೈನ ಪುರಾಣ ಸಾಹಿತ್ಯದಲ್ಲಿ ಅದು ಧಾರಾಳವಾಗಿದೆ. ತೈತ್ತಿರೀಯದಲ್ಲಿ ಅದರ ಅರ್ಥ ಉದ್ದವಾದ (ಹೊಲಿಯದ) ಬಟ್ಟೆ ಅಥವಾ ಹರಕು ಬಟ್ಟೆಯೆಂದಿತ್ಯಾದಿ ಇದೆ. ಆಮೇಲೆ ಬೌದ್ಧ ಜೈನ ಯತಿಗಳು ಉಡುವ ಅಥವಾ ಕಟ್ಟಿಕೊಳ್ಳುವ ಬಟ್ಟೆಯೆಂಬರ್ಥದಲ್ಲಿ ಅದು ಪ್ರಚಾರದಲ್ಲಿತ್ತು. ಇಂಥ ದೀನಾವಸ್ಥೆಯಿಂದ ಸೀರೆ ಜಗನ್ಮೋಹಕ ಸ್ತ್ರೀವಸ್ತ್ರವಾಗಿ ಮೇಲೇರಿ ಬಂದಿರುವುದು ಅದರ ಸೌಭಾಗ್ಯವಲ್ಲವೇ!

ಸೀರೆಗೆ ಇಂಗ್ಲೀಷಿನಲ್ಲಿ **ಸಾರಿ** (saree) ಎಂಬ ಪದ ರೂಢವಾಗಿದೆ. ಇದು ಹಿಂದಿಯ **ಸಾಡಿ** ಅಥವಾ **ಸಾಢಿಯ** ಮಗು. ಕ್ರಿ.ಶ. ೧೫೭೮ ರಲ್ಲಿ ಅದು ಬಂಗಾಲದಿಂದ ಇಂಗ್ಲೀಷಿಗೆ

ಹೊಕ್ಕಿತಂತೆ. **ಸಾಡಿ, ಸಾಢಿ** ಎಂಬುದು ಬಹುಶಃ ನಮಗೆಲ್ಲ ಪರಿಚಿತವಾದ **ಶಾಟ** ಎಂಬ ಸಂಸ್ಕೃತ ಪದದ ತದ್ಭವ ರೂಪ. **ಶಾಟ, ಶಾಟೀ** ಎಂಬ ರೂಪಗಳಲ್ಲಿ ವಸಿಷ್ಠ, ಚಾಣಕ್ಯ, ಬೌದ್ಧರ ದಿವ್ಯಾವದಾನ, ಮಹಾಭಾರತ ಮೊದಲಾದ ಪುರಾತನ ಗ್ರಂಥಗಳಲ್ಲೇ ಲಭ್ಯವಾಗುತ್ತವೆಂದು ಮೋನಿಯರ್ ವಿಲಿಯಮ್ಸನ ಕೋಶದಿಂದ ತಿಳಿಯುತ್ತದೆ. **ಶಾಟ**ಿಯಾದರೂ **ಚೀರ**ಕ್ಕಿಂತ ಸಿರಿತನವುಳ್ಳ ಪದವಲ್ಲ. ಸಂನ್ಯಾಸಿಗಳು, ವಿರಕ್ತರು, ಭಿಕ್ಷುಗಳು ಉಡುವ ಒರಟು ಬಟ್ಟೆಯೇ ಅದು. ಸಾಡಿಯಾಗಿ ಇಂಗ್ಲೀಷ್ ಭಾಷೆಯನ್ನು ಪ್ರವೇಶಿಸುವಷ್ಟರಲ್ಲಿ ಅದು ಮುಖ್ಯವಾಗಿ **ರೇಶ್ಮೆಯಲ್ಲಿ ನೇಯ್ದ** ಹೆಂಗಸರ (ಹೊಲಿಯದ) ಬಟ್ಟೆಯೆಂಬರ್ಥ ಪಡೆದಿತ್ತು.

**ಚೀರ** ಎಂಬುದು ಸಂಸ್ಕೃತದ **ಚಿ** (ಜೋಡಿಸು, ಸಂಗ್ರಹಿಸು ಇತ್ಯಾದಿ). ಧಾತುವಿನಿಂದ ಹುಟ್ಟಿರಬೇಕೆಂದು ಕೋಶಕಾರರು ಹೇಳುತ್ತಾರೆ. **ಶಾಟ** ಎಂಬುದು **ಶಟಾ** ಎಂಬುದರ ಜ್ಞಾತಿಯಾಗಿರಬಹುದು. **ಶಟಾ** ಎಂದರೆ ಯೋಗಿಗಳ ಜಡೆ ಕಟ್ಟಿದ ಕೂದಲು **ಜಟಾ** ಎಂದರೂ ಅದೇ. ಚೀರ, ಶಾಟಿ ಎರಡೂ ಪದಗಳು ಮೊದಲು **ಮರದ ತೊಗಟೆ**ಯಿಂದ ನೇಯ್ದ ನಾರುಡುಗೆಯೇ ಇರಬಹುದು.

ಹೆಂಗಸರ ಸೀರೆಗೆ ವಿಶಿಷ್ಟವಾದೊಂದು ಶಬ್ದ ಹಿಂದೆ ಕನ್ನಡದಲ್ಲಿ ಬಳಕೆಯಲ್ಲಿತ್ತು. ಅದೇ ಬಣ್ಣ. ಜನಪದ ಸಾಹಿತ್ಯದಲ್ಲಿ ಈ ಶಬ್ದ ಧಾರಾಳವಾಗಿ ಸಿಗುತ್ತದೆ. **ಬಣ್ಣ**ದ ಮೂಲ ಪದವಾದ **ವರ್ಣ**ಕ್ಕೆ ಸಂಸ್ಕೃತದಲ್ಲಿಯೂ **ಬಟ್ಟೆ, ಹೊದಿಕೆ** ಎಂಬ ಅರ್ಥಗಳಿವೆ. ಬಣ್ಣ ಹಾಕಿದ ಬಟ್ಟೆಗಳನ್ನು ಉಡುವವರು ಹೆಂಗಸರೇ ಆದುದರಿಂದ ಹೆಂಗಸರ ಉಡುಗೆಗೆ ಈ ಪದವೂ ಬೆಳ್ಳಗಿನ ಗಂಡಸರ ಉಡುಗೆಗೆ **ಧೋತ್ರ** ಎಂಬುದೂ ರೂಢಿಗೆ ಬಂದಿರಬಹುದು.

೨೧

ಒಂದರಿಂದೊಂದು ಬಹುದೂರದಲ್ಲಿ ಬೆಳವಣಿಗೆ ಹೊಂದಿದ, ಬೇರೆ ಬೇರೆ ಭಾಷಾ ಗುಂಪುಗಳಿಗೆ ಸೇರಿದ ಭಾಷೆಗಳಲ್ಲಿ ಒಂದು ಸಂಗತಿಯನ್ನು ಸೂಚಿಸುವುದಕ್ಕೆ ಇರುವ ಶಬ್ದಗಳ ಹಿಂದಿರುವ ಭಾವನೆಗಳು ಸೋಜಿಗವಾಗುವಷ್ಟು ಸಮಾನವಾಗಿರುವುದುಂಟು. ಒಂದು ಉದಾಹರಣೆ: ನಾವೀಗ **ಡಾಕ್ಟರ**ರೆಂದು ಕರೆಯುವ ರೋಗಚಿಕಿತ್ಸಕರಿಗೆ ಬೇರೆ ಬೇರೆ ಭಾಷೆಗಳಲ್ಲಿರುವ ಹೆಸರುಗಳು.

ಈ ಭಾವನೆಯನ್ನು ವ್ಯಕ್ತಪಡಿಸುವ ಸಂಸ್ಕೃತ ಶಬ್ದ **ವೈದ್ಯ**. ಅದರ ಮೂಲಾರ್ಥ ಶೋಧಿಸಿದರೆ ಸಂಸ್ಕೃತದ **ವಿದ್** ಧಾತುವಿಗೆ ತಲಪುತ್ತೇವೆ. ಅದರ ಅರ್ಥ **ಅರಿ** ಅಥವಾ **ತಿಳಿ** ಎಂದು. ಅಂದ ಮೇಲೆ ವೈದ್ಯ ಎಂದರೆ **ಅರಿತವನು, ಬಲ್ಲವನು** ಎಂದು ಮೂಲಾರ್ಥವಾಯಿತು. ಜ್ಞಾನದ ಅನೇಕ ಶಾಖೆಗಳಲ್ಲಿ ಬಲ್ಲವರಿದ್ದಾರೆ. ಆದರೆ ವೈದ್ಯನಿಗೆ ಮಾತ್ರ ಈ ಅನ್ವರ್ಥನಾಮ ಸಲ್ಲುವುದೇಕೆ? ಎಂಬ ಪ್ರಶ್ನೆ ಸದ್ಯ ಒತ್ತಟ್ಟಿಗಿರಲಿ. ಇನ್ನೊಂದು ಸೋಜಿಗ ನೋಡಿ, ದಕ್ಷಿಣದಲ್ಲಿ ವೈದ್ಯರನ್ನು **ಪಂಡಿತರು** ಎಂದು ಕರೆಯುತ್ತಾರೆ. ಪಂಡಿತರೆಂದರೂ **ಬಲ್ಲವರು, ವಿದ್ವಾಂಸರು** ಎಂದೇ ಅರ್ಥ. ಈ ಶಬ್ದವನ್ನು ವೈದ್ಯಕ್ಕಿಂತ ವ್ಯಾಪಕವಾದ ಕ್ಷೇತ್ರದಲ್ಲಿ ಬಳಸುತ್ತಾರೆ, ನಿಜ. ವಿದ್ವಾಂಸರನ್ನೆಲ್ಲ ಪಂಡಿತರು ಎಂದು ಕರೆಯಬಹುದು. ತರ್ಕ ಪಂಡಿತರು, ಭಾಷಾ ಪಂಡಿತರು ಇತ್ಯಾದಿ. ಆದರೂ ಬರೇ **ಪಂಡಿತರು**

ಬಂದರು ಎಂದರೆ ದಕ್ಷಿಣ ಭಾರತದಲ್ಲಿ ಸರ್‍ರನೆ ವೈದ್ಯರು ಬಂದರು ಎಂದೇ ಅರ್ಥ ಮಾಡುತ್ತೇವಲ್ಲದೆ ಮತ್ತಾವ ವಿಶಿಷ್ಟ ಪಂಡಿತರೆಂದಲ್ಲ.

ನೀವು ಬಂಗಾಲಕ್ಕೆ ಹೋದರೆ ಈ **ಪಂಡಿತರನ್ನು ಕವಿರಾಜರು** ಅನ್ನುತ್ತಾರೆ. ಇಂದು **ಕವಿ** ಎಂದರೆ ಪದ್ಯ ಕಟ್ಟುವವ ಎಂದೇ ಅರ್ಥವಾದರೂ ಪುರಾತನದಲ್ಲಿ **ಕವಿಯೂ ಬಲ್ಲವ, ಬುದ್ಧಿವಂತನೇ** ಆಗಿದ್ದ. ಗಣಪತಿಯನ್ನು 'ಕವಿಂ ಕವೀನಾಂ' ಕವಿಗಳಲ್ಲಿ ಕವಿ, ಅಂದರೆ **ಜಾಣರಲ್ಲಿ ಜಾಣ** ಎಂದೇ ವೇದ ಹೇಳುತ್ತದೆ. ಆದ್ದರಿಂದ ಬಂಗಾಲಿಗಳು ವೈದ್ಯನನ್ನು **ಕವಿರಾಜ** ಎಂದು ಕರೆಯತೊಡಗಿದಾಗ **ಬಲ್ಲವರಲ್ಲಿ ಶ್ರೇಷ್ಠನೆಂದೇ** ಅವನನ್ನು ಭಾವಿಸಿದರೆಂದಾಯಿತು. **ಕವಿಯೆಂದೇ** ಹೆಸರಿಸಲಾದ ಶುಕ್ರಾಚಾರ್ಯನು **ದೈತ್ಯರ ವೈದ್ಯನೂ** ಆಗಿದ್ದ.

ಈಗ ಒಂದು ಕ್ಷಣ ಭಾರತದ ಹೊರಗೆ ಕಣ್ಣು ಹಾಯಿಸುವಾ. ಮುಸ್ಲಿಮರೊಡನೆ ಇಲ್ಲಿಗೆ ಬಂದು ಒಕ್ಕಲಾದ **ಹಕೀಮರು** ಯುನಾನಿ, ತಿಬ್ಬಿ ಇತ್ಯಾದಿ ವಿದೇಶಿ ಸಂಪ್ರದಾಯಗಳ ವೈದ್ಯರು. **ಹಕೀಮ** ಎಂಬುದು ಅರಬ್ಬೀ ಶಬ್ದ. ಅದರ ಮೂಲಾರ್ಥವೂ **ಪಂಡಿತ, ಬಲ್ಲವ** ಎಂದೇ. ಅರಬ್ಬೀ ಭಾಷೆ ಆರ್ಯಭಾಷಾ ಗುಂಪಿಗಿಂತ ಭಿನ್ನವಾದ, ವ್ಯಾಕರಣ ಸ್ವರೂಪದಲ್ಲಿ ಸಂಬಂಧವಿಲ್ಲದ ಭಾಷೆ. ಆದರೂ ಚಿಕಿತ್ಸಕನನ್ನು ಕರೆಯಬೇಕಾದರೆ ಆ ಭಾಷೆಯ ಮೂಲ ಪುರಷರು **ಬಲ್ಲವನೆಂದು** ಅಭಿಧಾರ್ಥವುಳ್ಳ ಪದವನ್ನೇ ಆರಿಸಿದ್ದು ಆಶ್ಚರ್ಯವಲ್ಲವೇ ?

ಕೊನೆಯಲ್ಲಿ ಯುರೋಪಿಯನ್ ಆಕ್ರಮಣದ ಸಂಗಡ ಇಲ್ಲಿ ಬಂದ **ಡಾಕ್ಟರ್** ಅನ್ನು ವಿಮರ್ಶಿಸುವಾ. ಆಯುರ್ವೇದದವರಿರಲಿ, ಯುನಾನಿಯವರಿರಲಿ ತಮ್ಮನ್ನು **ಡಾಕ್ಟರ್** ಎಂದು ಕರೆದರೆ ಖುಶಿಯಾದಷ್ಟು ವೈದ್ಯ, ಹಕೀಮ ಎಂದು ಕರೆದರೆ ಇಷ್ಟ ಪಡುವುದಿಲ್ಲ. ಆದರೆ ಪಂಡಿತ, ವೈದ್ಯ, ಕವಿರಾಜ, ಹಕೀಮ ಅನ್ನಿಸಿಕೊಳ್ಳುವುದು ಪ್ರತಿಷ್ಠೆಗೆ ಸಾಲದೆಂದು ಭಾವಿಸುವ ಇವರು **ಡಾಕ್ಟರರಾದರೂ** ಶಬ್ದಾರ್ಥದ **ವಿಧಿ** ಅವರ ಬೆನ್ನು ಬಿಡುವುದಿಲ್ಲೆಂದು ತಿಳಿಯರು. ಏಕೆಂದರೆ **ಡಾಕ್ಟರ್** ಅಂದರೂ **ಬಲ್ಲವ, ಪಂಡಿತ, ವಿದ್ವಾಂಸ, ಉಪಾಧ್ಯಾಯ** ಎಂದೇ ಅರ್ಥ. ಅದು ಲ್ಯಾಟಿನ್ ಮೂಲದ ಪದ ಅಷ್ಟೇ.

ಬಹುಭಾಷೆ ಬಹುದೇಶಗಳಲ್ಲಿ ಈ ವೃತ್ತಿ ಮಾಡುವವರಿಗೆ ಒಂದೇ ಅರ್ಥಾಶಯದ ಅಭಿಧಾನವಿರುವುದು ಬಹುಶಃ ಮಾನವನ ನಾಗರಿಕತೆಯ ಆದಿಯ ದಿನಗಳ ಪಳೆಯುಳಿಕೆಯಾಗಿದೆ. ಇಂದಿಗೂ ಬುಡಕಟ್ಟಿನ ಜನಾಂಗಗಳಲ್ಲಿ ಕುಲದ **ಬುದ್ಧಿವಂತನೇ** ರೋಗದ ಚಿಕಿತ್ಸಕನೂ ಆಗಿದ್ದಾನೆ.

## ೨೨

**ಅಪ್ಪ** ಅಂದರೆ ತಂದೆ, **ಅಮ್ಮ** ಅಂದರೆ ತಾಯಿ ಎಂಬುದು ನಮ್ಮ ಭಾಷಾ ಪ್ರಜ್ಞೆಯಲ್ಲಿ ಎಷ್ಟು ರೂಢವಾಗಿದೆಯೆಂದರೆ ಅವು ತಿರುಗುಮುರುಗಾಗಿರಬಲ್ಲವೆಂಬುದು ಊಹೆಗೂ ನಿಲುಕದ ಮಾತಾಗಿಬಿಟ್ಟಿದೆ. ಈ ಭಾವನೆ ಸ್ವಾಭಾವಿಕವೆ. ಜಗತ್ತಿನ ಅನೇಕ ಭಾಷೆಗಳಲ್ಲಿ **ಅಪ್ಪ, ಅಬ್ಬ, ಪಾ** ಎಂಬುವು ತಂದೆಯನ್ನೂ **ಅಮ್ಮ, ಮಾ** ಇತ್ಯಾದಿಗಳು ತಾಯಿಯನ್ನೂ ಸೂಚಿಸುತ್ತವೆ. ಮಗು ಮಾತು ಕಲಿಯುವ ಮೊದಲೇ ಕೇವಲ ತುಟಿಗಳನ್ನು ಜೋಡಿಸಿ ಬಿಡುವ ಮೂಲಕ ಮೊದಲು ಹೊರಡಿಸುವ ಧ್ವನಿ **ಮಕಾರವೇ**; ಅದು ಮಗುವಿನ ಅತಿ ಹತ್ತಿರದ ವ್ಯಕ್ತಿಯಾದ ತಾಯಿಗೂ ತುಟಿಗಳನ್ನು ಬಿಡಿಸಿಬಿಡುವುದರಿಂದಲೇ ಉಂಟಾಗುವ

ಪಕಾರ ಬಕಾರ ತಂದೆಗೂ ಅನ್ವಯಿಸುವುದು ಸುಸಂಗತವೇ ಸೈ.

ಆದರೆ ಭಾಷೆಗಳ ವಿಷಯದಲ್ಲಿ ಸುಸಂಗತಿ–ಅಸಂಗತಿಗಳು ಯಾವಾಗಲೂ ಅನ್ವಯಿಸುತ್ತವೆಂದು ಹೇಳಲುಬಾರದು. ಆದ್ದರಿಂದ ಕೆಲವೇ ಶತಮಾನಗಳ ಹಿಂದೆ ನಮ್ಮ ಕನ್ನಡದಲ್ಲಿ **ಅಮ್ಮ** ಎಂಬುದು ತಂದೆಯನ್ನು ಸೂಚಿಸುತ್ತಿತ್ತೆಂದರೆ ಆಶ್ಚರ್ಯಪಡಬೇಕಾಗಿಲ್ಲ. ಅತಿ ಪ್ರಾಚೀನ ಶಾಸನಗಳಿಂದಾರಂಭಿಸಿ ಷಟ್ಪದೀಕಾವ್ಯಗಳ ಕಾಲದ ಆರಂಭದವರೆಗೂ **ಅಮ್ಮ** ಅಂದರೆ ಅಪ್ಪನೇ ಆಗಿದ್ದದ್ದು ಕವಿರಾಜಮಾರ್ಗ, ವಡ್ಡಾರಾಧನೆ, ಪಂಪ, ರನ್ನ ಇತ್ಯಾದಿಗಳಲ್ಲೆಲ್ಲ ಕಾಣಿಸುತ್ತದೆ. ಆದರೆ ಕುಮಾರವ್ಯಾಸನ ಕಾಲಕ್ಕಾಗಲೇ **ಅಮ್ಮ** ಎಂಬುದು ತಾಯಿಗೆ ಅನ್ವಯಿಸತೊಡಗಿತ್ತು. ತುಳು ಹೊರತು ನೆರೆ ದ್ರಾವಿಡ ಭಾಷೆಗಳಲ್ಲಿ ಅಮ್ಮ ಎಂಬುದು ತಾಯಿಯನ್ನು ಸೂಚಿಸುತ್ತದೆ. ತುಳುವಿನಲ್ಲಿ ಮಾತ್ರ ಇಂದಿಗೂ **ಅಮ್ಮೆ** ಅಂದರೆ ತಂದೆ, **ಅಪ್ಪೆ** ಅಂದರೆ ತಾಯಿ. ಕನ್ನಡದಲ್ಲಿ ಕೂಡ ಹಳೇ ಮೈಸೂರು ಪ್ರದೇಶದಲ್ಲಿ ಆಡುನುಡಿಯಲ್ಲಿ ಗಂಡಸರನ್ನೂ **ಏನಮ್ಮಾ** ಎಂದು ಗೆಳೆತನ ಅಥವಾ ನಸು ವಿನೋದದಲ್ಲಿ ಸಂಬೋಧಿಸುವುದು ಇಂದಿಗೂ ಇದೆ. ಮೊದಲ ನೋಟಕ್ಕೆ ಇದು ಗಂಡನ್ನು ಹೆಣ್ಣಿನಂತೆ ಸಂಬೋಧಿಸುವ ಲೇವಡಿ ಮಾತೆಂಬ ಭ್ರಮೆ ತಂದರೂ ನಿಜಕ್ಕೂ ಅದು ಹಳೆಗನ್ನಡದ ಅವಶೇಷವಾಗಿರಬೇಕು. ಹಳೆಗನ್ನಡದಲ್ಲಿ **ಅಮ್ಮನೇ ಅಪ್ಪ**ನಾಗಿದ್ದರೆ ತಾಯಿಯನ್ನು ಹೇಗೆ ಸಂಬೋಧಿಸುತ್ತಿದ್ದರು ? ಉತ್ತರ ಕರ್ನಾಟಕದಲ್ಲೆಲ್ಲ ಇಂದಿಗೂ ಪ್ರಚಲಿತವಾಗಿರುವಂತೆ ಆಗ ತಾಯಿ **ಅವ್ವೆ**ಯಾಗಿದ್ದಳು (ಇಂದು ಅದು **ಅವ್ವ** ಎಂದಾಗಿದೆ ಅಷ್ಟೇ.) ಇದರದೇ ಒಂದು ರೂಪಾಂತರವಾದ **ಅಬ್ಬೆ** ಹವೀಕ, ಕೋಟ ಮೊದಲಾದ ಕನ್ನಡ ಉಪಭಾಷೆಗಳಲ್ಲಿ ಇಂದಿಗೂ ಉಳಿದಿದೆ. ಈ ರೂಪವು ತುಂಬ ಪ್ರಾಚೀನವಾದದ್ದು. ಇತರ ದ್ರಾವಿಡ ಭಾಷೆಗಳಲ್ಲಿ ಕೂಡ **ಅವ್ವೆ** ತಾಯಿಯಾಗಿದ್ದಾಳೆ. ತುಳುವಿನ **ಅಪ್ಪೆ** ಮೂಲತಃ ಕನ್ನಡದ ಈಗಿನ **ಅಪ್ಪ** ಆಗಿರದೆ **ಅಬ್ಬೆ**ಯದೇ ಉಚ್ಚಾರಭೇದವಾಗಿರಬಹುದು.

ಉತ್ತರ ಕರ್ನಾಟಕದಲ್ಲಿ ಇನ್ನೊಂದು ವೈಚಿತ್ರ್ಯವನ್ನು ಕಾಣುತ್ತೇವೆ. ಅಲ್ಲಿ **ಅಮ್ಮ** ಎಂಬುದು ತಂದೆಯೆಂಬರ್ಥ ಕಳೆದುಕೊಂಡಿದ್ದರೂ ತಾಯಿ ಎಂಬ ಅರ್ಥ ಸಂಪಾದಿಸಿಲ್ಲ; ಬದಲಿಗೆ ಅದು **ಅಜ್ಜಿ**ಯನ್ನು ಸೂಚಿಸುತ್ತದೆ. ಯಾವ ತರ್ಕದಿಂದ ಅದು ಹೀಗೆ ಅರ್ಥಾಂತರ ಹೊಂದಿತೋ ಹೇಳುವುದು ಕಷ್ಟ. ಆದರೆ ಅಲ್ಲಿ ಅದು ಬ್ರಾಹ್ಮಣರಲ್ಲಿ **ವಿಧವೆ** ಎಂಬರ್ಥವನ್ನೂ ಸೂಚಿಸುತ್ತದೆಂಬುದಕ್ಕೆ ತನ್ನದೇ ತರ್ಕ ಸಾಂಗತ್ಯ ಇರಬಹುದು. **ಅಮ್ಮ** ಅಂದರೆ **ಅಜ್ಜಿ**, **ಅಜ್ಜಿ** ಅಂದರೆ ವಯಸ್ಸಾದವಳು. ವಯಸ್ಸಾದ ಹೆಂಗಸರು ವಿಧವೆಯರಾಗಿರುವ ಸಂಭವ ಬಹಳ; ಆದ್ದರಿಂದ **ಅಮ್ಮ** ಹೆಂಗಸು ಅಂದರೆ **ವಿಧವೆ**. ಬ್ರಾಹ್ಮಣರಲ್ಲಿ ವಿಶೇಷವಾಗಿ ತಲೆ ಬೋಳಿಸಿದ ಹಳೆಗಾಲದ ವಿಧವೆ **ಅಮ್ಮ**. ಇದೂ ಅಂಥ ಅಪರೂಪ ತರ್ಕವಲ್ಲ. ದಕ್ಷಿಣ ಕನ್ನಡದಲ್ಲಿ **ಅಜ್ಜಿ ಹೆಂಗಸು** ಅಂದರೆ (ತರುಣಳೇ ಇರಬಹುದಾದರೂ) ತಲೆ ಬೋಳಿಸಿದ ವಿಧವೆ.

೨೩

ಆಧುನಿಕ ಡಿನ್ನರ್ ಪಾರ್ಟಿಗಳಲ್ಲಿ **ಸೂಪ್** (soup) ಎಂಬೊಂದು ವ್ಯಂಜನ ಜನಪ್ರಿಯವಾಗಿದೆ. ಕನ್ನಡದಲ್ಲಿ ಇದಕ್ಕೆ ಸಾರು ಅಥವಾ **ತೋವೆ**ಯೆನ್ನಬಹುದು. **ಸೂಪ್**

ಮಾಂಸದ್ದಾಗಲಿ ಶಾಕಗಳದ್ದಾಗಲಿ ಇರಬಹುದು.

ಈ **ಸೂಪು** ಭಾರೋಪ್ಯ (ಭಾರತೀಯ–ಯೌರೋಪ್ಯ) ಕುಲಗಳ ಪ್ರಾಚೀನ ವ್ಯಂಜನಗಳಲ್ಲಿ ಒಂದಾಗಿದೆ. ಇಂಗ್ಲೀಷಿಗೆ ಫ್ರೆಂಚಿನಿಂದ ಬಂದ ಈ ಪದಕ್ಕೆ ಸಂಸ್ಕೃತದಲ್ಲಿ **ಸೂಪ** ಎಂಬ ಜ್ಞಾತಿ ಪದವೇ ಸಿಗುತ್ತದೆ. ಈ ಮೇಲೋಗರ ಭಾರತೀಯಾರ್ಯರ ಊಟದಲ್ಲಿ ಎಷ್ಟು ಮಹತ್ವದ್ದೆಂದರೆ ಅಡುಗೆಯ ಶಾಸ್ತ್ರಕ್ಕೆ **ಸೂಪಶಾಸ್ತ್ರ**ವೆಂದೇ ಹೆಸರಿದೆ. ಅದರ ಶುದ್ಧ ಶಾಕಾಹಾರಿ ಪ್ರತಿರೂಪವಾದ **ತೋವೆ** (ಹೆಸರು ಅಥವಾ ತೊಗರಿ ಬೇಳೆಯದು) ನೈವೇದ್ಯಕ್ಕೆ ಅತ್ಯವಶ್ಯವೆಂದು ಭಾವಿಸಲ್ಪಡುತ್ತದೆ.

ಯುರೋಪಿನಲ್ಲಿ **ಸೂಪ**ಕ್ಕೆ ಫ್ರೆಂಚ್, ಸ್ಪಾನಿಶ್, ಇಟಾಲಿಯನ್, ಫ್ಲೆಮಿಷ್, ಡಚ್ ಭಾಷೆಗಳಲ್ಲಿ ಹೋಲಿಕೆಯ ಪದಗಳಿವೆ. ಹಳೇ ಫ್ರೆಂಚಿನಲ್ಲಿಯೂ ಈ ಶಬ್ದ ಸಿಗುವುದರಿಂದ ಅಲ್ಲಿಯೂ ಈ ಮೇಲೋಗರ ಪ್ರಾಚೀನವೇ ಸೈ.

**ಸೂಪ** ದ್ರವ ಪದಾರ್ಥವೆಂದ ಮೇಲೆ ಅದನ್ನು ಬಡಿಸಲು ಅಥವಾ ಎತ್ತಿ ಸುರಿಯಲು ಏನಾದರೂ ಸಾಧನ ಬೇಕಲ್ಲ. ಅದಕ್ಕೂ ಭಾರೋಪ್ಯ ಭಾಷೆಗಳಲ್ಲಿ ಒಂದು ಪ್ರಾಚೀನ ಪದವಿದೆ. ಅದೇ **ಚಮಚ**. **ಚಮಚಾ** ಎಂಬುದು ಭಾರೋಪ್ಯ ಭಾಷಾ ವರ್ಗಕ್ಕೆ ಸೇರಿದ ಫಾರಸಿ (ಇರಾಣಿ) ಭಾಷೆಯಿಂದ ಬಂದದ್ದು. ಸಂಸ್ಕೃತದಲ್ಲಿ ಅದೇ **ಚಮಸ**ವಾಗಿದೆ. ಇದೂ ಪ್ರಾಚೀನ ಶಬ್ದ. ಯಜ್ಞಗಳಲ್ಲಿ ಸೋಮರಸ ಕುಡಿಯುವ **ಸವುಟು** ಇದು. ಸಂಸ್ಕೃತ ಕೋಶಗಳ ಪ್ರಕಾರ **ಚಮಿಸು** (= ಸುರಿಯುವುದು)ವುದಕ್ಕೆ ಬಳಸುವ ಉಪಕರಣ **ಚಮಸ**. ಸಾಮಾನ್ಯವಾಗಿ ಇದನ್ನು ಮರದಿಂದ ಮಾಡುತ್ತಿದ್ದರು. ಯಜ್ಞಗಳಲ್ಲಿ **ಚಮಸ**ಗಳ ವ್ಯವಸ್ಥೆ ನೋಡಿಕೊಳ್ಳುವುದಕ್ಕೆ **ಚಮಸಾಧ್ವರ್ಯು** ಎಂಬವನು ಇರುತ್ತಿದ್ದನು. ಋಗ್, ಅಥರ್ವ ವೇದಗಳಲ್ಲಿಯೇ ಈ ಶಬ್ದ ಸಿಗುವುದರಿಂದ **ಚಮಸ** ಬಹು ಪುರಾತನ ಉಪಕರಣ. ಈಗ ನಾವು ಬಳಸುವ **ಚಮಚಾ** ವಿದೇಶದಿಂದ ಬಂದದ್ದಾದರೂ ಅದರ ಪ್ರಾಚೀನತಮ ಬಳಕೆ ಭಾರತದಲ್ಲೇ ಇತ್ತು.

ಪ್ರಾಚೀನದಿಂದ ಅರ್ವಾಚೀನಕ್ಕೆ ಬರುವುದಾದರೆ ಈಗ ಅರ್ಧ ಶತಮಾನದ ಹೋಟೇಲುಗಳ ವಿಸ್ತರಣೆಯಿಂದಾಗಿ ಎಲ್ಲರಿಗೂ ಪರಿಚಿತವಾಗಿರುವ **ಶಿರಾ** ಎಂಬ ಸಿಹಿ ಸಜ್ಜಿಗೆಯನ್ನು ವಿಚಾರಿಸಬಹುದು. ನಾನು ಹುಡುಕಿದ ಮಟ್ಟಿಗೆ ಇದರ ಪ್ರಾಚೀನ ಉಲ್ಲೇಖಗಳು ಸಿಗುವುದಿಲ್ಲ. ೧೯೫೦ರಲ್ಲಿ ತಿದ್ದಿ ಬೆಳಸಿ ಪ್ರಕಟವಾದ ಹಿಂದೀಕೋಶದಲ್ಲಿ ಅದು ಇಲ್ಲ. ಶಬ್ದ ಸಂಶೋಧಕರಾದ ನನ್ನ ಒಬ್ಬ ಮಿತ್ರರ ಪ್ರಕಾರ ಅದು ಮರಾಠಿಯಿಂದ ಕನ್ನಡಕ್ಕೆ ಬಂದಿದೆ. ಮರಾಠಿ ವ್ಯುತ್ಪತ್ತಿಕಾರರು ಕೆಲವರು ಅದನ್ನು 'ಶ್ರೀ' ಧಾತುವಿಗೆ ಗಂಟುಹಾಕಲು ಯತ್ನಿಸಿದ್ದುಂಟಂತೆ. ಇದನ್ನು ಒಪ್ಪುವುದಕ್ಕಿಂತ ಕನ್ನಡದ **ಸಿಹಿರವಾ** ಎಂಬುದೇ ಶಿರಾ ಆಯಿತೆಂದೊಪ್ಪುವುದು ಸುಲಭ. ಆದರೆ ಉರ್ದು ಕೋಶಗಳಲ್ಲಿ **ಶೀರ್**, **ಶೀರೀಂ**, **ಶೀರೀನೀ** ಎಂಬ ಫಾರಸಿ ಪದಗಳು ಸಿಗುತ್ತವೆ. ಇವುಗಳ ಅರ್ಥಗಳು ಕ್ರಮವಾಗಿ ಹಾಲು (ಸಂ. ಕ್ಷೀರ), ಮಧುರ, ಮಾಧುರ್ಯವುಳ್ಳದ್ದು ಎಂದಿವೆ. **ಶೀರಾ** ಅಂದರೆ ಸಕ್ಕರೆ ಪಾಕವೂ ಹೌದು. ಹೀಗೆ **ಶೀರಾ ರವಾ** ಅಥವಾ **ಶೀರೀನೀ ರವಾ** ಎಂದು ಪ್ರಾರಂಭವಾಗಿ ಉತ್ತರಪದ ಲೋಪದಿಂದ **ಶೀರಾ** ಅಷ್ಟೇ ಉಳಿದಿದೆಯೆಂದು ಕಾಣುತ್ತದೆ.

೨೪

**ತಿನ್ನುವುದು** ಅಂದರೆ ಗಟ್ಟಿಯಾದ ಪದಾರ್ಥವನ್ನು ಬಾಯಲ್ಲಿ ಹಾಕಿಕೊಂಡು ಜಗಿದು ನುಂಗುವುದು ಎಂಬ ತಾತ್ಪರ್ಯವಾಗುತ್ತದೆ. **ಕುಡಿಯುವುದು** ಅಂದರೆ ದ್ರವ ಪದಾರ್ಥದ ಸೇವನೆ. ಆದ್ದರಿಂದ ನಾವು ಚಕ್ಕುಲಿ **ತಿನ್ನುತ್ತೇವೆ**; ನೀರು **ಕುಡಿಯುತ್ತೇವೆ**. ಕನ್ನಡದವರಾದ ನಾವು **ನೀರು ತಿನ್ನುವುದಿಲ್ಲ**. ಆದರೆ ನಮ್ಮ ನೆರೆಯವರಾದ ತಮಿಳರು ಹಾಗಲ್ಲ. ಅವರ ಭಾಷೆಯಲ್ಲಿ **ಕುಡಿ** ಎಂಬ ಧಾತು ಇದ್ದರೂ ಅವರು **ತಣ್ಣಿ ಶಾಪಟ್ರದು** (ನೀರು ತಿನ್ನುವುದು – **ಶಾಪಾಟ್** = ಊಟ) ಎನ್ನುತ್ತಾರೆ. ಆದರೆ ಹೀಗೆ ನೀರೂಟಮಾಡುವವರು ಅವರು ಮಾತ್ರವಲ್ಲ, ಉತ್ತರದ ನಮ್ಮ ಬಂಗಾಲಿ ಬಂಧುಗಳು ಕೂಡ **ಜಲಖಾವಾ** (ನೀರು ತಿನ್ನುವುದು – ಖಾ = ತಿನ್ನು ಉಣ್ಣು) ಮಾಡುತ್ತಾರೆ. ತಮಾಷೆ ಆಗಿಲ್ಲವೆ?

ಅಷ್ಟೇನೂ ತಮಾಷೆ ಆಗಿಲ್ಲ. ಏಕೆಂದರೆ ಕನ್ನಡದಲ್ಲೇ ತಿನ್ನುವುದಕ್ಕೆ ಸಮಾನಾರ್ಥಕವೆಂದು ಬಗೆಯುವ **ಉಣ್ಣು** ಧಾತು ತೆಗೆದುಕೊಂಡರೆ ನಮ್ಮ ಕೂಸುಗಳು **ಹಾಲುಣ್ಣುತ್ತವೆ**; ನಮ್ಮ ಗದ್ದೆಗಳು **ನೀರುಣ್ಣುತ್ತವೆ**; ಅದಕ್ಕೂ ವಿಶೇಷವೆಂದರೆ ನಮ್ಮ ತೋಟದ ಹಣ್ಣುಗಳು **ಬಿಸಿಲು ಉಣ್ಣುತ್ತವೆ**. ಹೀಗೆ ತಿನ್ನುವುದಕ್ಕೆ **ಉಣ್ಣು** ಇಲ್ಲವೇ **ಅನುಭವಿಸು** ಎಂಬ ವಿಶಾಲಾರ್ಥವೊಂದು ರೂಪುಗೊಂಡಿದೆ. ಅರ್ಥ ವಿಸ್ತಾರದಲ್ಲಿ **ತಿನ್ನು** ಕೂಡ ಬಡವಾಗಿಲ್ಲ. ಚಿಂತೆಗಳು ನಮ್ಮ **ತಲೆತಿನ್ನುತ್ತವೆ**. ನಮ್ಮ ಬಸರಿಯರು ಹಡೆಯಬೇಕಾದರೆ **ಬೇನೆತಿನ್ನುತ್ತಾರೆ**. ನಾವು ಮಾಡಿದ ಕರ್ಮವನ್ನು ಎರಡು **ಕೈಗಳಿಂದ ತಿನ್ನುತ್ತೇವೆ**. ಹೀಗೆ ಲಕ್ಷಣಾರ್ಥದಲ್ಲಿ ಉಣ್ಣುವುದಕ್ಕಿಲ್ಲದ ತೀಕ್ಷ್ಣಾನುಭವದ ಛಾಯೆ **ತಿನ್ನುವುದಕ್ಕೆ** ಇದೆ. ಬರೇ **ನಾವು ತಿನ್ನುವವರು** ಎಂದರೆ **ಮಾಂಸ ತಿನ್ನುವವರು** ಎಂಬ ಲಕ್ಷಣಾರ್ಥ ಇಂದಿನ ಮಾಂಸಾಹಾರಿ ಹೋಟೇಲುಗಳ ಕಾಲದಲ್ಲಿ ಮಾತ್ರವಲ್ಲ ಕನಿಷ್ಠ, ೧೫–೧೬ನೇ ಶತಮಾನದ ಕಾಲದಿಂದಲೂ ಇದೆ. ನಾವು ಉಣ್ಣುವವರು ಎಂದರೆ ಆ ಅರ್ಥಬಾರದು. ನಾವು **ಅನ್ನವನ್ನು ಉಣ್ಣಬಹುದು**: ಆದರೆ **ಕೋಡುಬಳೆಯನ್ನು ಉಣ್ಣಲಾರೆವು** – ಅದನ್ನು ತಿನ್ನಬೇಕಾಗುತ್ತವೆ. ನಾವು **ಅನ್ನ** ತಿನ್ನಬಹುದು; ಆದರೆ ಅದರ ಅರ್ಥ ಮಾತ್ರ **ಅನ್ನ ಉಣ್ಣುವುದೆಂದಾಗದು. ಅನ್ನ ತಿನ್ನುವಾಗ** ನಾವು ಉಪಾಯವಿಲ್ಲದೆ ಜುಗುಪ್ಸೆಯಿಂದ ತಿನ್ನುತ್ತೇವೆ, ಅಥವಾ **ಹಂಗಿನ ಅನ್ನವನ್ನು** ಕಣ್ಮುಚ್ಚಿ ತಿನ್ನುತ್ತೇವೆ. ಹಾಗೆಯೇ ನಾವು **ಲಂಚ ತಿನ್ನ**ಬಹುದೇ ಹೊರತು **ಲಂಚವುಣ್ಣಲಾರೆವು**. ಇಂಥ ಅರ್ಥಸೂಕ್ಷ್ಮಗಳೇ ಒಂದು ಭಾಷೆಗೆ ತನ್ನದೇ ಆದ ವ್ಯಕ್ತಿತ್ವವನ್ನು ಕೊಡುತ್ತವೆ; ಪರಭಾಷಿಕರಿಗೆ ಅದನ್ನು ಜಾರುವ ಬಂಡೆಯಾಗಿಯೂ ಭಾಷಾಂತರಕಾರರಿಗೆ ತಲೆನೋವಾಗಿಯೂ ಮಾಡುತ್ತವೆ.

ಕನ್ನಡದ **ಉಣ್ಣು ತಿನ್ನುವ** ವಿಚಾರಗಳು ಸ್ವಾರಸ್ಯವಾಗಿದ್ದರೂ ಆಶ್ಚರ್ಯಕರವೆಂದು ಹೇಳಲಾಗದು. ಆದರೆ ಉರ್ದುವಿನಲ್ಲಿ, ಹಿಂದಿಯಲ್ಲಿ ಬರುವ **ಕಸಮ್ ಖಾನಾ** (= ಪ್ರತಿಜ್ಞೆ ತಿನ್ನುವುದು) ಕನ್ನಡಿಗರನ್ನು ಬೆಚ್ಚಿಸುತ್ತದೆ. ಏನನ್ನಾದರೂ (ಮಣ್ಣನ್ನು ಕೂಡ!) ಕನ್ನಡಿಗರು ತಿಂದಾರು. ಆದರೆ ಪ್ರತಿಜ್ಞೆಯನ್ನು ಹೇಗಪ್ಪಾ ತಿನ್ನುವುದು? ಬಹುಶಃ ಈ ನುಡಿಕಟ್ಟು ಅರಬ್ಬಿ ಭಾಷೆಯಿಂದ ಬಂದ **ಕಸಮ್** ಶಬ್ದದೊಡನೆಯೇ ಉರ್ದುವಿಗೆ ಬಂತು. ಉರ್ದು ಹವೆಯಲ್ಲಿ ಬಹುಕಾಲ ಬಾಳಿದ ಹೈದರಾಬಾದ್ ಕನ್ನಡಿಗರಿಗೆ ಕೂಡ **ಆಣೆ ತಿನ್ನುವುದು** ಅಭ್ಯಾಸವಾಯಿತು. ಕಾಲಾಂತರದಲ್ಲಿ ಆಣೆಯನ್ನು ತಿನ್ನುವ ಚಟ ಹೈದರಾಬಾದ್ ಕನ್ನಡಿಗರಿಂದ ಇತರರಿಗೂ ತಗಲಬಹುದೆಂದು ಈಗಾಗಲೇ ಪ್ರಮಾಣಿತವಾಗುತ್ತಿದೆ. ಪರಿಷತ್ತಿನ ಬೃಹತ್ ಕೋಶದಲ್ಲಿ

**ಆಣೆ ತಿನ್ನು** ದಾಖಲಾಗಿದೆ. ಅಲ್ಲಿ ಕೊಟ್ಟ ಪ್ರಯೋಗಗಳಲ್ಲಿ ಒಂದು ಹೈದರಾಬಾದ್ ಕನ್ನಡಿಗರ ಬರವಣಿಗೆಯಿಂದ ಎತ್ತಿದ್ದು.

೨೫

**ಬರಹ**ದ ಆರಂಭದೊಂದಿಗೆ ಮಾನವನ ಹಣೆಬರಹವೂ ಬದಲಾಯಿತು. ಬೇರೆ ಬೇರೆ ಭಾಷೆಗಳಲ್ಲಿ **ಬರಹ**ಕ್ಕೆ ಇರುವ ಪದಗಳ ಪರಿಶೀಲನೆ ಬರಹದ ಆರಂಭದ ಕಾಲದ ರೀತಿಗಳನ್ನು ಕುರಿತು ಚಾಡಿ ಹೇಳುತ್ತದೆ.

ಕನ್ನಡ **ಬರೆ**ಯನ್ನೇ ತೆಗೆದುಕೊಳ್ಳಿ. ಎಲ್ಲ ಲಿಖಿತ ದ್ರಾವಿಡ ಭಾಷೆಗಳಲ್ಲಿಯೂ ಇದಕ್ಕೆ ಜ್ಞಾತಿ ಪದಗಳಿವೆ. (ತಮಿಳು **ವರೈ**, ತೆಲುಗು **ವ್ರಾ**, ತುಳು **ಬರೆ**). ಚಿತ್ರ ಮಾಡುವುದಕ್ಕೂ ಅಕ್ಷರ ಲೇಖನಕ್ಕೂ ಈ ಭಾಷೆಗಳಲ್ಲಿ **ಬರೆ** ಧಾತುವನ್ನೇ ಬಳಸಲಾಗುತ್ತದೆ. ಪ್ರಾಣಿಗಳ ಮೈಮೇಲೆ ಕಾಸಿ ಮಾಡಿದ ಗುರುತಿಗೂ ಕೋಲಿನಿಂದ ಹೊಡೆದಾಗ ಏಳುವ ಬಾಸುಂಡೆಗೂ **ಬರೆ** ಎಂದೇ ಹೆಸರು. ಚಿನ್ನವನ್ನು ತಿಕ್ಕಿ ನೋಡುವುದಕ್ಕೆ ಉಪಯೋಗಿಸುವ **ಒರೆ** ಧಾತುವೂ **ಬರೆ** ಧಾತುವೂ ಮೂಲದಲ್ಲಿ ಒಂದೇ ಇರಬಹುದು. **ಕಸಬರಿಗೆ** ಎಂಬಲ್ಲಿ **ಬರಿಗೆ** ಎಂಬುದೂ **ಬರೆ** ಧಾತುವಿನ ಮಗುವೇ. ಹೀಗೆ **ಬರೆ** ಧಾತುವಿಗೆ ಕಡ್ಡಿಯಂಥ ಪದಾರ್ಥದಿಂದ ಕೆರೆದು ಅಥವಾ ಯಾವುದಾದರೂ ಕುರುಹು ಬಿಡಬಲ್ಲ ಪದಾರ್ಥದಿಂದ ತಿಕ್ಕಿ **ಗುರುತು** ಮಾಡು ಎಂಬರ್ಥ ಮೂಲದಲ್ಲಿ ಇರಬೇಕು. ಮಾನವನ ಅತಿ ಪ್ರಾಚೀನ ಗುಹಾನಿವಾಸಗಳಲ್ಲಿ ನಮಗೆ ದೊರೆಯುವ ಚಿತ್ರಗಳು ಈ ವಿಧಾನದಲ್ಲಿ ನಿರ್ಮಿಸಿದವುಗಳೆಂದು ಮನಗಂಡರೆ ಲೇಖನಕಲೆಯ ಉಗಮ ಹೇಗಾಯಿತೆಂಬುದರಲ್ಲಿ **ಬರೆ** ಧಾತುವಿನ ಅರ್ಥಕ್ಕೆ ಬೆಂಬಲ ಬರುತ್ತದೆ. ಮಾನವನ ಆದಿಮ ಲಿಪಿ ಚಿತ್ರಲಿಪಿಯೇ ಆಗಿದ್ದುದರಿಂದ ಚಿತ್ರಲೇಖನಕ್ಕೂ, ಅಕ್ಷರಲೇಖನಕ್ಕೂ ಒಂದೇ ಧಾತುವಿರುವುದು ಸಹಜವಾಗುತ್ತದೆ.

ಸಂಸ್ಕೃತದ **ಲೇಖನ** ಮತ್ತು ಇಂಗ್ಲೀಷಿನಲ್ಲಿ writing ಪದಗಳನ್ನು ಕಿದರೆ ಇದಕ್ಕಿಂತಲೂ ಸ್ಪಷ್ಟವಾದ ಸಂಕೇತ ಸಿಗುತ್ತದೆ. **ಲಿಖ್** ಧಾತುವಿನ ಮೂಲರೂಪ **ರಿಖ್** ಆಗಿತ್ತು. ಅಥರ್ವ ವೇದಾದಿ ಬಹು ಪ್ರಾಚೀನ ಭಾರೋಪ್ಯ ದಾಖಲೆಗಳಲ್ಲಿ **ರಿಖ್** → **ಲಿಖ್** ಧಾತುವಿಗೆ ಕೆರೆ ಕೆರಸು ಕುಕ್ಕು ಮೊದಲಾದ ಅರ್ಥಗಳೇ ಇವೆ. ಸಂಸ್ಕೃತಕ್ಕೆ ಬಹಳ ಹತ್ತಿರವಾದ ಯುರೋಪಿನ ಲಿಥುವೇನಿಯನ್ ಭಾಷೆಯಲ್ಲಿ **ರೇಕ್ತಿ** ಎಂದರೆ **ಕೊರೆಯುವುದು**, ಕೆತ್ತುವುದು ಎಂದೇ ಅರ್ಥ. ಇಂಗ್ಲೀಷಿನ writeನ ಹಳೇ ಇಂಗ್ಲೀಷ್ writan ಮತ್ತು ಹಳೇ ನಾರ್ಸ್ ಭಾಷೆಯ rita ಇವೆರಡೂ **ಕೆರೆ** ಎಂಬರ್ಥವನ್ನೇ ಕೊಡುತ್ತವೆ. ಸಂಸ್ಕೃತದ **ಲಿಖಿತ**ಕ್ಕೆ ಅಥರ್ವ ವೇದದಲ್ಲಿ ಕೆರೆದು ಕಲೆಯುಂಟುಮಾಡಿದ ಗುರುತು ಎಂಬರ್ಥವೇ ಇದ್ದು ಅದಕ್ಕೆ ಲೇಖನ ಎಂಬರ್ಥ ಬಂದದ್ದು ತಡವಾಗಿ, ಯಾಜ್ಞವಲ್ಕ್ಯ ಸ್ಮೃತಿ, ಶಾಂಖಾಯನ ಶ್ರೌತ ಸೂತ್ರಕಾಲದಲ್ಲಿ. **ಲೇಖನ**ವೆಂದರೆ ಮೂಲತಃ **ಕೆರೆದು ಮಾಡಿದ ಕಾಯಂ ಗುರುತು** ಎಂದೇ. ಇದು ಕಂಟವದಿಂದ ತಾಳೆ ಓಲೆಯ ಮೇಲೆ ಕೆರೆದು ಬರೆಯುವ ಕಾಲದ ಲೇಖನಕ್ಕೂ ಸರಿಯಾಗಿ ಹೊಂದಿಕೊಂಡಿತು. ಮುಂದೆ ಬಣ್ಣ ಬಳಿದು ಮಾಡಿದ ಚಿತ್ರಗಳಿಗೂ ಅಕ್ಷರಗಳಿಗೂ **ಲಿಖ್** ಧಾತುವಿನಿಂದ ಬಂದ ಪದಗಳನ್ನೇ ವಿಸ್ತರಿಸಲಾಯಿತು. ಹೀಗೆ ನಮಗೆ **ಚಿತ್ರಲೇಖೆ**ಯರು ಪ್ರಾಚೀನ ಪುರಾಣ ಕಾವ್ಯ ಸಾಹಿತ್ಯದಲ್ಲಿ ಸಿಗುತ್ತಾರೆ. ಮೂಲ **ರಿಖ್**

ಧಾತುವಿನಿಂದ ಬಂದ **ರೇಖೆ** ಗೆರೆ ಎಂಬರ್ಥದಲ್ಲಿ ಉಳಿದುಕೊಂಡಿದೆ. ಈ ಪ್ರಕಾರ ಕೆರೆದು ಮಾಡಿದ ಗುರುತು **ಅಕ್ಷರ**ವಾಯಿತು. **ಅಕ್ಷರ** ಎಂದರೆ **ಅಳಿಇಲ್ಲದ್ದು** ಎಂದು ಒಂದು ಅರ್ಥ.

ಆದರೆ **ಲಿಪಿ** (ಬರಹ) ಎಂಬುದು ಬೇರೆಯೇ ಕಥೆ ಹೇಳುತ್ತದೆ. **ಲಿಪ್** ಎಂದರೆ (ಎಣ್ಣೆ, ಬಣ್ಣ) **ಬಳಿ**. ಈ ಶಬ್ದ ಬಳಕೆಗೆ ಬಂದಾಗಲೇ ಕಲ್ಲಲ್ಲೋ ಇಟ್ಟಿಗೆಯಲ್ಲೋ ಕೆರೆದು ಇಡುವ ಲೇಖನ ಪದ್ಧತಿಯ ಬದಲು ಬಣ್ಣಗಳಿಂದ ಅಥವಾ ಮಸಿಯಿಂದ ಚರ್ಮ, ಭೂರ್ಜಪತ್ರ ಇತ್ಯಾದಿಗಳ ಮೇಲೆ ಚೀನದಲ್ಲಿಯ ಹಾಗೆ ಕುಂಚದಿಂದಲೋ ಗರಿಯಿಂದಲೋ ದಾಖಲೆಗಳನ್ನು ಬರೆದಿಡುವುದು ಪ್ರಾರಂಭವಾಗಿರಬೇಕು. ಅದು ಲೇಪಿಸುವುದಾದ್ದರಿಂದ **ಲಿಪಿ**ಯಾಯಿತು.

೨೬

**ದಾನ** ಮತ್ತು **ದಕ್ಷಿಣೆ** ಇವುಗಳ ವಿಚಾರ ಗೊತ್ತಿಲ್ಲದಿದ್ದವರಿಗೆ ಹರಿಶ್ಚಂದ್ರ ಕಥೆ ಅವನ್ನು ಚೆನ್ನಾಗಿ ಪರಿಚಯಿಸಿದೆ. **ದಾನ** ಅಂದರೆ ಯಾವುದಾದರೊಂದು ಪದಾರ್ಥವನ್ನು ಕೈಯೆತ್ತಿ ಕೊಡುವುದು. ಸಂಸ್ಕೃತದಲ್ಲಿ **ದಾ** ಅಂದರೆ ಕೊಡು ಎಂದರ್ಥ. **ದಕ್ಷಿಣೆ** ಅಂದರೆ ಕೊಟ್ಟ ದಾನಕ್ಕೆ ಪೂರಕವಾಗಿ ಮೇಲೆ ಬ್ರಾಹ್ಮಣನಿಗೆ ಕೊಡುವ **ಧನ**. ಇದು **ಹಣ**ದ ರೂಪವಾಗಿರಬೇಕು. ಹಣ **ಲೋಹ** ರೂಪದ್ದು. ಹೀಗೆ ದಕ್ಷಿಣೆ ಎಂದರೆ ಲೋಹದಿಂದ ಮಾಡಿ ತತ್ಕಾಲಕ್ಕೆ ಚಲಾವಣೆಯಲ್ಲಿರುವ **ನಾಣ್ಯ** ಎಂದು ನಾವು ತಿಳಿದುಕೊಂಡಿದ್ದೇವೆ.

ಆದರೆ ಬಹಳ ಪುರಾತನದಲ್ಲಿ **ದಕ್ಷಿಣಾ** ಶಬ್ದಕ್ಕೆ **ಆಕಳು** ಅಥವಾ **ದನ** ಎಂದೇ ಅರ್ಥವಿತ್ತು. ನಾಣ್ಯಗಳು ಚಾಲತಿಗೆ ಬರುವುದಕ್ಕೆ ಮುಂಚೆ **ದನ**ಗಳೇ ಹಣವಾಗಿ ಚಲಾವಣೆಯಲ್ಲಿದ್ದುವೆಂಬ ಐತಿಹಾಸಿಕ ತಥ್ಯವನ್ನು ಇದು ತೋರಿಸುತ್ತದೆ. ಸಾಲ ಸೋಲಗಳೂ ವೇದಕಾಲದಲ್ಲಿ ಆಕಳ ರೂಪದಲ್ಲೇ ಇದ್ದುವು. ಅಜೀಗರ್ತನೆಂಬ ಬ್ರಾಹ್ಮಣ ತನಗೆ **ನೂರು ಆಕಳ**ಷ್ಟು ಸಾಲವಿದ್ದದ್ದನ್ನು ತೀರಿಸುವುದಕ್ಕೆ ಮಗ ಶುನಶ್ಶೇಪನನ್ನು ಹರಿಶ್ಚಂದ್ರನ ಮಗ ರೋಹಿತನಿಗೆ ಮಾರುತ್ತಾನೆ ಎಂದು ಕಥೆ ಇದೆ. ದಕ್ಷಿಣಾ ಅಂದರೆ ಅಂತಿಂಥ ಬರಡು ಆಕಳಲ್ಲ; ಹಾಲು ಹಿಂಡಬಲ್ಲ ಅಥವಾ ಕರು ಹಾಕಬಲ್ಲ ಪ್ರಾಯದ ಕಬ್ಬಸು. **ದಕ್ಷ**ವಾದ ಆಕಳು **ದಕ್ಷಿಣೆ–ದಕ್ಷ** ಅಂದರೆ ಸಮರ್ಥ. ಮೂಲತಃ ಒಂದು ಹಸುವನ್ನು **ಬಹುಮಾನ**ವಾಗಿಕೊಡುವುದು **ದಕ್ಷಿಣೆ**ಯಾಗಿತ್ತು. ಅನಂತರ ಎಲ್ಲ ತರಹದ **ಉಡುಗರೆ**ಗೂ ದಕ್ಷಿಣೆ ಎಂದೇ ಪರಿಪಾಠ ಬಿತ್ತೆಂದು ಕಾತ್ಯಾಯನ ಸಂಹಿತೆಯಿಂದ ವಿದಿತವಾಗುತ್ತದೆ. ಅದರಿಂದ **ದಾಕ್ಷಿಣ್ಯ** ಶಬ್ದ ಹುಟ್ಟಿತು. ಉಡುಗರೆ ಕೊಡುವಂಥ ಪ್ರವೃತ್ತಿ ದಾಕ್ಷಿಣ್ಯ. **ದಾಕ್ಷಿಣ್ಯ** ಶಬ್ದ ಸ್ವಲ್ಪ ಅರ್ಥ ಅರಳಿಸಿಕೊಂಡು **ಔದಾರ್ಯ**ವೆಂದು ಅರ್ಥ ಕೊಡತೊಡಗಿತು. ಅಲ್ಲಿಂದ ಸ್ವಲ್ಪ ವ್ಯತ್ಯಾಸ ಹೊಂದಿ **ಸಂಕೋಚ** ಅಥವಾ **ಭಿಡೆ** ಎಂದು ದಾಕ್ಷಿಣ್ಯಕ್ಕೆ ಅರ್ಥ ಬಂತು. ಸಂಕೋಚ ಎಂಬುದಕ್ಕೆ ಒಳ್ಳೇ ಅರ್ಥದಲ್ಲಿ ಇತರರ ಸುಖ ದುಃಖಗಳ ಹಿತಾಹಿತಗಳ ಬಗ್ಗೆ ಗಮನವೆಂದಲ್ಲವೇ ತಾತ್ಪರ್ಯ? **ಔದಾರ್ಯ** ಇದ್ದರಲ್ಲವೇ **ಭಿಡೆ**? ಆದ್ದರಿಂದ **ದಾಕ್ಷಿಣ್ಯ = ಭಿಡೆ**.

ಆಕಳು ಒಂದು ಕಾಲದಲ್ಲಿ ವಿನಿಮಯದ ಮಾಧ್ಯಮವಾಗಿತ್ತೆಂದು ತೋರಿಸುವುದು ಇದೊಂದೇ ಶಬ್ದವಲ್ಲ. **ಧನ** ಶಬ್ದವೂ ಅದೇ ಅರ್ಥದಿಂದ ಕೂಡಿತ್ತೆಂಬುದಕ್ಕೆ ಆದರ

ತದ್ಭವವಾದ **ದನ** = **ಆಕಳು** ಎಂಬ ಕನ್ನಡ ರೂಢಾರ್ಥವೂ ಸಾಕ್ಷಿ ಹೇಳುತ್ತದೆ.

ಸಂಸ್ಕೃತದ **ಧನ್** ಧಾತುವಿಗೆ **ವೇಗವಾಗಿ ನಡೆ**, ಅಥವಾ **ಫಲ ಬಿಡು** ಎಂದು ಅರ್ಥ. ಇವು ದನಗಳ ಗುಣಗಳು ತಾನೆ? ಕನ್ನಡದಲ್ಲಿ **ದನಕರುಗಳಿಗೆ ಕಾಲ್ನಡೆ** ಎಂಬ ಶಬ್ದವೂ ಇದೆಯೆಂಬ ಸಾಮ್ಯವನ್ನು ನೆನೆದುಕೊಳ್ಳಬಹುದು.

ಇದು ನಮ್ಮ ದೇಶಕ್ಕೆ ವಿಶಿಷ್ಟವಾದ ಗತ ಕಥೆಯಲ್ಲ. ಇಂಗ್ಲೀಷಿನ pecuniary ಶಬ್ದಕ್ಕೆ, ಧನ ಅಥವಾ **ಹಣಕಾಸಿಗೆ** ಸಂಬಂಧಿಸಿದ್ದು ಎಂದರ್ಥ. ಹಾಗೆಯೆ fee ಎಂಬ ಪದವೂ ಇದೆ. ಅದು ಯಾವುದಾದರೂ ಕಾರ್ಯಕ್ಕೆ ಕೊಡುವ ಪ್ರತಿಫಲದ ಧನ. **ಸ್ಕೂಲ್ ಫೀ, ವಕೀಲರ ಫೀ** ಇತ್ಯಾದಿ. ಆದರೆ pecuniary ಎಂಬುದು ಲ್ಯಾಟಿನ್ನಿನ pecunum (= ಧನ) ದಿಂದ ಬಂದದ್ದು. ಅದು pecudes (= ದನಕರುಗಳ ಸಂಪತ್ತು) ನಿಂದ ಹುಟ್ಟಿದ್ದು. ಅದರದೇ ಇನ್ನೊಂದು ರೂಪವಾದ pecalum ಅಂದರೆ ಖಾಸಗಿ ಆಸ್ತಿ ಎರಡೂ pecu ಪದದ ಮಕ್ಕಳು. ಆ ಪದವೂ ಸಂಸ್ಕೃತದ **ಪಶು** ಪದವೂ ಜ್ಞಾತಿಗಳು. ಇಂಗ್ಲೀಷಿನ fee ಕೂಡ ಹಳೇ ಇಂಗ್ಲೀಷಿನ feoh ನ ರೂಪಾಂತರ. ಉತ್ತರ ಯುರೋಪಿನ ಎಲ್ಲಾ ಭಾಗಗಳಲ್ಲಿಯೂ feoh ನ ರೂಪಭೇದಗಳು ಕಾಣುತ್ತವೆ. ಅವೆಲ್ಲವುಗಳ ಮೂಲಾರ್ಥ **ಪಶು** ಎಂದೇ ಇದೆ. ಹೀಗೆ ನಿಮ್ಮ ಮಾಸ್ತರು **ಟ್ಯೂಶನ್ ಫೀ** ಕೇಳುವಾಗ ಅವರು ಅಕ್ಷರಶಃ ತಮ್ಮ **ಗುರುದಕ್ಷಿಣೆ**ಯನ್ನೇ ಕೇಳುತ್ತಿದ್ದಾರೆ.

೨೭

ದೇಶದಿಂದ ದೇಶಕ್ಕೆ ಪದಾರ್ಥಗಳ ವಿನಿಮಯ ಆಗುವಾಗ ಅವುಗಳ ಹೆಸರುಗಳೂ ವಿನಿಮಯ ಹೊಂದುತ್ತವೆ ಹೇಗೋ ಹಾಗೆ ಭಾವನೆ, ಕಲ್ಪನೆಗಳ ವಿನಿಮಯದೊಡನೆ ಅವುಗಳಿಗೆ ಸಂಬಂಧಿಸಿದ ಪದಗಳೂ ಸಾಗುವುದು ಸಾಮಾನ್ಯ. ಭಾರತದ ಒಂದು ದರ್ಶನ ಮತ್ತು ಅದಕ್ಕೆ ಸಂಬಂಧಿಸಿದ ಶಾರೀರಿಕ, ಮಾನಸಿಕ ಸಾಧನೆಗಳಿಗೆ ಸಂಸ್ಕೃತದಲ್ಲಿರು **ಯೋಗ** ಎಂಬ ಹೆಸರು ಇಂದು ಜಗತ್ತಿನ ಅನೇಕ ಭಾಷೆಗಳಿಗೆಲ್ಲ ಇದ್ದಕ್ಕಿದ್ದಂತೆ ಸೇರಿಕೊಂ ಇದು ತೀರ ಈಚೆಗಿನ ಉದಾಹರಣೆಯಾಯಿತು. ಇದ್ದಕ್ಕಿದ್ದಂತೆ ಹೋಗದೆ ಸ್ವೀಕಾರ ಮಾಡುವವರ ನಾಲಗೆಗೆ ಸರಿ ಹೊಂದುವಂತೆ ಬದಲಾಗುವುದೂ ಅದರಿಂದ ಸಹಸಾ ಇದು ಎಲ್ಲಿಂದ ಬಂತೆಂಬುದು ತಿಳಿಯದಿರುವುದೂ ಉಂಟು. ಭಾರತದ **ಯೋಗಕ್ಕೆ** ಸಂಬಂಧಪಟ್ಟ ಇನ್ನೊಂದು ಶಬ್ದ **ಧ್ಯಾನ**. ಧ್ಯಾನದ ಕಲ್ಪನೆ ಬಹುಶಃ ಬೌದ್ಧಧರ್ಮದ ಸಂಗಡ ಜಪಾನಿಗೆ ಹೋಯಿತು. ಅಲ್ಲಿ ಅದು ಅವರ ನಾಲಗೆಗೆ ಸರಿ ಹೊಂದುವಂತೆ zen (ಜೆನ್) ಎಂದು ಬದಲಾಯಿತು. ಸಂಗಡಲೇ ಧ್ಯಾನವನ್ನು ಕುರಿತು ವಿಶಿಷ್ಟ ಜಪಾನಿ ಅನುಭವ, ಪ್ರಯೋಗಗಳನ್ನು ಅರಗಿಸಿಕೊಂಡು ಅದರ ಅರ್ಥ ಭಾರತದ ಧ್ಯಾನಕ್ಕಿಂತ ಅಷ್ಟಿಷ್ಟು ಬದಲಾಯಿತು. ಇಂದು ಜಪಾನಿ **ಜೆನ್** ಪಾಶ್ಚಾತ್ಯರನ್ನೂ ಆಕರ್ಷಿಸಿ ಅದು ಜಪಾನಿ ಹೆಸರಿನೊಡನೆ ಅನೇಕ ಪಾಶ್ಚಾತ್ಯ ಭಾಷೆಗಳಿಗೆ ಸಂಕ್ರಮಣ ಹೊಂದಿದೆ. ಈಗ ಧ್ಯಾನದ ಜಪಾನಿ ಸಂಪ್ರದಾಯವನ್ನು ನಿರ್ದೇಶಿಸಲು ನಾವೇ ಆದರೂ **ಜೆನ್** ಪದವನ್ನೇ ಬಳಸಬೇಕಾದ ಪ್ರಮೇಯ ಇದೆ.

ಅಂಕಗಣಿತ ಮತ್ತು ಬೀಜಗಣಿತ ರಂಗಗಳಲ್ಲಿ ಭಾರತೀಯರು ೧೨ನೇ ಶತಮಾನದವರೆಗೂ ಇತರರಿಗಿಂತ ಮುಂದಿದ್ದರು. ಇವೆರಡು ಶಾಸ್ತ್ರಗಳನ್ನು ಅರಬರು

ಮೊದಲು ಭಾರತೀಯರಿಂದ ಕಲಿತು ಯುರೋಪಿಯನ್ನರಿಗೆ ದಾಟಿಸಿದರು. ಅಂಕಗಣಿತಕ್ಕೆ ಅರಬರು **ಹಿಂದ್ ಸಾ** (ಹಿಂದುಗಳದು) ಎಂದೇ ಹೆಸರು ಕೊಟ್ಟಿದ್ದಾರೆ. ಗಣಿತಶಾಸ್ತ್ರಕ್ಕೆ ಭಾರತೀಯರ ಕೊಡುಗೆ ಎನಿಸಿದ ಶೂನ್ಯವನ್ನು ಅರಬರು ತಮ್ಮ ಭಾಷೆಗೆ **ಸಿಫರ್** (ಖಾಲಿ) ಎಂದು ಅನುವಾದ ಮಾಡಿದ್ದನ್ನೇ ಪಾಶ್ಚಾತ್ಯರು zero ಎಂದು ರೂಪಾಂತರಿಸಿ ತೆಗೆದುಕೊಂಡರು.

ಆದರೆ ಈ ವ್ಯವಹಾರದಲ್ಲಿ ನಾವು ಯಾವಾಗಲೂ ಕೊಡುವವರೇ ಆಗಿದ್ದ ವೆಂದಣಿಸುವುದು ವೃಥಾಭಿಮಾನವಾದೀತು. ಜಾಮಿತಿ ಅಥವಾ ರೇಖಾಗಣಿತದಲ್ಲಿ ಮತ್ತು ಖಗೋಲ–ಜ್ಯೋತಿಃಶಾಸ್ತ್ರಗಳಲ್ಲಿ ನಾವು ಗ್ರೀಕರಿಂದ ಕಲಿತದ್ದೇ ಬಹಳ. ಅದಕ್ಕೆ ನಮ್ಮ ೫ನೇ ಶತಮಾನಾನಂತರದ ಬರವಣಿಗೆಗಳಲ್ಲಿ ಬೇಕಾದಷ್ಟು ಕುರುಹುಗಳು ಇವೆ. **ಕೇಂದ್ರ** ಶಬ್ದ ಸಂಸ್ಕೃತವೇ ಎಂದು ಭ್ರಮಿಸುವಷ್ಟು ರೂಢಿಯಾಗಿದೆ. ಆದರೂ ಅದು ಗ್ರೀಕ್ **ಕೇಂತ್ರಾನ್** (kentron) ಅನ್ನು ಇದ್ದಕ್ಕಿದ್ದಂತೆ ಎತ್ತಿಕೊಂಡದ್ದು. ವರಾಹಮಿಹಿರನ ಬೃಹಜ್ಜಾತಕದಲ್ಲಿ ಇದು ಮೊದಲು ಕಾಣಿಸಿಕೊಳ್ಳುತ್ತದೆ. ಫಲಜ್ಯೋತಿಷದಲ್ಲಿ ಅನೇಕ ವಿಚಾರಗಳನ್ನು ಗ್ರೀಕರಿಂದ ನಾವು ತೆಗೆದುಕೊಂಡದ್ದಕ್ಕೆ **ಕೇಮದ್ರುಮ** (ಗ್ರೀಕ್ kenodromos), ಫಣಫರ (ಗ್ರೀಕ್ epanaphora) ಎಂಬ ಯೋಗಗಳ ಹೆಸರುಗಳು ಸಾಕ್ಷಿಗಳಾಗಿವೆ. ಇವಲ್ಲದೆ ಗ್ರಹಗಳಿಗೆಲ್ಲ ಭಾರತೀಯ ಹೆಸರುಗಳಿದ್ದರೂ ಆರ್ಯಭಟನೂ ವರಾಹಮಿಹಿರನೂ ಪರ್ಯಾಯ ಪದಗಳಾಗಿ ಗ್ರೀಕ್ ಹೆಸರುಗಳನ್ನೂ ಬಳಸಿದ್ದಾರೆ. ಉದಾಹರಣೆಗೆ **ಬೃಹಸ್ಪತಿಗೆ ಜೀವ** (ಗ್ರೀಕ್ Zeus), **ಶನಿಗೆ ಕೋಣ** (ಗ್ರೀಕ್ Kronos) ಶಬ್ದಗಳು. ಫಲಜ್ಯೋತಿಷಕ್ಕೆ **ಹೋರಾಶಾಸ್ತ್ರ** ಎಂಬ ಹೆಸರಿದೆ. ಈ **ಹೋರಾ**ವನ್ನು **ಅಹೋರಾತ್ರ**ದ ಸಮಾಹಾರವೆಂದು ಕೆಲವರು ಸಾಧಿಸಿದರೂ ಅದು ಗ್ರೀಕ್ **ಹೋರಾ** (= ತಾಸು) ಎಂದೇ ಭಾಷಾತಜ್ಞರ ಮತ.

## ೨೮

**ಚೀಟಿ** ಅರಿವೆ ಇಂದು ಹೆಣ್ಣುಮಕ್ಕಳ ಡ್ರೆಸ್ಸಿಗೆ ಮಾತ್ರವಲ್ಲ, ಗಂಡಸರ ಅಂಗಿಗಳಿಗೂ ಜನಪ್ರಿಯವಾಗಿ ಉಪಯೋಗಿಸಲ್ಪಡುತ್ತಿದೆ. ಇದು ಎಲ್ಲಿಂದ ಬಂದ ಶಬ್ದ? ಎಂದು ಕೇಳಿದರೆ ಇಂಗ್ಲೀಷ್ ಬಲ್ಲವರು ತತ್‌ಕ್ಷಣ ಇಂಗ್ಲೀಷಿನ chintz ಶಬ್ದದತ್ತ ಬೆರಳು ತೋರಿಸಬಹುದು. ಅದು ತಪ್ಪು. **ಚಿಂಟ್ಸ್** ಎಂಬ ಇಂಗ್ಲೀಷ್ ಪದವೇ ಹಿಂದಿಯ **ಛೀಂಟ್** (= ಬೊಟ್ಟು ಬೊಟ್ಟಾಗಿ ಮುದ್ರಿಸಿದ ಬಟ್ಟೆ)ನಿಂದ ಹುಟ್ಟಿದ್ದು. ಈ **ಛಿಂಟ್** ಸಂಸ್ಕೃತದ **ಚಿತ್ರ**ದ ಅಪಭ್ರಂಶ ರೂಪ. ಋಗ್ವೇದದಲ್ಲಿ **ಚಿತ್ರ** ಶಬ್ದಕ್ಕೆ ಹೊಳೆಯುವ, ಎದ್ದು ಕಾಣುವ ಎಂದು ಅರ್ಥವಿದ್ದರೂ ಮಹಾಭಾರತ ಕಾಲದಲ್ಲಿ ಆಗಲೆ ಅದಕ್ಕೆ ಬೊಟ್ಟು ಬೊಟ್ಟಾದ, ಹಂಡಬಂಡ (ಬಣ್ಣ ಬಣ್ಣದ) ಎಂದು ಅರ್ಥವಿತ್ತು. ಹಿಂದಿ **ಚೀಟಾ**, ಕನ್ನಡ **ಚಿಟ್ಟೆ** ಹುಲಿಯಲ್ಲಿರುವ **ಚಿಟ್ಟೆ** ಇದೇ. ತುಳುವಿನಲ್ಲಿ **ಚಿಟ್ಟೆ** ಎನ್ನುವುದಕ್ಕೆ ಬೊಟ್ಟು, ಚುಕ್ಕಿ ಎಂಬ ಅರ್ಥವೂ ಇದೆ. ಹೀಗೆ **ಚಿತ್ರಪಟ** ಅಥವಾ **ಚಿತ್ರವಸ್ತ್ರ** ಎಂಬುದು ಹಿಂದೀ **ಛಿಂಟ್** ಆಗಿ ಅಲ್ಲಿಂದ ಆ ಬಟ್ಟೆಯೊಡನೆ ಇಂಗ್ಲೀಷಿಗೂ ರಫ್ತಾಯಿತು.

ಪಾಶ್ಚಾತ್ಯ ಮಾದಕ ಪಾನೀಯಗಳ ರುಚಿ ಹತ್ತಿದವರಿಗೆಲ್ಲ (ಈಗವರ ಸಂಖ್ಯೆ ವಿಪುಲವಾಗಿದೆ) **ಜಂಜರ್ ಬೀರ್** (ginger beer) ಗೊತ್ತಿರಬೇಕು. ಅದಲ್ಲದಿದ್ದರೂ **ಜಂಜರ್**

**ಸೋಡಾ** ಆದರೂ ನಗರವಾಸಿಗಳಿಗೆ ಪರಿಚಿತ. ಜಿಂಜರ್ ಎಂದರೆ **ಶುಂಠಿ** ಅಥವಾ **ಅಲ್ಲ** (ಹಸಿ ಶುಂಠಿ), ಬಾಯಿ ಚುರುಕಿಗಾಗಿ ಅದನ್ನು ಬೆರೆಸಿ ತಯಾರಿಸಿದ್ದು ಜಿಂಜರ್ ಬೀರ್. ಈ ಜಿಂಜರ್ ಭಾರತದಿಂದಲೇ ಅನ್ಯ ದೇಶಗಳಿಗೆ ಹೋದದ್ದು. ಅದು ಸಂಸ್ಕೃತ **ಶೃಂಗವೇರ**, ಪ್ರಾಕೃತ **ಸಿಂಗಬೇರ್**‌ದಿಂದ ಹುಟ್ಟಿದ ಪದವೆಂದೂ ಕೊಂಬಿನ (ಶೃಂಗ) ಹಾಗಿರುವ ಮೈಯುಳ್ಳದ್ದೆಂದು ಅದರ ಅರ್ಥವೆಂದೂ ಹೇಳಲಾಗುತ್ತದೆ. ಆದರೆ ಕೆಲ ತಜ್ಞರ ಅಭಿಪ್ರಾಯದಲ್ಲಿ ಅದು ನಿಜವಾಗಿ ಮಲೆಯಾಳಿ **ಇಂಚಿವೇರ್** (ಇಂಚಿಬೇರು) ಪದದಿಂದಲೇ ಸಂಸ್ಕೃತ ಪ್ರಾಕೃತಗಳಿಗೂ ಹೋಗಿರಬೇಕು. ಅದು ಹೇಗೇ ಇರಲಿ, ಬಹಳ ಪುರಾತನದಲ್ಲೇ ಈ ಖಾರ ಗೆಣಸು ಪರದೇಶಗಳಿಗೆ ರಫ್ತಾಗುತ್ತಿತ್ತು. ಪವಿತ್ರ ಕುರಾನಿನಲ್ಲಿ ಅದು **ಝಂಜಬೀಲ್** ಎಂಬ ಹೆಸರಿನಿಂದ ಕಾಣಿಸಿಕೊಂಡಿದೆ (ಕ್ರಿ.ಶ. ೭ನೇ ಶತಮಾನ). ಅದಕ್ಕೂ ಮುಂಚೆ ಲ್ಯಾಟಿನ್ನಿನಲ್ಲಿ **ಝಿಂಗಿ ಬೇರಿ** ಎಂದು ಲಭ್ಯವಾಗುತ್ತದೆ; ಇಂಗ್ಲೀಷಿನಲ್ಲಿ **ಝಿಂಗಿ ಬೇರ್** ಇತ್ಯಾದಿ ರೂಪಗಳಿಂದ ಕ್ರಿ.ಶ. ೧೦೦೦ದಿಂದಲೇ ಸಿಗುತ್ತದೆ. ಹೆಚ್ಚು ಕಡಿಮೆ ಎಲ್ಲ ಯುರೋಪಿಯನ್ ಭಾಷೆಗಳಲ್ಲಿ ಸ್ವಲ್ಪ ರೂಪ ವ್ಯತ್ಯಾಸದೊಡನೆ ಅದೇ ಶಬ್ದ ಇದೆ.

ಶುಂಠಿ ಅಥವಾ ಖಾರ ಗೆಣಸಿನ ಹೆಸರು ಮಸಾಲೆಯಾಗಿ ಪಾನೀಯಗಳಲ್ಲಿ ಸೇರಿರದೆ ಇಂಗ್ಲೀಷ್ ಭಾಷೆಯಲ್ಲಿ ಹೆಚ್ಚು ಆಳಕ್ಕೆ ಇಳಿದಿದೆ, ರಾಜಕಾರಣದ ಪರಿಭಾಷೆಯಲ್ಲಿ **ಜಿಂಜರ್ ಗ್ರೂಪ್** (ginger group) ಎಂಬ ಪದಪುಂಜ ಬಳಕೆಯಲ್ಲಿದೆ. ಯಾವುದಾದರೂ ಪಕ್ಷ ಅಥವಾ ಪಂಗಡದಲ್ಲಿ ಅದರ ತತ್ವ ಅಥವಾ ಕಾರ್ಯಕ್ರಮವನ್ನು ತೀವ್ರವಾಗಿ ಜಾರಿಗೆ ತರುವಂತೆ ಒತ್ತಾಯಿಸುವ ಗುಂಪನ್ನು 'ಶುಂಠಿ ಗುಂಪು' ಎಂದು ಕರೆಯುತ್ತಾರೆ. **ಜಿಂಜ್‌ರಿಂಗ್ ಅಪ್** ಎಂಬ ಇನ್ನೊಂದು ಪದಪುಂಜ ಒಂದು ಸಂಸ್ಥೆ ಅಥವಾ ಸರಕಾರದ ಆಡಳಿತವನ್ನು ಹೆಚ್ಚು ಚುರುಕುಗೊಳಿಸುವ ತೀವ್ರ ಕ್ರಮ ತೆಗೆದುಕೊಳ್ಳುವುದು ಎಂದರ್ಥ ಕೊಡುತ್ತದೆ.

೨೯

ನಮ್ಮ ಮಹಿಳೆಯರು ಧರಿಸುವ ಆಭರಣಗಳಲ್ಲಿ **ಓಲೆ**ಗೆ ಬಹಳ ಮಹತ್ವವಿದೆ. ಅದು ಮಾಂಗಲ್ಯದ ಚಿಹ್ನೆ. ಮುತ್ತೈದೆತನಕ್ಕೆ **ಓಲೆ ಭಾಗ್ಯ**ವೆಂದೇ ವಿಶೇಷಣ. ಅದನ್ನು ಕಳಚುವುದೆಂದರೆ ವೈಧವ್ಯ ಬಂತೆಂದೇ ಅರ್ಥ. ''ಎನ್ನೋಲೆಯ, ಕಡಗದ ಅಳಿವನೇಂ ನೋಡಿದಪಾ ?'' ಎಂದು ಪಂಪ ಹೇಳುತ್ತಾನೆ. ಕುಮಾರವ್ಯಾಸ ಪದೇ ಪದೇ ''ಹೆಂಡಿರ ಓಲೆ ಕಳಚುವ'' ಮಾತಾಡುತ್ತಾನೆ. **ಮುತ್ತಿನೋಲೆ, ರನ್ನದೋಲೆ** ಮೊದಲಾದ ಓಲೆಯ ಪ್ರಭೇದಗಳು ಸಾಹಿತ್ಯದಲ್ಲಿಯೂ ವಾಸ್ತವದಲ್ಲಿಯೂ ದೊರೆಯುತ್ತವೆ. ಹೀಗೆ ಅದು ಇಂದು ಅಕ್ಕಸಾಲಿಗರ ಕೈವಾಡದ ಬೆಲೆ ಬಾಳುವ ಒಡವೆಯಾಗಿದ್ದರೂ ಮೊದಲಲ್ಲಿ ಅದು ಎಂಥ ಬಡವರಿಗೂ ಎಟುಕುವ ಸುಲಭ್ಯ ಪದಾರ್ಥದಿಂದ ತಯಾರಾಗುತ್ತಿತ್ತೆಂಬುದು ಅದರ ಹೆಸರಲ್ಲೇ ಹುದುಗಿರುವ ತಥ್ಯವಾಗಿದೆ. ಅದು **ತಾಡವೃಕ್ಷ** ಅಥವಾ **ತಾಳೇ** ಮರದ ಗರಿ (ತುಳಿವಿನಲ್ಲಿ **ಒಲಿ**) ಯಿಂದ ಚಿಕ್ಕ ಗಾಲಿಯಾಕಾರದಲ್ಲಿ ಮಾಡಿದ ಒಡವೆಯಾಗಿ ಪ್ರಾರಂಭವಾದದ್ದು. ಬಂಗಾರ ಮೊದಲಾದ ಬೆಲೆಯುಳ್ಳ ಲೋಹ ಮತ್ತು ಮುತ್ತು

ರತ್ನಗಳಿಂದ ಸಮೆದ ಓಲೆಗಳು ಪ್ರಸಾರಕ್ಕೆ ಬಂದ ತರುವಾಯ ಈ ಆಭರಣದ ಮೂಲರೂಪ ಮರೆಯಬಂದಿದ್ದರೂ ಮುತ್ತೈದೆಯರಿಗೆ ಕೊಡುವ ಬಾಗಿನದಲ್ಲಿ ಇಂದಿಗೂ ಕೊಡುವುದು ತಾಳೋಲೆಯ ಓಲೆ ಜೋಡಿಯೇ. ಕೆಲವೇ ದಶಕಗಳ ಹಿಂದೆ ಬಡ ವರ್ಗಗಳ ಮಹಿಳೆಯರು ನಿಜವಾದ ಓಲೆಗಳನ್ನೇ ಧರಿಸುತ್ತಿದ್ದುದನ್ನು ಕಾಣಬಹುದಾಗಿತ್ತು. ಹೆಚ್ಚಾಗಿ ಮಲೆಯಾಳಿ ಮಹಿಳೆಯರು ತಮ್ಮ ಕಿವಿ **ಪಾಲೆ**ಯಲ್ಲಿ **ದೊಡ್ಡ** ಗಾಲಿಯಂಥ **ಓಲೆ**ಯನ್ನು ತೊಡುತ್ತಿದ್ದರು. ಅದು **ಪಾಲೆ**ಯ ತೂತಿನಲ್ಲಿ ಹೋಗುವಷ್ಟು ದೊಡ್ಡ ರಂಧ್ರವನ್ನು ರೂಪಿಸಿಕೊಳ್ಳುತ್ತಿದ್ದರು. ಅದು ನಿಜವಾಗಿ ಕಿವಿಯಿಂದ ಓಲಾಡುವ ಓಲೆಯೇ ಆಗಿದ್ದು ವಯಸ್ಸಾದವರ **ಪಾಲೆ**ಯ ತೂತು ಜೋಲು ಬಿದ್ದು ಹೆಗಲಿಗೆ ಮುಟ್ಟುವಂತಾಗುತ್ತಿತ್ತು!

ಕಿವಿಯಿಂದ **ಓಲಾಡು**ತ್ತಿದ್ದುದರಿಂದ ಅದನ್ನು **ಓಲೆ**ಯೆಂದು ಕರೆದಿರಬಹುದೆಂದೂ ಅದು ತಾಳೋಲೆಯಿಂದಲೇ ಮೂಲತಃ ತಯಾರಾಗುತ್ತಿತ್ತೆಂಬುದು ಅವಶ್ಯವಿಲ್ಲೆಂದೂ ವಾದಿಸಲು ಸಾಧ್ಯವಿದ್ದರೂ ಈ ಆಭರಣದ ಸಂಸ್ಕೃತ ರೂಪ ಹಾಗಲ್ಲವೆಂದೇ ಸಾಕ್ಷಿ ಹೇಳುತ್ತದೆ. ಸಂಸ್ಕೃತದಲ್ಲಿ ಅದಕ್ಕೆ **ತಾಟಂಕ** ಅಥವಾ **ತಾಡಂಕ**ವೆಂದು ಹೆಸರು. ಇದು ಸ್ಪಷ್ಟವಾಗಿ ತಾಳೇ ಮರದ ಸಂಬಂಧವನ್ನು ಉಸುರುವ ಹೆಸರು. **ತಾಡ** ಎಂದರೆ ಸಂಸ್ಕೃತದಲ್ಲಿಯೂ ತಾಳೆಯೇ. ಕಾಳಿದಾಸನದೆಂದು ಹೇಳಲಾದ ಶ್ಯಾಮಲಾ ದಂಡಕದಲ್ಲಿ ಕಾಳೀದೇವಿ "**ತಾಟಂಕ** ಭೂಷಾವಿಶೇಷಾನ್ವಿತೇ" ಎಂದು ಸಂಬೋಧಿತಳಾಗಿದ್ದಾಳೆ.

ಹೀಗೆ ಓಲೆಗರಿಯಿಂದ ಬಹುಶಃ ಊರಿನ ಗುಡಿಗಾರ ಮಾಡಿಕೊಡುತ್ತಿದ್ದ ಈ ಒಡವೆಯ ಹೆಸರು ಬರಬರುತ್ತ ಕಿವಿಯ ಪಾಲೆಯಲ್ಲಿ ತೊಡುವ ಹೆಂಗಸರ ಯಾವುದೇ ಲೋಹಾಭರಣಕ್ಕೂ ಅನ್ವಯವಾಯಿತು. ಆದರೂ ಅದು ಅಕ್ಕಸಾಲಿಗನ ಕೈ ಸೇರುವ ಮೊದಲು ಬಹುಕಾಲ ಗುಡಿಗಾರನ ಕೈಚಳಕದ ವಸ್ತುವೇ ಆಗಿತ್ತೆಂದು ತೋರುತ್ತದೆ. ಈಗ ಜನಪ್ರಿಯವಾಗಿರುವ **ಬೆಂಡೋಲೆ**ಯನ್ನು ಚಿನ್ನ, ಮುತ್ತು, ಪುಷ್ಯರಾಗ, ವಜ್ರ, ಕೃತಕ ವಜ್ರ (ಸೀಮೆ ಕಮಲ) ಮೊದಲಾದವುಗಳಿಂದ ತಯಾರಿಸುತ್ತಿದ್ದರೂ ಅದರ ಹೆಸರು ಈ ಆಭರಣವೂ ಆದಿಯಲ್ಲಿ ಸುಲಭ್ಯ ಮೂಲ ವಸ್ತುವಿನಿಂದಲೇ ನಿರ್ಮಿಸಲ್ಪಡುತ್ತಿತ್ತೆಂಬುದನ್ನು ಹೊರಗೆಡಹುತ್ತದೆ. ಅದು ಕಬ್ಬಿನ ಜಾತಿಗೆ ಸೇರಿದ, ಮತ್ತು ಜವುಳು ನೆಲದಲ್ಲಿ ಬೆಳೆಯುವ **ಬೆಂಡಿ**ನಿಂದ ಆಗುತ್ತಿದ್ದುದರಿಂದ ಅದು **ಬೆಂಡೋಲೆ**. ಅದನ್ನು ಮೊದಲು ಬೆಂಡಿನಿಂದ ಬಾಸಿಂಗ ಮೊದಲಾದ ಅಲಂಕಾರ ವಸ್ತುಗಳನ್ನು ತಯಾರಿಸುತ್ತಿದ್ದ ಗುಡಿಗಾರನೇ ತಯಾರಿಸಿ ಬಣ್ಣ ಹಾಕಿ ಕೊಡುತ್ತಿರಬೇಕು. ತಾಳೆ ಓಲೆಯ ಬದಲು ಬೆಂಡಿನಿಂದ ತಯಾರಿಸಿದ ಗುಡಿಗಾರನ ಈ ನವ ಆವಿಷ್ಕಾರವನ್ನು ಮುಂದೆ ಅಕ್ಕಸಾಲಿಗ ಲೋಹಮಣಿಗಳಲ್ಲಿ ಅನುಕರಿಸಿರಬೇಕು.

## ೩೦

ಅನಾದಿಯಿಂದ ಮನುಷ್ಯನನ್ನು ಕೌತುಕಪಡಿಸಿದ ಪದಾರ್ಥಗಳಲ್ಲಿ ಕಾಲ ಒಂದು. ಆದರೆ ಸೂರ್ಯ ಚಂದ್ರ ನಕ್ಷತ್ರಾದಿಗಳ ಚಲನೆಯ ನಿರೀಕ್ಷಣೆಯನ್ನು ಬಿಟ್ಟರೆ ಕಾಲವನ್ನು ಅಳೆಯುವ ನಿರಪೇಕ್ಷ ಉಪಾಯವೇನು? ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ಉಪಾಯಗಳು ರೂಪಿಸಲ್ಪಟ್ಟವೆಂದು ಬೇರೆ ಬೇರೆ ಭಾಷೆಗಳು ಕಾಲದ ಅಳತೆಗ

ಉಪಯೋಗಿಸುವ ಪದಗಳಿಂದ ತಿಳಿದುಕೊಳ್ಳಬಹುದು.

ನಮ್ಮ **ಗಳಿಗೆ**ಯನ್ನೇ ತೆಗೆದುಕೊಳ್ಳುವಾ. ಅದು ಸಂಸ್ಕೃತದ **ಘಟಿಕಾ** ಪದದ ಅಪಭ್ರಂಶ. **ಘಟಿಕಾ** ಎಂದರೆ **ಗಡಿಗೆ**. ೨೪ ಮಿನಿಟುಗಳ ಕಾಲಖಂಡಕ್ಕೂ ಗಡಿಗೆಗೂ ಏನು ಸಂಬಂಧ? ಗಡಿಗೆಯ ತಳದಲ್ಲಿ ವಿಶಿಷ್ಟ ಗಾತ್ರದ ತೂತು ಕೊರೆದು ಅದರಲ್ಲಿ ತುಂಬಿದ ನೀರು ಇಳಿದು ಹೋಗಲು ತೆಗೆದುಕೊಳ್ಳುವ ಕಾಲವನ್ನಾಧರಿಸಿ ಕಾಲವನ್ನು ಅಳತೆ ಮಾಡಲಾಗುತ್ತಿತ್ತು. ಕೌಟಿಲ್ಯನ ಅರ್ಥಶಾಸ್ತ್ರ ಪ್ರಕಾರ, **ಗಡಿಗೆ**ಯ ತಳದಲ್ಲಿ ನಾಲ್ಕು ಬಂಗಾರದ **ಮಾಷ** ಅಗಲ ಮತ್ತು ನಾಲ್ಕಂಗುಲ ಉದ್ದದ ತೂತು ಕೊರೆದು, ಗಡಿಗೆಯಲ್ಲಿ ಒಂದು ಆಢಕದಷ್ಟು ನೀರು ತುಂಬಿದರೆ ನೀರೆಲ್ಲ ಇಳಿದುಹೋಗಲು ತೆಗೆದುಕೊಳ್ಳುವ ಸಮಯವೇ ಒಂದು **ನಾಲಿ**. ನಾಲಿಯೆಂದರೆ **ಘಟೀ** ಅಥವಾ **ಘಟಿಕೆ**ಯ ಇನ್ನೊಂದು ಹೆಸರು. ಈ **ಗಡಿಗೆ** ಲೋಹದ್ದಿರಬಹುದು; ಮಣ್ಣಿನದೇ ಇದ್ದಿರಬಹುದು. ಅಂತೂ ಅದರಿಂದಲೇ ಆ ಕಾಲಖಂಡಕ್ಕೆ ಹೆಸರು ಬಂತು.

ಮುಂದಿನ ಕಾಲದಲ್ಲಿ **ಗಳಿಗೆ ಬಟ್ಟಲು** ಬಂತು. ನೀರು ತುಂಬಿದ ಬೋಗುಣಿ (ಕಳಸಿಗೆಯೆಂದು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಉಲ್ಲೇಖವಿದೆ)ಯಲ್ಲಿ, ತಳದಲ್ಲಿ ವಿಶಿಷ್ಟ ಗಾತ್ರದ ಸೂಕ್ಷ್ಮ ಛಿದ್ರವಿರುವ ಬಟ್ಟಲನ್ನು ತೇಲ ಬಿಟ್ಟು ಛಿದ್ರ ಮೂಲಕ ಸಾವಕಾಶ ನೀರು ತುಂಬಿ ಬಂದು ಬಟ್ಟಲನ್ನು ಮುಳುಗಗೊಡುತ್ತಿದ್ದರು. ಬಟ್ಟಲಿನ ಗಾತ್ರ, ತೂಕ, ಛಿದ್ರದ ಅಗಲ ಇವೆಲ್ಲ ತುಂಬ ನಿಖರವಾಗಿದ್ದಿರಬೇಕು. ಇಲ್ಲದಿದ್ದರೆ ನಿಖರವಾಗಿ ಕಾಲವನ್ನೂ ಗುರುತಿಸಲಾದಿತೇ? ಹೀಗೆ ತಂತ್ರ ಬದಲಾದರೂ **ಘಟಿಕೆ** ಅಥವಾ **ಗಳಿಗೆ**ಯೆಂಬ ಹಳೇ ಹೆಸರೇ ಉಳಿಯಿತು.

ಊರೂರಿಗೆ ಅಗ್ರಹಾರದಲ್ಲಿ ಈ **ಗಳಿಗೆ** ಲೆಕ್ಕ ಮಾಡುವ 'ಯಂತ್ರ' ಇರುತ್ತಿತ್ತು. ಅದೇ **ಘಟಿಕಾಲಯ**. ಇಂದು ನಾವು ಕಾಲವನ್ನು ತೋರಿಸುವ ಯಂತ್ರಕ್ಕೆ ಇಟ್ಟ **ಗಡಿಯಾಳ** ಅಥವಾ **ಗಡಿಯಾರ** ಎಂಬ ಹೆಸರು. **ಗಳಿಗೆಯ ಮನೆ ಘಟಿಕಾ + ಆಲಯ**. ಈ ಘಟಿಕಾಲಯದಲ್ಲಿ ಊರಿಗೆಲ್ಲ ಜಾವಕ್ಕೊಮ್ಮೆ ಕಾಲವನ್ನು ಸೂಚಿಸಲು **ಜಾಗಟೆ** ಬಾರಿಸಲಾಗುತ್ತಿತ್ತು. ಇಂದು ನಾವು ಪಾಶ್ಚಾತ್ಯರಿಂದ ಪಡೆದ ೬೦ ನಿಮಿಷಗಳ **ಗಂಟೆ**ಗೆ ಈ **ಜಾವಗಂಟೆ** – ಜಾಗಂಟೆ ಮೂಲ. ಅವಧಿ ಬದಲಾದರೂ ಶಬ್ದ ಅದೇ ಉಳಿಯಿತು.

ಪಾಶ್ಚಾತ್ಯ ದೇಶಗಳಲ್ಲಿ **ಘಟಿಕೆ** ಅಥವಾ **ಗಳಿಗೆ ಬಟ್ಟಲಿನ** ಬದಲು ಇಂಗ್ಲೀಷ್ 8 ಅಂಕೆಯಾಕಾರದ, ನಡುವೆ ಕೊರಳಲ್ಲಿ ದ್ವಾರವಿರುವ, ಎರಡೂ ಕಡೆ ಮುಚ್ಚಿದ ಅರ್ಧಾಂಶ ಉಸುಬು ತುಂಬಿದ ಗಾಜಿನ ಪಾತ್ರೆ ಕಾಲಮಾಪಕವಾಗಿತ್ತು. ನಡುವಿನ ದ್ವಾರದಿಂದ ಉಸುಬು ಸರಿದು ಮೇಲಿನ ಖಾನೆ ಬರಿದಾಗಿ ಕೆಳಗಿನದು ತುಂಬಿದೊಡನೆ ಪಾತ್ರೆಯನ್ನು ತಿರುಗಿಸಿಟ್ಟು ಮತ್ತೆ ಉಸುಬು ಕೆಳಗಿಳಿಯಗೊಡುತ್ತಿದ್ದರು. ಇದೇ sand glass ಅಥವಾ hour glass. ಇಂದು ಈ ಸಾಧನಗಳು ಇಲ್ಲಿಯಾಗಲಿ ಅಲ್ಲಿಯಾಗಲಿ ಇಲ್ಲದಿದ್ದರೂ ಭಾಷೆಯಲ್ಲಿ ಇವುಗಳ ಮುದ್ರೆ ಹಾಗೆಯೇ ಇದೆ. ನಾವು **ಗಳಿಗೆ ಬಟ್ಟಲು** ತುಂಬುತ್ತ ಬಂತು ಎನ್ನುತ್ತೇವೆ – ಕಾಲ ಸನ್ನಿಹಿತವಾಗುತ್ತಿದೆ ಎನ್ನುವುದಕ್ಕೆ; ಪಾಶ್ಚಾತ್ಯರು the sands are running out – ಉಸುಬು ಮುಗಿಯುತ್ತ ಬಂತು ಎನ್ನುತ್ತಾರೆ!

೩೧

**ತಿಂಗಳು** ಅನ್ನುತ್ತೇವೆ. **ತಿಂಗಳ ಸಂಬಳ** ಅನ್ನುತ್ತೇವೆ. ಈಗ ತಿಂಗಳು ಎಂದರೆ ಸೂರ್ಯನ ವಾರ್ಷಿಕ ಗತಿಯನ್ನು ಸುಮಾರು ಹನ್ನೆರಡು ಭಾಗ ಮಾಡಿದ ಕಾಲಖಂಡ ಎಂದೇ ನಮಗೆ ಅರ್ಥವಾಗುವುದು. ಆದರೆ ಸೂರ್ಯನ ಗತಿಯನ್ನು ಭಾಗ ಮಾಡಿ ಕಾಲವನ್ನು ಅಳೆಯುವುದು ಮನುಷ್ಯನ ಇತಿಹಾಸದಲ್ಲಿ ತಡವಾಗಿ ಬಂದದ್ದು ಎಂಬ ಕಥೆಯನ್ನು **ತಿಂಗಳು** ಶಬ್ದವೇ ಹೇಳುತ್ತದೆ. **ತಿಂಗಳು** ಅಂದರೆ ಚಂದ್ರ. **ಚಂದ್ರ**ನನ್ನು ನೋಡಿ ನಿರ್ಧರಿಸಿದ್ದು **ತಿಂಗಳು**. ಚಂದ್ರ ಒಮ್ಮೆ ಅದೃಶ್ಯಾವಸ್ಥೆಯಿಂದ ಪೂರ್ಣಾವಸ್ಥೆಗೆ ಬೆಳೆದು ಪುನಃ ಕುಂದುತ್ತ ಅದೃಶ್ಯತ್ವಕ್ಕೆ ತಲುಪುವ ಅವಧಿ **ತಿಂಗಳು**. ಹೆಚ್ಚಿನ ಲೆಕ್ಕದ ಅಗತ್ಯವಿಲ್ಲದೆ ಗಗನದಲ್ಲಿ ಸುವ್ಯಕ್ತವಾಗಿರುವ **ತಿಂಗಳ** ವೃದ್ಧಿ-ಹ್ರಾಸಗಳನ್ನು ಕಂಡು ಗೊತ್ತು ಮಾಡಬಹುದಾದ ಅಳತೆ ಕೋಲು ಇದು. ಪುರಾತನ ಮಾನವನಿಗೆ ಅದು ಸುಲಭವಾಗಿತ್ತು.

ಇದು ದ್ರಾವಿಡ ವರ್ಗಕ್ಕೇ ವಿಶಿಷ್ಟವಾದದ್ದಲ್ಲ. ಇಂಗ್ಲೀಷಿನ **ಮಂತ್** (month) ಕೂಡ ಚಂದ್ರನನ್ನೇ ಅವಲಂಬಿಸಿದ್ದು. **ಮಂತ್** ಎಂಬುದು **ಮೂನ್** (ಚಂದ್ರ) ಪದದ ಪ್ರಾಚೀನ ರೂಪದಿಂದ ಹುಟ್ಟಿದ್ದು. ಪಾರಸೀಕ ಭಾಷೆಯಲ್ಲಿ ತಿಂಗಳಿಗೆ **ಮಾಹ್** ಎಂಬುದು ಶಬ್ದ. ಅದು ಚಂದ್ರನನ್ನೂ **ತಿಂಗಳ** ಅವಧಿಯನ್ನೂ ಸೂಚಿಸುತ್ತದೆ.

ಸಂಸ್ಕೃತದ **ಮಾಸದ** ಸಂಗತಿಯೂ ಅದೇ. ಬಹಳ ಮಟ್ಟಿಗೆ ಐತಿಹಾಸಿಕ ಕಾಲದ ಸಂಸ್ಕೃತದಲ್ಲಿ ಬಳಕೆ ತಪ್ಪಿರುವ **ಮಾಸ್** (= ಚಂದ್ರ) ಪದದಿಂದ ಜನಿಸಿದ್ದು ಮಾಸ. ಪಾರಸೀಕ **ಮಾಹ್** ಪದದ ಸೋದರ **ಮಾಸ್**. ಉತ್ತರ ಕಾಲದಲ್ಲಿ ಕೂಡ **ಮಾಸ್ ಪೂರ್ಣಮಾಸೀ**, **ಪೂರ್ಣಿಮಾ**, **ಅಮಾವಾಸ್ಯಾ** ಎಂಬ ಪದಗಳಲ್ಲಿ ತೆರೆಮರೆಯಲ್ಲಿ ಬದುಕಿಕೊಂಡಿದೆ. **ಪೂರ್ಣ ಮಾಸೀ** ತುಂಬು **ಮಾಸ್** (= ಪೂರ್ಣಚಂದ್ರ) ಎಂದು ಅರ್ಥ ಕೊಡುತ್ತದೆ. **ಪೂರ್ಣಿಮಾ** ಪದದ **ಮಾ** ಎಂಬುದು ಮಾಸ್‌ನದೇ ಅವಶೇಷ ರೂಪ, **ಅಮಾವಾಸ್ಯೆಯ ಅಮಾ** ಎಂಬುದೂ ಚಂದ್ರ ಇಲ್ಲದ (ಅ = ಇಲ್ಲ, ಮಾ = ಚಂದ್ರ) ದಿನವೆಂದು ಅರ್ಥ ಕೊಡುತ್ತದೆ. ಅಷ್ಟೇಕೆ, ಚಂದ್ರನನ್ನು ಸೂಚಿಸುವ ಸಂಸ್ಕೃತದ ಇನ್ನೊಂದು ಶಬ್ದವಾದ **ಚಂದ್ರಮಾಃ** ಎಂಬುದೂ ದ್ವಿರುಕ್ತಿ ಪದ. **ಚಂದ್ರ** ಎಂದರೂ **ಮಾಃ** (ಮಾಸ್) ಎಂದರೂ ಒಂದೇ. **ಚಂದ್ರ** ಶಬ್ದ ಭಾಷೆಯಲ್ಲಿ ಹೆಚ್ಚು ರೂಢವಾಗಿ, **ಮಾಸ್** ಶಬ್ದ ಮರೆತುಹೋಗತೊಡಗಿದ್ದ ಸಂಧಿಯಲ್ಲಿ ಈ ಇಮ್ಮಡಿ ಶಬ್ದ ಬಂದಿರಬೇಕು. ''ಕಾಂಪೌಂಡ್ ಗೋಡೆ,'' ''ಸಗಣಿ ಗೋಮಯ'' ಇತ್ಯಾದಿಗಳ ಹಾಗಿನದು ಈ ಪದ.

ಸೂರ್ಯನ ಒಂದು ಪ್ರದಕ್ಷಿಣಾವಧಿಯನ್ನು ಸೂಚಿಸುವ **ವರ್ಷ** ಶಬ್ದ ಬೇರೊಂದು ಕಥೆ ಹೇಳುತ್ತದೆ. **ವರ್ಷ** ಎಂದರೆ **ಮಳೆ**. ಒಂದು ಮಳೆಗಾಲದಿಂದ ಇನ್ನೊಂದು ಮಳೆಗಾಲದವರೆಗಿನ ಅವಧಿ **ವರ್ಷ**. ಆದರೆ ವೇದಗಳಲ್ಲಿ ವರ್ಷದ ಅವಧಿಯನ್ನು **ಶರತ್** ಎಂದು ಉಲ್ಲೇಖಿಸಿದ್ದುಂಟು. ಹೀಗೆ ''ಜೀವೇಮ **ಶರದಃ** ಶತಮ್'' (ನೂರುಶರತ್ಕಾಲ ಬದುಕೋಣ) ಎಂದು ಆಶೀರ್ವಾದ ಮಂತ್ರ ಇದೆ. ಪ್ರಾಚೀನಾರ್ಯರು **ಶರತ್ಕಾಲ**ದಿಂದ ವರ್ಷವನ್ನು ಆರಂಭಿಸುತ್ತಿದ್ದರು. ಆದ್ದರಿಂದ ಅವರು ಮಾರ್ಗಶೀರ್ಷ ಮಾಸವನ್ನು **ಅಗ್ರಹಾಯಣ** (ಹಾಯನ = ವರ್ಷ, ಅಗ್ರ = ಪ್ರಾರಂಭ) ಎನ್ನುತ್ತಿದ್ದರು. ಹೀಗೆ ಶರತ್ಕಾಲದಿಂದ ವರ್ಷಗಣನೆ ಮಾಡುವ ಜನರು ಶರತ್ಕಾಲದಲ್ಲಿ ಎದ್ದು ಕಾಣುವ ನೈಸರ್ಗಿಕ ಬದಲಾವಣೆಯುಳ್ಳ ಸಮಶೀತೋಷ್ಣ ಅಥವಾ ಶೀತವಲಯದಲ್ಲಿ ವಾಸಿಸುತ್ತಿದ್ದಿರಬೇಕು.

ಅವರು ಮಳೆ ಪ್ರಧಾನ ಋತು ಬದಲಾವಣೆಯ ಲಕ್ಷಣವಾಗುಳ್ಳ ದಕ್ಷಿಣ ಪ್ರದೇಶಗಳಿಗೆ ವಲಸೆ ಬಂದ ಮೇಲೆ **ವರ್ಷ**ವೆಂಬ ಪದವನ್ನು ಸ್ವೀಕರಿಸಿರಬೇಕು.

೩೨

ಉತ್ತರ ಕರ್ನಾಟಕದ ನುಡಿಕಟ್ಟುಗಳಲ್ಲಿ ಇತರ ಪ್ರದೇಶಗಳವರಿಗೆ ನಗು ಬರಿಸುವ ಮಾತೆಂದರೆ **ಹತ್ತು**ವುದು. ಇತರರ **ತೊಡಗು**ವುದು, **ಆರಂಭಿಸು**ವುದು, **ಸುರುಮಾಡು**ವುದು ಇತ್ಯಾದಿಯಾಗಿ ಹೇಳುವುದನ್ನು ಉತ್ತರ ಕರ್ನಾಟಕದವರು **ಹತ್ತು**ವುದು ಎನ್ನುತ್ತಾರೆ. ಇದನ್ನು ಕುರಿತು ಇತರರು ಮಾಡುವ ಜೋಕುಗಳು ಸಾಕಷ್ಟಿವೆ. ''ಗಿಡ **ಹತ್ತಲಿಕ್ಕೆ** ಹತ್ತಿದ'' ಎನ್ನುವುದು ಒಮ್ಮಡಿ ವಿಚಿತ್ರವೆನಿಸಿದರೆ ''ಗಾಡಿ **ಇಳಿಯಲಿಕ್ಕೆ ಹತ್ತಿ**ದ'' ಇಮ್ಮಡಿ ತಮಾಷೆಯಾಗಿದೆ.

ಕರ್ನಾಟಕದ ಇತರ ಪ್ರದೇಶಗಳಲ್ಲಿ ಇಲ್ಲದ ಈ ಅರ್ಥ **ಹತ್ತು** ಧಾತುವಿಗೆ ಎಲ್ಲಿಂದ ಬಂತು ? **ಹತ್ತು** (ಹಳೆಗನ್ನಡದ **ಪತ್ತು**) ಧಾತುವಿನ ಪ್ರಾಥಮಿಕ ಅರ್ಥ **ತಗಲಿಕೋ, ಹಿಡಿ, ಹೊಂದು** ಇತ್ಯಾದಿಯಾಗಿದೆ; ಅನಂತರದ್ದು ಏರು ಎಂಬರ್ಥ. ಪ್ರಾಚೀನ ಗ್ರಂಥಗಳಲ್ಲಿ ಈ ಎರಡನೇ ಅರ್ಥದಲ್ಲಿ ಕೂಡ (ಏರು, ಆರೋಹಿಸು) **ಪತ್ತು** ಪ್ರಯೋಗವಾದದ್ದು ವಿರಳ. **ಪ್ರಾರಂಭಿಸು** ಎನ್ನುವ ಅರ್ಥ ಬಂದದ್ದಂತೂ ತೀರ ಈಚೆಗೆ. ಇದಕ್ಕೆ ಕಾರಣ ಹುಡುಕುವುದಕ್ಕೆ ನಾವು ಉತ್ತರ ಕರ್ನಾಟಕದ ನೆರೆ ಭಾಷೆಯೂ ಕೆಲವು ಕಾಲ ಪ್ರಭುತ್ವ ನಡೆಸಿದವರ ಭಾಷೆಯೂ ಆದ ಮರಾಠಿಯತ್ತ ಮತ್ತು ಹಿಂದುಸ್ತಾನಿಯತ್ತ ನೋಡಬೇಕು. ಮರಾಠಿಯ **ಲಾಗಣೇಂ**, ಹಿಂದಿಯ **ಲಗನಾ** ಮೂಲದಲ್ಲಿ **ಪತ್ತು, ಹತ್ತು**ವಿನಂತೆ ತಗಲು, ಅಂಟು, ಹೊಂದಿರು ಇತ್ಯಾದಿ ಅರ್ಥಗಳನ್ನೇ ಕೊಡುವುದಾಗಿದ್ದು ಅದಕ್ಕೆ **ಪ್ರಾರಂಭಿಸು** ಎಂಬರ್ಥವೂ ರೂಪುಗೊಂಡು ಬಹಳವಾಗಿ ಪ್ರಚಾರಕ್ಕೆ ಬಂತು. ಹಿಂದುಸ್ತಾನಿಯ **ಕರನೇ ಲಗಾ**, ಮರಾಠಿಯ **ಕರಾಯಲಾಗಲೇ** ಎಂಬುದರಿಂದ ಪ್ರಭಾವಿತವಾಗಿ ಉತ್ತರ ಕರ್ನಾಟಕ ದಲ್ಲಿಯೂ ಸಮಾನ ಮೂಲಾರ್ಥದ **ಹತ್ತು** ಪದ ಪ್ರಾರಂಭಿಸು ಎಂಬರ್ಥದಲ್ಲಿ ಪ್ರಯೋಗವಾಗತೊಡಗಿತು. **ಹತ್ತು** ಎನ್ನುವುದಕ್ಕೆ **ಆರಂಭಿಸು** ಎಂಬ ಅರ್ಥದ ಆಧಾರಕ್ಕೆ ಕಿಟ್ಟಲ್ಲರು ಕೊಡುವ ಪ್ರಯೋಗಗಳೆಲ್ಲ ಕಳೆದ ಒಂದು ಶತಮಾನದೊಳಗೆ ಬರೆಯಲಾದ ಗದ್ಯ ಸಾಹಿತ್ಯದಿಂದಲೇ ಎತ್ತಿದ್ದಾಗಿವೆ. ಇಂಥ ಪರಪ್ರಭಾವ ಭಾಷೆಗಳಲ್ಲಿ ಯಾವಾಗಲೂ ಕಾಣಿಸುತ್ತಲೇ ಇರುತ್ತದೆ. ಹಿಂದುಸ್ತಾನಿ ಮತ್ತು ಉರ್ದುವಿನಲ್ಲಿ **ಇತ್ತೀಚೆಗೆ** ಎಂಬರ್ಥದಲ್ಲಿ **ಆಜ್-ಕಲ್** (ಅಕ್ಷರಶಃ = ಇಂದು ನಾಳೆ) ಎಂದಿರುವುದನ್ನು ಅನುಕರಿಸಿ ಹಿಂದಿನ ನಿಜಾಮ್ ಸಂಸ್ಥಾನದ ಕನ್ನಡಿಗರು ಕನ್ನಡದಲ್ಲಿಯೂ ಇತ್ತೀಚೆಗೆ ಎಂಬುದಕ್ಕೆ **ಇವತ್ತು ನಾಳೆ** ಎಂಬ ಭಾಷಾಂತರಿತ ನುಡಿಕಟ್ಟನ್ನು ಬಳಸುತ್ತಿದ್ದು ಅದು ಬರವಣಿಗೆಗೂ ಇಳಿದುಬಿಟ್ಟಿದೆ.

**ಲಾಗಣೇಂ, ಲಗನಾ** ಪ್ರಭಾವದಿಂದ ಕನ್ನಡದಲ್ಲಿ **ಹತ್ತು** ಪ್ರಾರಂಭ ಎಂಬರ್ಥದಲ್ಲಿ ಬಳಕೆಗೆ ಬಂದದ್ದನ್ನು ನೋಡಿ ಅಷ್ಟೇನೂ ಸೋಜಿಗ ಪಡಬೇಕಾಗಿಲ್ಲ. ಸಂಸ್ಕೃತದ **ಪ್ರಾರಂಭ, ಆರಂಭ**ಗಳ ಮೂಲ **ರಭ್** ಧಾತು ಕೂಡ ಮೂಲದಲ್ಲಿ **ತಗಲು, ಅಪ್ಪಿಕೋ** ಇತ್ಯಾದಿ ಅರ್ಥವನ್ನು ಹೊಂದಿದ್ದೆ ಆಗಿದೆ. ಅದು ಹೋಗಲಿ, ಪ್ರಾರಂಭಾರ್ಥಕವಾದ ಕನ್ನಡದ **ತೊಡಗು** ಧಾತುವಿಗೂ ಮೂಲಾರ್ಥ **ತಗಲು, ತೊಡಕಿಕೋ, ಹಿಡಿ** ಎಂದೇ ಇರುವಂತೆ ಕಾಣುತ್ತದೆ. **ಹತ್ತು** (= ಪತ್ತು) ಧಾತುವಿಗೂ ಅವೇ ಅರ್ಥಗಳಿವೆ. **ವ್ರತಹಿಡಿದ** ಎಂದು ನಾವು

ಹೇಳುವಾಗ **ಪ್ರಾರಂಭಿಸಿದ** ಎಂದೇ ತಾತ್ಪರ್ಯವಲ್ಲವೇ? **ಹತ್ತು, ತಗಲು, ತೊಡಗು (ಕು)** ಎನ್ನುವಾಗ (ಉದಾ: **ಅವರ ಗದ್ದೆ ನಮ್ಮದಕ್ಕೆ ಹತ್ತಿದೆ**) ನಮ್ಮ ಸ್ಥಾನದಿಂದ ಅನಂತರದ್ದು ಎಂದು ಪ್ರತೀಕವಾಗುತ್ತದೆ. ಈ **ಪೌರ್ವಾಪರ್ಯದ** ಕಲ್ಪನೆಯೊಡನೆ '**ಪ್ರಾರಂಭ**'ದ ಕಲ್ಪನೆಗೆ ತೊಡಕಿಕೊಂಡಿರುವುದರಿಂದ **ಲಗ್, ಪತ್ತು, ತೊಡಗು, ರಭ್** ಇವೆಲ್ಲವುಗಳೂ ವಿಸ್ತರಣೆಯಿಂದ ಪ್ರಾರಂಭ ಎಂಬ ಅರ್ಥವನ್ನು ಕೊಡಲಾರಂಭಿಸಿರಬೇಕು.

೩೩

ಜಗನ್ನಾಥ ಅಥವಾ ಪುರಿ ನಗರ ನಮ್ಮ ದೇಶದಲ್ಲಿ ಅತಿ ಪ್ರಸಿದ್ಧವಾದ ತೀರ್ಥಕ್ಷೇತ್ರ. ಅದು ಭಾರತದ ಏಳು ಮೋಕ್ಷದಾಯಕ ಕ್ಷೇತ್ರಗಳಲ್ಲಿ ಒಂದೆಂದು ಪುರಾಣೋಕ್ತವಾಗಿದೆ. ಈ ಕ್ಷೇತ್ರ ಇಂಗ್ಲೀಷ್ ಭಾಷೆಗೆ ಎರಡು ಶಬ್ದಗಳನ್ನು ದಾನಮಾಡಿದೆ. ಅವು ಮಾತ್ರ ಕ್ಷೇತ್ರದ ಪಾವಿತ್ರ್ಯಕ್ಕೆ ಸಂಬಂಧಿಸಿದವಲ್ಲ. ಒಂದು, ಮಧ್ಯಯುಗದಲ್ಲಿ ನಮ್ಮ ಜವಳಿ ವ್ಯಾಪಾರದ ಸಮೃದ್ಧಿಗೆ ಸಾಕ್ಷಿಯಾದ **ಜೆಕನೆಟ್** (jaconet) ಎಂಬುದು. ಇದು **ಜಗನ್ನಾಥ** ಪದದ್ದೇ ಇಂಗ್ಲೀಷ್ ಅಪಭ್ರಂಶ ಹೊರತು ಬೇರೆ ಅಲ್ಲ. ಹಿಂದೆ ಬಂಗಾಲದಿಂದ ರಫ್ತಾಗುತ್ತಿದ್ದ ಜಗತ್ಪ್ರಸಿದ್ಧ ಮಸ್ಲಿನ್ನಿಗಿಂತ ಸ್ವಲ್ಪ ದಪ್ಪವಾದ ಹತ್ತಿ ಬಟ್ಟೆಯೊಂದು ಉತ್ಕಲ (ಒಡಿಸಾ)ದಿಂದ ಪಾಶ್ಚಾತ್ಯ ದೇಶಗಳಿಗೆ ಹೋಗುತ್ತಿದ್ದುದು **ಜಗನ್ನಾಥ ಪುರಿಯಿಂದಾದ್ದರಿಂದ** ಪಟ್ಟಣದ ಹೆಸರಿಂದಲೇ ಅದನ್ನು ಕರೆಯಲಾಯಿತು. ಇಂದು **ಜೆಕನೆಟ್** ಬಟ್ಟೆಯನ್ನು ಗಾಯಗಳಿಗೆ ಹಾಕುವ ಬ್ಯಾಂಡೇಜಿಗೆ ಉಪಯೋಗಿಸುತ್ತಾರೆ; ಅದು ಭಾರತದಿಂದ ರಫ್ತಾಗುತ್ತಲೂ ಇಲ್ಲ, ಆದರೆ ಹೆಸರು **ಜಗನ್ನಾಥದ್ದೇ** ಉಳಿದಿದೆ.

ಇನ್ನೊಂದು ಪದ ಈ ದೇಶಕ್ಕೆ ಒಳ್ಳೇ ಕೀರ್ತಿ ತರುವಂಥದಲ್ಲ. **ಜಗರ್ನಾಟ್** (juggernaut) ಎಂಬುದೂ **ಜಗನ್ನಾಥದ್ದೇ** ಇಂಗ್ಲೀಷ್ ಅಪಭ್ರಂಶ. ಇದು ಪುರಿಯ ಜಗನ್ನಾಥ ದೇವರ **ರಥಕ್ಕೆ** ಸಂಬಂಧಿಸಿದ ಒಂದು ಅಮಾನುಷ ಐತಿಹ್ಯದಿಂದ ಜನಿಸಿ ಪ್ರಚುರಗೊಂಡ ಪದ. ಆ ಪ್ರಚಂಡ ಗಾತ್ರದ ರಥದ ಉತ್ಸವ ಹೊರಟಾಗ ಹರಕೆ ಹೇಳಿಕೊಂಡ ಭಕ್ತರು ಅದರ ಮುಂದೆ ತಮ್ಮನ್ನು ಈಡಾಡಿಕೊಳ್ಳುತ್ತಿದ್ದರಂತೆ. ರಥದ ಗಾಲಿಗಳು ಅವರ ಮೇಲೆ ಹಾಯ್ದು ಅವರು ಜಜ್ಜಿಯಾಗಿ ಹೋಗುತ್ತಿದ್ದರು. ಈ ಕಥೆ ಕೇಳಿ, ಆ ರಥದ ಗಾತ್ರ ನೋಡಿ, ದಂಗಾದ ಯುರೋಪಿಯನ್ನರು ವ್ಯಕ್ತಿಗಳ ಸುಖ ದುಃಖವನ್ನು ಲಕ್ಷಿಸದೆ ತನ್ನ ಪಾಡಿಗೆ ತಾನು ಸಾಗುವ ಯಾವುದೊಂದು ನಿರ್ಘೃಣವಾದ ಶಕ್ತಿಗೆ **ಜಗರ್ನಾಟ್** ಎಂದು ಆಲಂಕಾರಿಕವಾಗಿ ಕರೆದರು. ಉದಾಹರಣೆ ಸರಕಾರಿ ಯಂತ್ರದ **ಜಗರ್ನಾಟ್**. ಇಂದು ಈ ಐತಿಹ್ಯ ವಾಸ್ತವಿಕವಾಗಿಲ್ಲ; ಆದರೆ ಇದು ಯುರೋಪಿಯನ್ನರ ಕಲ್ಪನಾವಿಲಾಸವೆಂದು ಹೇಳಲು ನನಗೆ ಧೈರ್ಯ ಸಾಲದು. ಭಕ್ತರ ಈ ಬಗೆಯ ಆತ್ಮಯಜ್ಞ ಹಿಂದೆ ಪ್ರಚಲಿತವಾಗಿತ್ತು. ನಾನು ಚಿಕ್ಕಂದಿನಲ್ಲಿ ಕೇಳುತ್ತಿದ್ದ **ಭಾಗಾನಗರದ ಹಾಡಿನಲ್ಲಿ** ಮಕ್ಕಳಿಲ್ಲದವಳೊಬ್ಬಳು ತನಗೆ ಮಗುವಾದರೆ ಅದನ್ನು ಭಾಗಾನಗರದ ದೇವರ ರಥದ ಕೆಳಗೆ ಈಡಾಡುವುದಾಗಿ ಹರಸಿಕೊಂಡಿರುತ್ತಾಳೆ. ಅಲ್ಲದೆ ಹಿಂದಿಯಲ್ಲಿಯೂ **ಜಗನ್ನಾಥಕಾ ರಥ** ಎಂಬೊಂದು ನುಡಿಕಟ್ಟು ಇದೆ. ಅದೂ ಯಾವ ಮಾನವೀಯ ಪರವೆಯಿಲ್ಲದೆ ಸಾಗುವ ಯಾವುದಾದರೂ ಅವಾಢವ್ಯ ವ್ಯವಸ್ಥೆಯನ್ನು ಸೂಚಿಸುತ್ತದೆ.

ವಿದೇಶಿ ಸ್ಥಳ ನಾಮವೊಂದು ನಮ್ಮ ಭಾಷೆಯಲ್ಲಿ ಒಂದು ಪ್ರಕ್ರಿಯೆಯ ಅಭಿಧಾನವಾಗಿ ರೂಢಿಯಾದುದಕ್ಕೆ **ಜುಲಾಬು** ಒಂದು ಉದಾಹರಣೆ. ಭೇದಿಗೆ ಕೊಡುವ ಯಾವುದೇ ಔಷಧಕ್ಕೆ ಈ ಹೆಸರು ಬಿದ್ದಿದೆ. ಮೂಲತಃ ಇದು **ಮೆಕ್ಸಿಕೋ** ದೇಶದ ಒಂದೂರಿನ ಹೆಸರು : **ಜಲಾಪ** (Jalapa ಅಥವಾ Xalapa). ಅಲ್ಲಿಂದ ಮೊತ್ತಮೊದಲು ತಂದ ಒಂದು ಬೇರನ್ನು ಪಾಶ್ಚಾತ್ಯರು ವಿರೇಚನಕ್ಕೆ ಬಳಸತೊಡಗಿದರು. ಆದರೆ ನಮ್ಮಲ್ಲಿಗೆ ಈ ಶಬ್ದ ಬಂದದ್ದು ಯುನಾನಿ ವೈದ್ಯರಿಂದ ಇರಬೇಕು; **ಜುಲಾಬ್** ಎಂಬುದಕ್ಕೆ ಅರಬ್ಬಿ **ಜುಲ್ಲಾಬ್** ಮೂಲ, ಬಹುಶಃ ಮೆಕ್ಸಿಕೋವಿನಿಂದ ಬಂದ ಈ ಔಷಧ ಮೂಲಿಕೆಯನ್ನು ಅರಬ್ ವೈದ್ಯರು ತಮ್ಮ ಔಷಧ ಪದ್ಧತಿಯಲ್ಲಿ ಅಳವಡಿಸಿಕೊಂಡದ್ದು ಭಾರತಕ್ಕೂ ವ್ಯಾಪಿಸಿರಬೇಕು.

೩೪

ಪೀಠೋಪಕರಣಗಳು ಮನೆ–ಮಾರಿನ ಆವಶ್ಯಕತೆಗಳು. ಇಂದಿನಂಥವಲ್ಲದಿದ್ದರೂ ನಮ್ಮ ದೇಶದಲ್ಲಿ ಕೂಡ ಈ ಜಿಂದಿಗೆಗಳು ಇದ್ದುವು. ಕನ್ನಡದ **ಮಣೆ,** ಸಂಸ್ಕೃತದ **ಪೀಠ, ವಿಷ್ಟರ, ಆಸನ** ಮೊದಲಾದವು ಕೂಡ್ರುವ ಉಪಕರಣಗಳು. **ಮಂಚ** ಇಂದಿನ **ಬೆಂಚು** ಮತ್ತು **ಕಾಟ್** (cot)ಗಳಿಗೆ ಸೇರಿಯೇ ಅನ್ವಯಿಸುವ ಪದ. **ವಿಷ್ಟರ, ಆಸನ** ಎಂಬವು ವೇದಗಳಲ್ಲಿಯೇ ಕಾಣಸುತ್ತವೆ. ಬಹುಶಃ **ವಿಷ್ಟರ** ದರ್ಭೆ ಅಥವಾ ಇತರ ಹುಲ್ಲಿನ **ಚಾಪೆ**ಯಂಥದಿರಬೇಕೆಂದು ಆ ಪದದ ಸ್ವರೂಪದಿಂದ (ವಿ + ಸ್ತರ) ಅನಿಸುತ್ತದೆ. **ಆಸನ** ಕೂಡ್ರುವ, ಬಹುಶಃ ಎತ್ತರದ ಉಪಕರಣ. **ಪೀಠ** ಅಷ್ಟು ಪ್ರಾಚೀನವಲ್ಲದಿದ್ದರೂ **ಗೃಹ್ಯಸೂತ್ರ, ಮಹಾಭಾರತ**ಗಳಲ್ಲಿ ಕಾಣಸುವುದರಿಂದ ಸಾಕಷ್ಟು ಪುರಾತನ. ಮುಂದೆ ಇವೆಲ್ಲ ಪದಗಳನ್ನು ಒಟ್ಟಿನಲ್ಲಿ ಕೂಡ್ರುವ ಉಪಕರಣವೆಂಬರ್ಥದಲ್ಲಿ ಗೋಷ್ವಾರೆಯಾಗಿ ಬಳಸಿದರು. ಅದರಲ್ಲಿಯೂ ಪೀಠಕ್ಕೆ ಧರ್ಮಾಧಿಕಾರ, ವಿದ್ಯಾ, ನ್ಯಾಯಾಧಿಕಾರ ಸ್ಥಾನಗಳೆಂಬ ಅರ್ಥವೂ ಬಂತು. ಈ ಪೀಠಗಳಿಗೆ ಕೈಗಳು ಇಲ್ಲದಿದ್ದರೂ ಬೆನ್ನಿಗೆ ಆನಿಕೆ ಇದ್ದಿರಬೇಕು.

ಮುಂದೆ ಬಳಕೆಗೆ ಬಂದ **ಕುರ್ಚಿ, ಮೇಜು**ಗಳು ಮುಸ್ಲಿಮ್ ಆಳಿಕೆಯ ದಾಯಗಳು. **ಕುರ್ಚಿ** ಅರಬ್ಬಿ ಭಾಷೆಯ **ಕುರ್ಸಿಯ** ಅಪಭ್ರಂಶ. ಅದಕ್ಕೆ ಬೆನ್ನು ಇದೆ; ಒಬ್ಬರು ಕೂಡ್ರುವ ಆಸನ. **ಮೇಜು** ಪರ್ಶಿಯನ್ ಪದ (ಮೇಜ್). ಬರೆಯುವುದೇ ಮೊದಲಾದ ಕಾರ್ಯಗಳಿಗೆ ಉಪಯೋಗಿಸುವ ಉಪಕರಣ ಅದು. ನಮ್ಮ ದೇಶದಲ್ಲಿ ಮುಸ್ಲಿಮರಿಗಿಂತ ಹಿಂದೆ ಅಂಥದೊಂದು ಇತ್ತೋ ಇಲ್ಲವೋ (ನನಗೆ) ಗೊತ್ತಿಲ್ಲ. ಈಗ ಈ ಪದಗಳೂ ಇಂಗ್ಲೀಷಿನ **ಚೇರ್, ಟೇಬಲ್**ಗಳಿಗೆ ಸ್ಥಾನ ಬಿಟ್ಟು ಕೊಡುತ್ತಿವೆ.

**ಚೇರ್** ಎಂಬುದು ಗ್ರೀಕ್ ಭಾಷೆಯ **ಕೆಥೆಡ್ರ**ದ ಅಪಭ್ರಂಶ. ಒಬ್ಬರು ಕೂಡ್ರುವ ಆಸನವೆಂದೇ ಅದರ ಮೂಲಾರ್ಥ. ಆದರೆ ನಮ್ಮಲ್ಲಿ **ಪೀಠ** ಎಂಬುದು ಧರ್ಮಸ್ಥಾನಗಳಿಗೆ ಅನ್ವಯವಾದಂತೆ ಅಲ್ಲಿಯೂ ಮೂಲ **ಕೆಥೆಡ್ರ**ದಿಂದ ರೂಪುಗೊಂಡ **ಕೆಥೆಡ್ರಲ್** ಧಾರ್ಮಿಕ ಮಠ ಎಂಬರ್ಥದಲ್ಲಿ ಇಂಗ್ಲೀಷಿನಲ್ಲಿ ಬಳಕೆಯಾಯಿತು. **ಟೇಬಲ್ಲು** ಮೂಲತಃ ಬರೇ **ಹಲಗೆ** ಎಂಬರ್ಥದ ಲ್ಯಾಟಿನ್ ಪದದಿಂದ ಇಂಗ್ಲೀಷಿನಲ್ಲಿ ಪ್ರಸಾರಕ್ಕೆ ಬಂತು. ಅದು **ಬರಹಕ್ಕೂ ಊಟಕ್ಕೂ** ಬಳಸುವ ಸಲಕರಣೆಯಾಯಿತು. ಊಟದ ಮಟ್ಟಿಗೆ ನಮ್ಮಲ್ಲಿ ಇಂಥದಲ್ಲದಿದ್ದರೂ ಸ್ವಲ್ಪ ತಗ್ಗಾದ **ಅಡ್ಡಣಿಗೆ** ಇತ್ತು.

**ಮಂಚಕ್ಕೆ** ನಾವೀಗ ಬಳಸುವ **ಕಾಟ್** (cot) ಪದ ಹಿಂದಿಯಿಂದ ಇಂಗ್ಲೀಷಿಗೆ ಹೋಗಿ ಅಲ್ಲಿಂದ ತಿರುಗಿ ನಮ್ಮ ಭಾಷೆಗಳಿಗೆ ಬಂದದ್ದು. ಸಂಸ್ಕೃತದ **ಖಟ್ವಾ**, ಪ್ರಾಕೃತ ಮೂಲಕ ಹಿಂದಿಯಲ್ಲಿ **ಖಾಟ್** ಆಗಿ, ಇಂಗ್ಲೀಷಿನಲ್ಲಿ ಮೊದಲು (ಸಂಚಾರದಲ್ಲಿ ಬಳಸುವ) ಹಗುರವಾದ ಮಂಚ (**ಹೊರಸು**) ಎಂಬರ್ಥದಲ್ಲಿ ಬಳಕೆಗೆ ಬಂದು, ಈಗ ಕಬ್ಬಿಣದ, ಮರದ ಭಾರ ಮಂಚಗಳಿಗೂ ನಮ್ಮಲ್ಲಿ ಅದರ ಪ್ರಯೋಗವಾಗುತ್ತಿದೆ.

**ಟೀಪಾಯ್** ಕಥೆ, ಇನ್ನೂ ಸ್ವಾರಸ್ಯವಾಗಿದೆ. ಅದಕ್ಕೂ ಟೀಗೂ ಏನೂ ಸಂಬಂಧ ಇಲ್ಲ. ಅದು ಹಿಂದಿಯ **ತೀನ್-ಪಾಯ್** (ಕನ್ನಡದಲ್ಲಿ ಮುಕ್ಕಾಲಿ) = ಮೂರುಕಾಲಿನ ಮಣೆ. ಹಿಂದಿಯಲ್ಲೂ ಅದು ಪರ್ಶಿಯನ್ನಿನ **ಸಿಹ್-ಪಾಯ್**ಯ ಪ್ರಭಾವದಿಂದ ರೂಪುಗೊಂಡಿರ ಬಹುದೆಂದು ಕೋಶಕಾರರ ಮತ. ಈ ಮೂರು ಕಾಲಿನ ಉಪಕರಣಕ್ಕೆ ನಾಲ್ಕು ಕಾಲುಗಳು ಬಂದರೂ ಹೆಸರನ್ನೇ ಉಳಿಸಿಕೊಂಡು ಚಹಾ ಕೊಡುವುದಕ್ಕಾಗಿ ಇರುವ ಸ್ವಲ್ಪ ತಗ್ಗಾದ ಮೇಜು ಎಂಬ ಭ್ರಾಂತಿಯನ್ನು ಉಂಟುಮಾಡುತ್ತಿದೆ.

೩೫

**ಟಪಾಲಿಗೆ** ಕನ್ನಡದಲ್ಲಿ **ಅಂಚೆ** ಎಂಬ ಪದ ಬಳಕೆಯಲ್ಲಿದೆಯಲ್ಲ, ಅದು ಒಂದು ರೊಮ್ಯಾಂಟಿಕ್ ಪದವೆಂಬ ಭ್ರಮೆಯಲ್ಲಿ ನಾನು ಇದ್ದೆ. ನಳ-ದಮಯಂತಿ ಕಥೆಯಲ್ಲಿ ಇನ್ನೂ ಪರಸ್ಪರ ಮುಖ ನೋಡದೆಯೇ ಪ್ರೇಮದಲ್ಲಿ ಬಿದ್ದ ಈ ಪ್ರೇಮಿಗಳ ನಡುವೆ ಸಂದೇಶವಿನಿಮಯ ಮಾಡುವುದು ಒಂದು **ಹಂಸ** ಅಲ್ಲವೆ? ಹಂಸಕ್ಕೆ ಕನ್ನಡ ತದ್ಭವ ಪದ **ಅಂಚೆ**ಯೆಂದು. ಅದನ್ನೇ **ಟಪಾಲಿಗೆ** ಯಾರೋ ಭಾವುಕರು ಉಪಯೋಗಕ್ಕೆ ತಂದಿರಬೇಕೆಂಬುದು ನ್ಯಾಯವಾದ ಊಹೆಯಾದೀತು. ಆದರೆ ರೊಮ್ಯಾಂಟಿಕರ ದುರ್ದೈವದಿಂದ ಈ **ಅಂಚೆ**ಗೂ ನಳ-ದಮಯಂತಿಯರ **ಹಂಸ**ಕ್ಕೂ ಏನೂ ಸಂಬಂಧ ಇಲ್ಲವೆಂಬುದು ಅರೊಮ್ಯಾಂಟಿಕ್ ತಥ್ಯ. ಅದು ಪತ್ರ ಸಾಗಿಸುವ ಒಂದು ಹಳೆಗಾಲದ ವಿಧಾನಕ್ಕೆ ಸಾಕ್ಷಿಯಾಗಿರುವುದರಿಂದ ಐತಿಹಾಸಿಕವಾಗಿ ಕುತೂಹಲಕಾರಿಯಾಗಿದೆ.

**ಅಂಚೆ** ಪದದ ಅರ್ಥ ಪ್ರಯಾಣದ **ಮಜಲು** ಅಥವಾ **ಮಜಲು ಮಜಲಾದ ಪಯಣ** ಎಂದು. ಈ ಅರ್ಥದಲ್ಲಿ ಮಲೆಯಾಳಿ, ತಮಿಳಿನಲ್ಲಿ (ಅಂಚಲ್) ಮತ್ತು ತೆಲುಗಲ್ಲಿ (ಅಂಚಲು) ಜ್ಞಾತಿ ಪದಗಳಿವೆ. ಸುದ್ದಿಗಳನ್ನು, ಆಜ್ಞಾ ಪತ್ರಗಳನ್ನು ದೂರ ಪ್ರಾಂತಗಳಿಗೆ ಕಳಿಸಲು ಆಳರಸರು ಹಿಂದೆ ಪರಸ್ಪರ ವ್ಯವಹಾರ್ಯ ದೂರಗಳಲ್ಲಿ ಘಟ್ಟಗಳನ್ನು ಗೊತ್ತುಪಡಿಸಿಡುತ್ತಿದ್ದರು. ಒಬ್ಬ ಕಾಲಾಳು ಅಥವಾ ಕುದುರೆ ಸವಾರನ ಮೂಲಕ ಪತ್ರಗಳನ್ನು ಒಂದು ಮಜಲಿನವರೆಗೆ ಕಳಿಸಿ ಅಲ್ಲಿಂದ ಇನ್ನೊಬ್ಬನು ಅವುಗಳನ್ನು ತೆಗೆದುಕೊಂಡು ಮುಂದಿನ ಮಜಲಿಗೆ ಸಾಗಿಸುವುದು ಆಗಿನ ಟಪಾಲು ವ್ಯವಸ್ಥೆಯಾಗಿತ್ತು. ಹೀಗೆ ಪತ್ರವಹನ ಮಾಡುವವನಿಗೆ ತಮಿಳಿನಲ್ಲಿ **ಅಂಚಲ್‌ಕಾರನ್** ಎಂದೇ ಹೆಸರಿತ್ತು; ನಾವು **ಅಂಚೆಯಾಳು** ಎನ್ನುತ್ತೇವೆ.

**ಟಪಾಲು** ಎಂಬ ಇನ್ನೊಂದು ಪದ ನಮಗೆ ಮರಾಠಿಯಿಂದ ಬಂದದ್ದು. **ಟಪ್ಪಾ** ಅಂದರೆ ಹಿಂದಿ ಮತ್ತು ಮರಾಠಿಯಲ್ಲಿ ಮಜಲು ಎಂದೇ ಅರ್ಥ. ಹಿಂದಿಯ **ಟಪ್ಪಾ** ಪ್ರಯಾಣದ ಡೋಲಿ ಹೊರುವವರನ್ನು ಬದಲಿಸುವ ಸ್ಥಳ, ಒಂದು ನಿಶ್ಚಿತ ದೂರ, ಇತ್ಯಾದಿ.

ಅರ್ಥಾತ್ ಅಂಚೆಯಂತೆ ಇದೂ ಹಿಂದಿನ ಕಾಲದ ಪತ್ರವಹನ ವ್ಯವಸ್ಥೆಯನ್ನೇ ಸೂಚಿಸುತ್ತದೆ.

ಮತ್ತೆ ಇಂಗ್ಲೀಷಿನ **ಪೋಸ್ಟ್**? ಅದರ ಅರ್ಥ ಕೂಡ ಪ್ರಯಾಣದ ಮಾರ್ಗದಲ್ಲಿ ಒಂದು ನಿಟ್ಟು, ಗೊತ್ತು, ಮಜಲು ಎಂಬುದಾಗಿಯೇ. ಪ್ರಯಾಣದಲ್ಲಿ ಕುದುರೆಗಳ ಬದಲಾವಣೆಯ ನಿಶ್ಚಿತ ಸ್ಥಾನ, ಸೈನಿಕರ ಶಿಬಿರ ಇತ್ಯಾದಿ. ಅದೂ ಪತ್ರಾದಿಗಳ ಸಾಗಾಟದ ಹಳೆಗಾಲದ ವಿಧಾನದ ಸೂಚಕವೇ. ಇದರ ಧಾತ್ವರ್ಥ ಲ್ಯಾಟಿನ್ನಿನಲ್ಲಿ (postis) ಇಡುವಿಕೆ, ಇಕ್ಕೆ ಎಂದು. ಹಿಂದಿಯ **ಡಾಕ್** ಕೂಡ ಇದೇ ಅರ್ಥದ ಪದ.

ಈ ಪದಗಳು ಈ ಅರ್ಥದಲ್ಲಿ ಬಳಕೆಗೆ ಬಂದ ಕಾಲವೂ ಗಮನಾರ್ಹವಾಗಿದೆ. ಕನ್ನಡದಲ್ಲಿ **ಅಂಚೆ** ಪದ **ಮಾರ್ಗ** ಎಂಬರ್ಥದಲ್ಲಿ ೧೨ನೇ ಶತಮಾನದಲ್ಲೇ ಪ್ರಯೋಗದಲ್ಲಿದ್ದಂತೆ ಮೋಳಿಗೆ ಮಾರಯ್ಯನ ವಚನದಿಂದ ತಿಳಿದರೂ **ಟಪಾಲು** ಎಂಬರ್ಥದಲ್ಲಿ ೧೬ನೇ ಶತಮಾನದಲ್ಲಿ ತಾನೆ ಅದರ ಪ್ರಯೋಗ ಕಾಣಿಸುತ್ತದೆ. **ಪೋಸ್ಟ್** ಪದ ಇಂಗ್ಲೀಷಿನಲ್ಲಿ ಆ ಅರ್ಥದಲ್ಲಿ ಬಳಕೆಗೆ ಬಂದದ್ದೂ ಅದೇ ಸುಮಾರಿಗೆ. **ಟಪಾಲು** ಎಂದು ಮರಾಠಿಯಲ್ಲಿ ತಲೆ ಹಾಕಿತೋ ತಿಳಿಯದು. ಆದರೆ ಇಂಗ್ಲೀಷಿಗೆ ಅದು ೧೮ನೇ ಶತಮಾನದ ಕೊನೆಗೆ ಪ್ರವೇಶಿಸಿತು.

೩೬

ಯಾವುದೊಂದು ಪದಾರ್ಥದ ನಾಲ್ಕರಲ್ಲಿ ಒಂದು ಭಾಗವನ್ನು ಕನ್ನಡದಲ್ಲಿ ಕಾಲು ಎನ್ನುತ್ತೇವೆ. ದಕ್ಷಿಣದ ದ್ರಾವಿಡ ಭಾಷೆಗಳಲ್ಲೆಲ್ಲ ನಾಲ್ಕರ ಅಂಶಕ್ಕೆ ಇದೇ ಶಬ್ದ ಇದೆ. ಈ ಪದ ಹೇಗೆ ಬಂತು ? ಮೂಲತಃ ಕಾಲು ಎಂದರೆ ಮನುಷ್ಯ ಮತ್ತು ಪ್ರಾಣಿಗಳು ನಡೆಯುವುದಕ್ಕೆ ಉಪಯೋಗಿಸುವ ಅವಯವ. ಸ್ವಾರಸ್ಯವೆಂದರೆ ಮನುಷ್ಯ ನಡೆಯುವ **ಎರಡು ಕಾಲು**ಗಳಲ್ಲಿ ಒಂದನ್ನು **ಅರ್ಧ** ಎಂಬರ್ಥದಲ್ಲಿ ಬಳಸದೆ **ನಾಲ್ಕು ಕಾಲಿನ** ಪ್ರಾಣಿಗಳ ಒಂದು **ಕಾಲನ್ನು ಕಾಲಂಶಕ್ಕೆ** ಬಳಸಿದ್ದು.

ಸಂಸ್ಕೃತ ಮತ್ತು ಇತರ ಭಾರತೀಯಾರ್ಯ ಭಾಷೆಗಳಲ್ಲಿಯೂ ಇದರಂತೆ **ಪಾದ** ಎಂಬುದು **ಕಾಲಂಶ** ಎಂಬರ್ಥದಲ್ಲಿ ವ್ಯಾಪಕವಾಗಿ ಬಳಕೆಯಲ್ಲಿ ಬಂದಿದೆ. ಇದರದೇ ತದ್ಭವಗಳಾದ **ಪಾಯ್, ಪಾವ್** ಮೊದಲಾದವುಗಳಿಗೆ ನಮ್ಮ **ಕಾಲು** ಎಂಬ ಪದಕ್ಕಿಂತಲೂ ಅನೇಕ ಮುಖ ಅರ್ಥಗಳು ರೂಪುಗೊಂಡಿವೆ. **ಪಾವುಸೇರು, ಪಾವುಆಣೆ, ಪಾವಲಿ** ಇತ್ಯಾದಿ. **ಪೈಸಾ** ಕೂಡಾ ಬಹುಶಃ **ಪಾಯ್ ಹಿಸ್ಸಾ**ದ (ಒಂದಾಣೆಯ ನಾಲ್ಕನೇ ಅಂಶ) ಸಂಕ್ಷಿಪ್ತ ರೂಪವಾಗಿರಬೇಕು. ರೂಪಾಯಿಯ ಕಾಲಂಶ **ಪಾವಲಿ**. ಸತ್ಯನಾರಾಯಣನ ಪ್ರಸಾದದಲ್ಲಿ ರವಾ, ಹಾಲು ಮುಂತಾದವುಗಳು **ಐದೈದು ಪಾವು** ಬೆರೆತಿರುವುದರಿಂದ ಅದು **ಸಪಾದ ಭಕ್ಷ್ಯ** (ಒಂದೂಕಾಲು = ಸಪಾದ) ಆಯಿತು.

ಹೀಗೆ **ಪ್ರಾಣಿಯ** ಒಂದು **ಕಾಲು** ತನ್ನ ಪಾದವನ್ನು ಭಾರತೀಯಾರ್ಯ ಮತ್ತು ದ್ರಾವಿಡ ಎರಡೂ ಭಾಷಾವರ್ಗಗಳಲ್ಲಿ ಬೆಳೆಸಿಕೊಂಡಿದ್ದರೂ **ಪಾದ** ಎಂಬುದನ್ನು **ಕಾಲಂಶ** ಎಂಬರ್ಥದಲ್ಲಿ ಬಳಸುವುದು ದ್ರಾವಿಡದ **ಕಾಲಿನ** ಪ್ರಭಾವದಿಂದ ಎಂಬ ಸಂಶಯ ಬರುತ್ತದೆ. ಏಕೆಂದರೆ ಯೌರೋಪ್ಯಾರ್ಯ ಭಾಷೆಗಳಲ್ಲಿ **ಪಾದ**ಕ್ಕೆ ಸಮಾನವಾದ **ಫುಟ್** (ಇಂಗ್ಲೀಷ್), **ಪೆದ** (ಲಿಥುವೇನಿಯನ್), **ಪೇಸ್, ಪೇದೆಮ್** (ಲ್ಯಾಟಿನ್). **ಪೋವ್ಸ್**

**ಪೋದೋಸ್** (ಗ್ರೀಕ್) ಇತ್ಯಾದಿ ಶಬ್ದಗಳು ಇದ್ದರೂ ಅವುಗಳನ್ನು **ನಾಲ್ಕರಲ್ಲಿ ಒಂದಂಶ** ಎಂಬರ್ಥಕ್ಕೆ ಎಳೆದದ್ದು ಕಾಣುವುದಿಲ್ಲ. ಪರ್ಶಿಯನ್ ಭಾಷೆಯಲ್ಲಿ ಕೂಡ ಪಾದ ಎಂಬುದಕ್ಕೆ ಜ್ಞಾತಿಯಾಗಿ **ಪಾಯ್** ಪದ ಇದ್ದರೂ ಅದನ್ನು **ಕಾಲಂಶ** ಎಂಬರ್ಥದಲ್ಲಿ ಬಳಸಿದಂತೆ ಉರ್ದುಕೋಶಗಳಲ್ಲಿ ಕಾಣಿಸುವುದಿಲ್ಲ. ಯುರೋಪಿಯನ್ ಭಾಷೆಗಳಲ್ಲಿ **ಕಾಲಂಶ** ಎಂಬರ್ಥಕ್ಕೆ ಬಳಸುವ **ಕ್ವಾರ್ಟರ್** ಇತ್ಯಾದಿ ಪದಗಳು **ನಾಲ್ಕು** ಎಂಬರ್ಥದ ಲ್ಯಾಟಿನ್ quattuor (ಸಂಸ್ಕೃತ ಚತ್ವಾರ್) ಪದದಿಂದ ಉದ್ಭವಿಸಿದವುಗಳೇ ಹೊರತು **ಪಶುಗಳ ಕಾಲಿನಿಂದಲ್ಲ**. ಸಂಸ್ಕೃತದಲ್ಲಿ ಕೂಡ **ಪಾದ** ಎಂಬ ಪದ **ಕಾಲಂಶ** ಎಂಬ ಅರ್ಥದಲ್ಲಿ ಬ್ರಾಹ್ಮಣಗಳ ಕಾಲದಿಂದಾರಂಭಿಸಿ ತಾನೆ (ಉದಾ: ಶತಪಥ ಬ್ರಾಹ್ಮಣ) ಪ್ರಯೋಗವಾದಂತೆ ಮೋನಿಯರ್ ವಿಲಿಯಮ್ಸ್ ಕೋಶದಿಂದ ಗೊತ್ತಾಗುತ್ತದೆ – ಅಂದರೆ ಋಗ್ವೇದದಷ್ಟು ಪ್ರಾಚೀನವಲ್ಲ ಇದು.

**ಕಾಲನ್ನು** ಸ್ವಲ್ಪ ಉದ್ದ ಚಾಚಿದರೆ, ಪದ್ಯದ ಒಂದು ಸಾಲನ್ನು ಸಂಸ್ಕೃತದಲ್ಲಿ **ಪಾದ** ಎಂದು ಕರೆಯುವುದು ಕಾಣುತ್ತದೆ. ಪದ್ಯವನ್ನು **ನಾಲ್ಕು** ಸಾಲುಗಳಿಗಾಗಿ ವಿಂಗಡಿಸುವುದರಿಂದ ಒಂದು ಸಾಲಿಗೆ **ಪಾದ** ಎಂದು ಕರೆಯುವುದು ಸಹಜ. ಮೂರು ಸಾಲಿನ ವೇದದ ಋಕ್ಕು **ತ್ರಿಪದಾ** ಗಾಯತ್ರಿ ಎನ್ನಿಸುತ್ತದೆ. ನಮ್ಮ ತ್ರಿಪದಿಯ ಹಾಗೆ, ಇದಕ್ಕೆ ಪ್ರತಿಯಾಗಿ **ಚೌಪದಿ, ಷಟ್ಪದಿಗಳೂ** ಇವೆ. ಪದ್ಯದ ಒಂದು ಸಾಲನ್ನು **ಪಾದ** ಎಂದು ಕರೆಯುವುದೂ ಬೃಹದಾರಣ್ಯಕ ಉಪನಿಷತ್ತು, ಶ್ರೌತ್ರ ಸೂತ್ರಗಳಷ್ಟು ಹಿಂದೆಯೇ ಕಾಣಿಸುತ್ತದೆ. ಆದರೆ ಇದೂ ದ್ರಾವಿಡ **ಕಾಲಿನ** ಪ್ರಭಾವವೇ ಎಂಬುದು ಸಂದಿಗ್ಧ. ಯೌರೋಪ್ಯಾರ್ಯ ಭಾಷೆಗಳಲ್ಲಿ ಕೂಡ (ಉದಾ: ಇಂಗ್ಲೀಷಿನಲ್ಲಿ) foot ಎಂಬುದು **ಪದ್ಯದ ಸಾಲು** ಎಂಬರ್ಥದಲ್ಲಿ ಅಲ್ಲದಿದ್ದರೂ ಒಂದು **ಗಣ** ಎಂಬರ್ಥದಲ್ಲಿ ಬಳಕೆಯಲ್ಲಿದೆ. ಇಲ್ಲಿ foot ಎಂಬುದು ಪದ್ಯದ ನಡೆಯಲ್ಲಿಯ ಒಂದು **ಹೆಜ್ಜೆಯೆಂಬರ್ಥದಲ್ಲಿರುವುದರಿಂದ** ಅದೇ ರೀತಿ ನಮ್ಮ ಪದ್ಯದ **ಪಾದವೂ** ಶ್ಲೋಕದ ಒಂದು **ಹೆಜ್ಜೆ** ಎಂದು ಕರೆಸಿಕೊಂಡಿರಬಹುದು.

೩೭

ಡಂಭಾಚಾರ ಮಾಡುವವರನ್ನು **ಆಷಾಢಭೂತಿಗಳೆಂದು** ಕರೆಯುತ್ತೇವೆ. ಕೋಶಗಳನ್ನು ನೋಡಿದರೆ, ಕನ್ನಡದಲ್ಲಿ, ಈ ಶಬ್ದಕ್ಕೆ ಬೂಟಾಟಿಕೆ ಮಾಡುವವನು ಎಂಬರ್ಥ ಸಿಗುತ್ತದೆ. ಆದರೆ ಈ ಶಬ್ದ ಹೇಗೆ ಹುಟ್ಟಿತು? **ಆಷಾಢಕ್ಕೂ** ಕಪಟಕ್ಕೂ ಏನು ಸಂಬಂಧ? ಇದರ ತಳ ಕಾಣಬೇಕಾದರೆ ಜಗತ್ತಿನ ಅತಿ ಪ್ರಸಿದ್ಧ ಪ್ರಾಚೀನ ಕಥಾಕೋಶವಾದ **ಪಂಚತಂತ್ರದಲ್ಲಿ** ಹುಡುಕಬೇಕು. ಅದರಲ್ಲಿ ಒಬ್ಬ ಗುರು ತನ್ನ ಭಕ್ತರಿಂದ ಪಡೆದ ಕಾಣಿಕೆಗಳನ್ನು ಮಾರಿ ಬಂದ ಹಣವನ್ನು ಬಲು ಜೋಪಾನವಾಗಿ ತನ್ನ ಅಂಗಿಯೊಳಗೆ ಬಚ್ಚಿಟ್ಟುಕೊಂಡಿರುತ್ತಾನೆ. ಇದನ್ನು ಹೇಗೋ ಗೊತ್ತು ಹಚ್ಚಿದ ಒಬ್ಬ ವಂಚಕ **ಆಷಾಢಭೂತಿ** ಎಂಬ ಹೆಸರಿಟ್ಟುಕೊಂಡು ಅವನ ಶಿಷ್ಯನಾಗಿ ಅತ್ಯಂತ ವಿಧೇಯತೆಯನ್ನು ನಟಿಸಿ ಗುರುವಿನ ನಂಬಿಕೆ ಗಳಿಸುತ್ತಾನೆ. ಒಂದು ದಿನ ಹೊತ್ತು ಸಾಧಿಸಿ ಗಂಟನ್ನು ಅಪಹರಿಸಿಕೊಂಡು ಓಡಿಹೋಗುತ್ತಾನೆ.

ಆದರೆ **ಆಷಾಢಭೂತಿ** ಎಂದರೇನು? ಪಂಚತಂತ್ರ ಮೊದಲಾದ ಪ್ರಾಚೀನ ಭಾರತೀಯ ಕಥೆಗಳಲ್ಲಿ ಹೆಸರುಗಳನ್ನು ಹೆಚ್ಚಾಗಿ ಅನ್ವರ್ಥಕವಾಗಿ ಕೊಡುವುದು ರೂಢಿ. ಈ

ದೃಷ್ಟಿಯಿಂದ ನೋಡಿದರೆ **ಆಷಾಢ** ಎಂಬ ಮಾಸಕ್ಕೂ **ಆಷಾಢಭೂತಿಗೂ** ಸಂಬಂಧದ ಎಳೆ ಸಿಗುವುದಿಲ್ಲ. ಆದರೆ **ಆಷಾಢ** ಶಬ್ದಕ್ಕೆ ವಿರಕ್ತರು ಹಿಡಿಯುವ ದಂಡ (ಮುತ್ತುಗದ್ದು) ಎಂಬರ್ಥವೂ ಇದೆ. **ಭೂತಿ** ಎಂಬುದು ಆ ಕಾಲದಲ್ಲಿ ಸಾಮಾನ್ಯವಾಗಿ ಹೆಸರಿಗೆ (= ಸಂಪತ್ತು) ಸೇರಿಸಿಕೊಳ್ಳುವ ಒಂದು ಶಬ್ದವಾಗಿತ್ತು. **ಆಷಾಢಭೂತಿ**ಯೆಂಬುದು ಈ ವಿರಕ್ತಿದ್ಯೋತಕ **ದಂಡವನ್ನು** ಒತ್ತಿಟ್ಟುಕೊಂಡು ಸೃಷ್ಟಿಸಿದ ಅನ್ವರ್ಥಕನಾಮವಾಗಿರಬೇಕು.

ಸಾಹಿತ್ಯದ ಪಾತ್ರಗಳು ಭಾಷೆಯಲ್ಲಿ ಅರ್ಥವತ್ತಾಗಿ ಸೇರಿಕೊಳ್ಳುವುದು ಸಾಮಾನ್ಯ. ಆಷಾಢಭೂತಿ ಅದಕ್ಕೆ ಒಂದು ಉದಾಹರಣೆ. **ಪಂಚತಂತ್ರ**ದ ಕಥೆಗಳು ಭಾರತದಲ್ಲೆಲ್ಲ ಪ್ರಚಲಿತವಾಗಿದ್ದರೂ ಈ ಪದ (ಕನ್ನಡ, ತೆಲುಗು ಹೊರತು) ಇತರ ದೇಶಭಾಷಾ ಕೋಶಗಳಲ್ಲಿ **ಕಪಟ** ಎಂಬರ್ಥದಲ್ಲಿ ಕಾಣಿಸದೆ ಕನ್ನಡದಲ್ಲಿ ಮಾತ್ರ ರೂಢಿಯಾಗಿರುವುದು ಸೋಜಿಗ. ಪಂಚತಂತ್ರದಿಂದ ಭಾಷೆಯಲ್ಲಿ ಸೇರಿದ ಇನ್ನೂ ಕೆಲ ಹೆಸರುಗಳಲ್ಲಿ **ಕರಟಕ, ದಮನಕ** (ತಂತ್ರಗಾರರ ಜೋಡಿ)ಯನ್ನು ಉದಾಹರಿಸಬಹುದು. ಪುರಾಣಗಳಿಂದ ಅನೇಕ ಹೆಸರುಗಳು ಭಾಷೆಯನ್ನು ಸಂಪನ್ನವಾಗಿ ಮಾಡಿವೆ. **ಶಕುನಿ** (= ತಂತ್ರಗಾರ), **ಧರ್ಮರಾಯ** (= ತನ್ನ ಹಿತಾಹಿತ ನೋಡದೆ ಪರರಿಗೆ ಸವಲತ್ತು ಕೊಡುವವನು), **ಲಂಕಿಣಿ** (= ಆರ್ಭಟದ ಹೆಂಗಸು), **ಚಿತ್ರಲೇಖೆ** (= ಬಹಳ ಚೂಟಿ ತರುಣಿ), **ಭರತ** (= ಭ್ರಾತೃಪ್ರೇಮಿ) ಇತ್ಯಾದಿ ಪಾತ್ರನಾಮಗಳನ್ನು ಆಯಾ ಗುಣವುಳ್ಳವರಿಗೆ ಅನ್ವಯಿಸುವ ನುಡಿಕಟ್ಟುಗಳು ರೂಢಿಗೆ ಬಂದಿವೆ. ಪುರಾಣ ಕಥೆಗಳ ಪಾತ್ರಗಳೂ ಘಟನೆಗಳೂ ಭಾಷೆಯಲ್ಲಿ ಸಾರ್ಥಕವಾಗಿ ದಿನ ಬಳಕೆಗೆ ಬರುವುದು ಒಂದು ಜಾಗತಿಕ ಲಕ್ಷಣವೇ ಆಗಿದೆ. ಗ್ರೀಕ್ ಪುರಾಣದ **ಅಖಿಲೀಸ್** ಪಾದ ಇತ್ಯಾದಿಗಳನ್ನು ಉದಾಹರಿಸಬಹುದು.

ಆದರೂ ನಮ್ಮ ಭಾಷೆ ಅರ್ವಾಚೀನ ಸಾಹಿತ್ಯಕ್ಕೆ ಪಾಶ್ಚಾತ್ಯ ಭಾಷೆಗಳಷ್ಟು ಪ್ರತಿಸ್ಪಂದಿಸುವುದಿಲ್ಲವೋ ಅನಿಸುತ್ತದೆ. ಶೇಕ್‌ಸ್ಪಿಯರನ **ಹ್ಯಾಮ್ಲೆಟ್** (ಅನಿರ್ಧಾರ ಸ್ವಭಾವಕ್ಕೆ), **ಫಾಲ್‌ಸ್ಟಾಫ್** (ಲಾಘವದ ಅಕ್ರಮವೃತ್ತಿಗೆ) ಮೊದಲಾದ ಪಾತ್ರಗಳಂತೂ ಆಯಿತು, ನೂರೇ ವರ್ಷಗಳ ಹಿಂದಿನ ಡಿಕನ್ಸನ ಕಾದಂಬರಿ **ಬಾರ್ಕಿಸ್** (Barkis is willing ಎದುರಿನವರು ಸ್ವೀಕರಿಸಬಹುದೇ ಎಂದು ವಿಚಾರಿಸದೆ ಪ್ರೇಮ ಸಂದೇಶ ಕಳಿಸುತ್ತಿರುವುದು) ಮೊದಲಾದ ಪಾತ್ರಗಳು ಭಾಷೆಗಳಲ್ಲಿ ಪ್ರಯೋಗಿಸಲ್ಪಡುವುದು ನಮ್ಮಲ್ಲಿ ವಿರಳವೆಂದೇ ತೋರುತ್ತದೆ. ಆಧುನಿಕ ಸಾಹಿತ್ಯ ಸರ್ವಜನೀನ ಪ್ರಭಾವವನ್ನು ಬೀರುತ್ತಿಲ್ಲವೋ ನಾವು ಇಂಥದರಲ್ಲಿ ಶೀತಲರೋ ಎಂಬುದು ವಿಚಾರಣೀಯ.

## ೩೮

ನಾನು ಉತ್ತರ ಕರ್ನಾಟಕಕ್ಕೇ ಅದೇ ಬಂದ ಸಮಯದಲ್ಲಿ ನನ್ನ ಮಿತ್ರನೊಬ್ಬನಿಗೆ ಬಂದ ಪತ್ರದಲ್ಲಿ ಕೊನೆಗೆ "**ಲೋಭ**ವಿರಲಿ" ಎಂಬೊಂದು ಒಕ್ಕಣೆಯನ್ನು ಕಂಡು ಚಕಿತನಾದೆ. ಮನುಷ್ಯನ ಷಡ್ವೈರಿಗಳೆಂದು ತತ್ವಜ್ಞಾನಿಗಳು ಹೇಳುವ ಭಾವನೆಗಳಲ್ಲಿ ಒಂದಾದ **ಲೋಭ** ಇರಬೇಕೆಂದು ಈ ಮಹನೀಯರು ಅಪೇಕ್ಷಿಸುತ್ತಾರಲ್ಲ! ನನ್ನ ಸ್ನೇಹಿತನನ್ನು ಕೇಳಿದಾಗ ಆತ, ಅದನ್ನು ಉತ್ತರ ಕರ್ನಾಟಕ ಮತ್ತು ಮಹಾರಾಷ್ಟ್ರಗಳಲ್ಲಿ **ಪ್ರೀತಿ** ಇರಲಿ ಎಂಬರ್ಥದಲ್ಲಿ ಹಳೇ ಮಂದಿ ಪ್ರಯೋಗಿಸುತ್ತಾರೆಂದು ತಿಳಿಸಿದ. ಉದಾತ್ತ ಭಾವನೆಯಾದ

**ಪ್ರೀತಿಗೂ** ದುರಾಶೆ, ಜಿಪುಣತನಗಳಂಥ ಕೀಳು ಅಭಿಪ್ರಾಯವನ್ನು ಸೂಚಿಸುವ **ಲೋಭಕ್ಕೂ** ಎಲ್ಲಿಯ ಸಾಮ್ಯ ಎಂಬ ಆಲೋಚನೆ ನನ್ನನ್ನು ಬಿಡಲಿಲ್ಲ. ಆದರೆ ಮೊನ್ನೆ ಏತಕ್ಕೋ ಇಂಗ್ಲೀಷ್ ನಿಘಂಟನ್ನು ತಿರುವಿ ಹಾಕುವಾಗ ನನಗೆ ಇನ್ನೊಂದು ಸೋಜಿಗದ ಮೂಲಕ ಸಂಶಯ ಪರಿಹಾರವಾಯಿತು.

ಇಂದಿನ ವ್ಯಕ್ತಿಸ್ವಾತಂತ್ರ್ಯದ ದಿನಗಳಲ್ಲಿ ಹುಡುಗ ಹುಡುಗಿಯರು ತಮಗಿಷ್ಟ ಬಂದವರನ್ನು – ಹಿರಿಯರನ್ನು ಲೆಕ್ಕಿಸದೆ – ಮದುವೆಯಾಗುವ ಪ್ರಕರಣಗಳಿಂದಾಗಿ ಇಂಗ್ಲೀಷಿನ love (ಲವ್) ಶಬ್ದ ಅಜ್ಜಮ್ಮಗಳಿಗೂ ಚೆನ್ನಾಗಿ ಪರಿಚಯವಾಗಿದೆ. ಈ **ಲವ್** ಮತ್ತು ಸಂಸ್ಕೃತದ **ಲುಭ್** ಧಾತುಗಳೆರಡೂ ಹತ್ತಿರದ ಸಂಬಂಧಿಕರೆಂದು ಆಕ್ಸ್‌ಫರ್ಡ್ ಶಬ್ದ ಕೋಶ ಹೇಳುತ್ತದೆ. ಲ್ಯಾಟಿನ್ನಿನಿಂದ ಹಿಡಿದು ಹಳೇ ಇಂಗ್ಲೀಷ್, ಹಳೇ ಸ್ಲಾವಿಕ್‌ವರೆಗೆ ಅನೇಕ ಭಾರೋಪ್ಯ ಭಾಷೆಗಳಲ್ಲಿ ಸಂಸ್ಕೃತದ ಈ **ಲುಭ್** ಧಾತುವಿಗೆ ಅತಿ ಸಮೀಪ ಧ್ವನಿಸಾಮ್ಯವುಳ್ಳ ಪದಗಳಿವೆ. ಅವೆಲ್ಲವುಗಳ ಅರ್ಥವೂ ಮೆಚ್ಚು, ಇಷ್ಟಪಡು, ದಾಕ್ಷಿಣ್ಯ ತೋರಿಸು, ಮೆಚ್ಚಿಕೆಯಾಗು ಇತ್ಯಾದಿಯಾಗಿದೆ. ಸಂಸ್ಕೃತದಲ್ಲಿ ಈ **ಮೆಚ್ಚುವಿಕೆ** ಹೆಚ್ಚಿ ಇಚ್ಛೆಗೆ ತಿರುಗಿ, ಕೊನೆಗೆ **ಅತ್ಯಾಶೆಯಲ್ಲಿ** ಪರ್ಯವಸಾನ ಹೊಂದಿದರೂ ಭಾರತದ ಕೆಲ ಪ್ರದೇಶಗಳಲ್ಲಾದರೂ ಮೂಲ **ಸೌಮ್ಯಾರ್ಥ** ಇಂದಿಗೂ ಜೀವಂತವಾಗಿರುವುದನ್ನು ನೋಡಿದರೆ ಪದಾರ್ಥಗಳ ದೀರ್ಘಾಯುಷ್ಯ ನಮ್ಮನ್ನು ಆಶ್ಚರ್ಯಪಡಿಸುತ್ತದೆ. ಹೆಚ್ಚು ಕೇಳಿದರೆ ಗಂಡು–ಹೆಣ್ಣಿನ ಮಟ್ಟಿಗಾದರೂ **ಲವ್** ಎಂದರೆ ಪರಸ್ಪರರನ್ನು ಸ್ವಾಧೀನ ಮಾಡಿಕೊಳ್ಳುವ ಆಸೆ ಅಲ್ಲವೆ? **ಲೋಭವೆಂದರೆ** ಮತ್ತೆ ಏನು? ಯೌರೋಪ್ಯಾರ್ಯ ಭಾಷೆಗಳಲ್ಲಿ ಇದೇ ಮೂಲ ಪ್ರಾಚೀನಾರ್ಯ ಧಾತುವಿನಿಂದ ಉದ್ಭವಿಸಿದ libido (ಲಿಬಿಡೋ) ಪದ ತೀವ್ರವಾದ **ಕಾಮ** ಭಾವನೆಯೆಂಬ ಅರ್ಥ ಕೊಡುವಂತೆ ಆಧುನಿಕ ಲೈಂಗಿಕ ಮನೋವಿಜ್ಞಾನದಲ್ಲಿ ಬಳಸಲ್ಪಡುತ್ತದೆ. **ಕಾಮ** ಎಂಬ ಸಂಸ್ಕೃತ ಪದ ಕೂಡ ಸಾಮಾನ್ಯ ಪರಿಭಾಷೆಯಲ್ಲಿ **ಲೈಂಗಿಕ ಅಭಿಲಾಷೆ** ಎಂದು ಅರ್ಥ ಕೊಡುತ್ತಿದ್ದರೂ **ಕಮ್** ಧಾತುವಿಗೆ ಮೆಚ್ಚು, ಇಷ್ಟಪಡು, ಬಯಸು ಎಂದೇ ಅರ್ಥ. ವೇದದಲ್ಲಿ "ಯಂ **ಕಾಮಯೇ** ತಂತಮುಗ್ರಂ ಕೃಣೋಮಿ" – ನಾನು **ಮೆಚ್ಚಿದವನನ್ನು** ಬಲಿಷ್ಠನನ್ನಾಗಿ ಮಾಡುತ್ತೇನೆ ಎಂದು ಆಂಭೃಣಿ ಹೇಳುತ್ತಾಳೆ. **ಕಮನೀಯ** ಅಂದರೆ ಸುಂದರ ಎಂದು ಅರ್ಥವಾಗುತ್ತದೆ.

ಮತ್ತೆ **ಪ್ರೀತಿಯೋ**? ಪ್ರೀ ಧಾತುವಿನ ಅರ್ಥ ಮೆಚ್ಚಿಸು, ಉತ್ಸಾಹಗೊಳಿಸು, ಸಮಾಧಾನಪಡಿಸು ಇತ್ಯಾದಿ. ಋಗ್ವೇದದಲ್ಲೇ ಈ ಅರ್ಥ ಕಾಣಸುತ್ತದೆ. ಇದೂ ಭಾರೋಪ್ಯ ಭಾಷೆಗಳಲ್ಲಿ ವ್ಯಾಪಕವಾಗಿರುವ ಧಾತು. ಗಾಥಿಕ್, ಜರ್ಮನ್, ಸ್ಲಾವ್ ಮೊದಲಾದ ಭಾಷೆಗಳ frijon, friunt, prijati ಮೊದಲಾದ ಪದಗಳು ಇದೇ ಅರ್ಥ ಕೊಡುತ್ತವೆ. ಇಂಗ್ಲೀಷಿನ **ಫ್ರೆಂಡ್** (= ಮಿತ್ರ) ಕೂಡ ಹಳೇ ಇಂಗ್ಲೀಷಿನ freon (= ಪ್ರೀತಿಸು) ಪದದಿಂದ ಬಂದದ್ದು. ಆದ್ದರಿಂದ ಫ್ರೆಂಡ್ = ಪ್ರಿಯ.

೩೯

**ಯವನ** ಎಂಬುದು ಭಾರತದಲ್ಲಿ ಮೊದಲು ಗ್ರೀಕರಿಗೆ ಮತ್ತು ಗ್ರೀಸ್ ದೇಶಕ್ಕೆ ಅನ್ವಯವಾಗುತ್ತಿದ್ದ ಹೆಸರು. ಖಚಿತವಾಗಿ ಹೇಳುವುದಾದರೆ ಅದು ಈಗಿನ ಪಶ್ಚಿಮ ತುರ್ಕಿಗೆ

ಸೇರಿರುವ ಮತ್ತು ಕ್ರಿಸ್ತ ಪೂರ್ವ ಹತ್ತನೇ ಶತಮಾನದಲ್ಲೇ ಗ್ರೀಕರ ವಸಾಹತಾಗಿದ್ದ **ಅಯೋನಿಯ** ಪ್ರಾಂತದ ಹೆಸರಿನ ಸಂಸ್ಕೃತೀಕರಣ. ಅಲೆಗ್ಸಾಂಡರನಿಗಿಂತ ಹಿಂದೆಯೇ ಭಾರತಕ್ಕೆ ಗ್ರೀಸ್ ದೇಶದೊಡನೆ ಸಂಬಂಧವಿದ್ದಿರಬೇಕು ; ಗ್ರೀಕರ ಅವನತಿಯ ಅನಂತರ **ಯವನ** ಎಂಬ ಹೆಸರು ಎಲ್ಲ ವಿದೇಶಗಳಿಗೂ ವಿದೇಶಿಯರಿಗೂ ಅನ್ವಯವಾಗತೊಡಗಿ ಕಡೆಕಡೆಗೆ **ಅಯೋನಿಯ** ಅಥವಾ ಗ್ರೀಸಿಗೆ ಏನೂ ಸಂಬಂಧವಿಲ್ಲದ **ಮುಸ್ಲಿಮರಿಗೂ** ಅದೇ ಹೆಸರು ಬಿತ್ತು.

**ನಾಟಕ**ದ ತೆರೆ ಅಥವಾ ಪರದೆಗೆ **ಯವನಿಕೆ** ಎಂದು ಸಂಸ್ಕೃತದಲ್ಲಿ ರೂಢವಾದ ಹೆಸರಿನ ಪ್ರಸ್ತಾಪ ಹಿಂದೆಯೇ ಬಂದಿದೆ.

ಅದಕ್ಕಿಂತ ಕೌತುಕದ್ದೆಂದರೆ ಭಾರತದ ವಿದೇಶ ವ್ಯಾಪಾರದ ಸರಕುಗಳ ಮೇಲೆ **ಯವನ** ಶಬ್ದ ಚೆಲ್ಲುವ ಬೆಳಕು. **ಒಳ್ಳೇ ಮೆಣಸು** ಅಥವಾ ಕಾಳು ಮೆಣಸನ್ನು ಕೋಶಗಳಲ್ಲಿ **ಯವನಪ್ರಿಯ** ಎಂದು ಹೆಸರಿಸಿದೆ. ಈ ಸಾಂಬಾರ ಜೀನಸು ಕ್ರಿಸ್ತ ಶಕಾರಂಭಕ್ಕಿಂತ ಮೊದಲೇ ಭೂಮಧ್ಯ ಸಮುದ್ರತೀರ ದೇಶಗಳಲ್ಲಿ ಎಷ್ಟು ಜನಪ್ರಿಯವಾಗಿತ್ತೆಂದರೆ ಇದನ್ನು ಸರಿತೂಕದ ಬೆಳ್ಳಿ ಕೊಟ್ಟು ರೋಮನ್ ಸಾಮ್ರಾಜ್ಯದ ಜನರು ಖರೀದಿ ಮಾಡುತ್ತಿದ್ದರಂತೆ. ರೋಮನ್ ಇತಿಹಾಸಜ್ಞ ಪ್ಲಿನಿ (ಕ್ರಿ.ಶ. ಒಂದನೇ ಶತಮಾನ) ಭಾರತಕ್ಕೆ ಹೀಗೆ ರೋಮಿನಿಂದ ಹಣದ ಹೊಳೆ ಹರಿಯುವುದನ್ನು ಆತಂಕದಿಂದ ಗಮನಿಸಿದ್ದಾನೆ. ನಿಜಕ್ಕೂ ಮೆಣಸು **ಯವನಪ್ರಿಯವೇ** ಅಲ್ಲವೇ ?

ಆದರೆ ಅದೊಂದೇ **ಯವನಪ್ರಿಯವಲ್ಲ**. **ಕೆಂಪು ನೀರುಳ್ಳಿ, ಬೆಳ್ಳುಳ್ಳಿ**ಗಳಿಗೂ **ಯವನೇಷ್ಟ** ಎಂಬ ಹೆಸರನ್ನು ಭಾರತೀಯರು ಕೊಟ್ಟಿದ್ದರು. ಇದಕ್ಕೆ ಕಾರಣ ಸ್ವಲ್ಪ ಬೇರೆ. ಚೀನಿ ಯಾತ್ರಿಕ ಇತ್ಸಿಂಗ (ಕ್ರಿ.ಶ. ಏಳನೇ ಶತಮಾನ) ಎಂಬವನಿಂದಾರಂಭಿಸಿ ಅನೇಕ ವಿದೇಶೀ ಯಾತ್ರಿಕರು ಗಮನಿಸಿದಂತೆ ಭಾರತೀಯರು (ಬಹುಶಃ ಬ್ರಾಹ್ಮಣಾದಿ ಮೇಲ್ಜಾತಿಯವರು, ಜೈನಾದಿಗಳು ಕೂಡ) ನೀರುಳ್ಳಿ, ಬೆಳ್ಳುಳ್ಳಿ ತಿನ್ನುತ್ತಿದ್ದಿಲ್ಲ, ಮೀನು ತಿನ್ನುವ ಬಂಗಾಲಿ ಬ್ರಾಹ್ಮಣರಿಗೂ ನೀರುಳ್ಳಿ ವರ್ಜ್ಯವಾಗಿತ್ತು. ಇಂಥ **ನಿಷಿದ್ಧ** ಪದಾರ್ಥವನ್ನು ಯವನರು ಮೆಚ್ಚಿದ್ದುದು ಶಬ್ದ ಸೃಷ್ಟಿ ಮಾಡುತ್ತಿದ್ದ ಸನಾತನಿಗಳಿಗೆ ವಿಶೇಷವಾಗಿ ಕಂಡಿರಬೇಕು. ವಿದೇಶೀಯರ **ನೀರುಳ್ಳಿ ಪ್ರಿಯತೆಗೆ** ಇತ್ಸಿಂಗನು ಭಾರತದ ಹವೆಯಲ್ಲಿ ನೀರುಳ್ಳಿ ಆರೋಗ್ಯಕರವಲ್ಲದಿದ್ದರೂ ಜಿಹ್ವಾಚಾಪಲ್ಯದಿಂದ ಅದನ್ನು ತಾನು ತಿನ್ನುತ್ತಿದ್ದನೆಂದು ಹೇಳಿರುವುದು ಸಾಕ್ಷಿ. **ಗಜ್ಜರಿ** ಗಡ್ಡೆಗೂ **ಯವನೇಷ್ಟ** ಎಂದು ಹೆಸರಿದ್ದು ಅದನ್ನೂ ಆಚಾರವಂತ ಭಾರತೀಯರು ಮೂಲಂಗಿಯಂತೆ ಅಭೋಜ್ಯವೆಂದು ಬಗೆದಿರಬಹುದೆ ?

**ಯವನ**ದ ವ್ಯಾಪ್ತಿ ಇಲ್ಲಿಗೇ ಮುಗಿಯಲಿಲ್ಲ. **ಲೋಬಾನ** ಎಂಬ ಧೂಪ ದ್ರವ್ಯಕ್ಕೂ **ಯಾವನ, ತುರುಷ್ಕ** ಎಂಬ ಹೆಸರುಗಳನ್ನು ಕ್ರಿ.ಶ. ಆರನೇ ಶತಮಾನದ ಅಮರಕೋಶ ಉಲ್ಲೇಖಿಸುತ್ತದೆ. ಅದೂ ದೇಶಾಂತರದಿಂದ ಬರುತ್ತಿತ್ತೆಂದು ಲೋಬಾನ ಎಂಬ ಅರಬೀ ಹೆಸರಿಂದ ತಿಳಿಯುತ್ತದೆ. ಲ್ಯಾಟಿನ್ನಿನಲ್ಲಿ ಅದಕ್ಕಿರುವ olibanum ಎಂಬ ಹೆಸರು **ಅಲ್–ಲುಬಾನುಜ್** ಎಂಬ ಅರಬೀ ಪದದ ಅಪಭ್ರಂಶ. ಅರೇಬಿಯದ **ಲುಬಾನ್** ಎಂಬ ಪರ್ವತದ ಒಂದು ಜಾತಿಯ ಮರದಿಂದ ಲೋಬಾನ ಹುಟ್ಟುತ್ತಿತ್ತೆಂದು ಪ್ರತೀತಿ.

ಸೀಸಕ್ಕೂ **ಯವನ** ಎಂಬ ಹೆಸರಿದೆ. ಸೀಸ ಮನುಷ್ಯನಿಗೆ ಪ್ರಾಗಿತಿಹಾಸ ಕಾಲದಿಂದಲೇ ಪರಿಚಿತವಾಗಿದ್ದು ಯಜುರ್ವೇದದಲ್ಲಿ ಸೀಸದ ಉಲ್ಲೇಖವಿದ್ದರೂ ಅದು ವಿದೇಶಗಳಿಂದ

ಭಾರತಕ್ಕೆ ಇತಿಹಾಸ ಕಾಲದಲ್ಲಿ ಆಮದಾಗುತ್ತಿದ್ದಿರಬೇಕು.

೪೧

ದಿಕ್ಕುಗಳ ಕಲ್ಪನೆ ಎಲ್ಲ ಸಚರ ಜೀವಿಗಳಿಗೆ ಅತ್ಯಗತ್ಯ. ಎಲ್ಲ ಪ್ರಾಣಿಗಳು ತಮ್ಮ ಹತ್ತಿರದ ಪರಿಸರದಲ್ಲಿಯ ಹೆಗ್ಗುರುತುಗಳನ್ನು ಆಧರಿಸಿ ದಿಕ್-ನಿರ್ಣಯ ಮಾಡುತ್ತವೆ. ಮನುಷ್ಯನು ಮಾತ್ರ ಸುತ್ತಣ ಪರಿಸರದಿಂದ ದೂರವಾದ ಹೆಗ್ಗುರುತುಗಳನ್ನು ಬಳಸಿ ದಿಕ್ಕುಗಳ ನಿರ್ಣಯಕ್ಕೆ ಸಾಧ್ಯವಿದ್ದಷ್ಟು ಅಸಾಪೇಕ್ಷವಾದ ಉಪಾಯಗಳನ್ನು ಕಂಡುಹಿಡಿಯಲು ಯತ್ನಿಸಿದ್ದಾನೆ.

ಕನ್ನಡದಲ್ಲಿ ನಾಲ್ಕು ಪ್ರಧಾನ ದಿಕ್ಕುಗಳಿಗೆ **ಮೂಡು, ಪಡು, ತೆಂಕು, ಬಡಗು**ಗಳೆಂಬ ಹೆಸರುಗಳು ಪ್ರಾಧಾನ್ಯದಿಂದ ಕಾಣಿಸುತ್ತವೆ. ಪೃಥ್ವಿಯ ದೈನಂದಿನ ಚಲನೆಯಿಂದ ಆಕಾಶಕಾಯಗಳು ದಿಗಂತದಲ್ಲಿ ಎದ್ದು ಬರುವ ದಿಕ್ಕು **ಮೂಡು, ಮೂಡಲು** (= ಎದ್ದು ಬರು), ಸಂಜೆ ಸೂರ್ಯ ಮುಳುಗುವ (ಕಂತುವ) ದಿಕ್ಕು**ಪಡು, ಪಡುವಲು** (= ಮಲಗು, ಸಾಯು).

ಬರಿಗಣ್ಣಿಗೆ ಕಾಣುವ ಹೆಚ್ಚಿನ ಆಕಾಶಕಾಯಗಳೆಲ್ಲ ಮೂಡುವುದು ಅದೇ ದಿಕ್ಕಾದರೂ ಅತಿ ಪ್ರಕಾಶಮಾನ ಕಾಯವಾದ ಸೂರ್ಯನೇ ದಿಕ್ಕುಗಳ ನಿರ್ಣಯಕ್ಕೆ ಹೆಗ್ಗುರುತೆಂಬುದು ಈ ಕನ್ನಡ ಮತ್ತು ಅದಕ್ಕೆ ಹತ್ತಿರದ ದ್ರಾವಿಡ ಭಾಷೆಗಳ ಹೆಸರುಗಳಿಂದ ತಂತಾನೆ ಸಿದ್ಧವಾಗದಿದ್ದರೂ ಇತರ ಭಾಷೆಗಳ ಸಮಾನ ಪದಗಳನ್ನು ನೋಡಿದರೆ ಖಚಿತವಾಗುತ್ತದೆ. East ಎಂಬ ಇಂಗ್ಲಿಷ್ ಪದಕ್ಕೆ ಮೂಲ ಊಹಾತ್ಮಕ ಆದಿ ಭಾರೋಪ್ಯ ಭಾಷೆಯ aus ಪದವೆಂದು ಭಾವಿಸಲಾಗಿದೆ. ಇದು ಸಂಸ್ಕೃತದ **ಉಷಸ್** ಶಬ್ದದ ಭಗಿನಿ. ಇದರ ಅರ್ಥ ಅರುಣೋದಯ ಕಾಲದ ದೇವತೆ. ಲ್ಯಾಟಿನ್ Aurora ಇವಳೇ. ಲ್ಯಾಟಿನ್ನಿನ orient (= ಪೂರ್ವದ) ಕೂಡ **ಸೂರ್ಯೋದಯ** ದಿಕ್ಕು ಎಂಬರ್ಥದ್ದೇ. ಅರಬ್ಬಿ **ಶರ್ಕ್** (= ಪೂರ್ವ) ಉದಯಾರ್ಥಕವಾದದ್ದು.

ಹಾಗೆಯೆ **ಪಡು** ದಿಕ್ಕಿನ ಹೆಸರಾದ ಇಂಗ್ಲಿಷ್ west **ಸಂಜೆ** (vesper) ಎಂಬ ಲ್ಯಾಟಿನ್ ಪದದ ಜ್ಞಾತಿ. ಲ್ಯಾಟಿನ್ನಿನ occident ಎಂಬ ಪಶ್ಚಿಮಸೂಚಕ ಪದ ಕೂಡ **ಸೂರ್ಯಾಸ್ತ** ಅಥವಾ ಸೂರ್ಯನ **ಬೀಳುವಿಕೆ** ಎಂಬರ್ಥ ಕೊಡುತ್ತದೆ.

ಆದರೆ ಎಲ್ಲ ಭಾಷೆಗಳಲ್ಲಿ ಹೀಗೆ ದಿಕ್ಕುಗಳು ಸೂರ್ಯನನ್ನು ಆಧರಿಸಿವೆಯೆಂದಲ್ಲ. ಸಂಸ್ಕೃತದ **ಪೂರ್ವ** ಶಬ್ದ **ಎದುರಿಗಿರುವ** ಅಥವಾ **ಮೊದಲಿನ** ಎಂಬರ್ಥ ಕೊಡುತ್ತದೆ. **ಪಶ್ಚಿಮ** ಶಬ್ದವೂ **ಬೆನ್ನುಗಡೆಯ** ದಿಕ್ಕು ಎಂದು ಸೂಚಿಸುವಂಥಾದ್ದು; ಎರಡರಲ್ಲಿಯೂ ಸೂರ್ಯನ ಉದಯಾಸ್ತಗಳ ಸಂಕೇತ ಇಲ್ಲ. ತಮಿಳು, ಮಲಯಾಳಿ ಭಾಷೆಗಳಲ್ಲಿ ಪಶ್ಚಿಮ ಪೂರ್ವಗಳಿಗೆ **ಕಿಳಕ್ಕು** (ಕೆಳಗಿನ) ಮತ್ತು **ಮೇಲ್ಕು** (ಮೇಲಿನ) ಎಂಬ ಹೆಸರುಗಳೂ ಇವೆ. ಇವು ಈ ಜನರ ಮೂಲ ನೆಲೆಯ ಭೌಗೋಲಿಕ ಸ್ಥಿತಿಗೆ ಸಾಕ್ಷ್ಯ ಹೇಳುತ್ತವೆ. **ಕಾವೇರಿ** ನದಿ ಬಯಲಿನಲ್ಲಿದ್ದವರಿಗೆ ಪೂರ್ವ ದಿಕ್ಕು **ತಗ್ಗಿ**ನಲ್ಲಿದೆ, ಗಟ್ಟಗಳನ್ನುಳ್ಳ ಪಡು ದಿಕ್ಕು **ಎತ್ತರ**ದಲ್ಲಿದೆ. ಆದ್ದರಿಂದ ಅವು **ಕೆಳ** ದಿಕ್ಕು **ಮೇಲ್** ದಿಕ್ಕು ಆಗಿವೆ. ಕೇರಳದಲ್ಲಿರುವವರಿಗೆ ನಿಜಕ್ಕೂ ಪೂರ್ವ ದಿಕ್ಕು ಎತ್ತರದಲ್ಲಿಯೂ ಪಶ್ಚಿಮ ತಗ್ಗಿನಲ್ಲಿಯೂ ಇವೆ. ಆದರೆ ಮಲೆಯಾಳಿ ಭಾಷೆಯಲ್ಲಿ **ಪಶ್ಚಿಮಕ್ಕೇ ಎತ್ತರ** ಎಂಬರ್ಥದ **ಮೇಲ್ಕು** ಪದ, ಪೂರ್ವಕ್ಕೆ **ತಗ್ಗು** ಎಂಬರ್ಥದ **ಕಿಳಕ್ಕು** ಪದ!

ಇದು ಮಲೆಯಾಳಿಗಳು ಮೊದಲು ತಮಿಳರೊಡನೆ ಏಕಜನಪದವಾಗಿದ್ದರೆಂಬ ಇತಿಹಾಸದ ಗುಟ್ಟನ್ನು ರಟ್ಟುಮಾಡುತ್ತದೆ.

ಸಂಸ್ಕೃತದ ದಕ್ಷಿಣ ಶಬ್ದದಲ್ಲಿ ರಹಸ್ಯವೇನೂ ಇಲ್ಲ. ಅದರರ್ಥ ಬಲ ಎಂದು. ಪೂರ್ವಕ್ಕೆ ಮುಖ ಹಾಕಿದರೆ ದಕ್ಷಿಣ ಬಲಕ್ಕಲ್ಲವೇ ಬರುವುದು? **ಉತ್ತರ** ಎಂಬ ಪದ ಮಾತ್ರ ಭೌಗೋಲಿಕ ಪರಿಸರದ ಸುದ್ದಿ ಹೇಳುತ್ತದೆ; **ಉತ್ತರ** ಎಂದರೆ **ಎತ್ತರ**. ಸಿಂಧು ಗಂಗೆಗಳ ಬಯಲಲ್ಲಿದ್ದ ಆರ್ಯರಿಗೆ ಹಿಮಾಲಯದ ತಪ್ಪಲು **ಉತ್ತರಕ್ಕೆ** ತಾನೆ ಇರುವುದು. ಹಾಗೇ ಅದು **ಎತ್ತರ** ದಿಕ್ಕು. ತಮಿಳರಿಗೆ ಎತ್ತರ ಪಶ್ಚಿಮವಾಗುತ್ತದೆ. ಆದಿ ಸಂಸ್ಕೃತಭಾಷೆಗಳಿಗೆ **ಎತ್ತರ** ಎಂದರೆ **ಬಡಗು** ದಿಕ್ಕು. ಹಾಗೆಯೇ ಇಂಗ್ಲೀಷಿನ **ದಕ್ಷಿಣಾರ್ಥಕ** south ಶಬ್ದ ಮೂಲತಃ sunth (= ಸೂರ್ಯನದು) ಎಂದು. ಎಲಾ! ನಮಗೆ ಸೂರ್ಯನ ದಿಕ್ಕು ಪೂರ್ವವಾದರೆ ಇವರಿಗೆ ಅದು ದಕ್ಷಿಣವೆ? ಹೌದು. ಆ ದಿಕ್ಕಿಗೆ ಆ ಹೆಸರು ಕೊಡುವಾಗ ಇಂಗ್ಲೀಷ್ ಭಾಷಿಕರ ಮೂಲಪುರುಷರು ಸಾಕಷ್ಟು ಉನ್ನತ ಅಕ್ಷಾಂಶಗಳಲ್ಲಿ ಜೀವಿಸುತ್ತಿರಬೇಕು. ಅವರಿಗೆ ಸೂರ್ಯ ದಕ್ಷಿಣದಲ್ಲೇ ಮೂಡಿ ಆ ದಿಕ್ಕಿನಲ್ಲೇ ಸ್ವಲ್ಪ ಏರಿ ಕಂತುವಂತೆ ಕಾಣುತ್ತಿದ್ದ.

೪೧

**ರೂಪಾಯಿ**ಯೆಂಬ ಬೆಳ್ಳಿ ನಾಣ್ಯವನ್ನು ಮೊತ್ತಮೊದಲು ಟಂಕಹೊಡೆದು ಬಳಕೆಗೆ ತಂದವನು ಶೇರ್ ಶಾಹ್ (೧೫೪೨). ಈ ರೂಪಾಯಿ ಮತ್ತು ಅದೇ ಹೆಸರಿನ ನಾಣ್ಯಗಳು ಅನಂತರ ಅನೇಕ ಪೂರ್ವದೇಶಗಳಲ್ಲಿ ಬಳಕೆಗೆ ಬಂದುವು. ಇಂದು ಸಿಂಹಳ, ಪಾಕಿಸ್ತಾನ, ನೇಪಾಳಿ, ಇಂಡೋನೇಶಿಯ, ಮಾರಿಶಸ್‌ಗಳಲ್ಲಿ ಕೂಡ ಇದೇ ಹೆಸರಿನ ನಾಣ್ಯ ಹಣಕಾಸಿನ ಪ್ರಮಾಣವಾಗಿದೆ.

ಹೀಗೆ **ರೂಪಾಯಿ**ಯೆಂಬ **ಮಾನಕ ನಾಣ್ಯ** ಅಷ್ಟು ಪ್ರಾಚೀನವಲ್ಲದಿದ್ದರೂ ಆ ಹೆಸರು ಮಾತ್ರ ಬಲು ಪುರಾತನ. ಆ ಪದದ ಮೂಲ ಸಂಸ್ಕೃತರೂಪ **ರೂಪಕ, ರೂಪ್ಯ** ಇತ್ತು. ಅದರ ಉಲ್ಲೇಖವನ್ನು ಪಂಚತಂತ್ರದಲ್ಲಿ, ವರಾಹಮಿಹಿರ (೫ನೇ ಶತಮಾನ), ಕಾಶ್ಮೀರಿ ಕವಿ ಕ್ಷೇಮೇಂದ್ರ (೧೧ನೇ ಶತಮಾನ) ಮೊದಲಾದವರ ಗ್ರಂಥಗಳಲ್ಲಿ ಕಾಣುತ್ತೇವೆ. ಆದರೆ ಶೇರ್ ಶಾಹನ ಪರ್ಯಂತ ಒಟ್ಟಾರೆ **ಟಂಕಿಸಿದ ನಾಣ್ಯ** ಎಂದಷ್ಟೇ ಅದರ ಅರ್ಥವಾಗಿತ್ತು. ಅದು ಬೆಳ್ಳಿಯದೂ ಇರಬಹುದಿತ್ತು, ಬಂಗಾರದ್ದೂ ಇರಬಹುದಿತ್ತು. ಒಟ್ಟು **ರೂಪ**ವನ್ನು ಅಚ್ಚಿಸಿ ಎರಕ ಹೊಯ್ದದ್ದು ಎಂದಷ್ಟೆ ಅದರ ತಾತ್ಪರ್ಯವಾಗಿತ್ತು.

ದಶಾಂಶ–ಶತಾಂಶ ಪದ್ಧತಿ ಜಾರಿಗೆ ಬಂದನಂತರ ನಮ್ಮ ಹಿಂದಿನ **ಆಣೆ, ಪೈ**ಗಳ ಹೆಸರು ಕೂಡ ಮರೆಯುತ್ತಿದೆ. ರೂಪಾಯಿಗೆ ೧೬ **ಆಣೆ**, ಆಣೆಗೆ ೧೨ **ಪೈ** ಇವು ದಶಾಂಶ ಪದ್ಧತಿಗಿಂತ ಮೊದಲು ಜಾರಿಯಲ್ಲಿದ್ದ ಮಾನಕಗಳು. ಆಶ್ಚರ್ಯವೆಂದರೆ **ಆಣೆ**ಯೆಂಬ **ನಾಣ್ಯ** ಮೊದಲು ಇರಲಿಲ್ಲ. ಅದು ಕೇವಲ ರೂಪಾಯಿಯ ೧೬ನೇ ಅಂಶ ಎಂಬ ಕಾಲ್ಪನಿಕ **ಮಾನವಾಗಿತ್ತು**. ಮುಂದೆ ನಿಕ್ಕಲ್ಲಿನಲ್ಲಿ **ಆಣೆ** ನಾಣ್ಯವನ್ನು ಟಂಕಿಸಿದರಷ್ಟೆ. ಈ **ಹದಿನಾರರ** ಅಂಶ ಭಾರತೀಯರಿಗೆ ಬಲು ಪ್ರಿಯವಾದದ್ದಿತ್ತು. ೧೬ರ ಅಂಶಕ್ಕೆ **ಕಲಾ** ಎಂಬ ಹೆಸರು ಋಗ್ವೇದ, ತೈತ್ತಿರೀಯ ಸಂಹಿತೆ ಮುಂತಾದವುಗಳಲ್ಲಿ ಕಾಣುತ್ತದೆ. ವೇದೋತ್ತರ ಕಾಲದಲ್ಲಿಯ ನಾಣ್ಯಗಳಲ್ಲಿ ಒಂದಾಗಿದ್ದ **ಕಾರ್ಷಾಪಣ**ವನ್ನು ೧೬ **ಮಾಷ**

(ಚಿನ್ನ) ಮತ್ತು ಪಣ (ಬೆಳ್ಳಿ)ವಾಗಿ ವಿಂಗಡಿಸಿದ್ದರು.

**ಪೈ** ಎಂಬ ಈ ರದ್ದಾದ ನಾಣ್ಯ (ರೂಪಾಯಿಗೆ ೧೯೨) ಪರ್ಶಿಯನ್ ಭಾಷೆಯ **ಪಾಯ್** (ಸಂಸ್ಕೃತ **ಪಾದಿ** = ನಾಲ್ಕನೇ ಅಂಶ) ಎಂಬುದರ ರೂಪಾಂತರ. ನಾಲ್ಕು ಪೈ ಬೆಲೆಯ **ದುಡ್ಡು** ಎಂಬ ಬೆಲೆಮಾನ ನಾವು ಚಿಕ್ಕವರಾಗಿದ್ದಾಗ ಕೇಳಿಬರುತ್ತಿತ್ತು. ಒಂದಾಣೆಗೆ **ಮೂರು ದುಡ್ಡು** ಎಂದು ಹಿಂದಿನವರು ಹೇಳುತ್ತಿದ್ದರು. ಹೀಗೆ ಅದು ದುಡ್ಡಿನ ನಾಲ್ಕರ ಅಂಶವಾದ್ದರಿಂದ **ಪಾಯ್** ಆಗಿರಬಹುದು. **ಪೈಸಾ** (= ಬಹುಶಃ ಪಾಯ್‌ಹಿಸ್ಸಾ) ಎಂದು ಉತ್ತರ ಭಾರತದಲ್ಲಿ ಪ್ರಚಲಿತವಾದದ್ದು (ಒಂದಾಣೆ = ೪ ಪೈಸಾ) ಮುಂದೆ ದಕ್ಷಿಣದಲ್ಲಿ **ದುಡ್ಡು, ಕಾಲಾಣೆ, ಪಾವಾಣೆ** ಇತ್ಯಾದಿಯಾಗಿ ಹೆಸರಾಯಿತು. ಈಗ ಅದೇ ಹೆಸರನ್ನು ರೂಪಾಯಿಯ ೧೦೦ನೇ ಅಂಶವಾದ ಕ್ಷುದ್ರ **ನಾಣ್ಯಕ್ಕೆ** ಇಡಲಾಗಿದೆ. ಅದು ಯಾವ ನಾಣ್ಯದ ಕಾಲಂಶವೂ ಅಲ್ಲದಿದ್ದರೂ ಅದಕ್ಕೆ ಹಳೇ ನಾಮಕರಣವೇ ಆಗಿದೆ. ಹೆಸರಿಂದೇನು ?

ಆದರೆ **ಆಣೆ** ಎಲ್ಲಿಂದ ಬಂತು ? ಇದು **ನಾಣ್ಯ** ಶಬ್ದದ್ದೇ ಇನ್ನೊಂದು ರೂಪವೆಂದು ಪ್ರೊ. ಸುನೀತಿ ಕುಮಾರ ಚಟರ್ಜಿ ಹೇಳುತ್ತಾರೆ. ಈ **ನಾಣ್ಯವೋ** ಕ್ರಿ.ಶ. ೪-೫ನೇ ಶತಮಾನದ ಮೃಚ್ಛಕಟಿಕ ನಾಟಕದಲ್ಲಿ (ನಾಣಕ ಎಂಬ ರೂಪದಲ್ಲಿ) ಕಾಣಿಸಿಕೊಂಡಿದ್ದರೂ ಇದು ಅಸೀರಿಯನ್, ಬೆಬಿಲೋನಿಯನ್ ಮಾತೃ ನನಾದೇವತೆಗಳಿಂದ ಬಂದದ್ದು. ದೇವತೆಗಳಿಗೂ ನಾಣ್ಯ ಟಂಕನಕ್ಕೂ ಮೊದಲಿಂದ ಸಂಬಂಧ ಇತ್ತು. ನನಾದೇವತೆಯ ಪ್ರಭಾವ ಮತ್ತು ಆರಾಧನೆ ಉತ್ತರ ಭಾರತದವರೆಗೂ ಹಬ್ಬಿತ್ತು. ದೇವತೆಯ ಆಶ್ರಯದಲ್ಲಿ ನಾಣ್ಯ ಟಂಕಿಸುವುದು ಪ್ರಾಚೀನ ರೋಮಿನಲ್ಲಿಯೂ ಇತ್ತು. ಹಣಕ್ಕೆ ಇಂಗ್ಲೀಷ್ ಹೆಸರಾದ **ಮನಿ** ರೋಮನ್ ದೇವಿ **ಮೊನೇತಾಳಿಂದ** ಬಂದದ್ದಲ್ಲವೆ? ಅವಳ ಗುಡಿಯೇ **ಟಂಕಸಾಲೆಯಾಗಿತ್ತು** !

೪೨

ತುಂಬಾ **ದಕ್ಷ**ನಾದ ಕೆಲಸಗಾರ ಅನ್ನುತ್ತೇವೆ. ಇಂಗ್ಲೀಷಿನಲ್ಲಿ efficient ಎನ್ನುವ ಪದಕ್ಕೆ ಇದು ಸಮಾನಾರ್ಥವಾಗಿ ಬಳಕೆಯಲ್ಲಿದೆ. ಇಂಗ್ಲೀಷಿನ efficient ಫ್ರೆಂಚ್ ಮೂಲಕ ಲ್ಯಾಟಿನ್ನಿನಿಂದ ಬಂದದ್ದು. ಅದರ ಅರ್ಥ **ಕೆಲಸದಲ್ಲಿ ಗಟ್ಟಿಗ** ಎಂದು. ನಮ್ಮ **ದಕ್ಷ** ಅದಕ್ಕಿಂತ ಸ್ವಾರಸ್ಯವಾದ ದಾರಿಗಳಲ್ಲಿ ನಡೆದು ಬಂದಿದೆ. **ದಕ್ಷ್** ಎಂಬ ಧಾತುವಿನ ಅರ್ಥ **ಬಲಿಷ್ಠ**ವಾಗಿರು ಎಂದು ನಮ್ಮ ನಿರ್ವಚನಕಾರರು ಹೇಳುತ್ತಾರೆ. ಬಲಿಷ್ಠನೇ **ಸಮರ್ಥ** ಅಲ್ಲವೆ ? ಇದು ಬಹಳ ಪ್ರಾಚೀನ ಶಬ್ದ. ಋಗ್ವೇದದಿಂದಲೇ ಇದು ಸಾಹಿತ್ಯದಲ್ಲಿ ಕಾಣಿಸಿಕೊಳ್ಳುತ್ತದೆ. ಇದರಿಂದಲೇ **ದಕ್ಷಿಣ** ಹುಟ್ಟಿದೆ. ಇದರ ಅರ್ಥ **ಬಲ ಬದಿಗೆ** ಎಂದು. ನಾವು **ಬಲಗೈ** ಎನ್ನುವಾಗ ಅದು ನಮ್ಮೆರಡು ಕೈಗಳಲ್ಲಿ ಹೆಚ್ಚು **ಶಕ್ತಿಯುಳ್ಳದ್ದು** ಎಂಬುದೇ ಮೂಲ ತಾತ್ಪರ್ಯ. ದ್ರಾವಿಡದ **ಬಲ್, ವಲ್** ಶಬ್ದ ಶಕ್ತಿಯುಳ್ಳದ್ದೆಂದು ಅರ್ಥ ಕೊಡುತ್ತದೆ. ಭಾರತದಾಚೆಗೆ ಹೋದರೆ ಲ್ಯಾಟಿನ್, ಗ್ರೀಕ್ ಭಾಷೆಗಳಲ್ಲಿ **ದಕ್ಷಕ್ಕೆ** dex. dexter ಪದಗಳಿವೆ. ಇವಕ್ಕೆ ಹತ್ತಿರವಾಗಿರುವ ಗಾಥಿಕ್ taihswa ಪದವಿದೆ. ಇವೆಲ್ಲ **ಬಲ ಬದಿಯನ್ನೇ** ಸೂಚಿಸುತ್ತವೆ. Dexterous ಅಂದರೆ **ಕಾರ್ಯಸಮರ್ಥ**. ನಾವು ಕಾರ್ಯ ಮಾಡುವುದು ಬಲಗೈಯಿಂದಲ್ಲವೇ ? ನಮ್ಮ **ದಕ್ಷ** ಒಟ್ಟು ಸಾಮರ್ಥ್ಯವನ್ನು ಸೂಚಿಸಿದರೆ dexterous **ಕೈಚಳಕ ಚುರುಕುತನವನ್ನು**

ದ್ಯೋತಿಸುತ್ತದೆ. ವ್ಯತ್ಯಾಸ ಅತ್ಯಲ್ಪ.

**ದಕ್ಷ, ದಕ್ಷಿಣ**ದಿಂದ **ದಾಕ್ಷಿಣ್ಯ** ಹುಟ್ಟಿದೆ. ಇದರ ಅರ್ಥಚ್ಛಾಯೆ **ದಯಾ** ಸ್ವಭಾವ ಎಂಬುದಾಗಿ ಪ್ರಚಲಿತವಾಗಿದೆ. **ಕೊಡುಗೈಯವನು ದಾಕ್ಷಿಣ್ಯ**ಪರ: ಏಕೆಂದರೆ ಕೊಡುವುದು, ತೆಗೆದುಕೊಳ್ಳುವುದು ಕೂಡ ಬಲಗೈಯಿಂದ ತಾನೆ. ಆದ್ದರಿಂದ ವೇದದಲ್ಲಿ ದಾನ ಸ್ವೀಕರಿಸುವ **ಪಾತ್ರತೆಗೂ ದಾಕ್ಷಿಣ್ಯ** ಎಂಬ ಪದ ಇದೆ.

**ಬಲ = ದಕ್ಷಿಣ** ಎಂಬುದರಿಂದ **ಪ್ರದಕ್ಷಿಣ** ಶಬ್ದ. **ಪ್ರ–ದಕ್ಷಿಣ** ಅಂದರೆ ದಕ್ಷಿಣ–ದಕ್ಷಿಣಕ್ಕೆ ಅಂದರೆ **ಬಲ–ಬಲಕ್ಕೆ** ಹೋಗುವುದು. ನಾವು ಗುಡಿಗೆ ಸುತ್ತುಹಾಕುವಾಗ ಗರ್ಭಗೃಹ ಯಾವಾಗಲೂ ನಮ್ಮ **ಬಲಕ್ಕೆ** ಇರುವಂತೆ ನಡೆಯುತ್ತೇವೆ. ಆದ್ದರಿಂದ ಈ ಕಲ್ಪನೆಗೆ ಕನ್ನಡದಲ್ಲಿಯೂ **ಬಲವರ್** (ಬಲ ಬರು) ಎಂದು ಹೇಳುವುದು. **ಬಲವಂದೆರಗಿದನ್** ಇತ್ಯಾದಿ. ಒಂದು ಇನ್ನೊಂದರ ತರ್ಜುಮೆ ಎಂಬಂತಿವೆ ಈ ಶಬ್ದಗಳು.

ಶಿವನಿಗೆ ಹೆಣ್ಣು ಕೊಟ್ಟ ನಮ್ಮ **ದಕ್ಷಬ್ರಹ್ಮ** ಇದ್ದಾನಲ್ಲ. ಇವನಿಗೆ ಆ ಹೆಸರು ಬಂದದ್ದು ಬ್ರಹ್ಮನ **ಬಲಗೈ** ಹೆಬ್ಬೆರಳಿಂದ ಅವನು ಹುಟ್ಟಿದ್ದರಿಂದ. ದಕ್ಷನು ಪ್ರಜಾಪತಿಯೂ ಆಗಿದ್ದುದರಿಂದ ಸೃಷ್ಟಿಕರ್ತನೂ ಹೌದು. ಅವನ ಕಲ್ಪನೆ ಆದಿ ಮನುಷ್ಯನ ಕಲ್ಪನೆಯಾಗಿರಲೂಬಹುದು. ಬಲಗೈ ಅಥವಾ ಬಲಭಾಗ ಬಲವಾಗಿರುವುದು ಮಾನವನ ಸಾಮಾನ್ಯ ಲಕ್ಷಣವಲ್ಲವೆ? ಈ ದಕ್ಷಬ್ರಹ್ಮ ತನ್ನೊಬ್ಬಳು ಮಗಳಾದ ಗೌರಿಯನ್ನು **ವಾಮದೇವ** (ವಾಮ = ಎಡ) ನಾದ ಶಿವನಿಗೆ ಕೊಟ್ಟ ಎನ್ನುವುದು ಸ್ವಾರಸ್ಯವಾಗಿದೆ. ಆದರೆ ವಾಮ = ಚೆಂದವೂ ಹೌದು.

**ದಕ್ಷಿಣ** ಶಬ್ದಕ್ಕೆ ನ್ಯಾಯವಾದದ್ದು, ಸರಿಯಾದದ್ದು ಎಂಬ ಅರ್ಥವೂ ಇದೆ. **ಬಲಿಷ್ಠವಾದದ್ದೇ ಸರಿಯಾದದ್ದು**! ಇಂಗ್ಲೀಷಿನಲ್ಲಿ ಬಲ ಬದಿಗಿರುವ right ಶಬ್ದ ಮೂಲತಃ ನೆಟ್ಟಗಿರುವುದು, ನ್ಯಾಯವಾದದ್ದು ಎಂಬೆರಡೂ ಅರ್ಥಗಳನ್ನೊಳಗೊಂಡಿದೆ. ಹಾಗೆಯೇ **ಎಡ** ಎಂಬರ್ಥದ left ಶಬ್ದ **ದುರ್ಬಲ** ಎಂಬ ಅರ್ಥದ್ದು. ಕನ್ನಡ **ಎಡ** ಎಂದರೂ **ದುರ್ಬಲವೇ; ಕಡಿಮೆ ಯೋಗ್ಯತೆಯದೇ.**

೪೩

ಬರೆಯುವ ಕಲೆಗೆ ಸಂಬಂಧಿಸಿದ ಅನೇಕ ಶಬ್ದಗಳ ಮೂಲಶೋಧನೆ ಋಷಿ ಮೂಲದ ಅನ್ವೇಷಣೆಯಂತೆ ಸ್ವಲ್ಪ ಸಂಕೋಚಕಾರಿಯಾಗಿದೆ. **ಪುಸ್ತಕ**ವನ್ನೇ ತೆಗೆದುಕೊಳ್ಳಿ, ನಮ್ಮ ಸರಸ್ವತಿದೇವಿ ವೀಣಾ **ಪುಸ್ತಕ**ಪಾಣಿಯಾಗಿದ್ದಾಳೆ. ಅಂದ ಮೇಲೆ **ಪುಸ್ತಕ** ಶುದ್ಧ ಭಾರತೀಯ ಪದವಾಗಿರಬೇಕು. ಆದರೆ ಹಾಗಿಲ್ಲ. **ಪುಸ್ತಕ** ಶಬ್ದಕ್ಕೆ ನಿಜವಾದ ಪುರಾತನ ಪ್ರಯೋಗದ ಉದಾಹರಣೆ ಭಾರತೀಯ ಸಾಹಿತ್ಯದಲ್ಲಿ ಇಲ್ಲ. ಪಾಣಿನೀಯ ವ್ಯಾಕರಣದಲ್ಲಿ ಅದು ಸಿಕ್ಕುವುದಿಲ್ಲ. ಅಲ್ಲಿ **ಪುಸ್ತ, ಬುಸ್ತ** ಎಂಬ ಧಾತುಗಳಿವೆ. ಆದರೆ ಅವು **ಪುಸ್ತಕಕ್ಕೆ** ಸಂಬಂಧಿಸಿದವಲ್ಲ. **ಹರಿವಂಶ** ಪುರಾಣದಲ್ಲಿ ಅದು ಕಾಣಸುತ್ತದೆಂದು ಮೋನಿಯರ್ ವಿಲಿಯಮ್ಸ್ ಕೋಶ ಹೇಳುತ್ತದೆ. ಆದರೆ ಈ ಪುರಾಣ ಅಷ್ಟು ಪ್ರಾಚೀನವೆಂದು ಗೃಹೀತವಾಗಿಲ್ಲ. ವರಾಹಮಿಹಿರ **ಪುಸ್ತಕ**ವನ್ನು ಉಲ್ಲೇಖಿಸುವುದರಿಂದ ಅದು ಕ್ರಿ.ಶ. ಐದನೇ ಶತಮಾನದಲ್ಲಿ ಇಲ್ಲಿ ಪ್ರಚಾರದಲ್ಲಿತ್ತೆಂಬುದು ಖಂಡಿತ, ಆದರೆ ಅಮರಕೋಶದಲ್ಲಿ ಅದು

ಕಾಣದು. ಅನಂತರ ಬಾಣಭಟ್ಟನ **ಹರ್ಷಚರಿತ** ಮತ್ತು ಆ ಮೇಲಿನ ಕಾವ್ಯಗಳಲ್ಲಿ ಈ ಪದ ಗೋಚರಕ್ಕೆ ಬಂದಿದೆ.

ವಾಸ್ತವಿಕವಾಗಿ **ಪುಸ್ತಕ** ಪದ ನಮಗೆ ಬಂದದ್ದು ಪ್ರಾಚೀನ ಪಾರಸೀಕ ಭಾಷೆಯಿಂದ. ಆ ಭಾಷೆ **ತುರ್ಕಿ** ಭಾಷೆಯಿಂದ ಅದನ್ನು ತೆಗೆದುಕೊಂಡಿತೆಂದು ಡಾ. ಸುನೀತಿಕುಮಾರ ಚಟರ್ಜಿ ಹೇಳುತ್ತಾರೆ. ಇರಾಣ ಮತ್ತು ಇತರ 'ಮ್ಲೇಚ್ಛ' ದೇಶಗಳಲ್ಲಿ ಶಾಶ್ವತ ದಾಖಲೆಗಳನ್ನು ಬರೆದಿಡುವುದಕ್ಕೆ ಉಪಯೋಗಿಸುತ್ತಿದ್ದ ಹದಮಾಡಿದ **ಕುರಿಚರ್ಮಕ್ಕೆ ಪೋಸ್ತ್** ಎಂಬ ಹೆಸರಿತ್ತು. (ಇಂಗ್ಲೀಷಿನಲ್ಲಿ ಇದು **ಪಾರ್ಚ್‌ಮೆಂಟ್**). ಸುರಳಿ ಸುತ್ತಿ ಕಾಪಾಡುತ್ತಿದ್ದ ಇಂಥ ಚರ್ಮಮಯ ದಾಖಲೆಗಳನ್ನು ಭಾರತೀಯರು ಇಡುತ್ತಿದ್ದರೋ ಇಲ್ಲವೋ ತಿಳಿಯದು. ಹೇಗಿದ್ದರೂ **ಪೋಸ್ತ** ಪ್ರಾಕೃತ ಭಾಷೆಯನ್ನು ಹೊಕ್ಕು ಗುಜರಾಥಿ, ಹಿಂದೀ ಮೊದಲಾದ ಅಪಭ್ರಂಶ ಭಾಷೆಗಳಲ್ಲಿ **ಪೋಥಾ, ಪೋಥೀ** ಮೊದಲಾದ ರೂಪಗಳನ್ನು ಪಡೆಯಿತು. ಪ್ರಾಕೃತದಿಂದ ಕನ್ನಡಕ್ಕೂ ಬಂದು **ಪೊತ್ತಗೆ, ಹೊತ್ತಗೆ** ಆಯಿತು. **ಪೋಥೀ** ಎಂಬುದು **ಲೆಕ್ಕ ಪುಸ್ತಕಕ್ಕೂ** ಅನ್ವಯವಾಯಿತು.

ಕ್ರಿ.ಶ. ಆರನೇ ಶತಮಾನಕ್ಕೂ ಹಿಂದಿನ ಅಮರಕೋಶದಲ್ಲಿ **ಪುಸ್ತ** ಎಂಬ ಶಬ್ದವೊಂದು ಸಿಕ್ಕುತ್ತದೆ. ಅದರ ಅರ್ಥ **ಚರ್ಮ**. ಮಣ್ಣು ಮೊದಲಾದ ಪದಾರ್ಥಗಳಿಂದ ಲೆಪ್ಪದ **ಬೊಂಬೆಗಳ** ನಿರ್ಮಾಣ ಮಾಡುವ ಕಲೆ ಎಂದು. **ಪುಸ್ತಕ್ಕೂ, ಚರ್ಮಕ್ಕೂ** ಇರುವ ಸಂಬಂಧಕ್ಕೆ ಇದು ಇನ್ನೊಂದು ಅಪ್ರತ್ಯಕ್ಷ ಪ್ರಮಾಣ ಎನ್ನಬಹುದು. ಈ **ಪುಸ್ತವೇ** ಬೊಂಬೆಗೆ **ಪುತ್ತಳಿ**ಯೆಂಬ ಹೆಸರು ಬರಲು ಕಾರಣವಾಗಿರಬಹುದು.

**ಕಾಗದ** ಬರುವ ಮುಂಚೆ ಭಾರತದಲ್ಲಿ ಬರವಣಿಗೆಯ ತಲಗಳೆಂದರೆ ಮುಖ್ಯವಾಗಿ **ತಾಳಪತ್ರ** ಮತ್ತು **ಭೂರ್ಜ (ಭೋಜ) ಪತ್ರ**. ಪತ್ರ ಅಂದರೆ ಎಲೆ. **ತಾಳಪತ್ರದ** ವಿಷಯದಲ್ಲಿ ಇದು ಸರಿ. ಅದು **ತಾಳೀ** ಮರದ **ಎಲೆ** ಅಥವಾ **ಗರಿ**. ಹಿಮಾಲಯದ ಪ್ರಾಂತದಲ್ಲಿ ಬೆಳೆಯುವ **ಭೂರ್ಜವೃಕ್ಷದಿಂದ** ಬರುವ 'ಪತ್ರ' ಮಾತ್ರ ಎಲೆಯಲ್ಲ. ಅದು ಆ ಮರದ ಕಾಂಡದಿಂದ ಸುಲಿದು ತೆಗೆಯುವ ತೆಳ್ಳನ್ನ **ತೊಗಟೆ**. ಉತ್ತರ ದೇಶದಲ್ಲಿ ಭೂರ್ಜಪತ್ರದ ಮೇಲೆ ಲೇಖನಿಯಿಂದ ಬರೆಯುವ ವಾಡಿಕೆ ಬೆಳೆದು ಬಂದರೆ, ಪೂರ್ವದಕ್ಷಿಣಗಳಲ್ಲಿ ಧಾರಾಳವಾದ **ತಾಳಪತ್ರದ** ಮೇಲೆ **ಕಂಟವದಿಂದ** ಬರೆಯುವುದು ಕ್ರಮವಾಯಿತು. ಭಾರತದ ಭೂರ್ಜಪತ್ರದಂತೆ ಪ್ರಾಚೀನ ಇಜಿಪ್ತಿನಲ್ಲಿ **ಪೆಪಿರಸ್** ಗಿಡದ ತೆಳ್ಳನ್ನ ತೊಗಟೆಯ ಮೇಲೆ ದಾಖಲೆಗಳನ್ನು ಬರೆಯುತ್ತಿದ್ದರು. ಗ್ರೀಕ್ ಭಾಷೆಗೆ ಬಂದ **ಪೆಪರಸ್** ಲ್ಯಾಟಿನ್ ಮೂಲಕ ಫ್ರೆಂಚ್ ದಾರಿಯಾಗಿ ಇಂಗ್ಲೀಷಿಗೆ ಪ್ರವೇಶಿಸಿದಾಗ ಅದು **ಪೇಪರ್** ಆಯಿತು. ಪೆಪಿರಸ್ ತೊಗಟೆ ಇಂದು ಎಲ್ಲಿಯೂ ಲೇಖನ ತಲವಾಗಿ ಉಳಿದಿಲ್ಲ. ಚೀನಿಯರಿಂದ ಆವಿಷ್ಕಾರವಾದ **ಕಾಗದ** ಸರ್ವತ್ರ ಬಳಕೆಗೆ ಬಂದಿದೆ. ಆದರೆ **ಪೇಪರ್** ಎಂಬ ಆ ಹಳೇ ಲೇಖನ ಸಾಮಗ್ರಿಯ ಹೆಸರೇ ಈ **ಕಾಗದಕ್ಕೂ** ಬಳಸಲ್ಪಟ್ಟು ಮುಂದುವರಿದಿದೆ. ಈ **ಪೇಪರ್** ಈಗ **ಸಮಾಚಾರಪತ್ರ**ದಿಂದಾರಂಭಿಸಿ ಪಂಡಿತರ ಗಹನ **ಪ್ರಬಂಧ**ಗಳವರೆಗೆ ನಾನಾ ಲಿಖಿತಗಳಿಗೆ ಅನ್ವಯವಾಗಿ ಅರ್ಥವನ್ನು ವಿಸ್ತರಿಸಿಕೊಂಡಿದೆ.

ಇಂದು ಹಳ್ಳಿಗನಿಗೂ ಪರಿಚಿತವಾಗಿರುವ ಇಂಗ್ಲೀಷ್ **ಬೂಕು** (book) **ಭೂರ್ಜ**ದಂಥದೇ ಯುರೋಪಿನ **ಬೀಚ್**ಮರದಿಂದ ಬಂದದ್ದಂತೆ. ಹಳೇ ಇಂಗ್ಲೀಷಿನ **ಬೋಚ್**, ಜರ್ಮನ್ **ಬುಕ್**, ಇತರ ಉತ್ತರ ಯುರೋಪಿಯನ್ ಭಾಷೆಗಳ **ಬೋಕ್**,

**ಬೋಗ್, ಬೋಕ್, ಬುಶ್** ಇತ್ಯಾದಿ ನಾಮಾಂಕಿತವಾದ ಮರದ ತೊಗಟೆ ಅಥವಾ ತೆಳ್ಳನ್ನ ಹಲಗೆಯ ಮೇಲೆ ದಾಖಲೆ ಬರೆದಿಡುತ್ತಿದ್ದುದರಿಂದ ಅದರ ಹೆಸರೇ ಪುಸ್ತಕಕ್ಕೆ ಬಿತ್ತೆಂದು ಭಾವಿಸಲಾಗಿದೆ.

**ಕಾಗದ** ಮತ್ತು **ಕಲಮ** (ಲೇಖನಿ) ಇವೆರಡೂ ಸಂಸ್ಕೃತದಲ್ಲಿ ಒಂಬತ್ತನೇ ಶತಮಾನದಿಂದ ಈಚೆಗೆ ತೋರಿ ಬಂದ ಪದಗಳು. ಈಗ ಹೆಚ್ಚು ಕಡಿಮೆ ಎಲ್ಲ ಭಾರತೀಯ ಭಾಷೆಗಳಲ್ಲಿ **ಕಾಗದ** ಇದೆ. ಬಟ್ಟೆ ಚಿಂದಿ ಮೊದಲಾದವುಗಳಿಂದ ಕಾಗದ ತಯಾರಿಸುವುದನ್ನು ಕ್ರಿಸ್ತಶಕಾರಂಭದ ಹೊತ್ತಿಗೆ ಚೀನಿಯರು ಕಂಡುಹಿಡಿದಿದ್ದರೂ ಆ ಕಲೆ, ಕ್ರಿ.ಶ. ಎಂಟನೇ ಶತಮಾನದಲ್ಲಿ ಅರಬರಿಗೂ, ಚೀನಿಯರಿಗೂ ಸಮರ್‌ಕಂದ್ ಬಳಿ ನಡೆದ ಸಮರದ ತರುವಾಯ ಅರಬರಿಗೆ ತಿಳಿದು ಇರಾಣಕ್ಕೆ ಹಬ್ಬಿತು. ಇರಾಣದಲ್ಲಿ ಚಿಂದಿ ಮತ್ತು ಒಂದು ಜಾತಿಯ ಅಗಸೆಯ ದೇಟನಿಂದ ಧಾರಾಳವಾಗಿ ಕಾಗದ ತಯಾರಾಗತೊಡಗಿತು. ಮೊದಲು ತುರ್ಕರ ಮೂಲಕ ಚೀನದಿಂದ ಬರುತ್ತಿದ್ದ ಈ ಪದಾರ್ಥಕ್ಕೆ ಇದ್ದ **ಕಾಗಜ್** ಎಂಬ ತುರ್ಕಿ ಶಬ್ದವೇ ಪಾರಸೀಕ ಭಾಷೆಗೂ ದಾಟಿ ಭಾರತದಲ್ಲಿ ಅದು **ಕಾಗದವಾಯಿತು**. ಬೇರೆ ಬೇರೆ ಭಾರತೀಯ ಭಾಷೆಗಳಲ್ಲಿ **ಕಾಗಜ, ಕಾಗದ, ಕೌಗತ, ಕಾಕಾಜಿ** ಇತ್ಯಾದಿ ರೂಪಗಳಲ್ಲಿ ಅದು ಇದೆ. ನೇಪಾಳಿ ಭಾಷೆಯಲ್ಲಿ **ಕಾಯಗತ** ಎಂಬ ಒಂದು ಹಸ್ತಲಿಖಿತ ಪುಸ್ತಕವೇ ಇದ್ದು ಅದು **ಕಾಗದದ್ದೇ** ಅವತಾರವೆಂದು ಸುನೀತಿ ಚಟರ್ಜಿ ಹೇಳುತ್ತಾರೆ.

**ಕಲಮ** ಕನ್ನಡದಲ್ಲಿ ಅಷ್ಟಾಗಿ ಬೇರು ಇಳಿಸದಿದ್ದರೂ **ಕಲಮದಾನಿ** ಇತ್ಯಾದಿ ಕುಲನಾಮಗಳಲ್ಲಿ ಅದು ಉಳಿದುಕೊಂಡಿದೆ. ಸಂಸ್ಕೃತದಲ್ಲಿ ಕಾಶ್ಮೀರಿ ಕವಿಗಳು ಅದನ್ನು ಧಾರಾಳವಾಗಿ ಬಳಸಿದ್ದಾರೆ. **ಕಲಮ** ಎಂದರೆ ಲೇಖನಿ. ಉರ್ದುಕೋಶಗಳು ಅದು ಅರಬ್ಬಿ ಪದವೆಂದು ಹೇಳುತ್ತವೆ. ಇಂಗ್ಲೀಷಿನಲ್ಲಿ colamos ಇದೆ; ಅದು ಗ್ರೀಕ್ **ಕಲಮೊಸ್**‌ನಿಂದ ಲ್ಯಾಟಿನ್ ಮೂಲಕ ಆ ಭಾಷೆಗೆ ಬಂದದ್ದು. **ಕಲಮೊಸ್** ಎಂದರೆ ಕತ್ತರಿಸಿ **ಲೇಖನಿಗಾಗಿ** ಉಪಯೋಗಿಸುತ್ತಿದ್ದ ಒಂದು ಬಗೆಯ **ಗಲಗು** ಅಥವಾ **ಗಲಕು** ಎಂಬ ದಪ್ಪನೆಯ ಹುಲ್ಲು. ಈ **ಗಲಗು** ಕೂಡ ಕನ್ನಡ ಪದವಿದ್ದಂತೆ ಕಾಣೆ. ತೆಲುಗಿನಲ್ಲಿ **ಕಲುಗು** ಎಂಬ ರೂಪದಲ್ಲಿದೆ. ಏನಿದ್ದರೂ **ಕಲಮ** ನಮಗೆ ಬಂದದ್ದು ಪಾರಸೀಕ ಭಾಷೆಯ ಮೂಲಕ ಅರಬ್ಬಿಯಿಂದ.

ಇನ್ನು **ಲಿಪಿ** (ಬರವಣಿಗೆ). ಇದನ್ನು ಸಂಸ್ಕೃತದ ಕೋಶಗಳು **ಲಿಪ್** (ಹಚ್ಚು, ತೊಡೆ) ಧಾತುವಿನ ಕೆಳಗೆ ಕೊಡುತ್ತವೆ (ಪದಾರ್ಥ ಚಿಂತಾಮಣಿ ೨೫). ಪಾಣಿನೀಯ ಸೂತ್ರದಲ್ಲಿ ಲಿಖಿತ ಎಂಬರ್ಥದಲ್ಲಿ **ಲಿಪಿ, ಲಿಬಿ** ಬರುವುದರಿಂದ ಸಂಸ್ಕೃತದಲ್ಲಿ ಅದು ಕನಿಷ್ಠ ೨೫೦೦ ವರ್ಷ ಹಳೆಯ ಶಬ್ದ. ಆದರೆ ಅಶೋಕನ ಶಾಸನಗಳಲ್ಲಿ **ಲಿಪಿಯೊಡನೆ ದಿಪಿ** ಎಂಬ ರೂಪ ಕೂಡ ಕಾಣಿಸುತ್ತದೆಂದೂ **ದಿಪಿಯದೇ** ಒಂದು ರೂಪ **ಲಿಪಿಯಾಗಿದ್ದು** ಅದು ಹಳೇ ಪಾರಸೀಕ ಭಾಷೆಯ ದಾನವೆಂದೂ ಸುನೀತಿ ಕುಮಾರ ಚಟರ್ಜಿ ಹೇಳುತ್ತಾರೆ. ಕಾಶ್ಮೀರಿ ಸಂಸ್ಕೃತ ಕವಿಗಳು **ದಿವಿರ** ಎಂಬ ಪದವನ್ನು **ಸರಕಾರಿ ಲೇಖಾಧಿಕಾರಿ**, ಕರಣಿಕ ಎಂಬರ್ಥದಲ್ಲಿ ಕ್ರಿ.ಶ. ೧೦ನೇ ಶತಮಾನದಲ್ಲಿ ಬಳಸಿದ್ದಾರೆ. ಇದು ಹಳೇ ಪಾರಸೀಕ ಭಾಷೆಯ **ದಿಪಿವರ** (ಹೊಸ ಪಾರಸೀಕ ಭಾಷೆಯ **ದಬೀರ್**) ಪದದ ಸಂಸ್ಕೃತೀಕರಣ ಹೊರತು ಬೇರೆ ಅಲ್ಲ. ಹಳೇ ಪಾರಸೀಕ ಭಾಷೆಯಲ್ಲಿ **ನಿಪಿಸ್ತ** (ಲಿಖಿತ) ಪದವಿದೆ. ನಮ್ಮ **ಲಿಪಿಗೆ** ಈ **ನಿಪಿಸ್ತ** ಮೂಲವಾಗಿರಲೂಬಹುದು.

೪೪

**ಸಾಯೀಬಾಬಾ** ಹೆಸರು ಯಾರು ಕೇಳಿಲ್ಲ? ಶಿರಡಿಯ ಮೂಲ **ಸಾಯೀಬಾಬಾ**, ಪುಟ್ಟಪರ್ತಿಯ ಸತ್ಯ **ಸಾಯೀಬಾಬಾ** ಜಗತ್ಪ್ರಸಿದ್ಧರು. ಇವರಲ್ಲದೆ ಉತ್ತರ ಭಾರತದಲ್ಲಿ ಬೇರೆ ಚಿಕ್ಕಪುಟ್ಟ ಸಾಯಿಬಾಬಾಬಗಳೂ ಇದ್ದಾರಂತೆ. ಆದರೆ **ಸಾಯೀಬಾಬಾ** ಅಂದರೇನು ? ಸಾಯೀ ಎಂಬುದು **ಸ್ವಾಮಿ** ಶಬ್ದದ ಅಪಭ್ರಂಶ. **ಬಾಬಾ** ಎಂಬುದು **ವೃದ್ಧ** ಅಥವಾ **ಪೂಜ್ಯ** ವ್ಯಕ್ತಿಯನ್ನು ಸಂಬೋಧಿಸುವ ಪಾರಸೀಕ ಪದ. ಆದ್ದರಿಂದ ವಿನೋಬಾ ಭಾವೆ ಕೂಡ ಸಾಯಿ ಅಲ್ಲದಿದ್ದರೂ **ಬಾಬಾ** ಎಂದು ಪ್ರಸಿದ್ಧರಾಗಿದ್ದಾರೆ.

ಬಹುಶಃ ಮಠ ಮಾನ್ಯಾದಿಗಳ ಅಧಿಕಾರವಿಲ್ಲದೆ 'ಸ್ವಯಂಭು'ಗಳಾದ ಅವಧೂತ ಪವಾಡಿಗ ಸಾಧುಗಳು, ಬೈರಾಗಿಗಳೇ **ಸಾಯೀ**ಗಳು ; ಅವರು ದಕ್ಷಿಣದ **ಸ್ವಾಮಿ**ಗಳಂತೆ ಮಂಡೆ ಬೋಳಿಸಿದ ಸ್ವಾಮಿಗಳಾಗಿರಬೇಕಿಲ್ಲ. ಬರೇ ಸಾಯಿಗಳಲ್ಲದೆ **ಗೋ–ಸಾಯಿ**ಗಳೂ ಇದ್ದಾರೆ. ಈ ಪದದ ಸಂಸ್ಕೃತ ರೂಪ **ಗೋಸ್ವಾಮಿ**. ಹಿಂದೀ ರಾಮಾಯಣ ಸಂತಕವಿ **ಗೋಸ್ವಾಮಿ** ತುಲಸೀದಾಸರು ; ಸಂಸ್ಕೃತ ಭಕ್ತಕವಿ **ರೂಪ ಗೋಸ್ವಾಮಿ**. ಈ **ಗೋ–ಸ್ವಾಮಿ**ಗಳಿಗೂ ಗೋವುಗಳಿಗೂ ಸಂಬಂಧವಿಲ್ಲ. **ಗೋ** ಅಂದರೆ **ಇಂದ್ರಿಯ**ಕ್ಕೂ ಹೆಸರು. **ಗೋ–ಸ್ವಾಮಿ** ಇಂದ್ರಿಯಗಳನ್ನು ಜಯಿಸಿದ ವಿರಕ್ತ ; ಇಂದ್ರಿಯಗಳ **ಒಡೆಯ**. ಅವನು ಸಂಸಾರಿಯಾಗಿದ್ದೂ ಅನಾಸಕ್ತನಾಗಿರಬಹುದು. **ಗೋಜಿತ** (ಇಂದ್ರಿಯಗಳನ್ನು ಗೆದ್ದಾತ) ಶಬ್ದವನ್ನು ಬಸವಣ್ಣನವರೂ ಬಳಸಿದ್ದಾರೆ. ಸಾಧಾರಣದ ಮಾತಿನಲ್ಲಿ ಅವನು **ಗೋಸಾಯಿ** ಅಥವಾ **ಗೋಸಾವಿ** (ಕನ್ನಡಿಗರಲ್ಲಿ **ಗೋಸಾವಿ** ಕುಲಗಳುಂಟು).

ಆದರೂ **ಸಾಯೀಬಾಬಾ** ಪದಕ್ಕೆ ಸ್ಫೂರ್ತಿ ಇಸ್ಲಾಮಿನದೇ ಎಂದು ಸಂಶಯ ಬರುತ್ತದೆ. ಒಂದು ವಿಶಿಷ್ಟ ತರಹದ ಮುಸಲ್ಮಾನ ಸಾಧು–ಬೈರಾಗಿಗಳಿಗೆ **ಸಾಯಿ** ಎಂಬ ಅಭಿಧಾನವುಂಟು. ಈ ಅರಬೀ ಶಬ್ದಕ್ಕೆ **ಯತ್ನ ಮಾಡುವವ, ಸಾಧಕ** ಎಂದು ಅರ್ಥ. ಅಧ್ಯಾತ್ಮ ಸಾಧಕನಾದ್ದರಿಂದ ಅವನು **ಸಾಯೀ. ಮೂಲ** (ಶಿರಡಿ) **ಸಾಯೀಬಾಬಾ** ಯಾವ ಜಾತಿಯಲ್ಲಿ ಹುಟ್ಟಿ ಬಂದವರೆಂದು ಗೊತ್ತಿಲ್ಲವಾದರೂ ಅವರು ಮುಸ್ಲಿಮ್ ಪರಂಪರೆಯ ಫಕೀರ ಅಥವಾ ಅವಧೂತ ಎಂಬುದು ನಿರ್ವಿವಾದ.

**ಸ್ವಾಮಿ ಸಾಯಿ**ಯಾಗಿ ಜನಜಂಗುಳಿಯ ಏಕಭಕ್ತಿಗೆ ಪಾತ್ರನಾದರೆ, **ಸ್ವಾಮಿನಿ ಸಾನಿ**ಯೆನಿಸಿ ಸಂಶಯಾಸ್ಪದ ಗೌರವಕ್ಕೆ ಭಾಗಿಯಾಗಿದ್ದಾಳೆ. ಆದರೆ ಈಗ **ಸೂಳೆ**ಯೆಂದು ತಾತ್ಪರ್ಯ ಕೊಡುವ **ಸಾನಿ**ಗೆ ಹಿಂದೆ ಕಳಂಕಿತ ಧ್ವನಿ ಇದ್ದಿಲ್ಲ. ಯುರೋಪಿಯನ್ ಅಧಿಕಾರಿಗಳ ಹೆಂಡಂದಿರನ್ನು **ದೊರೆಸಾನಿ** ಅಂತ ಕರೆಯುತ್ತಿದ್ದರು. **ಸೂಳೆ**ಯರಿಗೆ **ಸಾನಿ** ಎಂಬ ಅಭಿಧಾನ ಹೇಗೆ ಬಂತೆಂಬುದು ಸಂದಿಗ್ಧ ವಿಷಯ. **ಸಾನಿ** ಎಂಬ ಅರಬೀ ಮೂಲದ ಉರ್ದು ಶಬ್ದವೊಂದಿದೆ. ಅದಕ್ಕೆ ಎರಡನೇ, **ಜತೆ**, ಸಮಾನ, ಸರೀಕ, ಪ್ರತಿ ಇತ್ಯಾದಿ ಅರ್ಥಗಳಿವೆಯೇ ಹೊರತು ವೇಶ್ಯೆಯೆಂದಲ್ಲ. ಮರಾಠಿ ಅಥವಾ ಉರ್ದು ಕೋಶಗಳಲ್ಲಿ ಸಾನಿಗೆ ಈ ನಿಕೃಷ್ಟಾರ್ಥ ಸಿಕ್ಕುವುದೂ ಇಲ್ಲ. ಮೊದಲು ಈ ಶಬ್ದ ಕನ್ನಡದಲ್ಲಿ **ನಾಯಕಸಾನಿ** ಎಂಬುದಾಗಿ ಆರಂಭವಾಯಿತು. **ನಾಯಕಿ (ನಾಯಿಕಾ)** ಎಂಬುದು ಯಜಮಾನಿ, ಮುನ್ನಡೆಸುವವಳು ಎಂಬರ್ಥದ ಪದವಾದರೂ ನಾಟ್ಯಶಾಸ್ತ್ರದಲ್ಲಿ ಮುಖ್ಯ ಸ್ತ್ರೀಪಾತ್ರಕ್ಕೆ ಆ ಹೆಸರಿದ್ದುದರಿಂದ ಮತ್ತು ನಾಟ್ಯದಲ್ಲಿ ನರ್ತನ ಪ್ರಧಾನವಾದ್ದರಿಂದ ನಾಯಕಿಗೆ **ನರ್ತಕಿ** ಎಂಬರ್ಥವೂ ಬಂತು. **ನರ್ತಕಿ**ಯರು ಬಹುತರವಾಗಿ ಸೂಳೆಯರಾಗಿದ್ದುದರಿಂದ

**ನಾಯಕಿ**ಯೂ ಅದೇ ಅರ್ಥ ಪಡೆಯಿತು. ಮೊದಲು ನರ್ತಕಿಯರ ತಂಡದ ಒಡತಿ (ಸ್ವಾಮಿನಿ) ಅಥವಾ ಪ್ರಧಾನ ನರ್ತಕಿ **ನಾಯಕ–ಸಾನಿ** ಎನಿಸಿ ಕಡೆಗೆ ಎಲ್ಲ ನರ್ತಕಿಯರಿಗೂ ಅದು ಅನ್ವಯಿಸಿರಬೇಕು – ಮೊದಲು ವರ್ತಕರ ಮುಂದಾಳಿಗೆ ಶ್ರೇಷ್ಠಿ (ಸೆಟ್ಟಿ) ಎಂಬ ಉಪಾಧಿಯಿದ್ದದ್ದು ಕಡೆಗೆ ಎಲ್ಲ ವರ್ತಕರಿಗೂ ಅದು ಅಂಟಿದ ಹಾಗೆ.

**ಸಾಯಿ**, ಸಾನಿಯರ ಚರಿತ್ರೆಯಂತೆ **ಭಟ್ಟ, ಭಟ್ಟನಿ**ಯರದೂ ಸ್ವಾರಸ್ಯವಾಗಿದೆ. ಭಟ್ಟ (ಭಟ್ಟಾ) ಎಂಬುದು ಸಂಸ್ಕೃತ **ಭರ್ತಾ**ದ ಅಪಭ್ರಂಶ. **ಭರ್ತಾ** ಅಂದರೆ ಪೋಷಕ, ಪಾಲಕ, ಯಜಮಾನ, ಒಡೆಯ. **ಸ್ವಾಮಿ** (ಒಡೆಯ) ಸಾಯಿ ಆದಾಗ ಸಾಧು, ಸಂತ, ಪವಾಡಿ ಎಂಬ ಅರ್ಥ ಹೊಂದಿದಂತೆ ಭರ್ತಾ (ಭರ್ತೃ) **ಭಟ್ಟಾ** ಆದಾಗ ಹಿರಿಯ, ಗೌರವಾರ್ಹ ಪೂಜ್ಯ ಎಂಬರ್ಥಕ್ಕೆ ತಿರುಗಿ ಪುನಃ ಸಂಸ್ಕೃತದಲ್ಲಿ ಸೇರಿತು. ಹಳೇ ಶಾಸನಗಳಲ್ಲಿ ಭಟ್ಟಾರಕ, ಭಟ್ಟಾರ ಶಬ್ದಗಳು ದೇವಾಲಯದ ದೇವರಿಗೂ ಅರಸರಿಗೂ (ದೇವರು ಲೋಕದೊಡೆಯ ತಾನೆ) ಪೂಜ್ಯ ಅರ್ಚಕರು, ಪ್ರಧಾನ (ಜೈನ ಮತ್ತು ಹಿಂದೂ) ಆಚಾರ್ಯರು, ಗುರುಗಳು, ಅರ್ಚಕರು ಇವರಿಗೂ ಅನ್ವಯವಾಗಿ ಬಳಸಲ್ಪಟ್ಟಿವೆ. **ಭಟ್ಟ** ಎಂಬುದು ಮಹಾಪಂಡಿತರಿಗೂ (**ಭಟ್ಟ ಬಾಣ**, ಭಟ್ಟ ನಾರಾಯಣ) ತಗುಲಿತು. ಬಂಗಾಲದ **ಭಟ್ಟಾಚಾರ್ಯ**ರು ಮಹಾ **ತರ್ಕ**ಶಾಸ್ತ್ರ ಪ್ರತಿಪಾದಕರಾಗಿದ್ದರು. ಗದಾಧರ **ಭಟ್ಟಾಚಾರ್ಯ** ತರ್ಕಶಾಸ್ತ್ರದಲ್ಲಿ ಅಸಮಾನ ಹೆಸರು. ಕುಮಾರಿಲ **ಭಟ್ಟ**ನ ದೆಸೆಯಿಂದ ಮೀಮಾಂಸಾ ತತ್ವಜ್ಞಾನದ ಒಂದು ಪರಂಪರೆಗೆ **ಭಾಟ್ಟ**ಮತವೆಂದೇ ಹೆಸರು ಬಿತ್ತು.

ಈ ಉನ್ನತ ಪದವಿಯಿಂದ ಭಟ್ಟರು ಈಗ ಇಳಿಗಾಲ ಕಂಡಿದ್ದಾರೆ. ಆಧುನಿಕ ಲೌಕಿಕದ ದೃಷ್ಟಿಯಲ್ಲಿ **ಭಟ್ಟ**ರು ಪೌರೋಹಿತ್ಯ, ಪೂಜಾದಿ ವೃತ್ತಿಗಳಿಂದ **ಹೊಟ್ಟೆ** ಹೊರೆದು ಕೊಳ್ಳುವವರಾಗಿದ್ದಾರೆ. ಅಡುಗೆ ವೃತ್ತಿಯವರೂ **ಭಟ್ಟ**ರಾಗಿದ್ದಾರೆ. ಉತ್ತರ ಕರ್ನಾಟಕದಲ್ಲಿ ವೈಷ್ಣವರು **ಭಟ್ಟ**ತನವನ್ನು. ಸ್ಮಾರ್ತರಿಗೆ ಬಿಟ್ಟು ತಾವು ಆಚಾರ್ಯರಾಗಿದ್ದಾರೆ, ಪೌರೋಹಿತ್ಯದಲ್ಲಿದ್ದರೂ! **ಅಡುಗೇ ಆಚಾರ್‍ರೂ** ಉಂಟೆನ್ನಿ.

ಅತ್ತ **ಭಟ್ಟ** ಶಬ್ದದ ಸ್ತ್ರೀಲಿಂಗವಾಚಿ **ಭಟ್ಟನಿ** ಸಂಸ್ಕೃತ ನಾಟಕಗಳಲ್ಲಂತೂ ಸಂದಿಗ್ಧ ಮರ್ಯಾದೆಯ ಪದವಾಗಿದೆ. ಅದರ ತಾತ್ಪರ್ಯ ಯಜಮಾನಿ ಎಂದಿದ್ದರೂ ಅರಸರು ವಿಧಿವತ್ತಾಗಿ ವಿವಾಹವಾಗದ, ಆದರೆ ಅರಸರ ಪ್ರಣಯ ಕಟಾಕ್ಷದಿಂದ ಅಂತಸ್ತಿಗೇರಿದ ಅಂತಃಪುರದ ನಾರಿಯರನ್ನು ದಾಸಿಯರು **ಭಟ್ಟನಿ** ಎಂದು ಸಂಬೋಧಿಸುವುದು ಕಾಣುತ್ತದೆ. ಅರ್ಥಾತ್ **ಭಟ್ಟನಿ** ಗೌರವಾರ್ಹ **ಉಪಪತ್ನಿ**!

ಭಟ್ಟದಿಂದ **ಭಟ**ಕ್ಕೆ ಎಷ್ಟು ದೂರ? ಎರಡೂ ಸಂಸ್ಕೃತದ ಭೃಧಾತುವಿನಿಂದ ಹುಟ್ಟಿದವು. ಭರ್ತಾ (= **ಭಟ್ಟ**) ಅಂದರೆ ಯಜಮಾನ, ಒಡೆಯ; **ಭೃತ** (= **ಭಟ**) ಅಂದರೆ ಆಳು; ಆಶ್ರಿತ, ಪೋಷಿತ, ಸೇವಕ, ಯಜಮಾನ **ಭಟ**ನನ್ನು ಬೇಕಾದ ಕೆಲಸಗಳಿಗೆ ಅಟ್ಟುತ್ತಾನೆ. **ಯಮಭಟ, ರಾಜಭಟ**. ಹೊಟ್ಟೇಪಾಡಿಗಾಗಿ ಅವನು ಯಜಮಾನನ ಪರವಾಗಿ ಹೋರಾಟವನ್ನು ಮಾಡಬೇಕಾಗುತ್ತದೆ. ಹೀಗೆ ಜೀವನದ ಹಂಗು ತೊರೆದು ಹೋರಾಡುವ ವೀರನಿಗೆ ಭಟ ಎಂಬ ಪದ ಉಪಯೋಗವಾಯಿತು.

ಅವನು ಹಂಗಿಗೆ ಹೋರಾಡುವವನಲ್ಲದಿದ್ದರೂ ಒಬ್ಬ ವೀರನನ್ನು ಎದುರಿಸಿ ಹೋರುವ ಇನ್ನೊಬ್ಬ ವೀರ **ಪ್ರತಿಭಟ**ನಾದ. ಆಮೇಲೆ ಯಾವುದಾದರೂ ಅನ್ಯಾಯವನ್ನು ಧೈರ್ಯದಿಂದ ವಿರೋಧಿಸುವುದು **ಪ್ರತಿಭಟನೆ** ಆಯಿತು. ಅನ್ನದ ಹಂಗಿಗನಾದ **ಭಟ**

**ಪ್ರತಿಭಟನೆ**ಗೆ ಮುಟ್ಟುವಾಗ ಎಷ್ಟು ದೂರ ಸಾಗಿಬಿಟ್ಟಿದ್ದಾನೆ.

ಈ ಭೃತ ಅಥವಾ ಭೃತ್ಯನೇ **ಬಂಟನೂ** ಆದ. ರಾಮನ ಬಂಟ ಹನುಮಂತ. ಬಲಗೈ **ಬಂಟ**. ಸದಾಕಾಲ ಯಜಮಾನನ ಜತೆ ತಿರುಗುತ್ತ ಕಾವಲು ಕೊಡುವಾತ **ಬಂಟ**. ಇವನೂ **ಶೂರ**ನೇ ಇರಬೇಕಲ್ಲವೆ? **ಬಂಟ**ನೆಂದರೆ **ಯೋಧ**. ದಕ್ಷಿಣ ಕನ್ನಡದಲ್ಲಿ ನಾಡವರ ಜಾತಿ **ಬಂಟ ಜಾತಿ** ಎನಿಸುತ್ತದೆ. ಇವರಿಂದು ಜಿಲ್ಲೆಯ ಪ್ರಧಾನ ಭೂ ಮಾಲಿಕರಾದರೂ ಇವರ ಜಾತಿಯ ಹೆಸರು ಇವರ ಮೂಲ ಉದ್ಯೋಗ ಯುದ್ಧ ಎಂದು ಸೂಚಿಸುತ್ತದೆ. ಇವರು **ಬಂಟ** ಶಬ್ದದ ಮೂಲ ರೂಪ ಸೂಚಿಸುವ **ಭೃತ್ಯ**ರಾಗುವ ಬದಲು ಅನೇಕ ಭೃತ್ಯರನ್ನು ಇಟ್ಟುಕೊಳ್ಳುವ ಅಭಿಮಾನಿ ಜನಾಂಗದವರು. ಶೌರ್ಯಕ್ಕೆ ಆ ಜಿಲ್ಲೆಯಲ್ಲಿ **ಬಂಟು** ಎಂಬ ಪದ ಇದೆ ''ಅವನ **ಬಂಟು** ನೋಡಯ್ಯ'' ಎಂಬಲ್ಲಿ ಅದು **ಹುಚ್ಚು ಸಾಹಸ**ವನ್ನು ಧ್ವನಿಸುತ್ತದೆ. ಉತ್ತರ ಕರ್ನಾಟಕದಲ್ಲಿ ಬಳಕೆಯಲ್ಲಿರುವ **ಪಂಟು** ಕೂಡ **ಬಂಟು**ವಿನ ಒಂದು ರೂಪವಿರಬಹುದು. ''**ಪಂಟು** ಬಡಿಯುತ್ತಾನೆ'' ಎಂದರೆ ವ್ಯರ್ಥ ಪೌರುಷ ಹೇಳಿಕೊಳ್ಳುತ್ತಾನೆ ಎಂದರ್ಥ.

ಅರಸರೂ ಸಾಮಂತರೂ ತಮ್ಮನ್ನು ತಮ್ಮ ಸಂಮುಖದಲ್ಲೇ ಹೊಗಳುವುದಕ್ಕೆ ಸಂಬಳ ಕೊಟ್ಟು **ಹೊಗಳುಭಟ್ಟ**ರನ್ನು ಸಾಕುತ್ತಿದ್ದರು. ಅವರೂ **ಭೃತಕ**ರು. **ಭಟ್ಟಂಗಿ**ಗಳೂ ಅವರೇ.

ಸಂಬಳಕ್ಕೆ ಹೋರಾಡುವ **ಭಟ**ರ ವಿಚಾರ ಹೇಳುವಾಗ ಹಳೆಗನ್ನಡ ಶಾಸನಗಳಲ್ಲಿ ಬರುವ **ಮಗ** ಶಬ್ದ ನೆನಪಿಗೆ ಬರುತ್ತದೆ. ಅನೇಕ ವೀರಗಲ್ಲುಗಳಲ್ಲಿ ಇಂಥವರ ''**ಮಗನ್** ಇರಿದು ಸ್ವರ್ಗಕ್ಕೇರಿದೋನ್.'' ಇಂಥವರ **ಮನೆಮಗನ್** ಇತ್ಯಾದಿ ಪ್ರಯೋಗಗಳು ಕಾಣಸುತ್ತವೆ. ಈ **ಮಗ** ಶಬ್ದಕ್ಕೆ ಬಹುಶಃ ಬಂಟ, ಭಟ ಎಂದೇ ಅರ್ಥವೆಂದು ಅನಿಸುತ್ತದೆ. ಮಗ ಶಬ್ದಕ್ಕೆ ತೆಲುಗಿನಲ್ಲಿ **ಗಂಡು** ಎಂದಲ್ಲದೆ ವೀರ ಎಂಬರ್ಥವೂ ಇವೆ. **ಮಗತನಮು** ಅಂದರೆ ಪೌರುಷ. ಪ್ರೀತಿಯಿಂದ ಪೋಷಿಸಿದ, ಜೀವಕ್ಕೆ ಜೀವ ಕೊಡುವ ಬಂಟರ ಬಗ್ಗೆ ಯಜಮಾನನ ಪ್ರೀತಿಗೆ ಇದು ದ್ಯೋತಕವಾಗಿದ್ದಿತು.

೪೫

**ಅಳತೆ** ಮಾಡುವುದು ಅತಿ ಪ್ರಾಚೀನವಾದ ಮಾನವ **ಕ್ರಿಯೆ**. ಒಂದು ಭಾಷಾ ಗುಂಪಿನಲ್ಲಿ ಈ ಕ್ರಿಯೆಗೆ ಇರುವ ಶಬ್ದ ಬಹಳ ಮಟ್ಟಿಗೆ ಸಾರ್ವತ್ರಿಕವಾಗಿರುವುದರಿಂದ ಈ ಕ್ರಿಯೆಯ ಪ್ರಾಚೀನತೆಯು ಅರಿವಾಗುತ್ತದೆ. **ಅಳೆ** ಧಾತು ದಕ್ಷಿಣ ದ್ರಾವಿಡದಲ್ಲೆಲ್ಲ ಇದೆ; ಸಂಸ್ಕೃತದ **ಮಾ** (= **ಅಳೆ**) ಋಗ್ವೇದ, ಇರಾಣದ ಪ್ರಾಚೀನ ಜೆಂದ್, ಗ್ರೀಕ್, ಲ್ಯಾಟಿನ್ ಸ್ಲಾವಿಕ್, ಲಿಥುವೇನಿಯನ್ ಮುಂತಾದ ಭಾರೋಪ್ಯ ಭಾಷೆಗಳಲ್ಲೆಲ್ಲ ಸ್ವಲ್ಪ ಹೆಚ್ಚು ಕಡಿಮೆ ಅದೇ ರೂಪದಲ್ಲಿದೆ. ಈ ಪದಗಳು **ಉದ್ದಳತೆ**ಗೂ ಘನ ಅಳತೆಗೂ ಕೆಲ ಮಟ್ಟಿಗೆ ತೂಕಕ್ಕೂ ಅನ್ವಯಿಸುತ್ತವೆ.

ಅಳತೆಯ ಮೂಲಾಧಾರ ಮನುಷ್ಯನ ಅವಯವಗಳೇ ಎಂಬ ಸಂಗತಿ ನಾವು ಬಳಸುವ ಶಬ್ದಗಳಿಂದ ತಿಳಿಯುತ್ತದೆ. ಕನ್ನಡದ **ಗೇಣು**, ಸಂಸ್ಕೃತದಲ್ಲಿ **ವಿತಸ್ತಿ**, ಇಂಗ್ಲೀಷಿನ **ಸ್ಪಾನ್** ಅಗಲಿಸಿದ ಕೈಯ ಹೆಬ್ಬೆಟ್ಟಿನ ತುದಿಯಿಂದ ಕಿರಿಬೆರಳ ತುದಿವರೆಗಿನ ದೂರ; ಇಂಗ್ಲೀಷಿನ **ಫುಟ್**, ಕನ್ನಡದ **ಅಡಿ** ಪಾದದ ಉದ್ದಳತೆಯನ್ನು ಆಧರಿಸಿದವು. ಕನ್ನಡದ **ಮೊಳ**, ಕೈಯ ಮೊಳಗಂಟಿನಿಂದ ಉಂಗುರ ಬೆರಳಿನ ತುದಿವರೆಗಿನ ಅಳತೆ, **ಮಾರು**ವಾದರೋ

ಎರಡೂ ತೋಳುಗಳನ್ನು ನೇರಕ್ಕೆ ಬಿಡಿಸಿದಾಗ **ಎದೆ**ಯನ್ನು (ಮಾರ್ = ಎದೆ) ಒಳಗೊಂಡು ಎಡಗೈ ಬೆರಳ ತುದಿಯಿಂದ ಬಲಗೈ ಬೆರಳ ತುದಿವರೆಗಿನ ಅಳತೆಯಾಗುತ್ತದೆ. ಏಕೋ ಏನೋ ಪಾಶ್ಚಾತ್ಯರಲ್ಲಿ **ಅಡಿ** (ಫುಟ್) ಮುಖ್ಯಾಧಾರ ಪಡೆದರೆ ನಮ್ಮಲ್ಲಿ **ಗೇಣು** ಆ ಹಿರಿಮೆ ಗಳಿಸಿತು. ಆದರೆ ನಮ್ಮಲ್ಲಿ ಕೂಡ ''ಜಗವ ಮೂರು **ಅಡಿ** (ಸಂಸ್ಕೃತ : **ತ್ರಿಪಾದ್**) ಮಾಡಿ'' ತ್ರಿವಿಕ್ರಮನ (= ಮೂರು ಹೆಜ್ಜೆಯವ) ಕಥೆ ಅಡಿಯ ಆಧಾರಮಾನವನ್ನು ಸೂಚಿಸುತ್ತದೆ.

ವಿಶೇಷವೆಂದರೆ, ಈ **ಅಡಿ**ಯ (ಫುಟ್) ಅಥವಾ **ಗೇಣಿ**ನ ಉಪವಿಭಾಗ ಮಾಡುವಾಗ ಬಳಸಿದ ಭಾಜ್ಯ ಕೂಡ ಯುರೋಪಿನಲ್ಲಿಯೂ ನಮ್ಮಲ್ಲಿಯಂತೆ **ಹನ್ನೆರಡು** ಆಗಿರುವುದು. ಹನ್ನೆರಡು **ಅಂಗುಲ** (= ಬೆರಳು) ಅಂದರೆ ಒಂದು **ಗೇಣು**. ಅಡಿ = ಹನ್ನೆರಡು **ಇಂಚು** = ಒಂದು ಫುಟ್. **ಇಂಚು** ಎಂಬುದು ಲ್ಯಾಟಿನ್ನಿನ **ಅನ್ಸಿ**ಯದಿಂದ ( = ಹನ್ನೆರಡರ ಅಂಶ) ಬಂದದ್ದು. (ಆದರೆ ಇಂಗ್ಲೀಷ್ **ಇಂಚು** ನಮ್ಮ ಪ್ರಾಚೀನ ಅಂಗುಲಕ್ಕಿಂತ ದೊಡ್ಡದು; **ಫುಟ್**ನ ಅಳತೆ ಗೇಣಿನದಕ್ಕಿಂತ ೧/೨ ಅಂಶ ದೊಡ್ಡದು.)

ಮನುಷ್ಯ ಮನುಷ್ಯರೊಳಗಿನ ಎತ್ತರದ ಅಂತರದಿಂದ ಈ ಅಳತೆಗಳು ಅವ್ಯವಸ್ಥೆಗೆ ಕಾರಣವಾಗಿ ಸ್ವತಂತ್ರ ಪ್ರಮಾಣಿತ ಅಳತೆ ಅವಶ್ಯವೆಂದು ಕಂಡಿರಬೇಕು. (ಇದರಲ್ಲಿ ಕೆಲ ತಮಾಷೆಗಳೂ ನಡೆದುವು. ಇಂಗ್ಲೆಂಡಿನಲ್ಲೊಬ್ಬ ರಾಜ ತನ್ನ ಕೈ ನೀಡಿದಾಗ ತನ್ನ ಮೂಗಿನ ತುದಿಯಿಂದ ಕೈ ತುದಿಯವರೆಗಿನ ಉದ್ದವನ್ನು ದೇಶಕ್ಕೆಲ್ಲ ಪ್ರಮಾಣಿತ ಅಳತೆಯಾಗಿ ಮಾಡಿದನಂತೆ!) ಹೀಗೆ ಸ್ವತಂತ್ರವಾದ ಅಳತೆಕೋಲುಗಳು ಬಂದುವು. ಇಂಗ್ಲೀಷರು **ಫುಟ್**, **ಯಾರ್ಡು**ಗಳನ್ನು ತಂದು ಹೊರಿಸುವವರೆಗೆ ಕರ್ನಾಟಕದಲ್ಲಿ ದೊಡ್ಡ ದೊಡ್ಡ ಅಳತೆಗಳಿಗೆ ಪ್ರಮಾಣಿತ **ಗಳೆ**ಯೂ ಅದಕ್ಕಿಂತ ಚಿಕ್ಕ **ಕೋಲು**ಗಳೂ ಇದ್ದುವು, ಗಜಗಳೂ ಇದ್ದುವು. ಮೂರಡಿಗೆ ಒಂದು **ಗಜ** ಎಂದು ನಾವು ಚಿಕ್ಕವರಿದ್ದಾಗ ಕಲಿತಿದ್ದೆವು (**ಗಜ** = **ಯಾರ್ಡ್**). **ಗಳೆ**, **ಕೋಲು** ಪದಗಳು ಸ್ವಯಂವೇದ್ಯವಾಗಿವೆ. **ಗಜ** ಸಂಸ್ಕೃತವಾಗಿ ಕಾಣಿಸಿದರೂ ಅದು ನಿಜಕ್ಕೂ ಪಾರಸೀಕ ಪದ. ಆದರೆ ೧೪ನೇ ಶತಮಾನದ ಮಂಗರಸ ಅದನ್ನು ಉಲ್ಲೇಖಿಸಿರುವುದರಿಂದ, ಅದು **ತ್ರಾಸಿ**ನ ಹಾಗೆ, ಸಾಕಷ್ಟು ಹಿಂದೆಯೇ ಪಾರಸೀಕದಿಂದ ಕನ್ನಡದಲ್ಲಿ ಸೇರಿಕೊಂಡದ್ದು. ಆದರೆ **ಕೋಲೇ** ಇರಲಿ, **ಗಜವೇ** ಇರಲಿ, **ಯಾರ್ಡೇ** ಇರಲಿ ಎಲ್ಲದರ ಅರ್ಥವೂ (ಅಳೆಯುವ) **ಕೋಲು** ಅಥವಾ **ಕಂಬಿ** ಎಂದೇ. ಮನುಷ್ಯಚಿಂತನೆ ಸಾರ್ವದೇಶಿಕವಾದದ್ದು!

ಇಂಗ್ಲೀಷ್ ಅಳತೆಗಳು ಬರುವ ಮುಂಚೆ ನಮ್ಮಲ್ಲಿ ಬಳಕೆಯಲ್ಲಿದ್ದ ದೂರದ ಅಳತೆಗಳು ಸ್ವಾರಸ್ಯವಾಗಿವೆ. ಸಂಸ್ಕೃತದ **ಕ್ರೋಶ** ಅಂದರೆ **ಕೂಗು** (ಕನ್ನಡ) ಕೂಗಿದರೆ ಎಷ್ಟು ದೂರ ಕೇಳಿಸುತ್ತೋ ಅಷ್ಟು ದೂರ (ಕ್ರುಶ್=ಕೂಗು). ಕನ್ನಡದ **ಗಾವುದ** ಸಂಸ್ಕೃತದ **ಗವ್ಯೂತದ** ತದ್ಭವ. ಅದರ ಅರ್ಥ–**ಗೋಚರಾ**ವಿನಷ್ಟು ದೂರ; ಅರ್ಥಾತ್ ಊರಿನ ಆಕಳ ಹಿಂಡನ್ನು ಮೇಯಲು ಕಳಿಸುವಷ್ಟು ದೂರ. ಎರಡು ಕೂಗಳತೆ ಅಥವಾ ಎರಡು ಮೈಲಿನಷ್ಟು ಎಂದು ಲೆಕ್ಕ.

ಇನ್ನು ಇಂಗ್ಲೀಷಿನ **ಫರ್ಲಾಂಗ್**, **ಮೈಲು**ಗಳ ಮಾತೊ? **ಫರ್ಲಾಂಗ್** ಫರೋಲಾಂಗ್‌ದಿಂದ (furrow-long) ಹುಟ್ಟಿದ್ದು, **ಫರೋ** ಅಂದರೆ ರಂಟೆ ಹೊಡೆದ ಸಾಲು; ಹೊಲ ಗದ್ದೆಗಳು ಹತ್ತೆಕರೆ ವಿಸ್ತೀರ್ಣದ ಚಚ್ಚೌಕಗಳೆಂದೂ ಅಂಥ ಹೊಲದ ಒಂದು ಭುಜದಷ್ಟು ಉದ್ದಕ್ಕೆ ರಂಟೆ ಹೊಡೆದರೆ ಒಂದು ಫರ್ಲಾಂಗೆಂದೂ ಕಲ್ಪನೆ.

**ಮೈಲ್** ಎಂಬುದು ಲ್ಯಾಟಿನ್ನಿನಿಂದ mille (= ೧೦೦೦) ಹುಟ್ಟಿದ್ದು. **ಸಾವಿರಹೆಜ್ಜೆ** ದೂರವೇ ಒಂದು **ಮೈಲು**.

ಕನ್ನಡದ **ಹರದಾರಿ** ನಿಜಕ್ಕೂ **ಹರಿದಾರಿ** ಇರಬೇಕೆಂದು ಕಿಟ್ಟೆಲ್ ಹೇಳಿದ್ದಾರೆ. ಇದರಲ್ಲಿ ಹರಿಹರ ಪ್ರಶ್ನೆ ಇಲ್ಲ; ಉಚ್ಚಾರ ಭೇದ ಅಷ್ಟೇ. **ಹರಿ** ಅಂದರೆ **ಓಡು**. ಬಹುಶಃ ಒಂದು **ನಿಟ್ಟೋಟ**ದಲ್ಲಿ ಎಷ್ಟು ದೂರ ಹೋಗಬಹುದೋ ಅಷ್ಟು.

ಇಂದು ಈ ಕೈ-ಕಾಲುಗಳನ್ನವಲಂಬಿಸಿದ ಅಳತೆಗಳೆಲ್ಲ ಕಣ್ಮರೆಯಾಗಿ ಸ್ವತಂತ್ರವಾದ ಮೀಟರ್ ಮತ್ತು ಅದರ ಅಂಶಗಳೂ ಗುಣಕಗಳೂ ಜಾರಿಗೆ ಬರುತ್ತಿವೆ. **ಮೀಟರ್** ಆದರೂ **ಮಾನ**ದ ಗ್ರೀಕ್ ರೂಪದಿಂದ ಹೊರಟದ್ದು. ಸಂಸ್ಕೃತದಲ್ಲಿಯೂ **ಮಾತ್ರಾ** (= ಪ್ರಮಾಣ, ಅಳತೆ) ಇದೆ. ಕನ್ನಡದಲ್ಲಿ ಬಳಕೆಯಲ್ಲಿರುವ **ಮಾತ್ರೆ ಗುಳಿಗೆ** ಎಂಬರ್ಥವನ್ನು ಪಡೆದಿದೆ. ಉದಾಹರಣೆಗೆ ಕಸ್ತೂರೀ **ಮಾತ್ರೆ**. ನಿಜಕ್ಕೂ ಇದು ಇಂಗ್ಲೀಷಿನಲ್ಲಿ **ಡೋಜ್** (dose) ಎನ್ನುವ, ಒಮ್ಮೆ ನುಂಗಬೇಕಾದ ಔಷಧದ **ಅಳತೆ** ಎಂದೇ ಪ್ರಾರಂಭವಾದದ್ದು – ಒಂದು ಗುಟ್ಟಿ (dose) ಔಷಧಿ.

ಈ **ಅಳತೆ, ಮಾನ** ಮತ್ತು ತತ್ಸಮಾನ ವಿದೇಶಿ ಪದಗಳು ಬೆಳೆಸಿಕೊಂಡ ಅರ್ಥಚ್ಛಾಯೆಗಳು ಅಗಣಿತ. **ಅಳತೆ** ಎಂದರೆ ಒಂದು ಮಿತಿಯೊಳಗಿರುವುದಲ್ಲವೆ ? ಶಕ್ತಿಯ ಮಿತಿಯೂ ಅದರಲ್ಲಿ ಸೇರುತ್ತದೆ. ಹೀಗೆ **ಅಳವು = ಶಕ್ತಿ** ಆಯಿತು (ನನ್ನಳವಿನದಲ್ಲ). ಶಕ್ತಿಯ ಮಿತಿಯೊಳಗೆ ಬಂದದ್ದು **ಅಳವಿಗೆ** ಸಿಕ್ಕಿದ್ದು. ಸಂಸ್ಕೃತದ **ಮಾನ**ವಂತೂ ಇಂಥ ಅನೇಕ ಅರ್ಥಗಳನ್ನು ಸಂಪಾದಿಸಿಕೊಂಡಿದೆ. **ಪುರಾವೆ**ಗೆ **ಪ್ರಮಾಣ** ಅನ್ನುತ್ತೇವೆ; ಅಳತೆಯಿಂದ **ಖಚಿತಪಡಿಸಬಲ್ಲದ್ದೇ ಪ್ರಮಾಣ**. ತನ್ನ ನಡೆಯನ್ನು ಅಳತೆಯಲ್ಲಿರಿಸಿಕೊಳ್ಳುವುದೇ **ಮಾನ**; ಹಾಗಿರಿಸಿಕೊಂಡವ **ಮಾನವಂತ**; ಅಂಥವರು ವಿರಳವಾದ್ದರಿಂದ ಅವರಿಗೆ ನಾವು ಕೊಡುವುದು **ಮಾನ** – ಸರಿಯಾಗಿ ಅಳೆಯಲಾಗದಿದ್ದರೂ ಸುಮಾರಾಗಿ ಅಳೆಯಬಲ್ಲದ್ದು **ಅನುಮಾನ**. ಒಂದೇ ಅಳತೆಯುಳ್ಳವರು **ಸಮಾನರು**; ಪಾರಸೀಕ ಭಾಷೆಯಲ್ಲಿ ಅವರೇ **ಮಾನಿಂದರು**. ಒಬ್ಬನ ನಿಜ ಅಳತೆಗಿಂತ ಕಮ್ಮಿಯಾಗಿ ಅವನನ್ನು ಲೆಕ್ಕಿಸುವುದು **ಅವಮಾನ**. ಸುಮಾರಾಗಿ ಒಂದೇ ಅಳತೆಗೆ ಒಳಪಡಿಸುವುದು **ಉಪಮಾನ**.

**ಅಳತೆ, ಮಾನ**ಗಳಿಂದ ಹುಟ್ಟಿದ ಉಪಅರ್ಥಗಳು ದೂರದೂರದ ಭಾಷೆಗಳಲ್ಲಿ ಒಂದೇ ತೆರನಾಗಿರುವುದೊಂದು ಸೋಜಿಗ. ಅಳತೆಯಲ್ಲಿರುವವನಿಗೆ ನಾವು **ಮಾನ, ಸಂಮಾನ** ಕೊಡುತ್ತೇವೆ. ಅರಬೀ ಭಾಷೆಯಲ್ಲಿ ಕದ್ರ ಅಂದರೆ ಅಳತೆ, ಪ್ರಮಾಣ. ಅದೇ ಶಬ್ದ **ಮರ್ಯಾದೆ, ಪ್ರತಿಷ್ಠೆ, ದೊಡ್ಡಸ್ತಿಕೆ** ಎಂಬರ್ಥವನ್ನೂ ಕೊಡುತ್ತದೆ. ಹೀಗೆ ಉರ್ದುವಿನಲ್ಲಿ ಕದ್ರ ಕರನಾ ಅಂದರೆ ಯೋಗ್ಯತೆಗೆ ಮನ್ನಣೆ ಕೊಡುವುದು. ಇಂಗ್ಲೀಷಿನಲ್ಲಿಯೂ a man of measure ಅಳತೆಯ ಮನುಷ್ಯ ಅಂದರೆ ಘನಸ್ಥಿಕೆಯವನು.

**ಅಳತೆ, ಮಾನ** ಪದಗಳ ಆಧಾರಗಳು ಹೇಗೆ ಶರೀರದ ಅವಯವಗಳಾಗಿದ್ದವೆಂದು ಮೇಲೆ ವಿವರಿಸಿದೆ. ಆದರೆ **ಅಳೆ, ಮಾ** ಇತ್ಯಾದಿ ಧಾತುಗಳ ಮೂಲಾಧಾರ ಕಲ್ಪನೆ ಯಾವುದಿರಬಹುದು ? **ಅಳೆ**ಗೆ **ಆಳ್** = ಮನುಷ್ಯ, ಗಂಡಸು ಎಂಬುದೇ ಮೂಲವಾಗಿರಬಹುದೆ ? ಆಳುದ್ದ, ಆಳೆತ್ತರ ಎಂಬ ಮಾತುಗಳು ಇಂದಿಗೂ ಇವೆ. ಹಾಗೆಯೇ **ಮಾ, ಮಾನ** ಪದಗಳಿಗೆ ಮನಸ್ಸಿನ ಸಂಬಂಧ ಹಚ್ಚಲು ಸಾಧ್ಯವಿದ್ದರೂ ಮನುಷ್ಯನು ಮೂರ್ತದಿಂದ ಅಮೂರ್ತಕ್ಕೆ ಭಾಷೆಯನ್ನು ಬೆಳೆಸಿದನೆಂಬುದನ್ನು

ಒಪ್ಪುವುದಾದರೆ ಮಾನಕ್ಕೆ ಮೂರ್ತ ಆಧಾರವನ್ನು ಅನ್ವೇಷಿಸಬೇಕಾಗುತ್ತದೆ. ಲ್ಯಾಟಿನ್ನಿನಲ್ಲಿ manus ಅಂದರೆ ಕೈ. ಮುಂದೆ ಭಾರತೀಯಾರ್ಯ ಭಾಷೆಗಳಲ್ಲಿ ಈ ಪದ ಲುಪ್ತವಾದರೂ ಪ್ರಾಕ್ ಭಾರೋಪ್ಯದಲ್ಲಿದ್ದಿರಬಹುದಾದ ಈ ಪದವೇ ಸಂಸ್ಕೃತ **ಮಾನ**ಕ್ಕೂ ಆಧಾರವೊದಗಿಸಿರಬಹುದೇ ? ಇದು ಬರಿ ಕಲ್ಪನೆಯ ಕೈಬೀಸು – ಸಿದ್ಧಾಂತವಲ್ಲ.

೪೬

ಬೈಗಳು ಇಲ್ಲದ ಭಾಷೆ ಇರಲಿಕ್ಕಿಲ್ಲ. ಬೈಗಳು, ನಿಂದೆ, ದುರ್ಭಾಷೆ ಇವು ಬಹುಶಃ ಮನುಷ್ಯನ ಆಕ್ರಮಣ ಪ್ರವೃತ್ತಿಯ "ಅಹಿಂಸಕ" ರೂಪಗಳು. ಕೆಟ್ಟ ಮಾತುಗಳು ಗಾಯ ಮಾಡುವುದಿಲ್ಲ. ಪರಾಕ್ರಮದ ಕೃತಿಗಳ ಸ್ಥಾನದಲ್ಲಿ ಅವು ವರ್ತಿಸುತ್ತವೆ. ಆದರೆ ಕೆಲವೊಮ್ಮೆ ಮಾನವಧೆ ಮಾಡುವ ಮೂಲಕ ಅವು ಹಿಂಸೆಗೂ ಚಾಲನೆ ಕೊಡಬಹುದು. ತನ್ನೆದುರಿಗಿರುವವನು ತನ್ನ ವಿರುದ್ಧ ಅಸಹಾಯನೆಂದು ಅವನಿಗೆ ತೋರಿಸುವುದಕ್ಕೂ ಬೈಗಳು ಉಪಯೋಗವಾಗುತ್ತದೆ.. ದರ್ಪದ ಪ್ರಕಟನೆ ಅಥವಾ ಒಬ್ಬನ ಮೇಲೆ ನಮಗಿರುವ ತುಚ್ಛ ಭಾವನೆಯನ್ನು ಪ್ರಕಟಿಸುವ ಉಪಾಯವೂ ಆದಾಗಬಹುದು. ಬೈಗಳಿನ ಮನೋವೈಜ್ಞಾನಿಕ ಅಥವಾ ಜೀವಶಾಸ್ತ್ರೀಯ ಮುಖಗಳು ಏನೇ ಇದ್ದರೂ ಯಾವುದೊಂದು ಭಾಷೆಯ ಬೈಗಳ ಮಾತುಗಳನ್ನು ವಿಶ್ಲೇಷಿಸಿದರೆ ಆಯಾ ಭಾಷೆಯನ್ನಾಡುವ ಜನಾಂಗದ ಸಾಂಸ್ಕೃತಿಕ, ನೈತಿಕ, ಐತಿಹಾಸಿಕ ಹಿನ್ನೆಲೆಯ ಮೇಲೆ ಅರ್ಥಪೂರ್ಣ ಬೆಳಕು ಬೀಳಬಲ್ಲದು. ಅವು ನಮ್ಮ ಪೂರ್ವಜರ ಪೂರ್ವಾಗ್ರಹಗಳನ್ನೂ ತೆರೆದಿಡಬಲ್ಲವು.

ಚಿಕ್ಕಂದಿನಲ್ಲಿ ನಾನು ನನ್ನ ತಾಯಿಯಿಂದ ತಿಂದ ಬೈಗುಳ ಪೈಕಿ **ನಿರ್ಗಂಟಿಕ** ಎಂಬುದು ಒಂದು. ಬೇರೆ ಕಡೆ ಇದು ನಿಂದೆಯ ಮಾತಾಗಿ ಉಂಟೋ ಇಲ್ಲವೋ ನಾನರಿಯೆ; ಆದರೆ ದಕ್ಷಿಣ ಕನ್ನಡದ ಬ್ರಾಹ್ಮಣರಲ್ಲಿ ಇತ್ತು. ತಾತ್ಪರ್ಯದಲ್ಲಿ **ನಿಷ್ಕರುಣಿ**, ದಯೆ, ಮಾಯೆ, ಮರುಕ, ಮಮತೆ ಇಲ್ಲದ **ಭಾವನಾಶೂನ್ಯ** ಎಂಬರ್ಥ ಕೊಡುವ ಈ ಪದದ ಇತಿಹಾಸ ನನಗೆ ತಿಳಿದಿರಲಿಲ್ಲ. ಅಮರ ಕೋಶದಲ್ಲಿ **ನಿರ್ಗ್ರಂಥನ** ಅಂದರೆ ಕೊಲೆ ಎಂದಿದೆ. **ನಿರ್ಗಂಟಿಕ** ಅದರ ಅಪಭ್ರಂಶವಾಗಿರಬಹುದೆಂಬುದು ನನಗೆ ಸಮಾಧಾನ ತರಲಿಲ್ಲ. ಆದರೆ ಈಚೆಗೆ ಜೈನ ಸಾಹಿತ್ಯವನ್ನು ಅವಲೋಕಿಸಿದಾಗ ಒಂದು ಹೊಸ ಸಮಾಧಾನಕರ ಊಹೆ ಸಾಧ್ಯವಾಯಿತು. ಜೈನರಲ್ಲಿ **ನಿರ್ಗ್ರಂಥ** ಎಂದರೆ ದಿಗಂಬರ ಸಂನ್ಯಾಸಿ. ಎಲ್ಲ ಮಮತೆಗಳನ್ನೂ ತೊರೆದು ದ್ವೇಷಗಳನ್ನು ತ್ಯಜಿಸಿ ಅಂದರೆ ಪ್ರಾಪಂಚಿಕ ಸಂಬಂಧದ ಎಲ್ಲ ಗ್ರಂಥಿಗಳನ್ನೂ ಕಡಿದು ಅವಧೂತನಾದವನು **ನಿರ್ಗ್ರಂಥ** ಅಥವಾ **ನಿರ್ಗ್ರಂಥಿಕ.** ಜೈನರ ಪ್ರಭಾವ ಬೆಳೆದು ವೈದಿಕ ಧರ್ಮವನ್ನು ಅದು ಒತ್ತುತ್ತಿದ್ದಾಗ ಜೈನ ಸಾಧು **ನಿರ್ಗ್ರಂಥಿಕ,** ವೈದಿಕರಲ್ಲಿ ಒಂದು ನಿಂದಾಪದವಾಗಿ ಮಮತೆ ಇಲ್ಲದವನೆಂಬ ಕೆಟ್ಟ ಅರ್ಥದಲ್ಲಿ **ನಿರ್ಗಂಟಿಕ**ನಾಗಿ ಬಳಕೆ ಪಡೆದಿರಬಹುದು. ಅದು ಜೈನರ ಮೇಲೆ ಕ್ರೋಧವನ್ನು ತೋರಿಸುವ ಒಂದು ದಾರಿ.

ಇದು ಬರೇ ಗಾಳಿಯಲ್ಲಿ ಬಿಟ್ಟ ಸಾಬೂನು ಗುಳ್ಳೆಯಲ್ಲ. ಸಹಜವಾಗಿ ಬಂದ ಒಂದು ಪದವನ್ನು ನಿಮ್ಮ ಕೋಪ ಪ್ರದರ್ಶನಕ್ಕಾಗಿ ಅಪಾರ್ಥಕ್ಕೆ ತಿರುಗಿಸುವ ಉದಾಹರಣೆಗಳು ಇನ್ನೂ ಇವೆ. ಅಶೋಕ ಚಕ್ರವರ್ತಿ ಬೌದ್ಧ ಧರ್ಮಕ್ಕೆ ಒಲಿದ ಮೇಲೆ ಪ್ರಾಣಿಹಿಂಸೆ ತಡೆಯಲು ಸಾರ್ವಜನಿಕ ಯಜ್ಞಾದಿ ಪ್ರಾಣಿಬಲಿಗಳನ್ನು ಪ್ರತಿಬಂಧಿಸಿ **ದೇವಾನಾಂಪ್ರಿಯ**

(ದೇವತೆಗಳಿಗೆ ಮೆಚ್ಚುಗೆ ಆದವ) ಎಂಬ ಬಿರುದು ಹೊತ್ತ. ಯಜ್ಞ ನಿಷೇಧದಿಂದ ಕುಪಿತರಾದ ವೈದಿಕ ಧರ್ಮಾನುಯಾಯಿಗಳು ''ದೇವನಾಂಪ್ರಿಯ ಇತಿ ಮೂರ್ಖಃ'' ಎಂದು ಲೇವಡಿ ಮಾಡಿದರು. ಇಂದಿಗೂ ಕೋಶಗಳಲ್ಲಿ **ದೇವಾನಾಂಪ್ರಿಯ** ಶಬ್ದಕ್ಕೆ **ದೇವರಿಗೆ ಪ್ರಿಯ, ಆಡು** ಮತ್ತು **ಮೂರ್ಖ** ಎಂಬರ್ಥಗಳು ದಾಖಲಾಗಿವೆ. ದೇವರಿಗೆ ಮಾಡುವ ಯಜ್ಞ ತಪ್ಪಿಸಿದವ **ದೇವಾನಾಂಪ್ರಿಯ** ಹೇಗಾದಾನು ?

ಇದು ನಮ್ಮ ದೇಶದ್ದೇ ವಿಶೇಷವಲ್ಲ. ಇಂಗ್ಲೀಷ್ ನಿಘಂಟುಗಳಲ್ಲಿ Nazarene ಎಂಬ ಶಬ್ದ ಇದೆ. ಇದರ ಅರ್ಥ **ಆದಿಮ ಕ್ರಿಸ್ತಾನುಯಾಯಿಗಳು** ಎಂದು. ಕ್ರಿಸ್ತನು **ನಜರೆತ್** ಪ್ರಾಂತದವನಾಗಿದ್ದುದರಿಂದ ಅವನ ಬೆಂಬಲಿಗರನ್ನು ನಜರೀನರು ಎಂದು ಕರೆಯಲಾಯಿತು. ಆದರೆ ಇದನ್ನು ಸಂಪ್ರದಾಯವಂತ ಯಹೂದ್ಯರು ತಮ್ಮ ನಡುವೆ ಹೊಸ ಧರ್ಮವನ್ನು ತಂದ ಕ್ರಿಸ್ತನ ಮೇಲೆ ನಂಜಿನಿಂದಲೇ ಪ್ರಯೋಗಿಸಿದ್ದರು. ತಮ್ಮ ಪುರಾಣಗಳ ಪ್ರಕಾರ **ನಜರೆತ್** ಪ್ರಾಂತದಲ್ಲಿ ದೇವತಾಪುರುಷರು ಹುಟ್ಟುವುದಿಲ್ಲ ಎಂದಿರುವಾಗ ಈ ಕ್ರಿಸ್ತ ತಾನು **ದೇವರ ಮಗ** ಎಂದು ಕರೆದುಕೊಂಡದ್ದು ಅವರಿಗೆ ವಿಕೃತಿಯಾಗಿ ಕಂಡಿತ್ತು ! ಹೀಗೆ ಕ್ರೈಸ್ತರಿಗೆ ತುಚ್ಛೀಕಾರಪೂರ್ವಕ ಅನ್ವಯಿಸುತ್ತಿದ್ದ ಶಬ್ದವನ್ನು ಯಹೂದ್ಯರಿಂದ ಅರಬರು ಹೆಕ್ಕಿಕೊಂಡರು. ಯುರೋಪಿನ ಕ್ರೈಸ್ತರಿಗೂ ಮುಸ್ಲಿಮ್ ಧರ್ಮ ಸ್ವೀಕರಿಸಿದ ಅರಬರಿಗೂ ಭಾರತದ ಕರಾವಳಿಯ ವ್ಯಾಪಾರಕ್ಕಾಗಿ ಜಟಾಪಟಿಯಾದಾಗ ಅರಬರು ಕ್ರೈಸ್ತರ ಮೇಲಿನ ನಂಜಿನಿಂದ **ನಸರಾನಿ** ಶಬ್ದವನ್ನು ನಮ್ಮ ಕರಾವಳಿಯಲ್ಲಿ ಬಿತ್ತಿರಬೇಕು. **ನಾಲಾಯಖ, ದುಷ್ಟ, ಮೂರ್ಖ** ಇತ್ಯಾದಿ ಅನಿರ್ವಚನೀಯ ಅಕಲ್ಯಾಣ ಗುಣಗಳನ್ನೆಲ್ಲ ಪ್ರತಿನಿಧಿಸುವ ಶಬ್ದವಾಗಿ ಅದು ಕರಾವಳಿಯಲ್ಲಿ ಹಬ್ಬಿತು. ''ಬರೇ **ನಸ್ರಾಣಿ** ಮನುಷ್ಯ'' ಎಂದು ಬಯ್ಯುವುದು ಕರಾವಳಿಯಲ್ಲಿ ಕೇಳಿಸುತ್ತದೆ. ಆದರೆ **ನಸ್ರಾಣಿ** ಅಂದರೆ **ಕ್ರೈಸ್ತ** ಎಂಬುದು ಮರೆತೇ ಹೋಗಿರುವುದರಿಂದ ನಿಮಗೀಗ ನಸ್ರಾಣಿ ಹಿಂದುಗಳೂ ನಸ್ರಾಣಿ ಮುಸಲ್ಮಾನರೂ ಸಿಗಬಹುದು ! ಪೂರ್ವಾಗ್ರಹಗಳು ಬಲು ಬೇಗ ತಮ್ಮ ಮೂಲಗಳನ್ನು ಮರೆತುಬಿಡುತ್ತವೆ.

ಒಂದು ಕಾಲದಲ್ಲಿ **ಹೂಣರು** ಜಗತ್ತಿಗೆಲ್ಲ ನಡುಕ ಹುಟ್ಟಿಸಿದ ಜನಾಂಗ. ಏಶಿಯದ ಈ ಮಹೋಗ್ರ ಜನರು ಕ್ರಿ.ಶ. ೫ನೇ ಶತಮಾನದಲ್ಲಿ ಹಾವಳಿಯೆಬ್ಬಿಸಿ ರೋಮನ್ ಚಕ್ರಾಧಿಪತ್ಯವನ್ನು ತತ್ತರಗೊಳಿಸಿದ್ದರು. ಅವರ ಭೀಕರ ಅಧಿಪತಿ ಅತ್ತಿಲಾ ನೆನಪಿಡುವ ಹೆಸರಾಗಿದ್ದಾನೆ. ಹೂಣರ ಕಥೆ ಮುಗಿದು ೧೫೦೦ ವರ್ಷ ದಾಟಿದ್ದರೂ **ಹೂಣ** ಎಂಬುದು **ಕ್ರೌರ್ಯ**ಕ್ಕೆ ಪ್ರತಿನಿಧಿಯಾಗಿಯೇ ಉಳಿದಿದೆ. ೧೯೧೪–೧೮ರ ಯುದ್ಧಕಾಲದಲ್ಲಿ ಈ **ಹೂಣರು** ಪುನರವತರಿಸಿದರು ! ಯಾಕೆಂದರೆ ತಮ್ಮ ಶತ್ರುಗಳಾದ ಜರ್ಮನ್ನರನ್ನು ಸೂಚಿಸಲು ಇಂಗ್ಲೀಷರು ಈ ಹೆಸರು ಪ್ರಯೋಗಿಸತೊಡಗಿದರು. ಎರಡನೇ ವಿಶ್ವ ಯುದ್ಧದಲ್ಲಿ ಚರ್ಚಿಲ್ಲರು ಮತ್ತೆ ಅದನ್ನು ಬಳಸಿದರು. ಶುದ್ಧ ಆರ್ಯರಾದ ಜರ್ಮನ್ನರನ್ನು ಏಶಿಯದ ಈ ಅನಾರ್ಯರಿಗೆ ಸಮೀಕರಿಸಿ ಬೈದ ಚರ್ಚಿಲ್ಲರ ಮೇಲೆ ಹಿಟ್ಲರನಿಗೆ ಎಷ್ಟು ಸಿಟ್ಟು ಬಂತೋ !

ನಮ್ಮ ಕನ್ನಡದ ಅತ್ಯಂತ ಜನಪ್ರಿಯ ಬೈಗಳಲ್ಲೊಂದಾದ **ಬೋಳಿಮಗ**ದ ಅರ್ಥವನ್ನು ನಾನೇನೂ ವಿವರಿಸಬೇಕಾಗಿಲ್ಲ. ಆದರೆ ಇದು ಒಂದರಲ್ಲಿ ಮೂರು ಬೈಗಳು ಎಂದರೆ ತುಸು ತಮಾಷೆಯೆನಿಸಿತಾದರೂ ಅದು ಸತ್ಯ. **ಬೋಳೀಮಗ** ಅಂದರೆ ವಿಧವೆ ಗಂಡ ಸತ್ತ ಮೇಲಾದ **ಜಾರಪುತ್ರ**ನಲ್ಲವೇ ? ಈ ಬೈಗಳು ನಿಮ್ಮ ತಿರಸ್ಕಾರಕ್ಕೆ ಪಾತ್ರನಾದವನನ್ನಲ್ಲದೆ ಆತನ ತಾಯಿಯನ್ನೂ ಹಳಿಯುತ್ತದೆ; ಅವಳನ್ನು (ಸಧವೆ ಇದ್ದರೂ ಇಲ್ಲದಿದ್ದರೂ)

ವಿಧವೆಯೆಂದಲ್ಲದೆ **ಬೋಳಿ** ಎಂದು ಹೆಚ್ಚು ತಿರಸ್ಕಾರದಿಂದ ನುಡಿಯುತ್ತದೆ. ಅವನನ್ನಂತೂ **ತಂದೆಯಿಲ್ಲದ** ಮಗ ಎಂದು ನಿಂದಿಸುತ್ತದೆ. **ಮುಂಡೇಮಗ** ಎಂದರೂ ಅವನೇ. ಆದರೆ ಇಂದು ಸಾರ್ವಜನಿಕವಾಗಿರುವ ಈ ಬೈಗಳು **ಬ್ರಾಹ್ಮಣ ಬೈಗಳು** ಎಂಬ ಸಾಂಸ್ಕೃತಿಕ ವಿಶೇಷವನ್ನು ನಾವು ಗಮನಿಸುವುದಿಲ್ಲ. ವಿಧವೆಯರ ಮಂಡೆ ಬೋಳಿಸಿ ಅವಳನ್ನು **ಮುಂಡೆ** ಅಥವಾ **ಬೋಳಿ** ಮಾಡುವವರು ಬ್ರಾಹ್ಮಣರಲ್ಲವೇ ? ಇದರದೇ ಇನ್ನೊಂದು ಅವತಾರ **ರಂಡೇಮಗ.** ಆದರೆ ರಂಡೇಮಗನ ತಾಯಿ ವ್ಯಭಿಚಾರಿಣಿಯೆಂಬುದು ಖಂಡಿತವಾದರೂ ಅವಳು ಬ್ರಾಹ್ಮಣಳೇ ಇರಬೇಕೆಂದಿಲ್ಲ. **ರಂಡೆಗೆ ವಿಧವೆ** ಅಥವಾ **ಸೂಳೆ** ಎಂಬ ಅರ್ಥವಿದೆ. **ಸೂಳೇಮಗ** ಅದೇ ಅರ್ಥದ ಇನ್ನೊಂದು ಪದ.

ಈ ಎಲ್ಲ ಬೈಗಳು ಎಷ್ಟು ಕಾಲದಿಂದ ಇವೆಯೋ ಗೊತ್ತಿಲ್ಲ. ಆದರೆ ಇವು **ಪುರುಷ ಪ್ರಧಾನ** ಸಮಾಜ ತಲೆಯೆತ್ತಿ ಹೆಣ್ಣಿನ **ವ್ಯಭಿಚಾರ ಮಹಾಪಾತಕವೆಂದು** ಪರಿಗಣಿಸಲ್ಪಟ್ಟ ಮೇಲೆಯೇ ಹುಟ್ಟಿವೆಯೆಂಬುದು ಖಂಡಿತ. ಪರಿಸ್ಥಿತಿ ಅನಾದಿಯಿಂದ ಹೀಗಿದ್ದಿಲ್ಲ. ಪ್ರಾಚೀನ ಭಾರತದಲ್ಲಿ ಅತಿಥಿಯ ಹಾಸಿಗೆಗೆ ಮನೆಯಾತನ ಹೆಂಡತಿ ಹೋಗುವ ಸಂಪ್ರದಾಯವಿತ್ತು ; ಪ್ರಾಚೀನ ಬಬಿಲೋನಿಯದಲ್ಲಿ ವರ್ಷಕ್ಕೊಂದು ದಿನ ಊರಿನ ಪ್ರತಿಯೊಬ್ಬ ಹೆಂಗಸೂ ದೇವಾಲಯದ ಪೌಳಿಯಲ್ಲಿ ಕೂತು ದರ್ಶನಕ್ಕೆ ಬಂದ ಯಾರೊಬ್ಬ ಪುರುಷನನ್ನು ಆರಿಸಿ ಅವನೊಡನೆ ಇರುಳನ್ನು ಕಳೆಯಬೇಕಿತ್ತು. ಹೆಣ್ಣನ್ನು ಮಾಡಿಕೊಂಡ ಗಂಡನ **ಸ್ವಕೀಯ ಆಸ್ತಿ ಆಕೆ,** ಮತ್ತು ಇತರರಿಗೆ ಅಪ್ರಾಪ್ಯಳು ಎಂದು ನಿಯಮವಾದ ಮೇಲೆ ಮತ್ತು ಅದಕ್ಕೆ ಒಂದು ಧಾರ್ಮಿಕ ಸಾಮಾಜಿಕ ಶಾಸ್ತ್ರ ಮುದ್ರೆ ಬಿದ್ದ ಅನಂತರ ತನ್ನ ತಂದೆಯನ್ನು ತೋರಿಸಲಾರದ ಮಗ ತುಚ್ಛನೆನಿಸಿದ. ಇಂಗ್ಲೀಷಿನ bastard ಕೂಡ ವ್ಯಭಿಚಾರದ ಮಗ. ಆದರೆ ವಿಧವಾ ವಿವಾಹಕ್ಕೆ ನಿಷೇಧವಿಲ್ಲದ ಪಾಶ್ಚಾತ್ಯರಲ್ಲಿ **ಮುಂಡೇಮಗ** ಬೈಗಳಿಗೆ ಸಮಾನಾರ್ಥಕ ಪದವಿಲ್ಲ.

**ಮುಂಡೇಗಂಡ** ಎಂಬ ಬೈಗಳೂ ಉಂಟು; ಅದು ಮುಂಡೇಮಗನಷ್ಟು ಕೀಳಲ್ಲ. ಅವನು ಅಂಥವಳಿಂಥವಳೆಂದೆಣಿಸದ ನಿರ್ಭಿಡೆಯ ಕಾಮುಕ. ಕೆಲ ವೇಳೆ ಅದನ್ನು ತುಚ್ಛೀಕಾರದ ಬದಲು ತುಸು ಮೆಚ್ಚಿಕೆ ತುಸು ಲೇವಡಿಯಲ್ಲಿ ಹೇಳುವುದೂ ಉಂಟು. ಪುರುಷ ಪ್ರಧಾನ ಸಮಾಜದಲ್ಲಿ ಅವನ ಅತಿಚಾರಗಳೆಲ್ಲ ಕ್ಷಮ್ಯ. ಪಾಪ ಇರಬಹುದು ; ಅದು ಅವನ ವೈಯಕ್ತಿಕ ವಿಷಯ, ಸಾಮಾಜಿಕವಲ್ಲ.

೪೭

ಕನ್ನಡ ಭಾಷೆಗೆ ಉಡುಪಿಯ ಹೋಟೆಲ್ ಉದ್ಯಮ ಒಂದು ವಿಶಿಷ್ಟ ಕೊಡುಗೆ ಇತ್ತಿದೆ – ಅದೆಂದರೆ **ಮಾಣಿ.** ಈ ಶಬ್ದವನ್ನು ಕನ್ನಡದ ಆಧುನಿಕ ಕಥಾ ಸಾಹಿತ್ಯದಲ್ಲಿ ಬಹುಶಃ ಅನಕೃ ಅವರು ಮೊದಲು ಹೋಟೆಲ್ಲಿನ ಪರಿಚಾರಕ, ವಿಶೇಷತಃ **ಸಪ್ಲೈಯರ್** ಅಥವಾ **ಸರ್ವರ್** ಎಂಬರ್ಥದಲ್ಲಿ ಬಳಸಿದರೆಂದು ನನ್ನೆಣಿಕೆ. ಈ ಕೊಡುಗೆ ಉಡುಪಿ ಹೋಟೆಲ್ಲುಗಳ ಆಕಸ್ಮಿಕ ದಾಯ. ಈ ಶತಮಾನದ ಇಪ್ಪತ್ತು ಮೂವತ್ತುಗಳಲ್ಲಿ ತೀವ್ರ ದಾರಿದ್ರ್ಯದಿಂದ ದಕ್ಷಿಣ ಕನ್ನಡದ ಬ್ರಾಹ್ಮಣ ಹುಡುಗರು, ಆಗ ದಕ್ಷಿಣ ಭಾರತದಲ್ಲೆಲ್ಲ ವಿಸ್ತರಿಸತೊಡಗಿದ್ದ ಹೋಟೆಲ್ಲುಗಳ ಮಾಲಿಕರೊಡನೆ ಹತ್ತೋ ಹನ್ನೆರಡೋ ವಯಸ್ಸಿನಲ್ಲಿ ಹೊರಟು ಬಂದು ಹೋಟೆಲ್ಲುಗಳಲ್ಲಿ ಸಪ್ಲೈಯರುಗಳಾಗಿ ತಮ್ಮ ಉಮೇದ್ವಾರಿಕೆಯನ್ನು ಪ್ರಾರಂಭಿಸಿದರು. ದಕ್ಷಿಣ ಕನ್ನಡದ ತುಳು,

ಕನ್ನಡ ಭಾಷಿಗಳಿಬ್ಬರೂ ಬ್ರಾಹ್ಮಣ ಗಂಡು ಮಕ್ಕಳನ್ನು **ಮಾಣಿ**ಗಳೆಂದು ಕರೆಯುತ್ತಾರೆ. ಮಾಲಿಕರು ಸಪ್ಲೈಯರುಗಳನ್ನು ಕೂಗುವಾಗ ತಮ್ಮೂರ ಸಂಪ್ರದಾಯದಂತೆ **ಮಾಣಿ**ಗಳೆಂದೇ ಸಂಬೋಧಿಸುತ್ತಿದ್ದುದರಿಂದ ಗಿರಾಕಿಗಳು ಮಾಣಿಯನ್ನು **ಸಪ್ಲೈಯರ್‌**ಗೆ ಸಮೀಕರಿಸಿದರು.

ನಿಜಕ್ಕೂ ಇದು ಸಂಸ್ಕೃತದ **ಮಾಣವ** ಅಥವಾ **ಮಾಣವಕ** ಪದದ ಒಂದು ರೂಪ. ಅದರರ್ಥ **ಹುಡುಗ** – ವಿಶೇಷತಃ **ಬ್ರಾಹ್ಮಣ ವಟು**, ಸಂಸ್ಕೃತದ ನಿರುಕ್ತಕಾರರು ಅದು **ಮಾನವ**ದ್ದೇ ಒಂದು ರೂಪವೆಂದೂ **ಚಿಕ್ಕತನ**ವನ್ನು ಸೂಚಿಸಲು ನ ವನ್ನು ಣ ಮಾಡಿದರೆಂದೂ ಹೇಳುತ್ತಾರೆ. ಗಿಡ್ಡ ಎಂದ ಹಾಗೆ. ಸ್ವಲ್ಪ ತಿರಸ್ಕಾರದಿಂದಲೂ ಅದನ್ನು ಪ್ರಯೋಗಿಸುತ್ತಾರೆ. ಒಂದು ಕಾಲದಲ್ಲಿ **ಮಾಣಿ** ಕರ್ನಾಟಕದಲ್ಲೆಲ್ಲ ಬ್ರಾಹ್ಮಣ ಹುಡುಗ ಎಂಬರ್ಥದಲ್ಲಿ ಪ್ರಯೋಗದಲ್ಲಿದ್ದಿರಬೇಕು. ನೇಮಿಚಂದ್ರನು ಅರ್ಧನೇಮಿ ಪುರಾಣದಲ್ಲಿ ಬಲಿಯನ್ನು ಮೆಟ್ಟಿದ ವಾಮನನನ್ನು ''**ಅತಿವರ್ತಿ ಮಾಣಿ**'' (ಕಿಡಿಗೇಡಿ ಬ್ರಾಹ್ಮಣ ಹುಡುಗ) ಎಂದಿದ್ದಾನೆ. ಈ ಅರ್ಥದಿಂದ ಹೊರಟು **ಮಾಣಿ** ಹೋಟೆಲ್ ಉದ್ಯಮದ ಮೂಲಕ ''ನ ಚ ಲಿಂಗಂ ನ ಚ ವಯಃ'' ಆಗಿದ್ದಾನೆ – ಮೊನ್ನೆ ಒಂದು ವಿದೇಶ ಪ್ರವಾಸ ಪುಸ್ತಕದಲ್ಲಿ ನಾನು **ಮುದುಕಿ ಮಾಣಿ** ಎಂಬ ಪ್ರಯೋಗ ನೋಡಿದೆ!

ಮಾಣವಕನ ಕಥೆ ಹೀಗಾದರೆ **ಬ್ರಾಹ್ಮಣ** ಹಳೆಗಾಲದಲ್ಲಿಯೇ ನಾನಾ ಅವತಾರಗಳನ್ನು ತಾಳಿದೆ. ದ್ರಾವಿಡ **ಪಾರ್ಪನ್ – ಪಾರ್ವ – ಹಾರುವ** ಬ್ರಾಹ್ಮಣದ್ದೇ ಅಪಭ್ರಂಶವೆಂದು ಒಂದು ಅಭಿಪ್ರಾಯವಿದೆ. **ಹಾರುವ** ಈಗ ಹೇಗೆ ತಿರಸ್ಕಾರಾರ್ಥವಾಗಿದೆಯೆಂದು ಹೇಳಬೇಕಾಗಿಲ್ಲ. ದ್ರಾವಿಡದ **ಪಾರ್** (ಕಾಣು) ಎಂಬರ್ಥಕ್ಕೆ ಪ್ರತಿಯಾಗಿ ಇನ್ನೊಂದು ಅರ್ಥವಾದ **ಹಾರೈಸು** (ಆದ್ದರಿಂದ) **ಬೇಡು** ಎಂಬರ್ಥವನ್ನು ಹೊರಿಸಿ ಈ ನೀಚಾರ್ಥ ಬಂದಿರಬಹುದು. ಉತ್ತರ ಕರ್ನಾಟಕದಲ್ಲಿ **ಬಬಣಾಚಾರ** ಎಂಬೊಂದು ಪದ ಇದೆ. ಇದರ ಅರ್ಥ ಕಣ್ಣು ಕಟ್ಟಿನ ಸದಾಚಾರ, ಠಕ್ಕು ಆಚಾರ ಎಂದು. ಇದು **ಬ್ರಾಹ್ಮಣಾಚಾರ**ದ್ದೇ ನೀಚಾರ್ಥ ಇರಬೇಕು. **ಬ್ರಾಹ್ಮಣ** ಶಬ್ದ ಅಶೋಕನ ಪ್ರಾಕೃತದಲ್ಲಿ **ಬಬ್ಬಣ** ಆಗಿರುವುದು ಗಮನಾರ್ಹ. ಹಿಂದುಸ್ತಾನಿಯಲ್ಲಿ **ಬೊಮ್ಮನ್** ಶಬ್ದ **ಹಾರುವ**ದ ಸಮಾನಾರ್ಥಕವಾಗಿದೆ. ತುಳು ಬ್ರಾಹ್ಮಣರಲ್ಲಿ **ಹೆಂಡತಿ**ಯನ್ನು **ರಾಮಣಿ** ಎನ್ನುತ್ತಾರೆ. ಇದು **ರಮಣಿ**ಯ ಒಂದು ರೂಪವೆಂದು ವಾದಿಸಲು ಸಾಧ್ಯವಿದ್ದರೂ ಬಹುಶಃ ಅದು **ಬ್ರಾಹ್ಮಣಿ**ಯ ಒಂದು ಅವತಾರವಾಗಿದೆ. ಸಾರಸ್ವತ ಬ್ರಾಹ್ಮಣರು ಕೊಂಕಣಿಯಲ್ಲಿ ಹೆಂಡತಿ ಗಂಡನನ್ನು **ಬೊಮ್ಮಣು** ಎಂದು ಸಂಬೋಧಿಸುವ ಪರಿಪಾಠ ಉಂಟೆಂದು ಕೇಳಿದ್ದೇನೆ.

**ರಾಜನ್** ಎನ್ನುವುದು **ಅರಸ**ನಿಗೆ ಸಂಸ್ಕೃತ ಪದ. ಅದರ ಜ್ಞಾತಿ ಪದಗಳು ಭಾರೋಪ್ಯ ಭಾಷೆಗಳಲ್ಲಿ ಇವೆ. (ಉದಾಹರಣೆಗೆ ಲ್ಯಾಟಿನ್ ರೆಕ್ಸ್.) ಅದರದೇ ಅವತಾರಗಳಾದ **ರಾಯ**, **ರೈ**, **ರೇಯ**, **ರಾವ್** ಮೊದಲಾದವು ನಮ್ಮ ಸಾಮಾನ್ಯ ಉಪನಾಮಗಳಾಗಿ ಚಾಲ್ತಿಯಲ್ಲಿವೆ. ಅದನ್ನು ಸಕಲ ಜಾತಿಯವರೂ ಈಗ ಬಳಸುತ್ತಾರೆ. ರಾಜರುಗಳು ಈ ಬರಡು ರಾಜತ್ವದಿಂದ ತೃಪ್ತರಾಗದೆ **ರಾಜಾಧಿರಾಜ** (ಪರ್ಶಿಯನ್ ಭಾಷೆಯಲ್ಲಿ **ಶಹನ್‌ಶಾಹ**), **ಮಹಾರಾಜ**, **ಮಹಾರಾಜಾಧಿರಾಜ** ಇತ್ಯಾದಿ ಬಿರುದುಗಳನ್ನು ಇಟ್ಟುಕೊಂಡರು. ನೇಪಾಳದಲ್ಲಿ ಇಂಥ ಬಿರುದುಗಳು ತಮಾಷೆಯ ಪರಿಸ್ಥಿತಿಯನ್ನು ಉಂಟುಮಾಡಿದುವು. ಅಲ್ಲಿಯ **ಶಾಹ** ಕುಲದ ರಾಜರನ್ನು ಹೆಚ್ಚು ಕಡಿಮೆ ನಿರ್ಬಂಧದಲ್ಲೇ ಇರಿಸಿ ವಂಶಪಾರಂಪರ್ಯವಾಗಿ **ರಾಣಾ** (ಇದೂ **ರಾಜನ್** ಪದದ್ದೇ ಒಂದು ಅಪಭ್ರಂಶ) ಕುಲದವರು ಪ್ರಧಾನ ಮಂತ್ರಿತ್ವವನ್ನು

ಅನುಭವಿಸತೊಡಗಿ ತಾವು ಮಹಾರಾಜ ಬಿರುದನ್ನು ಇಟ್ಟುಕೊಂಡಮೇಲೆ ಕೈಗೊಂಬೆ ಶಾಹರಿಗೆ ರಿಯಾಯಿತಿಯಾಗಿ ಮಹಾರಾಜಾಧಿರಾಜ ಬಿರುದನ್ನು ಬಳಸಲು ಅನುಮತಿ ಇತ್ತರು! ಆದರೆ ರಾಜನ್ ಬಿರುದಿಗೆ ಎಷ್ಟು ಪೂರ್ವೋಪಾಧಿಗಳನ್ನು ಸೇರಿಸಿದರೂ ಮಹಾರಾಜರು ಬಹಳ ಕಾಲ ತಮ್ಮ ಏಕಸತ್ತೆಯನ್ನುಳಿಸಿಕೊಳ್ಳಲಿಲ್ಲ. ಬ್ರಾಹ್ಮಣರೂ ಸಂನ್ಯಾಸಿಗಳೂ ಮಠಾಧೀಶರೂ ಮಹಾರಾಜರೆಂದು ಕರೆಸಿಕೊಳ್ಳತೊಡಗಿದರು. ಧಾರ್ಮಿಕ ಮುಂದಾಳುಗಳು ಈ ಪ್ರಕಾರ ಲೌಕಿಕ ಆಧಿಪತ್ಯದ ಬಿರುದುಗಳನ್ನೂ ವಹಿಸಿಕೊಂಡದ್ದು ಸಮಾಜಶಾಸ್ತ್ರೀಯವಾಗಿ ಅರ್ಥಪೂರ್ಣವಾಗಿದೆ. (ಮುಸಲ್ಮಾನ ಫಕೀರರು **ಶಹಾನ್ ಶಾಹ** ಅಲ್ಲದಿದ್ದರೂ **ಶಾಹ** ಬಿರುದು ಹೊರುತ್ತಾರೆ.) ಮಹಾರಾಜರ ಅಧಃಪಾತ ಇಲ್ಲಿಗೆ ನಿಲ್ಲಲಿಲ್ಲ. ದಕ್ಷಿಣೆಗೆ ಕೈಯೊಡ್ಡುವ ದೀನ ಬ್ರಾಹ್ಮಣರು ಮಹಾರಾಜರಾದರು (ಉತ್ತರ ಭಾರತದಲ್ಲಿ). ಕಟ್ಟಕಡೆಗೆ ಅಡುಗೇಭಟ್ಟರು ರಸೋಯಿ (ಅಡುಗೆಯ) ಮಹಾರಾಜರಾದರು.

ಪವಿತ್ರ ಸ್ಥಾನಗಳು ಹಾಸ್ಯದ ಆಯುಧಗಳಾಗುವುದು ಭಾರತೀಯರ ಅಂತಃಸ್ಥಹಾಸ್ಯ ಪ್ರಕೃತಿಯ ಚಿಹ್ನೆಯೇನೋ. **ತಿರುಪತಿ, ಗೋಕರ್ಣ** ಎರಡೂ ನಮಗೆ ಮಹತ್ವದ ಯಾತ್ರಾಸ್ಥಳಗಳು. **ತಿರುಪತಿ,** ಅಥವಾ **ಗೋಕರ್ಣ ಕ್ಷೌರ** ಅಥವಾ **ಹಜಾಮತಿ** ಎಂಬ ಪದಗಳು ಬಂದದ್ದು ನೋಡಿ. ಅರ್ಧಮರ್ಧ ಕೆಲಸ ಮಾಡಿಡುವುದಕ್ಕೆ ಇವು ವ್ಯಂಗ್ಯೋಕ್ತಿಗಳು. ಇವುಗಳ ಹಿಂದಿರುವುದು ಒಂದು ಧಾರ್ಮಿಕ–ಸಾಂಸ್ಕೃತಿಕ ಪರಂಪರೆ. ಈ ಎರಡೂ ಕ್ಷೇತ್ರಗಳಲ್ಲಿ ಯಾತ್ರಿಕರು ವೇಣೀದಾನ (ಕೂದಲು ಬೋಳಿಸಿಕೊಳ್ಳುವುದು) ಮಾಡುವುದು ವಿಧಿ. ಅದನ್ನು ಜೀವನೋಪಾಯ ಮಾಡಿಕೊಂಡ ಕ್ಷೌರಿಕರು ಗಿರಾಕಿಗಳಿಗೆ ಅವಸರದಲ್ಲಿ ಅರ್ಧಮರ್ಧ ತಲೆಬೋಳಿಸಿಡುತ್ತಿದ್ದರಂತೆ. ಒಬ್ಬ ಕ್ಷೌರಿಕ ತಲೆಯನ್ನು ಅರ್ಧ ಬೋಳಿಸಿಟ್ಟರೆ ಬೇರೆ ಕ್ಷೌರಿಕ ಆ ಕೆಲಸ ಪೂರೈಸುವಂತಿಲ್ಲ. ಅದು ವೃತ್ತಿಧರ್ಮ! ಅನೇಕರಿಗೆ ಅರ್ಧರ್ಧ ಕ್ಷೌರ ಮಾಡಿಟ್ಟು ಬೇರೆಯವರ ಕಡೆ ಹೋಗದಂತೆ ಮಾಡಿ ಆಮೇಲೆ ಪುರಸೊತ್ತಿನಲ್ಲಿ ಒಬ್ಬೊಬ್ಬರದೇ ಕೆಲಸ ಮುಗಿಯಿಸುವ ಉಪಾಯ ಅವರು ಮಾಡುವುದರಿಂದ ಅರ್ಧ ಕೆಲಸ ಮಾಡಿ ಸಿಕ್ಕಿಸಿ ಹಾಕುವುದಕ್ಕೆ ಈ ನುಡಿಕಟ್ಟುಗಳು ಬಂದುವು. ಕಾಲಾಂತರದಲ್ಲಿ **ಕ್ಷೌರ** ಶಬ್ದ ಬಿಟ್ಟು ನನಗೆ **ಗೋಕರ್ಣ ಮಾಡಿಟ್ಟ** ಅಂದರೂ ಸಾಕು ಎಂದಾಯಿತು. **ತಿರುಪತಿಗೆ** ಇನ್ನೊಂದು ಬಿರುದೂ ಇದೆ. **ತಿರುಪತಿನಾಮ** ಅಂದರೆ ದಗಾ! ತಿರುಪತಿಯಲ್ಲಿ ಅವರ ಪಾಲಿಗಿಂತ ಜಾಸ್ತಿಯೇ ತ್ರಿನಾಮಧಾರಿ ಆಷಾಢಭೂತಿ ವಂಚಕರು ಯಾತ್ರಿಕರನ್ನು ಸುಲಿಗೆ ಮಾಡಲು ಹೊಂಚುಹಾಕುತ್ತಿರುವುದರಿಂದ ಈ ನುಡಿಕಟ್ಟು ಹುಟ್ಟಿರಬೇಕು. ತಿರುಪತಿ ದೇವರ ನಾಮ ರೋಮನ್ ಅಂಕೆ III ರಂತಿರುವುದರಿಂದ **ನೂರಾ ಹನ್ನೊಂದು ಆಯಿತು** ಅಂದರೂ ದಗಾ ಆಯಿತು ಎಂದು ಅರ್ಥ ಬರುವಂತಾಗಿದೆ.

೪೮

ಒಂದು ಜನಾಂಗದ ''ಕುರುಡು'' ನಂಬಿಕೆಗಳು ಅದರ ಭಾಷೆಯ ನುಡಿಕಟ್ಟಿನಲ್ಲಿ ಬೇರು ಬಿಟ್ಟ ರೀತಿ ಕೌತುಕದ್ದಾಗಿದೆ. ಯಾರಿಗಾದರೂ ಒಂದೇ ಸಮನೆ ಕಷ್ಟಗಳು ಒದಗುತ್ತಿದ್ದರೆ ಅವನಿಗೆ ಶನಿ ಹಿಡಿದಿದೆ, ಅಥವಾ **ಶನಿದಶೆ** ಎಂದು ಜ್ಯೋತಿಷ್ಯ ನಂಬದವರೂ ಹೇಳಿಬಿಡುತ್ತಾರೆ. ಶನಿ ಗ್ರಹ ನಮ್ಮ ಜನಾಂಗ ಪ್ರಜ್ಞೆಯಲ್ಲಿ ಅನಿಷ್ಟದ ಪ್ರತೀಕವಾಗಿ ಬಿಟ್ಟಿದೆ.

ಮನುಷ್ಯನ ೧೨೦ ವರ್ಷದ ಗೃಹೀತ ಆಯುರ್ದಾಯವನ್ನು ಒಂಬತ್ತು ಗ್ರಹರಿಗೆ ಹಂಚಿಹಾಕಿ, ಅದರಲ್ಲಿ ಶನಿ ಪ್ರಭಾವಕ್ಕೆ ನಿಗದಿತವಾದ ೧೯ ವರ್ಷಗಳನ್ನು **ಶನಿದಶೆ** ಎಂದು ನಮ್ಮ ಜ್ಯೋತಿಷಿಗಳು ಹೇಳಿದ್ದಾರೆ. ಆದರೆ ಒಬ್ಬನಿಗೆ **ಶನಿದಶೆ** ಎನ್ನಬೇಕಾದರೆ ವಾಸ್ತವಿಕವಾಗಿ ಈ ದಶೆ ಬಂದಿರಬೇಕೆಂದಿಲ್ಲ. ಯಾವುದೇ **ಕಾಡುವ ಕಾಲವನ್ನು** ನಾವು **ಶನಿಯ** ಸೆರಗಿಗೆ ಗಂಟುಹಾಕಿಬಿಡುತ್ತೇವೆ.

**ಶನಿದಶೆ**ಗಿಂತಲೂ ಭಯಂಕರವಾದದ್ದು **ಸಾಡೇಸಾತಿ. ಸಾಡೇಸಾತಿ** ಎಂದರೆ ಏಳೂವರೆ. ರಾಶಿಚಕ್ರಕ್ಕೆ ಸುಮಾರು ೩೦ ವರ್ಷಕ್ಕೊಂದು ಬಾರಿ ಸುತ್ತುಹಾಕುವ ಶನಿ ನೀವು ಹುಟ್ಟಿದ ರಾಶಿ ಮತ್ತು ಅದರ ಹಿಂದುಮುಂದಿನ ರಾಶಿ ಹೀಗೆ ಮೂರು ರಾಶಿಗಳಲ್ಲಿ ಒಟ್ಟು ಏಳೂವರೆ ವರ್ಷ ಕಳೆಯುತ್ತಾನೆ. ಆ ಅವಧಿಯೇ **ಸಾಡೇಸಾತಿ** (= ಸಾರ್ಧಸಪ್ತ). ಈ ಅವಧಿಯಲ್ಲಿ ಮನುಷ್ಯನನ್ನು ಶನಿ ಎಂದೂ ಇಲ್ಲದಷ್ಟು ಕಾಡುತ್ತಾನಂತೆ. ಇದರ ಭಯ ಎಷ್ಟು ಗಾಢವೆಂದರೆ ಕೆಲವರು ಶನಿಗಲ್ಲದೆ **ಏಳೂವರೆ** ಎಂಬ ಅಂಕೆಗೇ ಹೆದರುತ್ತಾರೆ! ಸ್ವಾರಸ್ಯವೆಂದರೆ ಯಾವುದಾದರೂ ಕೆಲಸಕ್ಕಾಗಿ ನಿಮ್ಮನ್ನು ಬಿಡದೇ ಬೆನ್ನು ಹತ್ತಿದವರನ್ನೂ ನೀವು **ಸಾಡೇಸಾತ್** ಎಂದು ಶಪಿಸುತ್ತೀರಿ. **ಅನಿಷ್ಟಕ್ಕೊಬ್ಬ ಶನೀಶ್ವರ** ಎಂಬ ಇನ್ನೊಂದು ನುಡಿಕಟ್ಟು ಯಾವುದಾದರೂ ಕೆಡುಕಿಗಾಗಿ ಸುಮ್ಮ ಸುಮ್ಮನೆ **ಅಪವಾದ** ಹೊರಬೇಕಾದವನಿಗೆ ಅನ್ವಯಿಸುತ್ತದೆ. ರಾಮೇಶ್ವರಕ್ಕೆ ಹೋದರೂ ಶನೀಶ್ವರ ಬಿಡ ಅಂತೆ.

ಯುರೋಪಿನಲ್ಲಿ ಕೂಡ ಶನಿಗೆ ಒಳ್ಳೇ ಹೆಸರಿಲ್ಲ. ಅಲ್ಲಿ ಅವನು ವಿಷಣ್ಣತೆ, ಮಾಲಿನ್ಯ, ಒಟ್ಟಿನಲ್ಲಿ ದುಃಖದೊಡನೆ ಸಂಬದ್ಧನಾಗಿದ್ದಾನೆ Saturnine temperament ಅಂದರೆ ವಿಷಣ್ಣ ಸ್ವಭಾವ. ಇಷ್ಟಾದರೂ ಭಾರತದಷ್ಟು ಶನಿಕಾಟ ಪಾಶ್ಚಾತ್ಯರಿಗೆ ಇಲ್ಲವೆಂದು ತೋರುತ್ತದೆ.

ನಿಜ, ಶನಿಯೊಬ್ಬನೇ ಗ್ರಹಗಳಲ್ಲಿ ಕೇಡಿಯಲ್ಲ. **ಮಂಗಳನು** ಶನಿಗಿಂತ ನಸುವೇ ತಾನೆ ಕಡಿಮೆ ಪಾಪಿಷ್ಠ. ಆತನ ನಿಜವಾದ ಹೆಸರು ಅದಲ್ಲ; **ಕುಜ, ಅಂಗಾರಕ** (= ಕೆಂಡ) ಎಂದು. ಆ ಹೆಸರು ಎಷ್ಟು **ಅಮಂಗಳ** ಅಂದರೆ ಅನಿಷ್ಟ ನಿವಾರಣೆಗಾಗಿ ಅವನನ್ನು **ಮಂಗಳ** ಎಂದು ಒಳ್ಳೇ ಹೆಸರಲ್ಲಿ ಕರೆಯುತ್ತಾರಂತೆ. ರನ್ನನ ಗದಾಯುದ್ಧದಲ್ಲಿ ''ಕ್ರೂರ ದಿನಗಳ ಪೆಸರಂ ಮರೆಯಿಸಿ **ಮಂಗಳವಾರಂ ವಡ್ಡವಾರಮೆಂ**ಬಂತೆ ವಲಂ'' ಎಂದೊಂದು ಮಾತು ಬರುತ್ತದೆ. ಕುಜವಾರ ಶನಿವಾರ ಎಂಬ ಕ್ರೂರ ದಿನಗಳ ಹೆಸರು ಮರೆಯಿಸಿ ಮಂಗಳವಾರ, ವಡ್ಡವಾರ (ವಡ್ಡ = ಶುಭ) ಎಂದು ಕರೆಯುವಂತೆ, ನಿಜವಾಗಿ **ಅಧರ್ಮ** ರಾಜನಾದ ಯುದಿಷ್ಠಿರನನ್ನು **ಧರ್ಮ**ರಾಜ ಎಂದು ಕರೆಯುತ್ತಿರಬೇಕೆಂದು ದುರ್ಯೋಧನ ಹಳಿಯುತ್ತಾನೆ.

ಕೆಟ್ಟ ಗ್ರಹರೇ ಭಾಷೆಯಲ್ಲಿ ಬೀಡುಬಿಟ್ಟಿದ್ದಾರೆಂದಲ್ಲ. ಒಳ್ಳೇ ಏಳಿಗೆಯಲ್ಲಿ ಇರುವವನನ್ನು ಕುರಿತು ಅವನಿಗೀಗ **ಶುಕ್ರದಶೆ** ಅಥವಾ **ಬುಧನದಶೆ** ಎನ್ನುವುದುಂಟು.

ಒಳ್ಳೇ ಗ್ರಹಚಾರ ಬಂತಲ್ಲ ಎನ್ನುತ್ತೇವೆ. ಗ್ರಹಚಾರ ಎಂದರೆ ರಾಶಿಚಕ್ರದಲ್ಲಿ ಗ್ರಹಗಳ ಚಲನೆ. ''ಶುಭ'' ಗ್ರಹರೂ ''ಅಶುಭ'' ಗ್ರಹರೂ ಹೀಗೆ ನಿರಂತರವಾಗಿ ಚಲಿಸುತ್ತಾರೆ. ಈ ಚಲನೆಗಳಿಗೆ ಶುಭಾಶುಭ ಫಲಗಳನ್ನು ಜ್ಯೋತಿಷಿಗಳು ಹೇಳುತ್ತಾರೆ. ''ಅಶುಭ'' ಗ್ರಹರೂ ಕೆಲವು ಸ್ಥಾನಗಳಿಗೆ ಬಂದಾಗ ಶುಭವನ್ನು ಮಾಡಬಹುದು. ಆದರೂ **ಗ್ರಹಚಾರ** ಎನ್ನುವುದು ಸಾಮಾನ್ಯರ ಮಾತಿನಲ್ಲಿ ಅನಿಷ್ಟಕ್ಕೇ. ಇಷ್ಟದ ನಿರೀಕ್ಷೆಗಿಂತ ಅನಿಷ್ಟದ ಭಯವೇ ಮನುಷ್ಯನ ಮನಸ್ಸಿನಲ್ಲಿ ಬಲವಾಗಿರುತ್ತದೆ ಅಲ್ಲವೇ ?

ಕೇಡಿನ ಹೆಸರು ಮರೆಸಿ ಶುಭವನ್ನು ತರಬಹುದೆಂಬ ಕಲ್ಪನೆ ಭಾಷೆಯಲ್ಲಿ ಇನ್ನೂ ಹಲ

ಬಗೆಯಲ್ಲಿ ವ್ಯಕ್ತವಾಗುತ್ತದೆ. ಸಂಪ್ರದಾಯವಂತರು ದೀಪ **ನಂದಿತು** ಎಂದು ಹೇಳದೆ ದೀಪ **ಶಾಂತವಾಯಿತು** ಎನ್ನುತ್ತಾರೆ. ದೀಪ ಇಲ್ಲದೆ ಯಾವ ಶುಭ ಕಾರ್ಯವೂ ನಡೆಯದು. ಶುಭಕಾರ್ಯದ ನಡುವೆ ದೀಪ ಅಕಸ್ಮಾತ್ ನಂದಿದರೆ ಅದು ಅಶುಭದ ಸೂಚನೆ. ಪ್ರಾಚೀನ ಮಾನವನಿಗಿದ್ದ **ಅಂಧಕಾರ ಭಯ** ಪೂರ್ಣ ಅಳಿದಿಲ್ಲ ಎಂಬುದು ಈ ನುಡಿಕಟ್ಟಿನಲ್ಲಿ ವ್ಯಕ್ತವಾಗುತ್ತದೆ. ಹಾಗೆಯೇ **ಕುಂಕುಮ ಅಳಿಸಿತು, ಬಳೆ ಒಡೆಯಿತು** ಎನ್ನುವ ಬದಲು ಕುಂಕುಮ **ಹೆಚ್ಚಿತು,** ಬಳೆ **ಹೆಚ್ಚಿತು** ಎನ್ನುವುದು ಮೇಲ್ವರ್ಗದ ಭಾರತೀಯ ಮಹಿಳೆ ಮುತ್ತೈದೆತನಕ್ಕೆ ಕೊಡುವ ಮಹತ್ವದೊಡನೆ, ಪುರುಷಪ್ರಧಾನ ಸಮಾಜದಲ್ಲಿ ವೈಧವ್ಯ ಭಯದಿಂದ ಅವಳು ತತ್ತರಿಸುತ್ತಿದ್ದ ಸಾಮಾಜಿಕ ಸಾಂಸ್ಕೃತಿಕ ಅಂಶಕ್ಕೂ ಕನ್ನಡಿ ಹಿಡಿಯುತ್ತದೆ.

ನಾಲ್ಕರ ರಾಶಿಗೆ **ವಡ್ಡಿ** ಎಂಬ ಮಾತೊಂದು ರೂಢಿಯಲ್ಲಿದೆ. ಇದು ಕೂಡ ಒಂದು ಕುರುಡು ನಂಬಿಕೆಯ ಅವಶೇಷವೆಂದು ಹೇಳುವವರುಂಟು. **ವಡ್ಡಿ** ಅಂದರೆ **ವೃದ್ಧಿ** (= ಶುಭ). ಒಂದು, ಎರಡು, ಮೂರು ಎಂಬ ಆದಿಮ ಅವಿಭಾಜ್ಯ ಸಂಖ್ಯೆಗಳು ಶುಭವೆಂದೂ ಅನಂತರ ನಾಲ್ಕನೆಯದರಲ್ಲಿ ಏನಾದರೂ ಅಶುಭವಿದ್ದರೆ ಅದು ಅಳಿಯಲೆಂದು ಅದಕ್ಕೆ **ವಡ್ಡಿ**ಯೆಂಬ ಹೆಸರನ್ನು ವಿಶೇಷವಾಗಿ ವರ್ತಕರು ಕೊಟ್ಟರೆಂದೂ ಹೇಳಲಾಗಿದೆ.

**ಕ್ಷೌರ** ಕರ್ಮ ಆಧುನಿಕ ಕಾಲದಲ್ಲಿ ನಾಗರಿಕತೆಯ ಅವಿಭಾಜ್ಯ ಅಂಗವಾಗಿ ಒಂದು ಕಲೆಯ ಸ್ಥಾನಕ್ಕೇರಿದೆ. ಆದರೆ ಅನಾಗರಿಕ ಮನುಷ್ಯರಿಗೆ ಶರೀರದಲ್ಲಿ ತಾನಾಗಿ ಬೆಳೆಯುವ ಕೂದಲು, ಉಗುರುಗಳನ್ನು ತೆಗೆದುಹಾಕುವುದು ಅನಿಷ್ಟಾಕಾಂಕ್ಷೆಯನ್ನು ಹುಟ್ಟಿಸುತ್ತಿದ್ದಿರಬೇಕು. ಆದ್ದರಿಂದಲೇ ಅನೇಕ ಸಂಸ್ಕೃತಿಗಳಲ್ಲಿ ಮೊದಲನೇ ಕ್ಷೌರಕರ್ಮ (ಚವಲ) ಪುರೋಹಿತರ ಮಧ್ಯಸ್ಥಿಕೆಯಲ್ಲಿ ವಿಧಿವತ್ತಾಗಿ ನಡೆಯುತ್ತದೆ. ಶುಭಾಶುಭ ಕರ್ಮಗಳೆರಡರಲ್ಲಿಯೂ ಕ್ಷೌರ ಭಾರತೀಯ ಸಂಸ್ಕೃತಿಯಲ್ಲಿ ಆವಶ್ಯಕವಾದರೂ ಅದೊಂದು ಭಯಪ್ರದ ಕ್ರಿಯೆಯೇ ಆಗಿತ್ತೆಂಬುದಕ್ಕೆ ಕ್ಷೌರ ಮಾಡಿಕೊಂಡವನು ಮೈಲಿಯಾಗುತ್ತಾನೆ. ಕ್ಷೌರ ಮಾಡಿಸಿಕೊಳ್ಳಲು ತಿಥಿ ವಾರ ನಕ್ಷತ್ರಗಳನ್ನು ನೋಡಬೇಕು ಇತ್ಯಾದಿ ವಿಧಿಗಳು ಸಾಕ್ಷಿ ಹೇಳುತ್ತವೆ. ಚಿಕ್ಕಂದಿನಲ್ಲಿ ರಾತ್ರಿ ಕಾಲದಲ್ಲಿ ಕ್ಷೌರ ಮತ್ತು ಕ್ಷೌರಿಕನ ಹೆಸರು [illegible]ಾರದು ಎಂದು ಹಿರಿಯರು ಹೇಳುತ್ತಿದ್ದುದು ನನಗೆ ನೆನಪಿದೆ. ಅನಿವಾರ್ಯ ಪ್ರಸಂಗದಲ್ಲಿ ತಲೆ ಮುಟ್ಟುವುದು, ತಲೆ ಮುಟ್ಟುವವರು ಎಂದು ಹೇಳಬಹುದೆಂದು ಆಪದ್ಧರ್ಮ ಇತ್ತು! ಈ ಕ್ಷೌರ ಭಯಕ್ಕೆ ಸಾಕ್ಷಿಯಾಗಿ ಸಂಸ್ಕೃತದಲ್ಲಿ ಕ್ಷೌರಕ್ಕೆ **ಆಯುಷ್ಕರ್ಮ** ಮತ್ತು **ಭದ್ರಾಕರಣ** ಎಂಬ ಎರಡು ಮರಸು ಹೆಸರುಗಳು ಇವೆ. ಆಯಸ್ಸನ್ನೂ ಭದ್ರವನ್ನೂ (= ಶುಭ) ಸೂಚಿಸುವ ಈ ಪದಗಳು ಆ ಕರ್ಮಕ್ಕೆ ಆರೋಪಿತವಾದ ತದ್ವಿರುದ್ಧ ಫಲಗಳನ್ನು ತಮ್ಮೊಳಗೆ ಅಡಗಿಸಿಟ್ಟುಕೊಂಡಿವೆ.

೪೯

ಪಾಶ್ಚಾತ್ಯ ವಿದ್ಯೆಯೊಡನೆ ಅಲ್ಲಿಯ ಅನೇಕ ಶಬ್ದಗಳು ಭಾರತಕ್ಕೆ ಬಂದು ಇಲ್ಲಿ ಮೊದಲಿದ್ದ ಶಬ್ದಗಳ ಸ್ಥಾನಗಳನ್ನು ಆಕ್ರಮಿಸಿಕೊಂಡವು. ಅವುಗಳ ಮೂಲಗಳನ್ನೂ ನಮ್ಮವೇ ಸಮಾನ ಪದಗಳ ಮೂಲಗಳನ್ನೂ ಹೋಲಿಸಿದರೆ ಎರಡರ ಹಿಂದಿನ ಸಾಮ್ಯ ವೈಷಮ್ಯಗಳೂ ಆದರ್ಶ ಭೇದಗಳೂ ಬೆಳಗಬಲ್ಲವು.

ಕೆಳಗಿನಿಂದ ಆರಂಭಿಸುವುದಾದರೆ, **ಸ್ಕೂಲು** ಮತ್ತು ಆ ಅರ್ಥದಲ್ಲಿ ನಾವೀಗ ಬಳಸುವ **ಶಾಲೆ. ಇಸ್ಕೂಲು** ಇಂದು ನಮ್ಮ ಹಳ್ಳಿಗರ ಬಾಯಿಯಲ್ಲಿಯೂ ನಲಿಯುತ್ತಿವೆ. ಆದರೆ ಅದರ ಗ್ರೀಕ್ ಮೂಲ ಪದವಾದ skhole ಪ್ರಥಮತಃ **ವಿರಾಮ** ಎಂಬರ್ಥ ಕೊಡುತ್ತಿತ್ತು ; ಅರ್ಥ ವಿಸ್ತರಣೆಯಿಂದ ಅದು **ಅಧ್ಯಯನ, ಪ್ರವಚನ**ಗಳನ್ನೂ ಸೂಚಿಸತೊಡಗಿತು ; ಏಕೆಂದರೆ, **ವಿರಾಮ**ದ ಸದುಪಯೋಗದಿಂದಲೇ **ಅಧ್ಯಯನ** ತಾನೆ ? ಅಧ್ಯಯನದಿಂದ ಅಧ್ಯಯನದ ಸ್ಥಳವೂ **ಸ್ಕೂಲು** ಆಯಿತು. ಈ ಪದವೇ ಲ್ಯಾಟಿನ್ ಮತ್ತು ತಜ್ಜನ್ಯ ಭಾಷೆಗಳಲ್ಲಿ ಟ್ಯೂಟಾನಿಕ್ (ಇಂಗ್ಲೀಷ್ ಸೇರಿ), ಕೆಲ್ಟಿಕ್ ಭಾಷೆಗಳಲ್ಲಿ, ಮತ್ತು ಸ್ವಲ್ಪ ತಡವಾಗಿ ರಶಿಯನ್ ಭಾಷೆಯಲ್ಲಿ **ವಿದ್ಯಾಶಾಲೆ**ಯೆಂಬರ್ಥದಲ್ಲಿ ಈಗ ಸಾವಿರ ವರ್ಷಗಳಿಂದ ಚಲಾವಣೆಗೆ ಬಂದಿದೆ.

ನಮ್ಮ **ಶಾಲೆ**ಗೆ ಮೂಲದಲ್ಲಿ ಪಾಠ ಹೇಳುವ ಸ್ಥಳ ಎಂಬರ್ಥ ಇರಲೇ ಇಲ್ಲ. **ಶಾಲಾ**ಪದ ಅಥರ್ವವೇದದಲ್ಲಿ ಲಾಯ, ಕಾರ್ಯಗಾರ ಇತ್ಯಾದಿ ಅರ್ಥಗಳಲ್ಲಿ ಬಳಸಲ್ಪಟ್ಟಿದ್ದು ಮನೆ, ಅಂಗಳ, ಕುಟಿ, ಕೋಣೆ, ಕೋಟೆ – ಒಟ್ಟಿನಲ್ಲಿ ಸ್ವಲ್ಪ ವಿಶಾಲವಾದ **ಕೋಣೆ** ಎಂಬರ್ಥದಲ್ಲೇ ಬಳಕೆಯಲ್ಲಿದ್ದದ್ದು. ಇಂಗ್ಲೀಷಿನ hall ಇದರ ಜ್ಞಾತಿ. **ಅಕ್ಷಶಾಲೆ, ಚಿತ್ರಶಾಲೆ** (ಚಿತ್ರಗಳನ್ನು ಬರೆದ ಕೋಣೆ), **ನೃತ್ಯಶಾಲೆ** ಇತ್ಯಾದಿಗಳನ್ನು ಅನುಕರಿಸಿ **ಪಾಠಶಾಲೆ** ಬಂತು. ವಿಚಿತ್ರವೆಂದರೆ ಪ್ರಾಚೀನ ಕೋಶಗಳಲ್ಲಿ **ಶಾಲೆ** ವಿದ್ಯೆಗೆ ಸಂಬಂಧಪಟ್ಟು ಕಾಣಿಸದಿರುವುದು. ಕ್ರಿ.ಶ. ೧೦ನೇ ಶತಮಾನದಲ್ಲಿ ರಾಷ್ಟ್ರಕೂಟ ಮೂರನೇ ಕೃಷ್ಣನ ಶಾಸನವೊಂದರಲ್ಲಿ **ಶಾಲೆ** ಕಾಣಿಸುತ್ತದೆ. ಹೀಗೆ ದಕ್ಷಿಣದಲ್ಲಿಯೇ ಮೊದಲು ಶಾಲೆ **ವಿದ್ಯಾಲಯ**ವಾಗಿ ತಲೆದೋರಿ ತಡವಾಗಿ ಉತ್ತರಕ್ಕೆ ವಲಸೆ ಹೋಗಿರಬೇಕು. **ಮಠ** ಎಂಬುದು ಅದಕ್ಕಿಂತ ಪ್ರಾಚೀನ. ಅಮರಕೋಶ ಅದನ್ನು ಛಾತ್ರಾದಿ (ವಿದ್ಯಾರ್ಥಿ ಮೊದಲಾದವರ – ಸಂನ್ಯಾಸಿಗಳೂ ಸೇರಿ) ನಿಲಯ ಎಂದು ಅರ್ಥವಿಸಿದೆ. ಕರ್ನಾಟಕದಲ್ಲಿಯೂ ಹಳೆಗಾಲದ ಪ್ರಾಥಮಿಕ ಶಾಲೆಗಳು ಐಗಳ (= ಅಯ್ಯಗಳ) **ಮಠ**ಗಳೆನಿಸಿದ್ದುವು. ಕಳೆದ ಶತಮಾನದಲ್ಲಿ ಡೆಪ್ಯುಟಿ ಚನ್ನಬಸಪ್ಪನವರು ಶಾಲಾ ವಿಷಯಕ ಪತ್ರಿಕೆ ಪ್ರಾರಂಭಿಸಿದ್ದು **ಮಠಪತ್ರಿಕೆ** ಎಂಬ ಹೆಸರಲ್ಲಿ. ಪ್ರಾಚೀನ **ಮಠ** ವಿದ್ಯಾರ್ಥಿಗಳ ಹಾಸ್ಟೆಲ್ಲೂ ಆಗಿತ್ತು ಮತ್ತು ಧಾರ್ಮಿಕ ವಿದ್ಯಾಪ್ರಧಾನವಾಗಿತ್ತು. ಗೋವೆಯ **ಮಠಗ್ರಾಮ**, (ಮಡಗಾಂವ), ಕರ್ನಾಟಕದ **ಶಾಲಿ(ಲೆ)ಗ್ರಾಮ**ಗಳು ಶಾಲಾ ಸ್ಥಾನಗಳಿರಬೇಕು. ದಕ್ಷಿಣ ಕನ್ನಡದಲ್ಲಿ **ಸಾಲೆತ್ತೂರ್** ಇದೆ. **ಕಾಲೇಜು** ಮೂಲತಃ ಲ್ಯಾಟಿನ್ ಭಾಷೆಯಲ್ಲಿ **ಸಮೂಹ** ಸೂಚಕ. ಯಾವೊಂದು ವಿಶಿಷ್ಟ ಉದ್ದೇಶಕ್ಕಾಗಿ ಸಂಘಟಿತರಾದ ವ್ಯಕ್ತಿಗಳ **ಸಂಘ, ಶ್ರೇಣಿ** ಎಂದೂ ಆಮೇಲೆ ಧಾರ್ಮಿಕ ಸಂಘ ಎಂದೂ ಅರ್ಥಪಡೆದು ೧೪ನೇ ಶತಮಾನದ ಕಡೆಕಡೆಗೆ ಅದು **ವಿಶ್ವವಿದ್ಯಾಲಯ**ದ ಅಂಗವಾಗಿ ಸ್ವೀಕೃತವಾಯಿತು. ಅದಕ್ಕೆ ಸಮಾನಾರ್ಥಕವಾಗಿ ನಾವೀಗ ಟಂಕಿಸಿರುವ **(ಮಹಾ)ವಿದ್ಯಾಲಯ** ಮೂಲದ ಅರ್ಥವ್ಯಾಪ್ತಿಯನ್ನೆಲ್ಲ ಪಡೆದಿಲ್ಲ. ಆ ಮೂಲಾರ್ಥ ಇಂಗ್ಲೀಷಿನಲ್ಲಿ electoral college (ಮತದಾರ ಸಂಘ) ಮೊದಲಾದವುಗಳಲ್ಲಿ ಜೀವಂತವಾಗಿದೆ.

ಕಾಲೇಜಿಗೆ ಸಮಾನ ಎನ್ನಬಹುದಾದ ನಮ್ಮಲ್ಲಿಯ ಪ್ರಾಚೀನ ಸಂಸ್ಥೆ **ಘಟಿಕಾ ಸ್ಥಾನ.** ದಕ್ಷಿಣ ಭಾರತದಲ್ಲಿ–ಕರ್ನಾಟಕದಲ್ಲಂತೂ–ವ್ಯಾಪಕವಾದ ಈ **ಘಟಿಕೆ**ಗಳು ಬಹುಮುಖಿ ಉಚ್ಚ ಶಿಕ್ಷಣದ ಕೇಂದ್ರಗಳಾಗಿದ್ದುವೆಂದು ಶಾಸನಗಳಿಂದ ಕಂಡುಬರುತ್ತದಲ್ಲದೆ ಅನೇಕ ಸ್ಥಳನಾಮಗಳಲ್ಲಿ ಜೀವಶೇಷವಾಗಿದೆ. ಮಯೂರ ಶರ್ಮ ಕಂಚಿಯ **ಘಟಿಕಾ** ಸ್ಥಾನದಲ್ಲಿ ಓದುತ್ತಿದ್ದಾಗ, ತನಗಾದ ಅವಮಾನದಿಂದ ಸಿಡಿದೆದ್ದು ಬ್ರಾಹ್ಮವನ್ನು ತೊರೆದು ಕ್ಷಾತ್ರವನ್ನು

ಕೈಕೊಂಡದ್ದು ಕದಂಬ ರಾಜ್ಯ ಸ್ಥಾಪನೆಗೆ ಕಾರಣವಾಯಿತು. ಆದರೆ ಈ ಘಟಿಕಾ ಸ್ಥಾನದ ಘಟಿಕಾ ಶಬ್ದ ಏನನ್ನು ಸೂಚಿಸುತ್ತದೆಂಬುದು ಸ್ಪಷ್ಟವಿಲ್ಲ. ಘಟಿಕಾ ಶಬ್ದಕ್ಕೆ ಗಳಿಗೆ (= ೨೪ ನಿಮಿಷ) ಎಂಬುದೊಂದು ಅರ್ಥ. ಕಾಲವನ್ನು ಅಳೆಯುವ ಈ ಕೆಲಸ ಅಂದು ತುಂಬ ಸೂಕ್ಷ್ಮ ಕೌಶಲದ ತಂತ್ರವಾಗಿದ್ದು ಗಣಿತ, ಜ್ಯೋತಿಷ ಶಾಸ್ತ್ರಗಳಲ್ಲಿ ಪ್ರವೀಣರೇ ಅದಕ್ಕೆ ಬೇಕಾಗಿದ್ದರು. ಅಂಥವರು ಉಚ್ಚ ವಿದ್ಯಾಕೇಂದ್ರಗಳಲ್ಲಿ ಜನಸಾಮಾನ್ಯರಿಗೆ ಈ ಸೇವೆ ಸಲ್ಲಿಸುತ್ತಿರಬಹುದು. ಆ ಕಾರಣದಿಂದ ಉಚ್ಚ ವಿದ್ಯಾಕೇಂದ್ರಗಳು ಜನರ ಮನಸ್ಸಿನಲ್ಲಿ ಕಾಲಗಣನೆಯೊಡನೆ ತಳಕುಬಿದ್ದಿರಬಹುದು. ಈ ಘಟಿಕಾಸ್ಥಾನಗಳಿಂದಲೇ ಮುಂದೆ ಹದಿನಾಲ್ಕು ವಿದ್ಯೆಗಳನ್ನು ಓದಿಸುವ ವಿದ್ಯಾಸ್ಥಾನಗಳು ರೂಪುಗೊಂಡವೆಂದು ಪ್ರೊ. ಆರ್. ಸತ್ಯನಾಥ ಅಯ್ಯರ್ ಹೇಳುತ್ತಾರೆ.

ಈ ವಿದ್ಯಾಸ್ಥಾನಗಳು ನಮ್ಮ ಪ್ರಾಚೀನ ವಿಶ್ವವಿದ್ಯಾಲಯಗಳೆನ್ನಬಹುದು. ನಾವು ಈಗ ವಿಶ್ವವಿದ್ಯಾ(ನಿ)ಲಯಗಳೆನ್ನುವುದು ಇಂಗ್ಲೀಷಿನ universityಯ ಶಾಬ್ದಿಕ ಅನುವಾದ. ಲ್ಯಾಟಿನ್ನಿನ universetas ಶಬ್ದದ ಅರ್ಥ ಒಬ್ಬನ ಸಮಸ್ತ ಆಸ್ತಿ ಎಂದು, ಅರ್ಥಾತ್ ವಿಶ್ವವೃತ್ತಿ. ೧೩ನೇ ಶತಮಾನದನಂತರ ಫ್ರೆಂಚ್ ಮೊದಲಾದ ಭಾಷೆಗಳಲ್ಲಿ ಈ ಶಬ್ದ ಮಹಾವಿದ್ಯಾಕೇಂದ್ರವೆಂಬ ಅರ್ಥದಲ್ಲಿ ಪ್ರಾಚುರ್ಯ ಪಡೆಯಿತು. ಒಂದು ದೃಷ್ಟಿಯಿಂದ ಇದು ನಮ್ಮ ಪ್ರಾಚೀನ ಗುರುಕುಲ ವಿಶ್ವವಿದ್ಯಾಲಯಕ್ಕೆ ಹೆಚ್ಚು ಅನುರೂಪವಾಗಿದೆ (ಕುಲ = ಸಮೂಹ).

ಈಚೆಗೆ ನಮ್ಮ ದೇಶದಲ್ಲಿ ಅನೇಕ ಅಕಾದಮಿಗಳು ಹುಟ್ಟಿಕೊಂಡಿವೆ. ಇವು ನಮ್ಮಲ್ಲಿ ವಿದ್ಯಾಬೋಧಕ ಸಂಸ್ಥೆಗಳಲ್ಲ; ನಾನಾ ಕಲೆ, ವಿದ್ಯೆಗಳಲ್ಲಿ ಶ್ರೇಷ್ಠತ್ವ ಪಡೆದವರಿಗೆ ಪ್ರೋತ್ಸಾಹ ಕೊಡುವ ಸಂಸ್ಥೆಗಳಾಗಿವೆ. ಅಕಾದಮಿಯ ಎಂಬ ಗ್ರೀಕ್ ಪದಕ್ಕೆ ಮೂಲತಃ ವಿದ್ಯೆಯ ಸಂಬಂಧವೇ ಇಲ್ಲ. ಅದು ಅಥೆನ್ಸಿನ ಬಳಿ ಒಂದು ಉಪವನದ ಹೆಸರು: ಬಹುಶಃ ಅಕಾದಮೋಸ್ ಎಂಬ ವ್ಯಕ್ತಿಯ ಹೆಸರಿನಿಂದ ಪ್ರಸಿದ್ಧವಾದದ್ದು. ಗ್ರೀಸಿನ ಜಗತ್ಪ್ರಸಿದ್ಧ ತತ್ತ್ವಜ್ಞಾನಿ ಪ್ಲೇಟೋ ಆ ಉಪವನದಲ್ಲಿ ಶಿಷ್ಯರಿಗೆ ತತ್ತ್ವಜ್ಞಾನ ಬೋಧಿಸುತ್ತಿದ್ದುದರಿಂದ ಅದಕ್ಕೂ ತತ್ತ್ವಜ್ಞಾನವಿದ್ಯೆಗೂ ತಳಕುಬಿತ್ತು. ಉಪವನಗಳಲ್ಲಿ ತತ್ತ್ವಬೋಧೆ ಮಾಡುವ ಸಂಪ್ರದಾಯ ನಮ್ಮಲ್ಲಿಯೂ ಇತ್ತು. ವಿಶೇಷತಃ ಬುದ್ಧನು ಬಿಹಾರದಲ್ಲಿ ಆಮ್ರವನ, ಕಾಶಿಯ ಬಳಿ ಸಾರಂಗವನಗಳಲ್ಲಿ ತತ್ತ್ವೋಪದೇಶ ಮಾಡಿದ್ದ. ಆದರೆ ಅಕಾದೆಮಿ ವನದ ಭಾಗ್ಯ ಅವಾವುಗಳಿಗೂ ಬರಲಿಲ್ಲ.

ಜರ್ಮನರು ತಮ್ಮ ಮಾಧ್ಯಮಿಕ ಶಾಲೆಗಳಿಗೆ ಒಂದು ವಿಚಿತ್ರ ಶಬ್ದ ಉಪಯೋಗಿಸುತ್ತಾರೆ: ಜಿಮ್ನಾಶಿಯಮ್ ಎಂದು. ಜಿಮ್ನಾಶಿಯಮ್ ಅಂದರೆ ಗ್ರೀಕ್ ಭಾಷೆಯಲ್ಲಿ ಗರಡಿಮನೆ. ಗರಡಿಮನೆಯಲ್ಲಿ ಅಂಗಸಾಧನೆ ಮಾಡುವ ಹಾಗೆ ಶಾಲೆಗಳಲ್ಲಿಯೂ ವಿದ್ಯಾಸಾಧನೆ ಮಾಡುವುದಲ್ಲವೆ? ಈ ಪದವನ್ನು ಆರಿಸಿಕೊಂಡದ್ದರಲ್ಲಿ ಜರ್ಮನರ ಕಠೋರ ಶಿಸ್ತಿನ ಮತ್ತು ಮಿಲಿಟರಿ ಮನೋವೃತ್ತಿಯ ಪ್ರತಿಬಿಂಬವಿದೆಯೆಂದು ಹೇಳಲೂಬಹುದು. ಜರ್ಮನ್ ಮಾಧ್ಯಮಿಕ ಶಾಲೆಗಳು ತಮ್ಮ ಶಿಸ್ತು ಮತ್ತು ಸಂಪ್ರದಾಯಶರಣತೆಗೆ ಹೆಸರಾಗಿವೆ. ಆದರೆ ವಾಸ್ತವಿಕವಾಗಿ ಗ್ರೀಕ್ ಜಿಮ್ನೋಸ್ ಶಬ್ದದ ಅರ್ಥ ಬೆತ್ತಲೆ ಎಂದು. ಶರೀರವನ್ನು ಅಖಂಡವಾಗಿಯೇ ಪವಿತ್ರವೆಂದು ನಂಬುತ್ತಿದ್ದ ಗ್ರೀಕರು ಬೆತ್ತಲೆಯಾಗಿಯೆ ಅಂಗಸಾಧನೆ ಮಾಡುತ್ತಿದ್ದರು ಮತ್ತು ಅವರ ಆಟ ಪಾಟ

ಪಂದ್ಯಗಳು ಚಿತ್ತಲೆಯಲ್ಲೇ ನಡೆಯುತ್ತಿದ್ದುವು! ಬಾಲವಾಡಿಗಳಿಗೆ ಜರ್ಮನ್ನರಿಟ್ಟ ಹೆಸರಾದ ಕಿಂಡರ್ ಗಾರ್ಟನ್‌ನ ಅರ್ಥ ಚಿಣ್ಣರ ವನ ಎಂದು. ಬಹುಶಃ ಶಿವರಾಮ ಕಾರಂತರು ಪುತ್ತೂರಲ್ಲಿ ತಾವು ನಡೆಸುತ್ತಿದ್ದ ಚಿಕ್ಕಮಕ್ಕಳ ಶಾಲೆಗೆ ಬಾಲವನ ಎಂದು ಹೆಸರಿಟ್ಟದ್ದು ಇದರ ಪ್ರತಿಧ್ವನಿಯಾಗಿಯೇ. ಇಲ್ಲಿ ಮತ್ತೆ ವಿದ್ಯೆ ನೈಸರ್ಗಿಕ ಪರಿಸರಕ್ಕೆ ಮರಳುತ್ತದೆ.

೫೦

ಮಾನವನ ಇತಿಹಾಸದಲ್ಲಿ ನಗರಗಳ ಉದಯ ಬಹುಶಃ ಎಲ್ಲಕ್ಕಿಂತ ಮಹತ್ವದ ಘಟ್ಟ. ನಗರಗಳು ತಲೆಯೆತ್ತದ ಸಂಸ್ಕೃತಿಗಳು ಗತಾನುಗತಿಕವಾಗಿ ಸಹಸ್ರ ಸಹಸ್ರ ವರ್ಷಗಳಾದರೂ ಇದ್ದಲ್ಲಿಯೇ ಇರುವುದನ್ನು ಕಾಣುತ್ತೇವೆ. ನಗರಗಳಿಂದಲೇ ನಾಗರಿಕತೆ. ಭಾಷೆಯಲ್ಲಿರುವ ಶಬ್ದಗಳು ನಗರ ಮತ್ತು ಸಮಾನ ಪದಗಳಿಂದ ಹೇಳುವ ಕಥೆ ಇಲ್ಲಿ ಪ್ರಸ್ತುತವಾಗಿವೆ.

ನಗರ ಶಬ್ದ ಸ್ವಲ್ಪ ತಡವಾಗಿ ಪ್ರಚಾರಕ್ಕೆ ಬಂದದ್ದು. ಅದಕ್ಕಿಂತ ಪ್ರಾಚೀನವಾದದ್ದು ಪುರ. ಋಗ್ವೇದದಲ್ಲೇ ಕಾಣಿಸುವ ಈ ಪದಕ್ಕೆ ಗ್ರೀಕ್ ಮತ್ತು ಸಂಬಂಧಿ ಭಾಷೆಗಳಲ್ಲಿ (ಗ್ರೀಕ್ pol) ಸಂವಾದಿಗಳು ಸಿಗುತ್ತವೆ. ಇರಾಣದಲ್ಲಿಯೂ ಪುರಗಳಿವೆ. ಪುರವೆಂದರೆ ಕೋಟೆಯಿಂದ ರಕ್ಷಿಸಲ್ಪಟ್ಟ ದೊಡ್ಡ ಜನವಸತಿ. ಪೌರ ಸಭೆಗಳು ರಾಮಾಯಣ ಕಾಲದಲ್ಲಿ ಇದ್ದುವು. ರಾಜ ಅವುಗಳ ಅಭಿಪ್ರಾಯ ಪಡೆಯುತ್ತಿದ್ದ.

ಪುರ ಮತ್ತು ತತ್ಸಮಾನ ಗ್ರೀಕ್ pol ಎಂಬ ಪದಗಳು ಭಾಷೆಗೆ ಕೊಟ್ಟ ಶಬ್ದಗಳನ್ನು ನೋಡೋಣ. ವೇದ ಪುರಾಣ ಕಥೆಗಳಲ್ಲಿ ಇಂದ್ರನಿಗೆ ಪುರಭಿತ್, ಪುರಂದರ (ಪುರಗಳನ್ನು ಒಡೆದವ), ರುದ್ರನಿಗೆ ತ್ರಿಪುರದಹನ (ಮೂರು ಪಟ್ಟಣಗಳನ್ನು ಸುಟ್ಟವ) ಎಂಬ ಉಪಾಧಿಗಳಿರುವುದು ಜನಾಂಗಗಳ ಅದೃಷ್ಟವನ್ನು ಅಳಿಸಿ ಬರೆಯುವುದರಲ್ಲಿ ಪುರಗಳ ಮಹತ್ವವನ್ನು ಒತ್ತಿ ಹೇಳುತ್ತದೆ. ನಾವೀಗ ಪೋಲೀಸ್ ಎಂದು ಕರೆಯುವ ನಮ್ಮ ಆರಕ್ಷಕರು ಮೂಲತಃ ಗ್ರೀಕ್ polis (ನಗರ)ಗಳಲ್ಲಿ ಕಾನೂನು ವ್ಯವಸ್ಥೆ ಕಾಪಾಡುವುದಕ್ಕೆ ನೇಮಕಗೊಂಡ ಕಾವಲುಗಾರರು. ಸಂಸ್ಕೃತದಲ್ಲಿ ಅವರು ಪುರರಕ್ಷಿಗಳು. ಭಾರತದಲ್ಲಿ ಈ ಪುರರಕ್ಷಕರಿಗೆ ಎಷ್ಟು ಮಹತ್ವವಿತ್ತೆಂಬುದನ್ನು ಸಾಮಾನ್ಯವಾಗಿ ಅವರ ಮುಖ್ಯಸ್ಥನ ಸ್ಥಾನಕ್ಕೆ ರಾಜನ ಶ್ಯಾಲಕ (ಭಾವನಂಟ) ನನ್ನು ನೇಮಿಸುತ್ತಿದ್ದರೆಂಬುದರಿಂದ ತಿಳಿಯಬಹುದು.

ಆದರೆ ಪಾಶ್ಚಾತ್ಯರಲ್ಲಿ politics (ಪಾಲಿಟಿಕ್ಸ್) ಎಂಬುದು polisನಿಂದ ಹುಟ್ಟಿ ಬಂದಂತೆ ನಮ್ಮಲ್ಲಿ ಪುರಕ್ಕೆ ಸಂಬಂಧಿಸಿದ ರಾಜ್ಯಾಧಿಕಾರ ಶಾಸ್ತ್ರಕ್ಕೆ ಹೆಸರು ಬಾರದೆ, ರಾಜನಿಗೆ ಸಂಬಂಧಿಸಿಯೇ ಹುಟ್ಟಿದ್ದು ಆಕಸ್ಮಿಕವೋ ಅರ್ಥಪೂರ್ಣವೋ ಹೇಳುವುದು ಕಷ್ಟ. ನಮ್ಮಲ್ಲಿ ಅದು ರಾಜನೀತಿ ಅಥವಾ ಬರೇ ನೀತಿಶಾಸ್ತ್ರ, ನಯ ಇತ್ಯಾದಿ. ಪಾಶ್ಚಾತ್ಯರಲ್ಲಿ ರಾಜನೀತಿ (politics) ನಾಗರಿಕರ (ಬಹುಶಃ ಪುರ ನಿವಾಸಿಗಳ) ಹಕ್ಕುಬಾಧ್ಯತೆಗಳ ಕವಲಾಗಿ ಬೆಳೆದುಬಂದರೆ ನಮ್ಮಲ್ಲಿ ರಾಜನೇ ಪಾಲಿಟಿಕ್ಸಿನ ಉಗಮವಾಗಿದ್ದನೆಂದು ಇದು ಸೂಚಿಸುವುದಿಲ್ಲವೆ? ನೀತಿ, ನಯ ಪದಗಳು ಹಕ್ಕುಗಳನ್ನವಲಂಬಿಸಿರದೆ ನಾಯಕತ್ವಕ್ಕೆ (ನಯ ನಡೆಸಿಕೊಂಡು ಹೋಗುವುದು, ಮುಂದಾಳತ್ವ) ಸಂಬಂಧಿಸಿವೆ. ಹಕ್ಕು ಬಾಧ್ಯತೆಗಳು ಧರ್ಮಶಾಸ್ತ್ರದಿಂದ ನಿಯಂತ್ರಿಸಲ್ಪಡುತ್ತಿದ್ದುವು. ಅವುಗಳ ಮೇಲೆ ರಾಜನಿಗೆ

ಹೆಚ್ಚು ಅಧಿಕಾರವಿರಲಿಲ್ಲ. ನಮ್ಮ **ನಯ, ನೀತಿಗೆ** ಪಾಶ್ಚಾತ್ಯ policyಯನ್ನು ಸಮೀಕರಿಸಬಹುದಾದರೂ ಅಧಿಕಾರದ ಮೂಲ ಸ್ರೋತ ಪೌರ ಅಥವಾ ನಾಗರಿಕನೆಂಬ ಕಲ್ಪನೆ ಗ್ರೀಸ್ ರೋಮ್‌ಗಳಲ್ಲಿದ್ದಂತೆ ನಮ್ಮಲ್ಲಿ ಇಲ್ಲದ್ದು ನಮ್ಮಲ್ಲಿ ಮತ್ತು ಒಟ್ಟೇ ಏಶಿಯ ಖಂಡದಲ್ಲಿ ಪ್ರಜಾಸತ್ತೆ ಬೆಳೆಯದಿರಲು ಕಾರಣವಾಗಿರಬಹುದೆ? ಇಂದಿಗೂ ನಮ್ಮ ರಾಜಕಾರಣ **ನಾಯಕಪ್ರಧಾನ**ವಾಗಿರುವುದು ಇತಿಹಾಸದ ಅಥವಾ ವ್ಯಕ್ತಿಯ ವಿಕ್ಷೇಪವಾಗಿರದೆ ಗಾಢವಾದ ಮೂಲಕಲ್ಪನಾ ವ್ಯತ್ಯಾಸದ್ದೇ ಫಲವೋ, ಏನೋ.

**ನಗರ** ಶಬ್ದ ಪುರದಷ್ಟು ಪ್ರಾಚೀನವಲ್ಲ ಎಂದೆ. ಆದರೆ ಅದು ತೈತ್ತಿರೀಯ ಆರಣ್ಯಕ, ಮಹಾಭಾರತ ಮತ್ತು ಪಾಣಿನೀಯ ಸೂತ್ರಗಳಷ್ಟು ಪುರಾತನವಂತೂ ಹೌದು. ಅದು **ಪುರ**ಕ್ಕೆ ಸಮಾನಾರ್ಥವಾಗಿ ಬಳಸಲ್ಪಟ್ಟಿದೆ. ಆದರೆ **ನಾಗರಿಕತೆ** ಎನ್ನುವುದು ಪ್ರಾಚೀನ ಗ್ರಂಥಗಳಲ್ಲಿ ಕಾಣದು. ಇಂಗ್ಲೀಷಿನ civilization ಎಂಬುದಕ್ಕೆ ಸಮಾನಾರ್ಥವಾಗಿ ಇದು ಈಚೆಗೆ ತಾನೆ ಟಂಕಿಸಲ್ಪಟ್ಟ ಪದ. Civilization ಎಂಬುದು ಲ್ಯಾಟಿನ್ civil ಪದದಿಂದ ರೂಪಿಸಲ್ಪಟ್ಟು ಮನುಷ್ಯನ ಭೌತಿಕ ಪ್ರಗತಿಯ ಕ್ರಮವನ್ನು ಅಧಿಕರಿಸುತ್ತದೆ. ಲ್ಯಾಟಿನ್‌ನ civita-civis ನ (ಸಿವಿಟಾ, ಸಿವಿಸ್ = **ನಗರವಾಸಿ**) ಹಕ್ಕುಗಳನ್ನು ಅಧಿಕರಿಸಿದ ಪದದಿಂದಲೇ ಈ ಪದವೂ ಹುಟ್ಟಿದೆ. **ಸಿಟಿ** (city) ಎಂಬುದೂ civita ದಿಂದ ಹೊರಟದ್ದು. Civics (= ಪೌರನೀತಿ) ಕೂಡ ಇದರದೇ ಕವಲು. ಹೀಗೆ civilization ಕೂಡ ಪ್ರಜೆಗಳಿಂದ, ನಾಗರಿಕರ ಹಕ್ಕುಬಾಧ್ಯತೆಗಳಿಂದ ಅರಳಿಕೊಂಡದ್ದಾಗಿದೆ.

ಈ ಆಧಾರ ಕಲ್ಪನೆಗಳನ್ನು ಬಿಟ್ಟರೆ **ಪೌರ, ನಾಗರಿಕ** ಪದಗಳ ಮತ್ತು policy, civilization ಪದಗಳ ಅನೇಕ ಉಪಪದಗಳಲ್ಲಿ ಕಲ್ಪನಾಸಾಮ್ಯವಿದೆ. ಇಂಗ್ಲೀಷಿನಲ್ಲಿ civil, civilized ಎಂದರೆ ನಯವುಳ್ಳ, ಸುಸಂಸ್ಕೃತ, ಸಭ್ಯ ಎಂಬರ್ಥಗಳಿದ್ದಂತೆ ಸಂಸ್ಕೃತದ **ನಾಗರಿಕ** ಶಬ್ದಕ್ಕೂ ಇವೆ. ಇಂಗ್ಲೀಷಿನ policyಯಲ್ಲಿ **ಧೂರ್ತತ್ವ**ದ ಅಂಶ ಇದ್ದ ಹಾಗೆ **ಚಾತುರ್ಯ, ಧೂರ್ತತ್ವ**ಗಳು **ನಾಗರ, ನಾಗರಕ** ಪದಗಳಿಗೂ ಪಂಚತಂತ್ರದಲ್ಲೇ ಕಾಣಿಸುತ್ತದೆ. ಅಂತೂ ನಗರವಾಸದೊಡನೆ **ಬುದ್ಧಿಚಾತುರ್ಯ**ದೊಡನೆ **ಕುತಂತ್ರ**ವೂ ಎರಕಗೊಂಡದ್ದು ಉಭಯ ಸಂಸ್ಕೃತಿಗಳಲ್ಲಿ ಕಾಣುತ್ತದೆ.

ಈ ನಾಗರಿಕ ಜನರಿಗೆ ಹೊರಗಿನ ಹಳ್ಳಿ ಜನರ ಬಗ್ಗೆ ಇದ್ದ ತಿರಸ್ಕಾರ ಬುದ್ಧಿ ಭಾರತದಲ್ಲಿ ಮತ್ತು ಯುರೋಪಿನಲ್ಲಿ ಸಮವಾಗಿಯೇ ಇದೆ. **ಗ್ರಾಮ್ಯ** ಅಂದರೆ ಸಂಸ್ಕೃತದಲ್ಲಿ ಒರಟು, ಅಸಭ್ಯ, ಅಶ್ಲೀಲ, ಲಂಪಟ; ಕನ್ನಡದಲ್ಲಿ **ಗಾಂಪ** ಅಂದರೆ ಹೆಡ್ಡ; ಹಿಂದಿಯಲ್ಲಿ **ಗಮಾರ** ಅಂದರೂ ಅವನೇ; **ಗಾಂವಠೀ** ಮಾಲು ಅಂದರೆ **ದೇಶಿ,** ಉತ್ತಮ ಗುಣಮಟ್ಟದ್ದಲ್ಲ. ಗಾತ್ರದಲ್ಲಿ **ಗ್ರಾಮ**ಕ್ಕೂ, **ಪುರ**ಕ್ಕೂ ನಡುವಿನದಾದ **ಖೇಟ** ಕೂಡ ತಿರಸ್ಕಾರಭಾಜನವೇ. **ಖೇಡತನ** ಅಂದರೆ **ಪುಕ್ಕಲು, ಹೆಡ್ಡತನ.** ಇಂಗ್ಲೀಷಿನ rustic (ಲ್ಯಾಟಿನ್ rus = ಹಳ್ಳಿಗಾಡು) ಅಂದರೆ ಹಳ್ಳಿಗನೂ ಹೌದು, ಒರಟನೂ ಹೌದು. ಹಳ್ಳಿಗಳ ಮೇಲೆ ನಗರದವರ ಈ ಅಭಿಪ್ರಾಯಕ್ಕೆ ಪ್ರತಿಯಾಗಿ ನಾಗರಿಕರ ಮೇಲೆ (ಬಹುಶಃ) ಹಳ್ಳಿಗರ ವಕ್ರದೃಷ್ಟಿಯೂ ಇದೆ. **ನಾಗರ, ನಾಗರಿಕ** ಅಂದರೆ **ದುಷ್ಟ, ವಕ್ರಮತಿ, ಪಿತೂರಿಗಾರ, ಕಳ್ಳ** ಎಂಬ ಅರ್ಥಗಳು ಸಂಸ್ಕೃತದಲ್ಲಿವೆ. ನಗರದ ಜನ ಬಲು ಮೆದು, ಕಠಿಣಶ್ರಮಕ್ಕೆ ಕಳ್ಳರು ಎಂಬ ಅರ್ಥ **ನಗರವಾಯಸ, ನಗರಕಾಕ, ಪುರಪಕ್ಷಿ** ಶಬ್ದಗಳಿಂದ ಸೂಚಿಸಲ್ಪಟ್ಟಿದೆ.

ಒಂದು ಸ್ವಾರಸ್ಯವಾದ ಸಮಾನಾಂಶವನ್ನು ಇಲ್ಲಿ ಹೇಳಬೇಕು. ಇಂಗ್ಲೀಷಿನಲ್ಲಿ city

ಎಂದರೆ ನಗರದ ವಿಶೇಷವಾಗಿ ಲಂಡನ್ನಿನ, ವ್ಯಾಪಾರ ಮತ್ತು ಬ್ಯಾಂಕಿಂಗ್ ಕೇಂದ್ರವುಳ್ಳ ಭಾಗ. ಕನ್ನಡದಲ್ಲಿ **ನಕರ, ನಖರ, ನಗರ** ಎಂಬ ಪದಗಳು ಊರ **ವ್ಯಾಪಾರಿಗಳ** ಸಂಘ ಎಂಬರ್ಥದಲ್ಲಿ ಕ್ರಿ.ಶ. ೫೦೦ರಿಂದಲೇ ಬಳಕೆಯಲ್ಲಿವೆ. **ನಗರೇಶ್ವರ** ದೇವಾಲಯಗಳು ಊರ ವೈಶ್ಯರ ದೇಗುಲಗಳು – ಇಂದಿಗೂ.

೫೧

ವಚನವಿವಕ್ಷೆ ಅಧಿಕಾಂಶ ಭಾಷೆಗಳ ಒಂದು ಲಕ್ಷಣ. ಒಂದಿದ್ದದ್ದನ್ನು ಹೆಚ್ಚು ಇದ್ದದ್ದರಿಂದ ಬೇರ್ಪಡಿಸಿ ಹೇಳುವ ಭಾಷಿಕ ಉಪಕರಣವೇ ವಚನವಿವಕ್ಷೆ. (ಪ್ರಾಚೀನ ಗ್ರೀಕ್ ಮತ್ತು ಸಂಸ್ಕೃತ ಭಾಷೆಗಳಲ್ಲಿ ಒಂದಕ್ಕೆ, ಎರಡಕ್ಕೆ ಮತ್ತು ಮೂರಕ್ಕೆ ಪ್ರತ್ಯೇಕ ವಚನ ವ್ಯವಸ್ಥೆಗಳಿವೆ. ಇದಕ್ಕಿಂತಲೂ ಹೆಚ್ಚು ವಚನಗಳ ನಿಯಮ ಇರುವ ಭಾಷೆಗಳೂ ಉಂಟಂತೆ.) ಹೀಗೆ **ನಾನು–ನಾವು**, ನೀನು–ನೀವು, **ಅವನು–ಅವಳು–ಅವರು** ಇತ್ಯಾದಿ.

ಆದರೆ ಈ ಉದಾಹರಣೆ ನೋಡಿ: ''ನೀವು ಒಬ್ಬರೆ ಬಂದಿರಾ; ಸಾಹೇಬರೇ ?'' ''ಹೌದು, **ನಾವು** ಒಬ್ಬರೇ ಬಂದೆವು.'' ''ನೋಡಪ್ಪಾ, ಈ **ಸಾಹೇಬರು ಒಬ್ಬರೇ** ಬಂದರಂತೆ.'' ಬೇರೊಂದು ಲೋಕದಿಂದ ಶುದ್ಧ ತರ್ಕಬದ್ಧ ವಿಚಾರದವನೊಬ್ಬ ಬಂದು ಮೇಲಿನ ಸಂವಾದ ಆಲಿಸಿದರೆ **ಒಬ್ಬನೇ** ಇರುವ ಇವರು **ಹಲವರು** ಹೇಗಾದರು ? ಎಂದು ಆಶ್ಚರ್ಯಪಡುವ ವ್ಯಾಪಾರ. ನಿತ್ಯ ಇಂಥ ಅತಾರ್ಕಿಕ ಪ್ರಯೋಗಗಳನ್ನು ಕೇಳುವ ಈ ಲೋಕದ ನಮಗೆ ಈ ಪ್ರಶ್ನೆಯೇ ಏಳುವುದಿಲ್ಲ. ಇದು **ಗೌರವಾರ್ಥಕ** ಬಹುವಚನವೆಂದು ಹೇಳಿಕೊಂಡು ಸುಮ್ಮನಾಗುತ್ತೇವೆ. ಬಹುವಚನದಲ್ಲಿ ಹೇಳಿದರೆ ಗೌರವ ಹೇಗೆ ಬರುತ್ತದೆ ? ಯಾರಿಗೂ ಗೊತ್ತಿಲ್ಲ.

ಆದರೆ ಅನೇಕ ಭಾಷೆಗಳಲ್ಲಿ ಗೌರವಾರ್ಥಕ ಬಹುವಚನಗಳು ಬಹಳ ಕಾಲದಿಂದ ಇರುವುದು ನಿಜ. ಕನ್ನಡದಲ್ಲಿ ಗೌರವಾರ್ಥಕವಾಗಿ **ನಾವು**, ನೀವು, **ಅವರು** ಪ್ರಯೋಗ ಲಿಖಿತ ದಾಖಲೆಗಳು ದೊರೆಯುವಷ್ಟೂ ಹಿಂದೆ ಹೋಗುತ್ತದೆ. (ಉದಾ–ವಡ್ಡಾರಾಧನೆ). ದ್ರಾವಿಡ, ಆರ್ಯ ಎರಡೂ ಶಾಖೆಗಳ ಭಾರತೀಯ ಭಾಷೆಗಳಲ್ಲಿ ಈ ಸಂಪ್ರದಾಯ ಇದೆ. ಸಂಸ್ಕೃತದಲ್ಲಿ ತೀರ ಪ್ರಾಚೀನದಿಂದ ಏಕವಚನಾರ್ಥದಲ್ಲಿ ಬಹುವಚನ ಇದೆ. ಉದಾಹರಣೆಗೆ **ಶಂಕರಾಚಾರ್ಯಾಃ, ಶ್ರೀಮದಾಚಾರ್ಯಾಃ** ಬಂಗಾಲಿಯಲ್ಲಿ **ತುಇ, ತುಮಿ** (ನೀನು, ನೀವು), ಕೊಂಕಣಿಯಲ್ಲಿ **ತೂಂ, ತುಮಿ**, ತಮಿಳಿನಲ್ಲಿ ನೀ, **ನೀಂಗಳ್** ಇತ್ಯಾದಿ ಮಧ್ಯಮ ಪುರುಷದ ದೃಷ್ಟಾಂತಗಳು. ಸಂಸ್ಕೃತದಲ್ಲಿ ಬಹಳ ಹಿಂದೆ ನೀವು ಎಂಬ ಗೌರವಾರ್ಥಕ ಇಲ್ಲದಿದ್ದರೂ ಅದರ ಬದಲು **ಭವಾನ್** ಏನಿಲ್ಲೆಂದರೂ ಶತಪಥ ಬ್ರಾಹ್ಮಣದಷ್ಟು ಹಿಂದಿನಿಂದ ಇದೆ. ಸ್ತ್ರೀಲಿಂಗದಲ್ಲಿ **ಭವತೀ**. (ಉಪನಯುನವಾದ ವಟು ತಾಯಿಯಿಂದ ಮೊದಲು ''**ಭವತಿ** ಭಿಕ್ಷಾಂ ದೇಹಿ'' ಎಂದು ಭಿಕ್ಷೆ ಕೇಳುತ್ತಾನೆ.) ಇದಕ್ಕೆ ಆಧಾರ ಕೌಶಿಕ ಧರ್ಮಸೂತ್ರ.

ಭಾರತದಿಂದ ಹೊರಗೆ ಹೋದರೆ, ಇಂಗ್ಲೀಷಿನಲ್ಲಿ you ಇದೆ. ಈಗ ಅದರ ಅರ್ಥ ನೀನು ಎಂದೇ ಆದರೂ ಅದು ೧೪ನೇ ಶತಮಾನಕ್ಕಿಂತ ಹಿಂದೆ ಬಹುವಚನವಾಗಿಯೇ (ನೀವು) ಪ್ರಯೋಗಿಸಲ್ಪಡುತ್ತಿತ್ತು : **ನೀನು** ಎನ್ನುವುದಕ್ಕೆ thou ಎಂಬ ಶಬ್ದ ಇತ್ತು. ಫ್ರೆಂಚಿನಲ್ಲಿ tu ಮತ್ತು vous (ನೀನು, ನೀವು) ಗಳಲ್ಲಿ vous ಎಂಬುದು ಗೌರವಾರ್ಥಕವಾಗಿ

ನೀನುವಿನ ಸ್ಥಾನದಲ್ಲಿ ಉಪಯೋಗಿಸಲ್ಪಡುತ್ತದೆ. ಸರ್ವಸಮಾನಿಕತೆಯ ಓಘದಲ್ಲಿ ಫ್ರೆಂಚರು vousನಿಂದ tuವಿಗೆ ಹಿಂತಿರುಗುವ ಯತ್ನಮಾಡಿದ್ದು ಫಲಿಸಲಿಲ್ಲ. ಇಂಗ್ಲೀಷಿನಲ್ಲಿ ತೀರ ಸಲಿಗೆಯ, ಅಥವಾ ಕೆಳಗಿನ ಜನರನ್ನು ಕುರಿತ, ಸಂಬೋಧನೆಗಾಗಿ thou ಅನೇಕ ಕಾಲ ಉಳಿದು ಕಡೆಗೆ ಎಲ್ಲರಿಗೂ (ಉಚ್ಚ–ನೀಚ, ಸಲಿಗೆ–ಅಪರಿಚಿತತೆಗಳ ಭೇದವಿಲ್ಲದೆ) ಬಹುವಚನಾರ್ಥಕ you ಬಳಕೆಗೆ ಬಂದು ಏಕವಚನಾರ್ಥದ thou ಮರೆತೇ ಹೋಗಿದೆ.

ಭಾರತೀಯ ಭಾಷೆಗಳಲ್ಲಿ ಕೆಲವು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿವೆ. ಕನ್ನಡದಲ್ಲಿ ನೀನು ಎನ್ನುವಲ್ಲಿ **ನೀವು** ಎಂದರೂ ಗೌರವ ಸಾಲದೆಂದು **ತಾವು** ಬಂದಿದೆ. (**ತಾವು** ಚಿತ್ತೈಸಬೇಕು – ಇತ್ಯಾದಿ). **ತಾವು** ಎಂಬುದು **ತಾನು**ವಿನ ಬಹುವಚನ; **ತಾನು** ಸಂಸ್ಕೃತದ **ಆತ್ಮ** ಶಬ್ದಕ್ಕೆ ಪರ್ಯಾಯವಾದದ್ದು. ಹಿಂದಿಯಲ್ಲಿ **ತೂ, ತುಮ್, ಆಪ್** ಎಂಬ ಮೂರು ತರಹೆಗಳಾಗಿವೆ. **ತೂ** ಎಂಬುದು ತೀರ ಗೆಳೆಯರನ್ನು ಅಥವಾ ಕೆಳಗಿನವರನ್ನು ಸಂಬೋಧಿಸಲಿಕ್ಕೆ; **ತುಮ್** ನೀನುಗೆ ಸಮಾನವಾದರೂ ಬಹುವಚನವೇ. ಅದಕ್ಕಿಂತಲೂ ಗೌರವಾಸ್ಪದರಾದ ಅಥವಾ ಅಪರಿಚಿತರಾದ ಸದ್ಗೃಹಸ್ಥರಿಗೆ **ಆಪ್**. (**ಆಪ್** ಕೂಡ **ಆತ್ಮ** ಶಬ್ದದ ತದ್ಭವ). ಆತ್ಮಾರ್ಥಕವಾದ ಈ ಶಬ್ದಗಳು ಅತಿ ಗೌರವಾರ್ಥಕ ಹೇಗಾದುವೆಂಬುದೂ ಒಂದು ಭಾಷಾತರ್ಕದ ಪ್ರಶ್ನೆ, ಗೌರವಾರ್ಥಕ **ನೀವು ತಾವು** ಲಿಖಿತ ದ್ರಾವಿಡ ಭಾಷೆಗಳಲ್ಲೆಲ್ಲ ಇವೆ. (DED 2582 3051, 3055).

ನೀನು ಎಂಬುದಕ್ಕೆ ಗೌರವಾರ್ಥಕವಾಗಿ **ನೀವು** ಎಂದಂತೆ **ನಾನು** ಎನ್ನುವಲ್ಲಿ **ನಾವು** ಎನ್ನುವುದೂ ಅನೇಕ ಭಾಷೆಗಳಲ್ಲಿ ದೃಢವಾಗಿ ಬೇರೂರಿದ್ದೇ ಆಗಿದೆ. ರಾಜರು, ಗುರುಗಳು, ಒಟ್ಟಿನಲ್ಲಿ ಅಧಿಕಾರ ಚಲಾಯಿಸುವವರು **ನಾವು** ಆಗಿದ್ದಾರೆ. ಸಮಾಜದಲ್ಲಿ ವರ್ಗಭೇದವುಂಟಾಗಿ ಶ್ರೇಷ್ಠ–ಕನಿಷ್ಠ, ಶಾಸ್ಯ–ಶಾಸಕ ವಿಭಜನೆಯಾದಾಗ, **ಶ್ರೇಷ್ಠ** ಶಾಸಕ ವರ್ಗದವರು **ಕನಿಷ್ಠ** ಶಾಸ್ಯ ಅಥವಾ ಶಿಷ್ಯ ವರ್ಗದವರಿಂದ ತಮ್ಮನ್ನು ದೂರವಾಗಿಟ್ಟುಕೊಳ್ಳಲು ಗೌರವಾರ್ಥಕ ಬಹುವಚನವನ್ನು ಬಳಕೆಗೆ ತಂದರೆಂದು ಊಹಿಸಲಾಗಿದೆ. ''ಅತಿಪರಿಚಯಾದವಜ್ಞಾ'' – ಬಹಳ ಸಲಿಗೆಯಿಂದ ಅಲಕ್ಷ್ಯ ಹುಟ್ಟುತ್ತದೆ ಎಂಬ ವಾಕ್ಯ ಇದನ್ನು ಸಮರ್ಥಿಸುತ್ತದೆ. ಆದರೂ ಅತಿ ಪ್ರಾಚೀನ ಕಾಲದ ಇಜಿಪ್ತ್, ಬೆಬಿಲಾನ್, ಅಸ್ಸೀರಿಯದ ನಿರಂಕುಶ ಪ್ರಭುಗಳಲ್ಲಿ ಯಾರೂ **ನಾನು** ಎಂಬಲ್ಲಿ **ನಾವು** ಉಪಯೋಗಿಸಿಕೊಂಡಂತಿಲ್ಲ. ಇಜಿಪ್ತಿನ ಅಮೆನ್‌ಎಮ್‌ಹೆತ್, ಬೆಬಿಲೋನಿನ ಹಮ್ಮುರಾಬಿ, ಅಸ್ಸೀರಿಯದ ಅಶುರ್‌ಬನಿಪಾಲ್ ತಮ್ಮ ಶಾಸನಗಳಲ್ಲಿ ನಾನು ಎಂದರೇ ಹೊರತು **ನಾವು** ಅನ್ನಲಿಲ್ಲ. ಬದಲಿಗೆ ಪ್ರಜಾಸತ್ತಾತ್ಮಕ ರೋಮಿನ ಹಿರಿಯ ರಾಜಕಾರಣಿ ಸಿಸಿರೋ (ಕ್ರಿ.ಪೂ. ಒಂದನೇ ಶತಮಾನ) ಮಾತ್ರ ''**ನಾವು** ನಿಮ್ಮನ್ನು ಕಾಪಾಡಿದ್ದೇವೆ'' ಎಂದು ಆತ್ಮಪ್ರತಿಷ್ಠೆಯ ಬಹುವಚನದಲ್ಲಿ ಹೇಳಿಕೊಂಡಿದ್ದಾನೆ. ಅವನಿಗಿಂತ ಎರಡು ಶತಮಾನ ಹಿಂದಿನ ಅಶೋಕ ತನ್ನನ್ನು ದೇವತೆಗಳಿಗೆ ಪ್ರಿಯ ಎಂದುಕೊಳ್ಳುತ್ತಾನೆ ಹೊರತು **ನಾವು** ಎಂದು ಹೇಳಿಕೊಂಡಿಲ್ಲ. ಆದರೆ ಉಪನಿಷತ್ತಿನ ಋಷಿಗಳು ಶಿಷ್ಯರೊಡನೆ ಆಡುವಾಗ **ನಾವು** ಅಂದುಕೊಂಡದ್ದುಂಟು. ಕಠೋಪನಿಷತ್ತಿನ ಋಷಿ ಶಿಷ್ಯನಿಗೆ ''ತ ಉಪನಿಷದಮಬ್ರೂಮೇತಿ'' (ಉಪನಿಷತ್ತನ್ನು **ಹೇಳಿದೆವು**) ಎನ್ನುತ್ತಾನೆ. ಋಗ್ವೇದದಲ್ಲಿಯೂ ಅಲ್ಲಲ್ಲಿ ಗೌರವಾರ್ಥಕ ಏಕವಚನ ''ವಯಂ'' (ನಾವು), ''ಯೂಯಂ'' ಸಿಗುತ್ತದೆ. (ಋಗ್ – ಸೂರ್ಯಾವಿವಾಹ ಮಂತ್ರ, ಹಾಗೂ ೧–೯–೬ ನೋಡಿರಿ.)

ಈ ಗೌರವಾರ್ಥ ಬಹುವಚನಗಳು ಶ್ರೇಷ್ಠ ಕನಿಷ್ಠ ಮೊದಲಾದ ಭೇದ ಭಾವನೆಗಳಿಂದಲೇ ಹುಟ್ಟಿರಬಹುದಾದರೂ ಇವು ಭಾಷೆಯಲ್ಲಿ ಎಷ್ಟು ಬಲವಾಗಿ ಬೇರೂರಿವೆಯೆಂದರೆ ನೀನು ಎನ್ನುವುದು ಅಸೌಜನ್ಯ, ಧಾರ್ಷ್ಟ್ಯ, ಅವಮಾನದ ವರ್ತನೆಯೆಂದು ಭಾವಿಸಲಾಗುತ್ತದೆ. ಹಿಂದಿಯಲ್ಲಿ ಧಾರ್ಷ್ಟ್ಯದ ವರ್ತನೆಗೆ ಬೈಗಳಿಗೆ ''ತೂ ತೂ ಕರನಾ'' (ನೀನು ನೀನು ಎನ್ನುವುದು), ''ಬಂಗಾಲಿಯಲ್ಲಿ ತುಇ ಮುಇ ಕರಾ'' (ನೀನು ತಾನು ಎನ್ನುವುದು) ಎಂದೇ ಹೆಸರಿದೆ. ನಾವೂ ''**ಏಕವಚನದಲ್ಲಿ ಬೈದ**'' ಎನ್ನುತ್ತೇವೆ. ಇದಕ್ಕೆ ಸಮಾನವಾಗಿ ಇಂಗ್ಲೀಷಿನಲ್ಲಿ thou-and-thee ಫ್ರೆಂಚಿನಲ್ಲಿ tutoyer ಎಂಬ ಪದ ಪುಂಜಗಳಿವೆ. ಸಮಾಜವಾದಿ ಚಳವಳಿಗಳು ಈ ಅಸಮಾಜವಾದಿ ಭಾಷಾ ವಿಶೇಷವನ್ನು ಉಚ್ಚಾಟಿಸಲು ಅಸಮರ್ಥವಾಗಿವೆ. ಬಹುಶಃ ಇದು ಉಚ್ಚ ನೀಚ ಭಾವನೆಯ ಬಲವಾದ ಬೇರುಗಳನ್ನು ಮಾತ್ರ ಸೂಚಿಸುವುದಿಲ್ಲ. ನಮ್ಮ ಸುತ್ತಲವರೆಲ್ಲರಲ್ಲಿ ಅತಿ ಸಲಿಗೆ ಬೇಡವೆಂಬ ಮನುಷ್ಯ ಭಾವನೆಯೂ **ನೀವು ನಾವು** ಎಂಬುದಕ್ಕೆ ಕಾರಣವಿರಬಹುದು. ಮಣ್ಣಿನ ವಾಸನೆ ಹಿಡಿಸುವವರಿಗೂ ಬೆವರಿನ ವಾಸನೆ ಅಸಹ್ಯವಾಗಬಹುದಲ್ಲವೆ ?

ಇಂಗ್ಲೀಷ್ ಮೊದಲಾದ ಭಾಷೆಗಳಲ್ಲಿ ಈ ಗೌರವಾರ್ಥಕ ಬಹುವಚನಗಳು ಹೆಚ್ಚು ಮಟ್ಟಿಗೆ ಉತ್ತಮ ಪುರುಷ (ನಾನು, ನಾವು) ಮಧ್ಯಮ ಪುರುಷ (ನೀನು, ನೀವು)ಗಳಿಗೆ ಮಾತ್ರ ಸೀಮಿತವಾಗಿವೆ. ಭಾರತೀಯ ಭಾಷೆಗಳಲ್ಲಿ ಹಾಗಲ್ಲ. ಪ್ರಥಮ ಪುರುಷಕ್ಕೂ ಗೌರವಾರ್ಥಕ ಬಹುವಚನ ಇಲ್ಲಿ ಇದೆ. ''ಅವರು/ಇವರು ಬಂದರು'' ಇತ್ಯಾದಿ. ನಾವು ಎದುರಲ್ಲಿರುವವರಿಗೆ ಮಾತ್ರ ಗೌರವ ಕೊಟ್ಟು ಮಾತಾಡುವವರಲ್ಲ, ಅವರ ಬೆನ್ನ ಹಿಂದೆ ಕೂಡ ಹಾಗೇ ಮಾಡುವವರು !

ಗೌರವಾರ್ಥಕ **ನೀವು** ಭಾರತದಲ್ಲಿ ಎಲ್ಲ ಭಾಷೆಗಳಲ್ಲಿದ್ದರೂ ಅವುಗಳ ಬಳಕೆಯಲ್ಲಿ ಭಾಷೆಯಿಂದ ಭಾಷೆಗೆ ಸ್ಥಳದಿಂದ ಸ್ಥಳಕ್ಕೆ ಸಾಕಷ್ಟು ಅಂತರವಿದೆ. ದಕ್ಷಿಣ ಕನ್ನಡದಲ್ಲಿ ಬಹುತರವಾಗಿ ತಂದೆಯನ್ನು ನೀವು ಎಂದು, ತಾಯಿಯನ್ನು ನೀನು ಎನ್ನುವುದು ಸಂಪ್ರದಾಯ. ಉತ್ತರ ಕನ್ನಡ ಮತ್ತು ಉತ್ತರ ಕರ್ನಾಟಕದಲ್ಲಿ ಮಕ್ಕಳು ತಂದೆ, ಅಜ್ಜ ಮೊದಲಾದ ಹಿರಿಯ ಸಂಬಂಧಿಕರಿಗೂ ಏಕವಚನವನ್ನೇ ಬಳಸುತ್ತಾರೆ. ಕೊಂಕಣಿಯಲ್ಲಿ **ನೀವು** ಅನ್ನಿಸಿಕೊಳ್ಳುವವರು ಬಹಳ ಕಡಿಮೆ; ಸ್ವಾಮಿಗಳು, ಅತಿ ಎತ್ತರದ ಸಾಮಾಜಿಕ ಸ್ತರದವರು ಮಾತ್ರ ಅದಕ್ಕೆ ಅರ್ಹರು. ಬಂಗಾಲಿಯಲ್ಲಿ ಕೂಡ ಹಾಗೆಯೇ, ಹಿಂದಿಯಲ್ಲಿ ಗಂಡನಿಗೆ ಹೆಂಡತಿ **ತುಮ್** ಎನ್ನುತ್ತಾಳೆ. ನೀನು–ನೀವುಗಳ ನಡುವಣದ **ತುಮ್**. ಒಂದು ವಿಶೇಷವೆಂದರೆ ಹಿಂದಿಯಲ್ಲಿ **ತೂ, ತುಮ್, ಆಪ್**ಗಳಿಗೆ ಬೇರೆ ಬೇರೆ ಧಾತು ಪ್ರತ್ಯಯಗಳಿವೆ. ''ತೂ ಕರತಾ **ಹೈ**'' (ನೀನು ಮಾಡುತ್ತಿ), ''ತುಮ್ ಕರತೇ **ಹೋ**'' ಮತ್ತು ''ಆಪ್ ಕರತೇ **ಹೈಂ**'' (ಮಾಡುತ್ತಾರೆ).

೫೨

ಕನ್ನಡ ಭಾಷೆಯಲ್ಲಿ ಸೇರಿಹೋಗಿವೆಯೆನ್ನಲಾಗದಿದ್ದರೂ ಪುಂಡ, ಭಂಡ, ಪೋಕರಿ ಮತ್ತು ಪೋಲೀಸರ ಬಾಯಿಂದ ತಮ್ಮ ಕೈಲಿ ಸಿಕ್ಕವರ ಮೇಲೆ ಸಾರ್ವತ್ರಿಕವಾಗಿ ಪ್ರಯೋಗವಾಗಿ ಕಿವಿಗೆ ಬೀಳುವ ದರ್ಪದ, ತುಚ್ಛೀಕಾರದ ಬೈಗಳ ಮಾತುಗಳಲ್ಲಿ ಸಾಲಾ

ಎಂಬುದೂ ಒಂದು. ಶಬ್ದದ ಶಕ್ತಿ ಹೆಚ್ಚಿಸುವುದಕ್ಕಾಗಿ ಅದನ್ನು **ಸ್ಸಾಲಾ** ಎಂದು ಉಚ್ಚರಿಸುವುದೂ ಉಂಟು. ಸ್ವಾರಸ್ಯವೆಂದರೆ ಈ ಶಬ್ದದ ಅರ್ಥವಿಕಾಸದ ತಿಳಿವಳಿಕೆ ಅದನ್ನು ಪ್ರಯೋಗಿಸುವವರಿಗಾಗಲಿ ಅನ್ನಿಸಿಕೊಳ್ಳುವವರಿಗಾಗಲಿ ಇಲ್ಲ.

ಅನೇಕ ''ಬಲಯುತ'' ಶಬ್ದಗಳ ಹಾಗೆಯೆ **ಸಾಲಾ** ಕೂಡ ಹಿಂದುಸ್ತಾನಿಯ ಕೊಡುಗೆ. ಇದರ ಪ್ರಾಥಮಿಕ ಅರ್ಥ ತೀರ ನಿರ್ಮಾಯಕವಾದದ್ದು. **ಸಾಲಾ** ಅಂದರೆ **ಭಾವನಂಟ**, ಅಂದರೆ ಹೆಂಡತಿಯ ಅಣ್ಣ ಅಥವಾ ತಮ್ಮ. ಸಂಸ್ಕೃತದ **ಶ್ಯಾಲ** ಅಥವಾ **ಶ್ಯಾಲಕ** ಶಬ್ದದಿಂದ ಇದರ ನಿಷ್ಪತ್ತಿಯನ್ನು ಹೇಳಲಾಗುತ್ತದೆ. ಪ್ರಿಯನಾಗಬೇಕಾದ ಹೆಂಡತಿಯ ಸೋದರ ಬೈಗಳ ಹಂತಕ್ಕೆ ಹೇಗೆ ಇಳಿದ? ಅನೇಕ ಸಾಂಸ್ಕೃತಿಕ ಅಂಶಗಳು ಇದಕ್ಕೆ ಕಾರಣವಾಗಿರಬೇಕು. ಮೊದಲನೆಯದಾಗಿ ತನ್ನ ಹೆಂಡತಿಯ ಅಣ್ಣ–ತಮ್ಮ ಅಲ್ಲದವನನ್ನು ಹಾಗೆ ಕರೆದರೆ ಅದು ಅವನ ಅಕ್ಕ ತಂಗಿಯರಿಗೆ ಅವಮಾನ – ಹಾಗೆ ಕರೆಯುವವನು ಅವನ ಸೋದರಿಯನ್ನು ಇಟ್ಟುಕೊಂಡವನೆಂದು ಧ್ವನಿತವಾಗುವುದರಿಂದ. ಅಪ್ರತ್ಯಕ್ಷವಾಗಿ ಅದು ಅವನ ಸೋದರಿಯ ಚರಿತ್ರಹನನ ಮಾಡುವ ಮೂಲಕ ಸೋದರರನ್ನು ತುಚ್ಛೀಕರಿಸುವುದಾಗುತ್ತದೆ. ಪುರುಷಪ್ರಧಾನ ಸಮಾಜದಲ್ಲಿ ತಾಯಿ ಅಥವಾ ಸೋದರಿಗೆ ಹೆಸರಿಡುವುದಕ್ಕಿಂತ ಹೆಚ್ಚಿನ ತುಚ್ಛ ಅವಮಾನ ಬೇರೊಂದಿಲ್ಲ.

ಇದರೊಡನೆ ಇನ್ನೊಂದು ಸಾಂಸ್ಕೃತಿಕ ಅಂಶವೂ ಸೇರಿರಬಹುದು. ಅದೆಂದರೆ ವೇಶ್ಯೆಯರ ಒಂದು ಜಾತಿಯೇ ಇದ್ದ ಹಳೆಯ ಸಮಾಜದಲ್ಲಿ ಆ ಜಾತಿಯ ಗಂಡು ಮಕ್ಕಳಿಗೆ ಬೆಲೆಯೇ ಇರಲಿಲ್ಲ. ತಮ್ಮ ಸುಂದರಿ ಅಕ್ಕತಂಗಿಯರಿಗೆ ವಿಟರನ್ನು ಹೊಂದಿಸಿಕೊಡುವ, ಓಲೈಸುವ ಅವಸ್ಥೆ ಅವರಿಗೆ ಬಹುತರವಾಗಿ ಬರುತ್ತಿತ್ತು. ಹೀಗೆ ಅವರು ವಿಟರಿಗೆ ''ಭಾವ–ನಂಟ'' ಕುಂಟಣಿಗರಾಗುತ್ತಿದ್ದರು! ಈ ತುಚ್ಛ ಅವಸ್ಥೆಯಿಂದಾಗಿ ಈ ಹತ್ತುಮಂದಿಯ **ಸಾಲಾ**ಗಳು ಲೇವಡಿಗೆ ಗುರಿಯಾಗುತ್ತಿದ್ದುದನ್ನು ನಾವು ಚಿಕ್ಕಂದಿನಲ್ಲಿ ಕಂಡಿದ್ದೆವು.

ಈ **ಸಾಲಾ**ಗಳ ವಿಷಯದಲ್ಲಿ ಸಂಸ್ಕೃತ ನಾಟಕಗಳಲ್ಲಿ ಕುತೂಹಲಕರ ಸಂಗತಿಗಳು ದೊರೆಯುತ್ತವೆ. ಉದಾಹರಣೆಗೆ, ಕಾಳಿದಾಸನ ''ಶಾಕುಂತಲ''ದಲ್ಲಿ **ನಾಗರಕ ಶ್ಯಾಲಕ**ನೊಬ್ಬನು ಬರುತ್ತಾನೆ. ಈತನು ನಗರದ ಪೋಲೀಸ್ ಮುಖ್ಯಸ್ಥನೂ ಹೌದು. ರಾಜನ **ಶ್ಯಾಲಕ**ನೂ ಹೌದು. ಅವನು ಸಾಮಾನ್ಯ ಜನರ ಪ್ರಾಕೃತ ಭಾಷೆಯನ್ನೇ ಆಡುವವನಾದ್ದರಿಂದ ದುಷ್ಯಂತನ ಯಾವಳೇ ಮನೆತನಸ್ಥ ರಾಣಿಯ ಸೋದರನಾಗಿರುವ ಸಂಭವವಿಲ್ಲ. (ಮನೆತನಸ್ಥ **ಶ್ಯಾಲಕ**ನೊಬ್ಬನನ್ನು ಮಹಾಭಾರತದ ಶಕುನಿಯಲ್ಲಿ ನಾವು ಕಾಣುತ್ತೇವೆ.) ರಾಜನ ಕ್ಷಣಿಕ ಮೋಹಕ್ಕೆ ಪಾತ್ರಳಾದ ಯಾರೊಬ್ಬ ಕಾಮಿನಿಗೆ ಈ ನಾಗರಿಕ ಸೋದರನಾಗಿರಬೇಕೆಂದು ವ್ಯಾಖ್ಯಾನಕಾರರು ಹೇಳುತ್ತಾರೆ. ಆ **ಶ್ಯಾಲಕ** ಸಂಬಂಧದಿಂದ ಅವನು ಪೋಲೀಸ್ ಅಧಿಕಾರಿಯ ಸ್ಥಾನಕ್ಕೇರಿದ್ದಾನೆ ಅಷ್ಟೆ. ಶೂದ್ರಕನ ''ಮೃಚ್ಛಕಟಿಕ'' ನಾಟಕದ ಶಕಾರ ಬಹಳ ಕೀಳ್ಮಟ್ಟದ ರಾಜಶ್ಯಾಲಕ. ತಿರಸ್ಕಾರದಿಂದ ಹೇಳುವ ಹಾಗೆ ''ಭಗಿನೀಭಗಭಾಗ್ಯ''ದಿಂದ ಅಧಿಕಾರಕ್ಕೇರಿ ಜನರನ್ನು ಪೀಡಿಸುವವನು. **ಸಾಲಾ**ಗಳ ಕೆಟ್ಟ ಹೆಸರಿಗೆ ರಾಜರ ಅಥವಾ ಆಢ್ಯರ ಇಂಥ ಕೀಳು ಮಟ್ಟದ ಶ್ಯಾಲಕರು ಹೆಚ್ಚಿನ ಪ್ರೇರಣೆ ಕೊಟ್ಟಿರಬಹುದು. ಒಟ್ಟಿನಲ್ಲಿ ತನ್ನ ಮನೆಯ ಹೆಣ್ಣನ್ನು ವ್ಯಭಿಚಾರಕ್ಕೆ ತೊಡಗಿಸಿ ಜೀವನ ಮಾಡುವವನು **ಸಾಲಾ** ಆದನು. ಆದರೆ ಹಿಂದಿಯಲ್ಲಿ **ಸಾಲಾ** ಶಬ್ದ ಹೆಂಡತಿಯ ಸೋದರ

ಎಂಬ **ಸಾಚಾ** ಅರ್ಥದಲ್ಲಿಯೂ ಬಳಸಲ್ಪಡುತ್ತದೆ; ಉರ್ದುವಿನಲ್ಲಿಯೂ ಹಾಗೆಯೇ ಎಂಬುದನ್ನು ಮರೆಯಬಾರದು.

ಹಿಂದೀ ದ್ವೇಷದ ಕೇಂದ್ರವಾದ ಮದ್ರಾಸಿನಲ್ಲಿಯೂ ಕೇಳಿಬರುವ ಇನ್ನೊಂದು ಹಿಂದುಸ್ತಾನಿ ಬೈಗಳು **ಭಡವಾ** ಎಂಬುದು. ಅದರ ಅರ್ಥ ನೇರವಾಗಿಯೇ ಭಗಿನಿಯ ವ್ಯಭಿಚಾರಕ್ಕೆ ದಲಾಲನಾಗಿ ಮತ್ತು ಅವಳ ನಾಚು, ಹಾಡುಗಳಿಗೆ ಪಕ್ಕವಾದ್ಯಗಾರನಾಗಿ ಬದುಕುವವನೆಂದು.

**ಮ್ಲೇಚ್ಛ** ಎಂಬೊಂದು ಪದ ಪುರಾತನ ಭಾರತದಲ್ಲಿ ವಿದೇಶಿ ವಿಧರ್ಮೀಯರಿಗೆ ಅನ್ವಯವಾಗಿ ನಾನಾ ತರಹದ ಅಬ್ರಹ್ಮಣ್ಯ ಅರ್ಥಗಳ ಸಂಬಂಧವನ್ನು ಪಡೆದಿತ್ತು. ಆದರೆ **ಮ್ಲೇಚ್ಛ** ಶಬ್ದದ ನಿಜವಾದ ಅರ್ಥವೇನು ? ಮಲ, ಮಲಿನಕ್ಕೇನಾದರೂ ಸಂಬಂಧವುಂಟೆ ? ಕೊಳಕು ಜನ ಅಂತ ? ಅಂಥಾದ್ದೇನೂ ಇಲ್ಲ. ಪಾಣಿನೀಯ ಧಾತು ಪಾಠದಲ್ಲಿ ''ಮ್ಲೇಚ್ಛ ಅವ್ಯಕ್ತೇ ಶಬ್ದೇ'' ಎಂದಿದೆ. ಅಸ್ಪಷ್ಟ ಶಬ್ದ ಅಂದರೆ ನಮಗರ್ಥವಾಗದ ಮಾತು ಆಡುವವನು **ಮ್ಲೇಚ್ಛ**; ಅರ್ಥಾತ್ ಅಪರಿಚಿತ ಭಾಷೆಯಾಡುವವನಿಗೆ ಕಾಲಾಂತರದಲ್ಲಿ ಅನೇಕ ಅಕಲ್ಯಾಣ ಗುಣಗಳನ್ನು ಆರೋಪಿಸಲಾಯಿತು. ಪರಭಾಷೆಗಳನ್ನಾಡುವವರ ಬಗ್ಗೆ ಈ ಪೂರ್ವಗ್ರಹ ಸನಾತನಿ ಸಂಸ್ಕೃತದವರಿಗೇ ಮೀಸಲಾದದ್ದಲ್ಲ. ಇಂಗ್ಲೀಷಿನ barbarous ಶಬ್ದಕ್ಕೆ ಪಾಮರ, ಅನಾಗರಿಕ, ಅಸಂಸ್ಕೃತವಾದಿ ಅಸಂಖ್ಯ ದುರ್ಗುಣಗಳು ತಗುಲಿಕೊಂಡಿವೆಯಲ್ಲವೆ ? ಅದರ ಮೂಲ ಗ್ರೀಕ್ barbaros ಉಗ್ಗುವ ಮಾತು ಅಥವಾ ಅರ್ಥವಾಗದ ಭಾಷೆ ಆಡುವುದು ಎಂಬ ಅರ್ಥವನ್ನೇ ಕೊಡುತ್ತದೆ. ಬಹುಶಃ ಸಂಸ್ಕೃತದ ಮೂರ್ಖ, ಅಸಂಸ್ಕೃತ ಎಂಬರ್ಥದ **ಬರ್ಬರ** ಶಬ್ದ ಕೂಡ ಈ barbaros ನ ಸಂಬಂಧಿಕನೇ ಇರಬೇಕು.

೫೩

**ಬರಗಾಲಕ್ಕೆ** ಸಂಸ್ಕೃತದಲ್ಲಿ **ದುರ್ಭಿಕ್ಷ** ಎಂಬ ಶಬ್ದ ಇದೆ. ಇದು ದೇಶದ ಬಹುತೇಕ ಭಾಷೆಗಳಲ್ಲಿ ಚಾಲ್ತಿಗೆ ಬಂದಿದೆ. **ದುರ್ಭಿಕ್ಷ** ಎಂದರೆ **ಭಿಕ್ಷೆ ಸಿಗುವುದು** ಕಷ್ಟವಾದ ಕಾಲ. ಬೆಳೆ ಬೆಳೆಯದೇ ಇದ್ದರೆ ಬೇಡುವವರಿಗೆ ಕಾಳು ಎಲ್ಲಿಂದ ? ಸರಿಯೇ. ಆದರೆ **ದುಷ್ಕಾಲವನ್ನು** ಸೂಚಿಸಲು ಇದೊಂದು ವಿಪರೀತ ಅಂದರೆ ಉಲ್ಟಾ ಪದವೆಂದು ಅನಿಸುವುದಿಲ್ಲವೇ ? ಅದು ನಮ್ಮ ಸಂಸ್ಕೃತಿಯ ಒಂದು ವೈಶಿಷ್ಟ್ಯವನ್ನು ಸೂಚಿಸುತ್ತದೆಂದು ನನಗನಿಸುತ್ತದೆ. **ಭಿಕ್ಷ್** ಧಾತು ಋಗ್ವೇದದಷ್ಟು ಪ್ರಾಚೀನವಾದರೆ **ದುರ್ಭಿಕ್ಷ** ಅದಕ್ಕಿಂತ ಬಹಳ ಅರ್ವಾಚೀನ ಎನ್ನಲಾಗದ ತೈತ್ತಿರೀಯ ಆರಣ್ಯಕದಲ್ಲಿ ಕಾಣಿಸಿಕೊಂಡಿದೆ. **ಭಿಕ್ಷ್** ಧಾತು ಬಹುಶಃ ಇಂಗ್ಲೀಷ್‌ನ begಗೆ ದೂರದ ಸಂಬಂಧಿಯಾಗಿರಬಹುದಾದರೂ ಯುರೋಪಿನಲ್ಲಿ ದುರ್ಭಿಕ್ಷದಂಥ ಪದ ಹುಟ್ಟದಿರುವುದು ಅರ್ಥವತ್ತಾಗಿದೆ.

ಬೇಡಿ ತಿನ್ನುವುದು ನಮ್ಮ ದೇಶದಲ್ಲಿಯೂ ಇತರ ದೇಶಗಳಲ್ಲಿಯಂತೆ ಕೀಳುತನವೆಂಬ ತಿಳಿವಳಿಕೆ ಇದ್ದರೂ ಇಲ್ಲಿ ಅದು ಕೆಲವರ ಮಟ್ಟಿಗಾದರೂ ಗೌರವಾರ್ಹ ವೃತ್ತಿಯಾಗಿತ್ತು. ಸ್ವತಃ ಶಿವನೇ **ಭಿಕ್ಷಾಟನೆ** ಮಾಡಿದ್ದಾನೆ. ಗೃಹಸ್ಥ ಧರ್ಮದಿಂದ ನಿವೃತ್ತನಾಗಿ ಸಂನ್ಯಾಸಾಶ್ರಮ ವಹಿಸಿದ ಬ್ರಾಹ್ಮಣನಿಗೆ ಭಿಕ್ಷಾವೃತ್ತಿ ಅನಿವಾರ್ಯವಾಗಿತ್ತು. ಆಗಿನ ಋಷ್ಯಾಶ್ರಮಗಳ, ಮಹಾವಿದ್ಯಾಪೀಠಗಳ ವಿದ್ಯಾರ್ಥಿಗಳಿಗೆ ಬೆಳಗಿನ ಹೊತ್ತು **ಭಿಕ್ಷೆಯನ್ನು** ಸುತ್ತಲ ಹಳ್ಳಿಗಳಲ್ಲಿ

ತಿರಿದು ತಂದು ಗುರುಗಳಿಗೆ ಒಂದಂಶವಿತ್ತು ತಾವು ಉಣ್ಣುವುದು ನಿಯಮವಾಗಿತ್ತೆಂದು ಉಪನಿಷತ್ತಿನ ಕಥೆಗಳಿಂದಲೇ ವೇದ್ಯವಾಗುತ್ತದೆ. ಉಪನಯನ (= ಗುರುಗಳಲ್ಲಿಗೆ ಒಯ್ದು ಬಿಡುವುದು) ಆದ ಕೂಡಲೇ ಬ್ರಾಹ್ಮಣ ವಟು ಮೊತ್ತಮೊದಲು ತಾಯಿಯಿಂದಲೇ "**ಭವತಿ ಭೀಕ್ಷಾಂ ದೇಹಿ**" ಎಂದು ಬೇಡುವುದು ಇಂದಿಗೂ ಸಂಪ್ರದಾಯವಾಗಿದೆ. ಉಪನಯನದಲ್ಲಿ ಕೊಡುವ ಉಡುಗೊರೆಯೆಲ್ಲ **ಭಿಕ್ಷ**ವೆಂದೇ ಹೆಸರಿಸಿಕೊಳ್ಳುತ್ತದೆ.

ಮುಂದೆ ಬೌದ್ಧ–ಜೈನ ಧರ್ಮಗಳ ಕಾಲದಲ್ಲಿ ತಾರುಣ್ಯದಲ್ಲೇ ಸಂನ್ಯಾಸ ಸ್ವೀಕರಿಸಿದ ವಿರಕ್ತರು **ಭಿಕ್ಷು**ಗಳು ಎಂಬ ಗೌರವದ ಬಿರುದನ್ನೇ ಹೊಂದಿದರು. ಕ್ಷತ್ರಿಯನಾಗಿ ಹುಟ್ಟಿದರೂ ಸ್ವತಃ ಬುದ್ಧನೇ **ಭಿಕ್ಷು**ವಾದ. ಅನಂತರ ವೈದಿಕ ಧರ್ಮದಲ್ಲಿಯೂ ತಾರುಣ್ಯದಲ್ಲಿ ಸಂನ್ಯಾಸ ಸ್ವೀಕರಿಸುವ ರೂಢಿ ಹುಟ್ಟಿತು. ಅವರೂ **ಭಿಕ್ಷು**ಗಳಾದರು.

ತತ್ಸಮಾನವಾಗಿ ಯುರೋಪಿನಲ್ಲಿ ಕೂಡ mendicant ಎಂಬ ಭಿಕ್ಷಾಜೀವಿ ಸಾಧುಗಳು (ಲ್ಯಾಟಿನ್ mendicare = ಭಿಕ್ಷುಕ) ಕಾಣಿಸಿಕೊಂಡರೂ ಈ ದೇಶದ ಭಿಕ್ಷು–ಸಂನ್ಯಾಸಿಗಳಿಗೆ ಅವರೆಂದೂ ಸಂಖ್ಯೆಯಲ್ಲಾಗಲಿ ಮನ್ನಣೆಯಲ್ಲಾಗಲಿ ಸಮಾನರಾಗಲಿಲ್ಲ. ನಮ್ಮಲ್ಲಿ ಹೊಟ್ಟೆಪಾಡಿಗಾಗಿ ಬಿಕ್ಕೆ ಬೇಡುವವರು **ಭಿಕ್ಷುಕ**ರೆಂದೂ ವಿರಕ್ತ ಭಿಕ್ಷುಕರು **ಭಿಕ್ಷು**ಗಳೆಂದೂ ಪದಭೇದವಾಯಿತು.

**ಭಿಕ್ಷೆ** ಎಂದರೆ ಮುಂದೆ ಯಾವುದೇ ಧಾನ್ಯವನ್ನು ಕೊಡುವುದು ತೆಗೆದುಕೊಳ್ಳುವುದೆಂದು ಎಣಿಸಲ್ಪಟ್ಟರೂ ಅದಕ್ಕೂ ಹಿಂದೆ ಭಿಕ್ಷುಗಳಾದವರು **ಬೇಯಿಸಿದ ಆಹಾರ**ವನ್ನು ಮನೆ ಮನೆಯಿಂದ ಸಂಗ್ರಹಿಸಿ ಉಣ್ಣುವುದಾಗಿತ್ತು. ಆದರೆ ಕಾಲಾಂತರದಲ್ಲಿ ವೈದಿಕ ಪರಂಪರೆಯ ಸಂನ್ಯಾಸಿಗಳಂತೂ "ಕರತಲ ಭಿಕ್ಷಾ ತರುತಲವಾಸ"ದ ಪುರಾತನ ವ್ರತವನ್ನು ಕೈಬಿಟ್ಟು ಮಠಮಾನ್ಯ ಕಟ್ಟಿಕೊಂಡು ಆಸ್ತಿಪಾಸ್ತಿಗಳಿಸಿ ನೆಲೆ ನಿಂತು ಸಮೀಚೀನವಾಗಿ ಅಡುಗೆ ಮಾಡಿಸಿಕೊಂಡು ಪಟ್ಟಾಗಿ ಭೋಜನ ಮಾಡತೊಡಗಿದರು ; ಆದರೂ ಅವರ ಊಟಕ್ಕೆ **ಭಿಕ್ಷೆ**ಯೆಂದೇ ಹೆಸರು ಉಳಿದಿದೆ. ಅವರಿಗಾಗಿ ಅಟ್ಟ ಸಣ್ಣಕ್ಕಿಯ ವಿಶಿಷ್ಟ ಶುಭ್ರಾನ್ನವನ್ನು **ಪ್ರಾಪಣ** ಎಂದು ಹೇಳುವುದನ್ನು ನಾನು ಕೇಳಿದ್ದೇನೆ. **ಪ್ರಾಪಣ** ಎಂದರೆ (ಭಿಕ್ಷೆಯಲ್ಲಿ) ದೊರಕಿದ್ದು. ಕೈ ನೀಡಿ ಪಡೆದದ್ದು (ಕರತಲ ಭಿಕ್ಷೆ) ವಿಶೇಷವಾಗಿ ಮಾಡಿಸಿದ ಅನ್ನವಲ್ಲ. ಹೀಗೆ ತಿರುಳು ಅಳಿದರೂ ಹೆಸರಲ್ಲಿ ಪುರಾತನ ಪರಂಪರೆ ಉಳಿದುಕೊಂಡಿದೆ.

ವಿದ್ಯಾರ್ಥಿಗಳು ಭಿಕ್ಷಾಜೀವಿಗಳಾಗಿ ಜೀವನನಿರ್ವಾಹ ಮಾಡುವ ಪರಂಪರೆಯನ್ನೇ ಅನುಸರಿಸಿ ಎಂಬಂತೆ **ವಾರಾನ್ನ**ದ ಒಂದು ಪದ್ಧತಿ ಈಚೆಗಿನವರೆಗೆ ಉನ್ನತ ವಿದ್ಯಾಲಯಗಳಿರುವ ಊರುಗಳಲ್ಲಿ ನಡೆದುಬರುತ್ತಿತ್ತು. ವಾರಕ್ಕೊಂದು ದಿನ ಅನುಕೂಲವಂತ ಮನೆಯಲ್ಲಿ ಊಟ ಮಾಡುತ್ತ ಬಡ ವಿದ್ಯಾರ್ಥಿಗಳು ವಿದ್ಯಾರ್ಜನೆ ಮಾಡುವುದು ವಾರಾನ್ನ. ಪುರಾತನ ಕಾಲದ ಹಾಗೆಯೇ ಮನೆ ಮನೆಯಲ್ಲಿ ಓಗರ ಮೇಲೋಗರಗಳನ್ನು ಹಾಕಿಸಿಕೊಂಡು ಉಣ್ಣುವುದಕ್ಕೆ ಒಂದು ಸರಸ ಶಬ್ದ ಮಹಾರಾಷ್ಟ್ರ ಹಾಗೂ ಉತ್ತರ ಕರ್ನಾಟಕದಲ್ಲಿ ಇದೆ. ಅದೇ **ಮಧುಕರೀ. ಮಧುಕರ** ಎಂದರೆ **ಜೇನುದುಂಬಿ.** ಹೂ–ಹೂವಿನಿಂದ ತುಂಬಿ ಮಧು(ಜೇನು)ವನ್ನು ಸಂಗ್ರಹಿಸುವಂತೆ ಇವರು ಮನೆ ಮನೆಯಿಂದ ಕೂಳು ಶೇಕರಿಸಿ ಉಂಡು ಬಾಳುತ್ತಾರೆ. ಬಹುತರವಾಗಿ ಇವರಿಗೆ ಸಿಗುವ ಕದನ್ನಕ್ಕೆ ಎಂಥ ಸವಿ ಹಸರು, ಇದನ್ನು ಸೃಷ್ಟಿಸಿದಾತ ಕವಿಯೇ ಇರಬೇಕು. ದಾಸರು ಕೂಡ "ಮಧುಕರವೃತ್ತಿ ನಮ್ಮದು" ಎಂದುಕೊಂಡಿದ್ದಾರೆ.

ಭಿಕ್ಷೆಯೆಂಬ ಅರ್ಥ ಕೊಡುವ ಕನ್ನಡದ ಇನ್ನೊಂದು ಪದ **ಗೋಪಾಳ.** ''ಗೋಪಾಳ ಬುಟ್ಟೀ ಹಿಡಿಯುವುದಕ್ಕೆ ಭೂಪತಿಯಂತೆ ನಾಚುತಲಿದ್ದೆ'' ಎಂದು ಪುರಂದರದಾಸರು ಹೇಳುತ್ತಾರೆ. ಗೋಪಾಳ ಬುಟ್ಟಿ ಎಂದರೆ ಭಿಕ್ಷಾಪಾತ್ರೆ. ಅಥವಾ ಭಿಕ್ಷೆಯ ಬುಟ್ಟಿ. ಕನಕದಾಸರೂ **ಗೋಪಾಳದ** ಮಾತು ಹೇಳುತ್ತಾರೆ. ಅದಕ್ಕಿಂತ ಹಿಂದೆ ಈ ಶಬ್ದ ಕನ್ನಡ ಸಾಹಿತ್ಯದಲ್ಲಿ ಪ್ರಯೋಗವಾಗಿಲ್ಲವೆಂದು ತೋರುತ್ತದೆ. ಆದರೆ **ಗೋಪಾಲನಿಗೂ** ಭಿಕ್ಷಕ್ಕೂ ಏನು ಸಂಬಂಧ? **ಗೋಪಾಲಕೃಷ್ಣ** ಇನ್ನೂ ಅನೇಕ ಕೆಲಸಗಳನ್ನು ಮಾಡಿರಬಹುದಾದರೂ ಭಿಕ್ಷೆ ಎತ್ತಿದವನಲ್ಲ. ತಿರುಪತಿ ವೆಂಕಟೇಶನ ಹೆಸರಿನಲ್ಲಿ ಭಿಕ್ಷೆ ಎತ್ತುತ್ತಾರೆಯೇ ಹೊರತು ಗೋಪಾಲನ ಹೆಸರಿನಲ್ಲಿ ಅಲ್ಲ. ಈ ಶಬ್ದ ಪ್ರಾಯಶಃ ತೆಲುಗಿನಿಂದ ಬಂದಿರಬೇಕು. ಚಾರ್ಲ್ಸ್ ಫಿಲಿಪ್ಪನ ತೆಲುಗು–ಇಂಗ್ಲೀಷ್ ಕೋಶದ ಪ್ರಕಾರ **ಗೋಪಾಳಮು** (ಗೋಪಾಲ ಅಲ್ಲ) ಎಂದರೆ **ತುತ್ತು** (ಕವಳಮು). ''ಗೋಪಾಳಮೆತ್ತುಟ'' ಎಂದರೆ ಭಿಕ್ಷಾನ್ನ ಎತ್ತುವುದು. ದಾಸರಿ ಜನಾಂಗದ ಜನ ''**ಗೋಪಾಳ** ಭಿಕ್ಷ'' ಎನ್ನುತ್ತ ಮನೆಯ ಮುಂದೆ ಭಿಕ್ಷಕ್ಕೆ ನಿಲ್ಲುತ್ತಾರೆ ಎಂದು ಫಿಲಿಪ್ ಹೇಳುತ್ತಾನೆ. ಉತ್ತರ ಕರ್ನಾಟಕದಲ್ಲಿ ಗೊಲ್ಲರೂ ಬಡ ಬ್ರಾಹ್ಮಣರೂ ಗೋಪಾಲನೆಯ ನೆವದಿಂದ ಕುಯ್ಲಿನ ಸಮಯದಲ್ಲಿ ಧಾನ್ಯಕ್ಕಾಗಿ ರೈತರ ಹತ್ತಿರ ಗೋಪಾಳ ಬುಟ್ಟಿಯೆಂಬ ವಿಶಿಷ್ಟ ಬುಟ್ಟಿಯನ್ನಿಟ್ಟು ಹೋಗುತ್ತಾರೆಂದು ತಿಳಿಯುತ್ತದೆ.

**ಗೋಪಾಳ** ಶಬ್ದಕ್ಕೆ ನಿಜವಾಗಿ **ಭಿಕ್ಷೆ**ಯಲ್ಲ. **ಭಿಕ್ಷಾಪಾತ್ರ**ವೆಂದೇ ಅರ್ಥವಿರಬೇಕು. **ಪಾಲಾ, ಪಾಲವೀ**, ಪಾಲ, ಪಾಲಿ, ಪಾಳೇಂ ಶಬ್ದಗಳಿಗೆ ಹಿಂದಿ, ಸಂಸ್ಕೃತ, ಮರಾಠಿಗಳಲ್ಲಿ ಮಣ್ಣಿನ ಪಾತ್ರೆ, ಲೋಹಪಾತ್ರೆ, ಮರಿಗೆ ಇತ್ಯಾದಿ ಅರ್ಥಗಳಿವೆ.

**ಗೋಪಾಳ** ಶಬ್ದಕ್ಕೆ ಉತ್ತರ ಕರ್ನಾಟಕದಲ್ಲಿ ಕೌತುಕದ ಇನ್ನೊಂದು ಅರ್ಥ ಸಂಪನ್ನವಾಗಿದೆ. **ಲಂಚ**ವನ್ನು **ಗೋಪಾಳ** ಎಂದು ವ್ಯಂಗ್ಯವಾಗಿ ಕರೆಯುತ್ತಾರೆ. ಹಣ **ಕಬಳಿಸು**ವುದರಿಂದ ಲಂಚಕ್ಕೆ **ಗೋಪಾಳ** (ತೆಲುಗು ಅರ್ಥದಲ್ಲಿ) ಎಂದು ಹೆಸರು ಬಿದ್ದಿರಬಹುದು. **ಲಂಚ**ವನ್ನು ತಿನ್ನುವುದಲ್ಲವೆ? ಸ್ವಾರಸ್ಯವೆಂದರೆ, ಇಂಗ್ಲೀಷಿನಲ್ಲಿ ಲಂಚಕ್ಕೆ ಇರುವ ಪದವಾದ bribeಗೆ ಮೂಲ ಫ್ರೆಂಚ್ ಭಾಷೆಯಲ್ಲಿ **ರೊಟ್ಟಿ ತುಂಡು** ಎಂದು ಅರ್ಥವಿರುವುದು. ಇದು **ಗೋಪಾಳ**ದ ಅರ್ಥವಾದ **ಕವಳ**ಕ್ಕೆ ಸಮಾನವಾಗಿದೆ. ಶಬ್ದಗಳು ಬೇರೆಯಾಗಿರಬಹುದು; ಆದರೆ ಐಡಿಯಗಳು ದೇಶಾತೀತವಾಗಿವೆ.

೫೪

ತೆಂಗಿನ ಕಾಯಿಯನ್ನು ಒಡೆದರೆ ಎರಡು ಹೋಳಾಗುತ್ತದೆ. ಅವುಗಳಲ್ಲಿ ಒಂದು **ಹೆಣ್ಣು** ಹೋಳು; ಇನ್ನೊಂದು ಸ್ವಾಭಾವಿಕವಾಗಿ **ಗಂಡು** ಹೋಳು. ಈ ಹೆಸರುಗಳು ಸುಮ್ಮನೆ ಬಂದಿಲ್ಲ; ಕಾಯಿಯಲ್ಲಿ ಕಣ್ಣು ಅಥವಾ **ತೂತು** ಇರುವ ಭಾಗ **ಹೆಣ್ಣು**. ನಾವು ಎಷ್ಟೇ ಲೈಂಗಿಕ ಮಡಿವಂತಿಕೆಯನ್ನು ಆಚರಿಸಿದರೂ ಭಾಷೆಯಿಂದ ಲೈಂಗಿಕತೆಯನ್ನು ಉಚ್ಚಾಟನೆ ಮಾಡಲಾಗುವುದಿಲ್ಲ. ಗ್ರಾಮ್ಯದಲ್ಲಿ ಮಾತ್ರವಲ್ಲ, ನಾಗರಿಕ ಮಾತಿನಲ್ಲಿ ಕೂಡ ಅದು ನುಸುಳಿಯೇ ನುಸುಳುತ್ತದೆ. **ತೂತು** ಇರುವುದು **ಹೆಣ್ಣು** ಎಂಬುದು ಶರೀರ ರಚನೆಯಲ್ಲಿ ಪ್ರತ್ಯಕ್ಷವಾದ ತಥ್ಯ: ಅದು ತೆಂಗಿನ ಕಾಯಿಯ ಹೋಳಿಗೆ ಅನ್ವಯಿಸಿದಾಗ ಅದರ ಮೂಲ ಅಶ್ಲೀಲತ್ವ ನಮ್ಮ ಗಮನಕ್ಕೆ ಬಾರದಷ್ಟು ಆಳಕ್ಕೆ ಹುಗಿಯಲ್ಪಟ್ಟಿದೆ.

ನಮ್ಮ ಮಡಿವಂತ ಮನೆಯಲ್ಲಿ ಬಲು ಔಚಿತ್ಯ ಪ್ರಜ್ಞೆಯ ನನ್ನ ತರುಣ ಅಕ್ಕಂದಿರು ಕಿವಿಯ ಆಭರಣಗಳನ್ನು ತೊಳೆಯುವಾಗ ''ನನ್ನ ಕೊಪ್ಪಿನ **ಗಂಡು ತಿರುಗಣಿ** ಸವೆದು ಹೋಗಿದೆ'' ಎನ್ನುತ್ತಿದ್ದರು. ತಿರುಗಣಿಯಲ್ಲಿ ತೂತಿನೊಳಗೆ ಅಥವಾ ಅಂಡೆಯೊಳಗೆ ಹೋಗಿ ಕೂಡ್ರುವ ಭಾಗ **ಗಂಡು.** ಈ ಆಭರಣಗಳ **ಗಂಡು, ಹೆಣ್ಣು** ಭಾಗಗಳನ್ನು ಹೇಳುವಾಗ ಕೇವಲ ಗಂಡು ಹೆಣ್ಣಿನ ಅಂಗ ವೈಶಿಷ್ಟ್ಯಗಳನ್ನು ಕುರಿಯುವುದಿಲ್ಲ; ಗುಪ್ತವಾದ ಲೈಂಗಿಕ ಸಂಭೋಗಕ್ರಿಯೆಯನ್ನೂ ಸೂಚಿಸುತ್ತಿದ್ದೇವೆ ಎಂದು ಅವರಿಗೆ ಹೊಳೆಯುತ್ತಿರಲೇ ಇಲ್ಲ. ಯಾವುದಾದರೂ ಚಿಕಿತ್ಸಕ ಬುದ್ಧಿಯ ಮಗು ಈ ಅಂಡೆ ತಿರುಗಣಿಗಳಿಗೆ ಗಂಡು ಹೆಣ್ಣೆಂಬ ಹೆಸರು ಯಾಕೆ ಎಂದು ಕೇಳಿದ್ದರೆ ಅವರು ತುಂಬ ಪೇಚಿಗೆ ಸಿಕ್ಕಿಕೊಳ್ಳಬಹುದಿತ್ತು.

ಇದು ನಮ್ಮ ಭಾಷೆಗೇ ಸೀಮಿತವಲ್ಲ ಎನ್ನುವುದನ್ನು ಯಾವುದೇ ಒಳ್ಳೆಯ ಇಂಗ್ಲೀಷ್ ಶಬ್ದಕೋಶದಲ್ಲಿ ನೀವು screw ಎಂಬ ಶಬ್ದದ ಕೆಳಗೆ ನೋಡಿ ಕಂಡುಕೊಳ್ಳುವಿರಿ. ಅಲ್ಲಿಯೂ male screw (ಗಂಡು ಇಸ್ಕ್ರೂ) ಮತ್ತು female screw (ಹೆಣ್ಣು ಇಸ್ಕ್ರೂ) ಇವೆ. ಅಲ್ಲಿಯೂ **ಅಂಡೆಯೊಳಗೆ** ಹೋಗಿ ಕೂಡ್ರುವ ಭಾಗ ಗಂಡು, ಯಾವುದೇ ಯಂತ್ರ ಭಾಗದಲ್ಲಿ ಈ ಇಸ್ಕ್ರೂ ಕೂಡಿಸಲು ಮಾಡಿದ ತಿರುಗಣಿ (thread) ಉಳ್ಳ **ತೂತು** ಹೆಣ್ಣು ಇಸ್ಕ್ರೂ. ಹೋಳಿಗೆ ಮಾಡುವುದಕ್ಕೆ **ಕಣಕ** ಮತ್ತು **ಹೂರಣ** ಬೇಕಾಗುತ್ತವಲ್ಲ. ಎರಡನ್ನೂ ಅಂದಾಜಿನ ಅಳತೆಯಿಂದ ಬೇರೆ ಬೇರೆ ಅಣಿಗೊಳಿಸುತ್ತಾರೆ. ಹೋಳಿಗೆ ಮಾಡಿ ಮುಗಿಸುವಾಗ ಸ್ವಲ್ಪ ಕಣಕವಾದರೂ ಮಿಕ್ಕುಳಿಯುತ್ತದೆ, ಹೂರಣವಾದರೂ ಉಳಿದುಬಿಡುತ್ತದೆ. ಮನೆಯಲ್ಲಿ ಯಾರಾದರೂ ಬಸಿರಿ ಇದ್ದರೆ ಹೋಳಿಗೆ ಶಕುನ ಪ್ರಕಾರ ಅಜ್ಜಮ್ಮ ಭವಿಷ್ಯ ಹೇಳುತ್ತಾರೆ – ಹೂರಣ ಉಳಿದರೆ ಗಂಡು, ಕಣಕ ಉಳಿದರೆ ಹೆಣ್ಣು ಮಗು ಹುಟ್ಟುತ್ತದೆ. **ಹೂರಣ** ಕಣಕದ ಒಳಗೆ ಹೋಗುವುದರಿಂದ (ಹೂರಣ ಎಂದರೇ ತುಂಬಿಸುವುದು) **ಗಂಡು. ಕಣಕ** ಹೂರಣವನ್ನು ಒಳಗೆ ತೆಗೆದುಕೊಳ್ಳುವುದರಿಂದ ಅದು **ಹೆಣ್ಣು.** ಲೈಂಗಿಕ ಕ್ರಿಯೆಯನ್ನೇ ಆಧರಿಸಿದ ಶಕುನವಿದು, ಅಶ್ಲೀಲವೆಂದು ಗಣಿಸಲ್ಪಟ್ಟಿಲ್ಲ!

**ಯೋನಿ** ಶಬ್ದಕ್ಕೆ ಸಂಸ್ಕೃತದಲ್ಲಿ ಏನು ಅರ್ಥವೆಂದು ಎಲ್ಲರಿಗೂ ಗೊತ್ತಿದೆ. ಅದು ಹೆಣ್ಣಿನ ಗುಪ್ತಾಂಗ. ಅದು ಅಶ್ಲೀಲವಾಗಿರಬೇಕಿತ್ತು. ಆದರೆ ಹಾಗಿಲ್ಲ. ವಿಷ್ಣು ಸಹಸ್ರನಾಮ ಎಂಬ ಪವಿತ್ರ ಸ್ತೋತ್ರದಲ್ಲಿ ಪರಮಾತ್ಮನಿಗೆ **ವಿಶ್ವಯೋನಿ** ಎಂಬ ಹೆಸರಿದೆ. ಎಲ್ಲವೂ ಪರಮಾತ್ಮನಲ್ಲಿಂದ ಹುಟ್ಟುತ್ತವೆ ಎಂಬುದಕ್ಕಾಗಿ ಆತ ವಿಶ್ವಯೋನಿ. ಹೆಂಗಸರೇ ತುಂಬಿರುವ ಸಭೆಗಳಲ್ಲಿ ಬ್ರಹ್ಮಚಾರಿಗಳೇ ಆದ ಸ್ವಾಮಿಗಳು ಸಂಕೋಚವಿಲ್ಲದೆ ಪಾಪಿಗಳು **ನೀಚಯೋನಿಯಲ್ಲಿ** ಹುಟ್ಟುತ್ತಾರೆ ಎಂದು ವ್ಯಾಖ್ಯಾನಿಸುತ್ತಾರೆ. ಎಂಭತ್ತನಾಲ್ಕು ಲಕ್ಷ **ಯೋನಿಗಳಲ್ಲಿ** ಹುಟ್ಟಿಬಂದು ಬೆಂಡಾಗಿದ್ದೇನೆ ಎಂದು ದಾಸರೂ ವಚನಕಾರರೂ ಹಳ ಹಳಿಸುತ್ತಾರೆ. ವೇದದಲ್ಲಿ ಹೆಣ್ಣು ದೇವತೆಯಾದ ಆಂಭ್ರಣಿ ''ಮಮ **ಯೋನಿರಪ್ಸು** ಅಂತಃಸಮುದ್ರೇ'' – ಸಮುದ್ರದೊಳಗೆ ನನ್ನ **ಯೋನಿ** ಜನ್ಮಸ್ಥಾನ ಇದೆ – ಎನ್ನುತ್ತಾಳೆ. **ಯೋನಿ** ಶಬ್ದಕ್ಕೆ ಜಾತಿ, ಹುಟ್ಟುವ ಸ್ಥಳ, ಆಶ್ರಯ ಸ್ಥಾನ, ನಿವಾಸ, ಕುಲ ಇತ್ಯಾದಿ ಹತ್ತಾರು ಅರ್ಥಗಳು ವೇದಕಾಲದಿಂದ ಮಹಾಭಾರತದ ಕಾಲದವರೆಗೂ ಬೆಳೆದು ಬಂದಿವೆ. ಅದಕ್ಕೆ ಗರ್ಭಕೋಶವೆಂಬ ಅರ್ಥವೂ ಹೇಳಲ್ಪಟ್ಟಿದೆ. ಆದರೆ ಅದರ ಮೂಲ ಅರ್ಥ ಹೆಣ್ಣಿನ

ರಹಸ್ಯಾಂಗ ಎಂಬುದರಲ್ಲಿ ಸಂಶಯವೇ ಇಲ್ಲ, ಅದರ ನಿಷ್ಪತ್ತಿ ಕೂಡ ''ಯು'' ಜೋಡಿಸು, ಕೂಡಿಸು ಎಂಬ ಅರ್ಥದ ಧಾತುವಿನಿಂದಲೇ; ಆದ್ದರಿಂದ ಅದು ಗಂಡು ಹೆಣ್ಣಿನ ಜೋಡಣೆಯ ಸ್ಥಾನ ಎಂದೇ ಸಂಕೇತಿಸುತ್ತದಲ್ಲದೆ ಬರೀ ಬಾಹ್ಯ ಲಕ್ಷಣದ ಮೇಲಿಂದ ಬಂದ ಹೆಸರಲ್ಲ. ಈ ಮೂಲ ವಾಸ್ತವಿಕತೆಯಿಂದಲೇ ಉಳಿದೆಲ್ಲ ಅರ್ಥಗಳು ಕವಲೊಡೆದಿವೆ.

ವೇದಗಳಲ್ಲಿ ಕೆಲ ಮಂತ್ರಗಳನ್ನು ಕಂಡ ಒಬ್ಬ ಋಷಿಯ ಹೆಸರು **ಶುನಶ್ಶೇಪ**. (ಮುಂದೆ ಇವನೇ ವಿಶ್ವಾಮಿತ್ರನ ಅನುಗ್ರಹದಿಂದ ''ದೇವರಾತ'' ಎಂದಾದ). **ಶುನಶ್ಶೇಪ** ಎಂದರೆ ನಾಯಿ ಬಾಲ ಅಥವಾ ಅದರ **ಲಿಂಗ**. ಈ ಹೆಸರಿಡುವುದಕ್ಕೆ ಅವನಪ್ಪ ಅಜೀಗರ್ತನಿಗೆ ಏನೂ ಸಂಕೋಚವಾಗಲಿಲ್ಲ. ನಿಜ ಕೇಳಿದರೆ ಪ್ರಾಚೀನ ಕಾಲದಲ್ಲಿ ಲೈಂಗಿಕ ಅಂಗಗಳ ಬಗ್ಗೆಯಾಗಲಿ ಕ್ರಿಯೆಯ ಬಗ್ಗೆಯಾಗಲಿ ಸ್ವಲ್ಪವೂ ಜಿಹಾಸೆ ಇರಲಿಲ್ಲ. ವೇದಗಳಲ್ಲಿ ದೇವತೆಗಳಿಗೆ ಅರ್ಪಿಸಬೇಕಾದ ಪವಿತ್ರ ಸೋಮರಸವನ್ನು ಕಡೆದು ಸುರಿಸುವುದನ್ನೇ ಸಂಭೋಗಕ್ಕೆ ಹೋಲಿಸಿದ್ದಾರೆ. ಅನಂತರ ಕಾಲದಲ್ಲಿ ತಾನೇ ಲೈಂಗಿಕ ಅಂಗ ಮತ್ತು ಕ್ರಿಯೆ ಹೊಲಸು ಎಂಬ ಭಾವನೆ ಬೆಳೆದುಬಂದದ್ದು.

ಭಾಷೆಯಲ್ಲಿಯೂ ನಮ್ಮ ಪ್ರಜ್ಞೆಯಲ್ಲಿಯೂ ಲೈಂಗಿಕ ಕ್ರಿಯೆ ಆಳವಾಗಿ ಬಿಟ್ಟ ಬೇರು ತಲೆ ಎತ್ತುತ್ತಲೇ ಇರುತ್ತದೆ. **ಪುರುಷ** ಶಬ್ದವನ್ನೇ ನೋಡಿ. ಅದರ ಅರ್ಥ ಪುರಿಯೊಳಗೆ ಆಶ್ರಯ ಪಡೆದನು. ಇಲ್ಲಿ **ಪುರಿ** ಸ್ತ್ರೀ ಗುಹ್ಯಾಂಗವನ್ನು ಸೂಚಿಸುತ್ತದೆ. ಮತ್ತು ಶಯ ಎಂದರೆ ಅದರಲ್ಲಿ ಆಶ್ರಯ ಪಡೆದದ್ದೆಂದೂ ಅದರ ಅರ್ಥ **ಪುರುಷಲಿಂಗ**ವೆಂದೂ ಸಂಸ್ಕೃತಿಶಾಸ್ತ್ರಜ್ಞರು ತರ್ಕಿಸಿದ್ದಾರೆ. ಪರಮಾತ್ಮನಿಗೂ **ಪುರುಷ** ಎಂಬ ಅಭಿಧಾನ ಇದೆ ಎಂದು ಅರಿತಾಗ ದೈವತ ಕಲ್ಪನೆಯಲ್ಲಿ ಲೈಂಗಿಕ ಧ್ವನಿಯನ್ನು ಹೊರತು ಪಡಿಸುವುದು ಎಷ್ಟು ದುಷ್ಕರವೆಂದು ಅರ್ಥವಾದೀತು.

ಇಂಥ ದೂರಾನ್ವಯದ ಅರ್ಥ ನಿಷ್ಪತ್ತಿಯನ್ನು ಹೊರಗಿಟ್ಟರೂ ನಿತ್ಯ ಜೀವನದ ಮಾತಿನಲ್ಲಿ ಲೈಂಗಿಕತೆ ಅನಿರೀಕ್ಷಿತವಾಗಿ ಪ್ರಕಟವಾಗುವ ಸೋಜಿಗದ ಉದಾಹರಣೆಗಳು ಸಿಗುತ್ತವೆ. ಬಹಳ ಅಹಂಕಾರ ಬಂದವನಿಗೆ **ನೆತ್ತಿಯಲ್ಲಿ** ಕಣ್ಣು ಮೂಡಿದೆ ಎನ್ನುವುದುಂಟು. ಈ ನೆತ್ತಿಯಲ್ಲಿ ಕಣ್ಣಿರುವಿಕೆ ತೊಂಭತ್ತು ಪಾಲು ಪುರುಷೇಂದ್ರಿಯದ ನೆಟ್ಟಗಾದ ಸ್ಥಿತಿಯನ್ನೇ ಸೂಚಿಸುತ್ತದೆ. ಏಕೆಂದರೆ ಶೌರ್ಯ, ವೀರ್ಯ, ಪೊಗರು ಇವೆಲ್ಲವನ್ನು ಪುರುಷೇಂದ್ರಿಯದೊಡನೆ ತಳಕುಹಾಕುವುದು ಅನಾದಿಯಿಂದ ಭಾಷೆಯಲ್ಲಿ ಮೂಡಿ ಬಂದ ವಿಶೇಷ. ಸಂಸ್ಕೃತದ **ವೀರ** ಮತ್ತು **ವೀರ್ಯ** ಇಂಗ್ಲೀಷಿನ hero ಮತ್ತು virile (ವೀರ್ಯವಂತ, ಮಕ್ಕಳನ್ನು ಹುಟ್ಟಿಸುವ ಸಾಮರ್ಥ್ಯ) ಇತ್ಯಾದಿಗಳು ತಳದಲ್ಲಿ ಶೌರ್ಯವನ್ನು ಲೈಂಗಿಕತೆಗೇ ತಳಕುಹಾಕಿವೆ.

ಕನ್ನಡದ **ನೀರು** ಅನ್ನೇ ತೆಗೆದುಕೊಳ್ಳಿ. ಇದು ನಿಸರ್ಗದಲ್ಲಿರುವ ನೀರನ್ನೆಷ್ಟೋ ಅಷ್ಟೇ ಪುರುಷನ ಇಂದ್ರಿಯ ಬಿಂದುವನ್ನೂ ಸೂಚಿಸುತ್ತದೆ. ಅವನ ಮುಖದ **ನೀರು** ಇಳಿಸಿದೆ ಎನ್ನುವಲ್ಲಿ ನೀರು **ಬೆವರನ್ನು** ಸೂಚಿಸುತ್ತದೆ ಎಂದು ವಾದಿಸಬಹುದಾದರೂ ಅವನಲ್ಲಿ ಏನೂ **ನೀರಿಲ್ಲ** ಎನ್ನುವಲ್ಲಿ ಅದು ನಿಸ್ಸಂದೇಹವಾಗಿ ಲೈಂಗಿಕ ನೀರನ್ನೇ ಪ್ರತೀಕಿಸುತ್ತದೆ. ನೀರಿಲ್ಲದವನು ನಪುಂಸಕ.

ಜಜ

ಯಾವುದಾದರೂ ಚರ್ಚೆಯಲ್ಲಿ ಎದುರಾಳಿಯನ್ನು ಸೋಲಿಸಲು ಅತಿಯಾದ ತೇಜೋವಧೆಯ ಮಾತಾಡಿದವನಿಗೆ ಇದು **ಓವರ್–ಬೌಂಡ್ರಿ**ಯಾಯಿತು ಎನ್ನುತ್ತೇವೆ. ಇಂಗ್ಲೀಷರೊಡನೆ ಈ ದೇಶಕ್ಕೆ ಬಂದ ಕ್ರಿಕೆಟ್ ಆಟದ ಪರಿಭಾಷೆ ಇದು. ನಮ್ಮ ಜನರ ಮನಸ್ಸಿನ ಮೇಲೆ ಈ ವಿದೇಶಿ ಆಟ ಹಾಕಿದ ಛಾಪಿಗೆ ಈ ಮಾತು ಒಂದು ನಿದರ್ಶನ.

ಜನಪ್ರಿಯ ಕ್ರೀಡೆಗಳು ಯಾವಾಗಲೂ ಭಾಷೆಯ ಮೇಲೆ ತಮ್ಮ **ಅಚ್ಚೊತ್ತುತ್ತ** ಬಂದಿವೆ. ಕ್ರಿಕೆಟ್ಟು ಸಜ್ಜನಿಕೆಯ ಆಟ ಎಂದು ಪ್ರತೀತಿ. ಯಾರಾದರೂ ಎದುರಾಳಿಯನ್ನು ಸೋಲಿಸಲು ಅನ್ಯಾಯದ ಉಪಾಯವನ್ನು ಪ್ರಯೋಗಿಸಿದರೆ ಇಂಗ್ಲೀಷ್ ಜನ this is not cricket ''ಇದು **ಕ್ರಿಕೆಟ್ ಅಲ್ಲ**'' ಎನ್ನುತ್ತಾರೆ.

''ಹಿಡಿದ ಪಟ್ಟು ಬಿಡಲಿಲ್ಲ.'' ''ಚುನಾವಣೆಯಲ್ಲಿ ಅನೇಕ **ಪಟ್ಟು**ಗಳನ್ನು ಬಳಸಬೇಕಾಗುತ್ತದೆ'' ಎನ್ನುವಾಗ್ಗೆ ನಾವು ಉಪಯೋಗಿಸುವುದು ಕುಸ್ತಿ ಆಟದ ಒಂದು ತಾಂತ್ರಿಕ ಶಬ್ದ. ಪಟ್ಟು ಅಂದರೆ **ಹಿಡಿತ** – ಕುಸ್ತಿಯಲ್ಲಿ ಸ್ಪರ್ಧಿಗಳು ಎದುರಾಳಿಗಳನ್ನು ಹಣ್ಣುಮಾಡಲು ಬಳಸುವ ಉಪಾಯ. ಸೋತರೂ ಸೋಲೊಪ್ಪದ ಪೌರುಷ ಕೊಚ್ಚುವವರಿಗೆ ''ಬಿದ್ದರೂ **ಮೂಗಿಗೆ ಮಣ್ಣಾ**ಗಲಿಲ್ಲ'' ಎನ್ನುವಾಗಲೂ ಕುಸ್ತಿಯ ಪರಿಭಾಷೆ ಮಾತಿಗೆ ರಂಗು ಕೊಡುತ್ತದೆ. ಬಿದ್ದು ಮೂಗು ನೆಲ ಮುಟ್ಟಿದರೆ ಜಟ್ಟಿ ಸೋತಂತೆ. ಹೀಗೆ ''**ಮೂಗು ನೆಲಕ್ಕೆ ತಾಗಿಸಿದೆ**'' ಅಂದರೆ ಸೋಲೊಪ್ಪಿಕೊಂಡೆ ಎಂದರ್ಥ. ಇದು ದಕ್ಷಿಣ ಕನ್ನಡದ ನುಡಿಕಟ್ಟು.

ಚದುರಂಗದಾಟದ ನುಡಿಕಟ್ಟೂ ಸಾಮಾನ್ಯ ಅಭಿವ್ಯಕ್ತಿಯನ್ನು ರಂಜಿತಗೊಳಿಸುತ್ತದೆ. ಇಂಗ್ಲೀಷಿನ ಚೆಕ್ (check) ತಜ್ಜನ್ಯ ಪದಗಳು ಚದುರಂಗದಾಟದ ತಾಂತ್ರಿಕ ಪದಗಳು. ಪರ್ಷಿಯನ್ ಭಾಷೆಯಿಂದ ಅರಬ್ಬೀ ಮೂಲಕ **ಶಾಹ್** ಎಂಬುದು ಇಂಗ್ಲೀಷಿಗಾಗುವಾಗ **ಚೆಕ್** ಆಯಿತು. ತಡೆಯುವುದು ಎಂದು ಅದರ ಅರ್ಥ. ಪರ್ಷಿಯನ್ **ಶಾಹ್‌ಮಾತ್**‌ನಿಂದ (= ರಾಜ ಸತ್ತನು) ಇಂಗ್ಲೀಷಿನ **ಚೆಕ್‌ಮೇಟ್** ಅಪಭ್ರಂಶವಾಯಿತಂತೆ. ಚ ಂಗದ ಅರಸನನ್ನು ಅಲುಗದಂತೆ ಕಟ್ಟಿ ಹಾಕುವುದು **ಶಾಹ್‌ಮಾತ್**. ರಾಜಕೀಯ ಅಥವಾ ಸೈನಿಕ ಗತ್ತಿನಲ್ಲಿ ತಡೆ ಅಥವಾ ಅನಾಹುತವನ್ನು ಅನುಭವಿಸುವುದಕ್ಕೆ ಈ ಶಬ್ದ ಬಳಸುತ್ತಾರೆ. ಉತ್ತರ ಕರ್ನಾಟಕದಲ್ಲಿ **ಶಹಾ ಕೊಡುವುದು** ಎಂಬೊಂದು ನುಡಿಕಟ್ಟುಂಟು. ಯಾವುದಾದರೂ ಸಂದರ್ಭದಲ್ಲಿ ಹಳೆಯ ಒಂದು ಮಾತು ಇಲ್ಲವೆ ಘಟನೆಯನ್ನು ನೆನಪಿಸಿಕೊಟ್ಟು, ಹಂಗಿಸಿ, ಬಾಯಿ ಕಟ್ಟಿಸುವುದೇ **ಶಹಾ ಕೊಡುವುದು**. ಎದುರಾಳಿಗೆ ''ನೋಡು, ನಿನ್ನ ಅರಸನನ್ನು ಕಟ್ಟಿಹಾಕಿದ್ದೇನೆ'' ಎಂದಂತೆ. **ಶಹಾ** ಪರ್ಷಿಯನ್ **ಶಾಹ್**‌ನ ಮರಾಠಿ ಅಪಭ್ರಂಶ.

ಇಸ್ಪೇಟಿನಂಥದೇ ಆಟ ಹಿಂದೆ ನಮ್ಮಲ್ಲಿತ್ತೆಂದು ಹೇಳಲಾಗಿದೆ. ಆದರೆ ಆಧುನಿಕ ಇಸ್ಪೇಟಾಟ ನಮಗೆ ಪಶ್ಚಿಮದಿಂದಲೇ ಬಂದದ್ದೆಂದು ಅದರ ಹೆಸರೇ ಸಾಕ್ಷಿ ಹೇಳುತ್ತದೆ. **ಇಸ್ಪೇಟ್** ಎಂಬುದು ಪೋರ್ತುಗೀಸ್ ಇಸ್ಪೆದಾದ (espada) ಭಾರತೀಯ ರೂಪ. ಅದೇ ಇಂಗ್ಲೀಷಿ **ಸ್ಪೇಡ್** (spade). ಸ್ಪೇಡ್ ಎಂದರೆ ಸಲಿಕೆ ಅಥವಾ ಗುದ್ದಲಿ. ಇಸ್ಪೇಟಿನ ನಾಲ್ಕು ಜಾತಿಯ ಎಲೆಗಳಲ್ಲಿ ಒಂದು ಜಾತಿಯವುಗಳ ಮೇಲೆ ಮುದ್ರಿಸಿದ (ಸಲಿಕೆ) ಗುರುತುಗಳಿಂದ ಆ ಜಾತಿಗೆ ಇಂಗ್ಲೀಷಿನಲ್ಲಿ ಸ್ಪೇಡ್ಸ್ ಅನ್ನುತ್ತಾರೆ. ಆದರೆ ನಮ್ಮಲ್ಲಿ ಆ ಆಟಕ್ಕೇ ಆ ಹೆಸರು ಬಿದ್ದಿದೆ ಅಷ್ಟೆ. **ಇಸ್ಪೇಟ್** ಎಂಬ ಶಬ್ದ ನೋಡಿದರೆ ಈ ಆಟ ನಮ್ಮಲ್ಲಿ ಇಂಗ್ಲೀಷರಿಂದಲ್ಲ,

ಪೋರ್ತುಗೀಸರಿಂದ ಪ್ರಚಾರವಾಯಿತೆಂದು ಅರ್ಥವಾಗುತ್ತದೆ. ಪೋರ್ತುಗೀಸ್ ಮತ್ತು ಫ್ರೆಂಚಿನ ಇಸ್ಪೇಟ್ ಪರಿಭಾಷೆಯನ್ನೇ ಇಂಗ್ಲೀಷರೂ ತೆಗೆದುಕೊಂಡಿದ್ದಾರೆ.

ಪಾಶ್ಚಾತ್ಯರಲ್ಲಿ ಈ ಆಟದ ಜನಪ್ರಿಯತೆ ಸಾಮಾನ್ಯ ಅಭಿವ್ಯಕ್ತಿಯಲ್ಲಿ ಬಳಕೆಗೆ ಬಂದ ಇಸ್ಪೇಟ್ ಪರಿಭಾಷೆಯ ಪದಗಳಿಂದ ನಿದರ್ಶನಕ್ಕೆ ಬರುತ್ತದೆ. ಇಂಗ್ಲೀಷಿನಲ್ಲಿ (ಯಾವೊಂದು ವಿವಾದ ಅಥವಾ ಸ್ಪರ್ಧೆಯಲ್ಲಿ) ಒಂದೇ ಪಕ್ಷದವರು ತಮ್ಮ ಇರಾದೆ ಮತ್ತು ಬಲಾಬಲಗಳ ಗುಟ್ಟನ್ನು ಬಿಡುವುದಿಲ್ಲ ಎನ್ನುವುದಕ್ಕೆ, ''ತಮ್ಮ ಎಲೆಗಳನ್ನು ಎದೆಗೆ ಹತ್ತಿ ಹಿಡಿದು ಕೊಳ್ಳುವುದು'' (holding one's cards close to one's chest) ಎನ್ನುತ್ತಾರೆ. ಏನನ್ನೂ ಮರೆಮಾಚದೆ ಇದ್ದದ್ದನ್ನೆಲ್ಲ ಹೇಳುವುದಕ್ಕೆ ''ತನ್ನ ಇಸ್ಪೇಟೆಲೆಗಳನ್ನೆಲ್ಲ ಮೇಜಿನ ಮೇಲೆ ಬಿಡಿಸಿಡುವುದು'' ಎನ್ನುತ್ತಾರೆ. ಇಷ್ಟೆಲ್ಲ ವಿಧದ ಇಸ್ಪೇಟ್ ನುಡಿಕಟ್ಟುಗಳು ಕನ್ನಡದಲ್ಲಿ ಬಳಕೆಗೆ ಬಾರದಿದ್ದರೂ **ತುರುಪು** ಮಾತ್ರ ಬಂದಿದೆ. **ತುರುಪು** ಎಂದರೆ ಇಂಗ್ಲೀಷ್ trump. ಇಸ್ಪೇಟಿನ ನಾಲ್ಕೆಲೆ ಜಾತಿಗಳಲ್ಲಿ ಒಂದನ್ನು **ತುರುಪು** (ಕೆಲವೆಡೆ **ಹುಕುಂ** ಎಂಬ ಉರ್ದು ಪದವನ್ನು ಬಳಸುತ್ತಾರೆ) ಎಂದು ನಿರ್ಣಯಿಸಿದ ಅದು ಇತರ ಮೂರು ಜಾತಿಗಳಿಗಿಂತ ಪ್ರಬಲ ಎಂದು ಸ್ವೀಕೃತವಾಗುತ್ತದೆ. ಒಂದು ಚಿಕ್ಕ ಬೆಲೆಯ ತುರುಫಿನ ಎಲೆಯಿಂದ ಎಷ್ಟು ದೊಡ್ಡ ಬೆಲೆಯ ಇತರ ಜಾತಿಗಳ ಎಲೆಗಳನ್ನೂ ಹೊಡೆದು ಹಾಕಬಹುದು. (ಟ್ರಂಪ್ = ಟ್ರಯಂಫ್ = ವಿಜಯ ಅಥವಾ ಜೇತಾರ)

ಭಾಷೆಗೆ ಈ **ತುರುಪು** ಏನೇನು ಬೆಡಗು ಕೊಡುತ್ತದೆ ನೋಡಿ. ''ಈ ಚುನಾವಣೆಯಲ್ಲಿ **ಜಾತಿಯೇ ತುರುಪು**'' ಎಂದರೆ ಪರಿಣಾಮಗಳಲ್ಲಿ ಜಾತಿ ಭಾವನೆ ಪ್ರಬಲ ಪಾತ್ರವಹಿಸುತ್ತದೆ. ''ಈ ಕೇಸಿನಲ್ಲಿ **ತುರುಫೆಲ್ಲ** ಇಂಥ ಪಕ್ಷದ ಕೈಲಿ ಇವೆ'' ಅಂದರೆ ವಿವಾದದಲ್ಲಿ ಗೆಲವು ತರಬಲ್ಲ ಎಲ್ಲ ಪ್ರಬಲಾಂಶಗಳೂ ಆ ಪಕ್ಷದಲ್ಲೇ ಇವೆ; ಇನ್ನೊಂದು ಪಕ್ಷ ದುರ್ಬಲವಾಗಿದೆ.

ಇಸ್ಪೇಟಿನ **ಎಕ್ಕಾ** ಕೂಡ ಭಾಷೆಯಲ್ಲಿ ಕೆಲಸ ಮಾಡುತ್ತಿದೆ. **ಎಕ್ಕಾ** ಇಂಗ್ಲೀಷಿನಲ್ಲಿ ace ಅಂದರೆ ಒಂದು. ಆದರೆ ಅನೇಕ ಆಟಗಳಲ್ಲಿ **ಎಕ್ಕಾ** ಎಲೆಗೆ ಎಲ್ಲಕ್ಕೂ ಹೆಚ್ಚು ಬೆಲೆ. ಆದ್ದರಿಂದ ಎಲ್ಲ ಎಕ್ಕಾ ಅವನ ಕೈಲಿ ಸೇರಿವೆ ಅಂದರೆ ಬಲವತ್ತರ ಅಂಶಗಳೆಲ್ಲ ಅವನ ಹತ್ತಿರ ಇವೆ : ಎದುರಾಳಿ ಗೆಲ್ಲುವುದು ಅಸಾಧ್ಯ. ಎಕ್ಕಾ = ಒಂದು.

**ಸೂತ್ರಧಾರ** ಎಂಬ ಶಬ್ದ ನಾಟಕದ ಮ್ಯಾನೇಜರ್ ಅಥವಾ ಡೈರೆಕ್ಟರ್ ಎಂಬರ್ಥದಲ್ಲಿ ಬಹಳ ಪುರಾತನ ಕಾಲದಲ್ಲೇ ಬಳಕೆಯಲ್ಲಿತ್ತು. ಈ ಶಬ್ದ ತನ್ನದೇ ಕತೆ ಹೇಳುತ್ತದೆ. **ಸೂತ್ರ** ಅಂದರೆ **ನೂಲು** ಅಥವಾ **ದಾರ**. ನಾಟಕ ನಿರ್ದೇಶಕ ನೂಲು ಹಿಡಿದಾತ ಹೇಗಾಗುತ್ತಾನೆ ? ಇದು ಬಹುಶಃ ಬೊಂಬೆಯಾಟದ ಪರಿಭಾಷೆ. ಹಿಂದೆ ನಿಂತು ಸೂತ್ರಗಳನ್ನು ಎಳೆದು ಬೊಂಬೆಗಳನ್ನಾಡಿಸಲಾಗುತ್ತದಲ್ಲವೇ ? ಈ ಶಬ್ದದ ಮೇಲಿಂದ ಬೊಂಬೆಯಾಟ ನಾಟಕಕ್ಕಿಂತ ಪ್ರಾಚೀನವೆಂದು ಸಾಧಿಸುವ ಧೈರ್ಯ ನನಗಿಲ್ಲವಾದರೂ ಭರತನ ಕಾಲದಲ್ಲಿ ನಾಟಕ ಒಂದು ವ್ಯವಸ್ಥೆಗೆ ಬಂದಾಗಂತೂ ಬೊಂಬೆಯಾಟ ಜನಪ್ರಿಯವಾಗಿತ್ತೆಂದು ತರ್ಕಿಸಬಹುದು. **ಸೂತ್ರಚಾಲನೆ** ಎಂಬುದೂ ಬೊಂಬೆಯಾಟದ್ದೇ ಮಾತೆಂದು ಸಹಸಾ ನಮಗೆ ಹೊಳೆಯುವುದಿಲ್ಲ. ಎಲ್ಲ **ಸೂತ್ರ**ಗಳನ್ನೂ ಪ್ರಧಾನ ಮಂತ್ರಿಗಳೇ ತಮ್ಮ ಕೈಲಿರಿಸಿ ಕೊಂಡಿದ್ದಾರೆನ್ನುವಾಗಲೂ ಬೊಂಬೆಯಾಟದ್ದೇ ಸಾಮತಿ ಕೊಡುತ್ತಿರುತ್ತೇವೆ. ಎಲ್ಲವೂ **ಸುಸೂತ್ರ** ಅಥವಾ **ಸಸೂತ್ರ**ವಾಗಿ ನಡೆಯಿತು; ಯಾವುದೂ **ಸಸೂತ್ರ**ವಾಗಿರಲಿಲ್ಲ ಮೊದಲಾದವು ಹಾಗೆಯೆ. ದೇವಾಲಯಗಳಲ್ಲಿ ನಿರ್ಮಾಣದ ಪ್ರಧಾನ ಶಿಲ್ಪಿಯಾದವನೂ

**ಸೂತ್ರಧಾರ**ನೆನಿಸುತ್ತಾನೆ. ಪಟ್ಟದಕಲ್ಲಿನ ಒಂದು ದೇವಾಲಯದಲ್ಲಿ **ಸೂತ್ರಧಾರ** ಶ್ರೀ ಗುಂಡ ಅನಿವಾರಿತ ಆಚಾರಿಯ ಸುದ್ದಿ ಬರುತ್ತದೆ. ಇತರ ಎಲ್ಲ ಶಿಲ್ಪಿಗಳನ್ನೂ ನಿಯಂತ್ರಿಸುವವನಾದ್ದರಿಂದ ಅವನು ಸೂತ್ರಧಾರ.

**ಪಂಚತಂತ್ರ, ಕುತಂತ್ರ, ಆತಂತ್ರ, ರಾಜತಂತ್ರ, ತಂತ್ರಿ** ಇತ್ಯಾದಿಗಳಲ್ಲಿಯ **ತಂತ್ರ** ಕೂಡ **ನೂಲಿನ** ಸಾಮ್ಯದಿಂದ ಹುಟ್ಟಿದವು. **ತಂತು** ಎಂದರೆ ತೆಳ್ಳನ್ನ **ನೂಲು** ಅಥವಾ **ಎಳೆ**. ಇಲ್ಲಿಯೂ ಬೊಂಬೆಯಾಟದ ಧ್ವನಿ ಇದೆಯಾದರೂ ಇದು **ನೇಯ್ಗೆ**ಗೆ ಸಂಬಂಧಿಸಿದ್ದೂ ಇರಬಹುದು. **ತಂತ್ರ**ಕ್ಕೆ ನೇಯ್ಗೆಯ **ಮಗ್ಗ** ಎಂದು ಅರ್ಥವಿದೆ. ಮಗ್ಗ ನಡೆಸುವ ಸಾಲಿಗನೂ ಹಿಂದೆ ಕೂತು ಎಳೆಗಳನ್ನು ಹಾಸುಹೊಕ್ಕಾಗಿ ನೇಯುತ್ತಾನೆ. ''ಒಳಗು ಹೊರಗು ನುಲಿವ ಕೈಯ ಕುಣಿತ ಕಾಣದು'' ಎಂದು ಕಡೆಂಗೋಡ್ಲು ಹೇಳುತ್ತಾರೆ. ಮೇಲೆ ಹೇಳಿದ ತಂತ್ರಗಳೂ ಕಾಣದ ಕೈಯ ಆಟವಲ್ಲವೆ ?

೫೬

**ತೈಲ**ಕ್ಕೆ ಈಗಷ್ಟು ವರ್ಷಗಳಿಂದ ಎಂದಿಲ್ಲದ ಮಹತ್ವ ಬಂದಿದೆ. ಭೂಗರ್ಭದಲ್ಲಿ ದೊರೆಯುವ ತೈಲದ ಈ ಏರಾಟಿಕೆಯಲ್ಲಿ **ತೈಲ** ಶಬ್ದದ ಹಿಂದು ಮುಂದನ್ನು ಎಣಿಸುವವರೆಷ್ಟು ?

**ತೈಲ** ಎಂದರೆ ತಿಲದಿಂದ ಹುಟ್ಟಿದ್ದು ; **ತಿಲ** ಎಂದರೆ **ಎಳ್ಳು**. ಮೂಲತಃ ಎಳ್ಳಿನಿಂದ ತೆಗೆದದ್ದೇ **ತೈಲ** ಅಥವಾ **ಎಣ್ಣೆ**. ಅನಂತರ ಅದು ಎಲ್ಲ ತರಹದ ಸಸ್ಯಜನ್ಯ ಸ್ನೇಹಕ್ಕೂ ಅನ್ವಯವಾಗಿ ತನ್ನ ವೈಶಿಷ್ಟ್ಯವನ್ನು ಕಳೆದುಕೊಂಡುಬಿಟ್ಟದ್ದರಿಂದ ಎಳ್ಳಿನ ಎಣ್ಣೆಯನ್ನೇ ಕುರಿತಾಗಿ ಹೇಳಬೇಕಾದರೆ **ತಿಲ ತೈಲ** ಎಂದು ಪುನುರುಕ್ತಿಯ ಹೆಸರಿಡಬೇಕಾಯಿತು. ಈ ಪ್ರಸಂಗದಿಂದ ಭಾರತದ ನಾಗರಿಕತೆಯ ಬೆಳವಣಿಗೆಯಲ್ಲಿ ಪ್ರಥಮ ಸಸ್ಯಜನ್ಯ ಎಣ್ಣೆ **ತಿಲ** ಅಥವಾ ಎಳ್ಳಿನದೇ ಇರಬೇಕೆಂದು ತರ್ಕಿಸುವುದು ಯುಕ್ತಿ ಯುಕ್ತವಾಗುವುದು.

ನಿಜಕ್ಕೂ **ತಿಲ** ಮತ್ತು ತೈಲದ ಕಥೆ ವೇದ ಕಾಲದಷ್ಟು ಹಿಂದೆ ಹೋಗುತ್ತದೆ. ಯಜುರ್ವೇದದಲ್ಲಿ ಹೇಳುವ ಅನ್ನಧಾನ್ಯ ಮತ್ತು ತೈಲಧಾನ್ಯಗಳಲ್ಲಿ **ತಿಲ** ಕೂಡ ಒಂದು (ಯಜು, ೧೮, ೧೨). ಅಥರ್ವವೇದದಲ್ಲಿ ಪಿತೃಸಂಬಂಧಿ ಸೂಕ್ತವೊಂದರಲ್ಲಿ (ಅಥರ್ವ ೧೮, ೩) **ತಿಲ** ಮತ್ತು **ತೈಲ** ಅನೇಕ ಬಾರಿ ಬರುತ್ತವೆ. ಆಗ ಸ್ನಾನಕ್ಕೆ ಬಳಸುತ್ತಿದ್ದದ್ದು ಎಳ್ಳೆಣ್ಣೆಯೇ ಇರಬೇಕು. ಶ್ರಾದ್ಧದಲ್ಲಿ ಪಿಂಡರೂಪಿ ಪಿತೃಗಳಿಗೆ ಅಭ್ಯಂಜನ (ಎಣ್ಣೆಸ್ನಾನ) ಮಾಡಿಸುವ ಮಂತ್ರದೊಡನೆ (ಅಭ್ಯಂಜಂತಾಂ ಪಿತರಃ) ಎಳ್ಳನ್ನು ತಿಕ್ಕಿ ನೀರು ಬಿಡಬೇಕು.

ದಕ್ಷಿಣ ದ್ರಾವಿಡ ಭಾಷೆಗಳಲ್ಲೆಲ್ಲ ಇರುವ ಎಣ್ಣೆಯ ಕಥೆಯೂ ಅದೇ. ಎಣ್ಣೆ ಎಂಬುದು **ಎಳ್+ನೆಯ್** ಎಂಬ ಜೋಡಿ ಶಬ್ದ. **ನೆಯ್** ಎಂದರೆ ತುಪ್ಪ. ದ್ರಾವಿಡರಿಗೂ ಮೂಲ ಸಸ್ಯಜನ್ಯ ಸ್ನೇಹ ಎಳ್ಳಿನದೇ ಎಂದೂ ಈ ಶಬ್ದ ಹೇಳುತ್ತದೆ. ಆ ಮೇಲೆ ತೈಲಕ್ಕೆ ಆದದ್ದೇ ಎಣ್ಣೆಗೂ ಆಗಿಬಿಟ್ಟಿತು : ಕೊಬ್ಬರೀ ಎಣ್ಣೆ, ಕುಸುಬಿ ಎಣ್ಣೆ, ಶೇಂಗಾ ಎಣ್ಣೆ ; ಕಡೆಗೆ ಮೀನೆಣ್ಣೆ ಎಂದು ಹಲವೆಣ್ಣೆಗಳು ಬಂದು ಎಳ್ಳಿನ ಎಣ್ಣೆಯನ್ನು ಕುರಿಯಬೇಕಾದರೆ **ಎಳ್ಳೆಣ್ಣೆ** ಎಂದು ಪುನರುಕ್ತವಾಗಿ ಹೇಳಬೇಕಾಯಿತು.

ಇಂಗ್ಲೀಷಿನಲ್ಲಿ **ಆಯಿಲ್** (oil) ಮೂಲವೂ ಬೇರೆ ತರಹ ಇಲ್ಲ. **ಆಯಿಲ್** ಎಂದರೆ

ಭೂಮಧ್ಯ ಸಮುದ್ರದ ಸುತ್ತ ಬೆಳೆಯುವ **ಆಲಿವ್** (olive) ವೃಕ್ಷದ ಕಾಯಿಯಿಂದ ತೆಗೆದದ್ದು. ಈಗ ಆಯಿಲ್ ಎಂಬುದು ಚಿಮಣಿ ಎಣ್ಣೆ, ಮೀನೆಣ್ಣೆ ಆದಿಯಾಗಿ ಎಲ್ಲ ಸ್ನಿಗ್ಧ ದ್ರವಗಳಿಗೂ ನಡೆಯುತ್ತದೆ.

ಈ ಎಲ್ಲ ಎಣ್ಣೆಗಳಿಗೂ ಸಮಾನವಾದ ಗುಣಧರ್ಮವೊಂದಿದೆಯೆಂದು ತೋರುತ್ತದೆ. ಅದೆಂದರೆ ಸಾಮಾನ್ಯ ಉಷ್ಣತೆಯಲ್ಲಿ ದ್ರವರೂಪದಲ್ಲಿರುವುದು.

ಭಾರತದ ಸಾಂಸ್ಕೃತಿಕ ಸಂದರ್ಭದಲ್ಲಿ ಎಳ್ಳು ಅಥವಾ **ತಿಲ** ಇದಕ್ಕೂ ಆಳವಾಗಿ ವ್ಯಾಪಿಸಿರುವುದು ಕಾಣಿಸುತ್ತದೆ. ಮಹಾಭಾರತದ ಪ್ರಕಾರ ಅದು ವಿಷ್ಣುವಿನ ತೊಡೆಯಿಂದಲೇ ಹುಟ್ಟಿದ್ದು. ಪಿತೃಗಳಿಗೆ ಅದು ಅತಿ ಪ್ರಿಯ; ಉತ್ತರಕ್ರಿಯೆ ಶ್ರಾದ್ಧ ಕರ್ಮಗಳಲ್ಲಿ ಅದು ಅನಿವಾರ್ಯ; ಸತ್ತವರ ತೃಪ್ತಿಗಾಗಿ **ಎಳ್ಳುನೀರೂ** ಸೇರಿಸಿ ''ತರ್ಪಣ'' ಬಿಡಲಾಗುತ್ತದೆ (**ತಿಲಾಂಜಲಿ**). ಇದು ಶುದ್ಧ ವೈದಿಕ ಪದ್ಧತಿಯಾದರೂ ಸಾಮಾನ್ಯ ಕನ್ನಡ ಭಾಷೆಯಲ್ಲಿ **ತಿಲಾಂಜಲಿ, ಎಳ್ಳುನೀರು** ಎಂಬ ನುಡಿ ಸೇರಿಹೋಗಿದೆ. ನಿಮ್ಮ ಆಸೆಗೆ ನೀವು **ಎಳ್ಳುನೀರು ಬಿಡುತ್ತೀರಿ**; ತತ್ವಗಳಿಗೆ **ತಿಲಾಂಜಲಿ ಕೊಡುತ್ತೀರಿ**; ಅಂದರೆ ಅವನ್ನು ಪೂರಾ ತ್ಯಜಿಸುತ್ತೀರಿ. ''ಎಳ್ಳು ನೀರೆರೆ''ಯುವ ಮಾತು ೧೩ನೇ ಶತಮಾನದಷ್ಟು ಹಿಂದೆ (ಅರ್ಧನೇಮಿ ಪುರಾಣ) ಕನ್ನಡ ಸಾಹಿತ್ಯದಲ್ಲಿ ಕಾಣಿಸಿದೆ. ಸತ್ತವರಿಗಲ್ಲವೇ **ಎಳ್ಳುನೀರು** ಬಿಡುವುದು ? ಎಳ್ಳುನೀರು ಬಿಟ್ಟವರನ್ನು ನಾವು ತಿರುಗಿ ಬರುವವರಲ್ಲವೆಂದರಿತು ಯೋಚನೆ ಬಿಡುತ್ತೇವೆ. ಹಾಗೆ **ಎಳ್ಳುನೀರು, ತಿಲಾಂಜಲಿ ತ್ಯಾಗಾರ್ಥ**ಕಗಳಾದುವು.

**ಅನಿಷ್ಟ**ವಾದ ಯಾವುದಾದರೂ ಕೆಲಸವನ್ನು ಯಾರಾದರೂ ನಮಗೆ ಒತ್ತಾಯದಿಂದ ವಹಿಸಿದರೆ ''ಇದು ನಮಗೊಂದು **ತಿಲದಾನ**'' ಅಂತ ಗೊಣಗುತ್ತೇವೆ. ಎಳ್ಳು ಕಪ್ಪಾಗಿರುವುದರಿಂದಲೋ ಪಿತೃಗಳಿಗೆ ಸಂಬಂಧಿಸಿರುವುದರಿಂದಲೋ ಅದು ಅನಿಷ್ಟವೆಂದು ನಂಬಲಾಗಿದೆ. ಅದು ಪಾಪಗ್ರಹವಾದ **ಶನಿಗೆ** ಪ್ರಿಯವಂತೆ. ಎಳ್ಳಿನ ದಾನ ಕೊಟ್ಟರೆ **ಶನಿಪೀಡೆ** ತೊಲಗುತ್ತದೆ. ಆದರೆ ದಾನ ಕೊಂಡವನಿಗೆ ಶನಿಯ ಪೀಡೆ ದಾಟುತ್ತದೆ. ಆದ್ದರಿಂದ ಎಳ್ಳು ಎಳ್ಳೆಣ್ಣೆ ದಾನ ದುರ್ದಾನವೆನಿಸುತ್ತದೆ. ಸಭ್ಯ ಬ್ರಾಹ್ಮಣರು ಅದನ್ನು ಸ್ವೀಕರಿಸಲು ಹಿಂಜರಿಯುತ್ತಾರೆ. ಆದ್ದರಿಂದ **ತಿಲದಾನ** ಎಂಬ ಪದಪುಂಜ ಬಂದಿದೆ.

**ತಿಲ**ದಿಂದ **ತಿಲಕ**. ಸೌಂದರ್ಯವರ್ಧನೆಗಾಗಿ ಹಣೆಯಲ್ಲಿ ಧರಿಸುವ ಚುಕ್ಕಿ **ತಿಲಕ**. ಸಹಜವಾಗಿಯೇ ಶರೀರದಲ್ಲಿರುವ ಚಿಕ್ಕ ಕರಿ ಮಚ್ಚೆ ಕೂಡ **ತಿಲ**. ಮೊದಲು ಎಳ್ಳಿನಂತೆ ಕರಿದಾಗಿದ್ದ **ತಿಲಕ** (ಕಸ್ತೂರೀ ತಿಲಕಂ) ಬರಬರುತ್ತ ಬೇರೆ ಬಣ್ಣಗಳ ಬೊಟ್ಟಿಗೂ ಅನ್ವಯಿಸಿತು. ಹಣೆಯ ತಿಲಕದ ಸೌಂದರ್ಯದ ಬಗ್ಗೆ ನಮ್ಮವರು ಎಷ್ಟು ಮೋಹಿತರಾಗಿದ್ದರೆಂದರೆ ತಿಲಕ ಶ್ರೇಷ್ಠತೆಯ ಕುರುಹೂ ಆಯಿತು. ಆದ್ದರಿಂದ **ರಾಜಕುಲ ತಿಲಕ** = ರಾಜಶ್ರೇಷ್ಠ; **ಯತಿತಿಲಕ** = ಸಂನ್ಯಾಸಿಗಳಲ್ಲಿ ಉತ್ತಮ.

ತದ್ವಿರುದ್ಧವಾಗಿ ಎಳ್ಳು ಬಲು ಚಿಕ್ಕ ಧಾನ್ಯವಾಗಿರುವುದರಿಂದ ಅದು ಅಲ್ಪತೆಗೂ ಸಲ್ಲುವ ಪದವಾಯಿತು. ರಾಜಕಾರಣಿಗಳ ಭರವಸೆಯಲ್ಲಿ ನಿಮಗೆ **ತಿಲಮಾತ್ರ** ವಿಶ್ವಾಸವಿಲ್ಲ: ಸಂಸಾರದಲ್ಲಿ **ಎಳ್ಳನಿತು** ಸುಖವಿಲ್ಲ ಹಾಗೆಯೇ **ಎಳ್ಳೆಣಿಸು** (= ಕ್ಷುಲ್ಲಕವಾಗಿ ಬಗೆ, ತುಚ್ಛೀಕರಿಸು) ಎಂಬ ಉಕ್ತಿ ಪ್ರಾಚೀನ ಕಾವ್ಯಗಳಲ್ಲೇ ದೊರೆಯುತ್ತದೆ. **ತಿಲೋತ್ತಮೆ** ಒರಗೆಯ ಅಪ್ಸರಿಯರಿಗಿಂತ **ತಿಲಾಂಶ**ವಾದರೂ ಹೆಚ್ಚು ಸುಂದರಿ ಎಂಬುದಕ್ಕಾಗಿ ಅವಳಿಗೆ ಹಾಗೆ ಹೆಸರಂತೆ.

**ಎಣ್ಣೆ** ಎಂದರೆ **ಎಳ್+ನೆಯ್** ಅಂದದ್ದಾಯಿತಲ್ಲ. **ನೆಯ್** ಅಂದರೆ ತುಪ್ಪ. ಆ ಶಬ್ದ ಇಂದಿಗೂ ಸೋದರಿ ಭಾಷೆಗಳಾದ ತಮಿಳು, ಮಲೆಯಾಳಿ, ತುಳುಗಳಲ್ಲಿ ಜೀವಂತ ಪದವಾಗಿದೆ. ಕನ್ನಡದಲ್ಲಷ್ಟೇ ಹಿಂದಿನ ಕಾವ್ಯಗಳಲ್ಲಿ ಕಾಣಸುವ **ನೆಯ್** ಈಗ ಪ್ರಾಕೃತದ **ತುಪ್ಪ**ಕ್ಕೆ ಸ್ಥಾನ ಬಿಟ್ಟು ಕೊಟ್ಟಿದೆ. ಆದರೂ **ನೆಯ್** ಇನ್ನೂ ತಲೆಮರೆಸಿಕೊಂಡು ಉಳಿದುಕೊಂಡಿದೆ; **ಬೆಣ್ಣೆ** ಅಂದರೆ **ಬೆಳ್ + ನೆಯ್** (**ಬಿಳಿಯ ತುಪ್ಪ**); ತಮಿಳಿನಲ್ಲಿ ಅದು **ವೆಣ್ಣೈ**, ತುಳುವಿನಲ್ಲಿ **ಬೊಳ್‌ನೆಯ್**. ಈ **ನೆಯ್** ಕೂಡ ಸಂಸ್ಕೃತದ **ಸ್ನೇಹ**ದ ತದ್ಭವವೆಂದು ಊಹಿಸಲಾಗಿದೆ. **ಸ್ನೇಹ** ಎಂಬುದು ಬಹುಶಃ ಮೂಲತಃ ಸಾಮಾನ್ಯ ಉಷ್ಣತೆಯಲ್ಲಿಯೂ ಗಟ್ಟಿಯಾಗುವ ಪ್ರಾಣಿಜನ್ಯ ಕೊಬ್ಬು ಆಗಿರಬೇಕು. ಇಂದಿಗೂ **ಹಂದಿ ತುಪ್ಪ, ಹಾವಿನ ತುಪ್ಪ** ಮತ್ತು **ಕೊಬ್ಬರಿ ತುಪ್ಪ** ಮೊದಲಾದವು ಗಟ್ಟಿಯಾಗುವ ಸ್ನಿಗ್ಧ ಪದಾರ್ಥಗಳ ಹೆಸರುಗಳಾಗಿ ಕೇಳಿಸುತ್ತವೆ. (ಸಂಸ್ಕೃತದ **ಸ್ನಿಹ್**, ಇಂಗ್ಲೀಷಿನ **ಸ್ಮಿಯರ್, ಸ್ನೇಕ್** ಮೊದಲಾದವು ನುಣುಪು, ಜಾರುವಿಕೆ, ಜಿಡ್ಡು, ಹೊಳಪು ಮೊದಲಾದ ಕಲ್ಪನೆಗಳನ್ನು ಸೂಚಿಸುತ್ತವೆ.) ಪ್ರಾಕೃತದ **ತುಪ್ಪ** ಸಂಸ್ಕೃತದ **ತೃಪ್ರ**ದ ಅಪಭ್ರಂಶವಾಗಿದ್ದರೆ ಮತ್ತು **ತೃಪ್** ಧಾತುವಿನಿಂದ ಹುಟ್ಟಿದ್ದರೆ ಅದು ಹೊಳೆಯುವುದು, ಉರಿಯುವುದು ಮೊದಲಾದ ಗುಣಗಳ ಕಲ್ಪನೆಯನ್ನು ಪ್ರತಿನಿಧಿಸುತ್ತದೆ. ದೀಪ ಉರಿಸುವ ಪ್ರಥಮ ಎಣ್ಣೆ ಪ್ರಾಣಿಯ **ಕೊಬ್ಬೇ** ಎಂಬುದು ಸಹಜ ಊಹೆ. **ತುಪ್ಪ, ನೆಯ್** ಮನುಷ್ಯ ಇತಿಹಾಸದ ಈ ಪ್ರಾಥಮಿಕ ಹಂತದ ಉತ್ಪತ್ತಿಯಾಗಿದ್ದು **ಎಳ್‌ನೆಯ್**‌ಯಲ್ಲಿರುವ **ನೆಯ್** ಆ ಹಳೆಯ ಸ್ನಿಗ್ಧ ಪದಾರ್ಥಕ್ಕೆ ಪ್ರತಿಯಾದ ಸಸ್ಯಜನ್ಯ ಉತ್ಪತ್ತಿಯೆಂದು ನನಗನಿಸುತ್ತದೆ. ಒಂದು **ಬೇಟೆಗಾರ** ಮಾನವನಿಂದಾದ ಆವಿಷ್ಕಾರ; ಇನ್ನೊಂದು **ಕೃಷಿಕ** ಮಾನವನಿಂದಾದದ್ದು.

೫೭

ಸಣ್ಣ ಒಳ ಅಂಗಿಗೆ **ಬನಿಯನ್** ಎಂಬ ಶಬ್ದ ಇಂಗ್ಲೀಷಿನಿಂದ ಬಂದದ್ದು. ಆಲದ ಮರವೂ ಇಂಗ್ಲೀಷಿನಲ್ಲಿ **ಬನಿಯನ್**. ಇದು ಭಾರತದಿಂದಲೇ ಹೊರಟು, ತಿರುಗಿ ಈ ದೇಶಕ್ಕೇ ಬಂದ ಪದ. ಗುಜರಾಥಿಯಲ್ಲಿ ವಣಿಯೋ (ಸಂಸ್ಕೃತ – 'ವಣಿಜ್'; ಹಿಂದಿ–ಬನಿಯಾ) ಅಂದರೆ ವರ್ತಕ. ಹದಿನಾರನೇ ಶತಮಾನದಲ್ಲಿ ಪೋರ್ಚುಗೀಸರು ಈ ಪದವನ್ನು ಭಾರತೀಯ ವ್ಯಾಪಾರಿಗಳಿಗೆಲ್ಲ ಅನ್ವಯಿಸುವಂತೆ ಅರಬರಿಂದ ತೆಗೆದುಕೊಂಡು ಪಾಶ್ಚಾತ್ಯ ದೇಶಗಳಲ್ಲಿ ಹಬ್ಬಿಸಿದರು. ಇದಕ್ಕೆ ಕಾರಣ ಶತಮಾನಗಳಿಂದ ಅರಬ ಬಂದರಗಳಲ್ಲಿ ನೆಲಸಿದ್ದ ಗುಜರಾಥಿ ವ್ಯಾಪಾರಿಗಳ ಸಂಪರ್ಕ. ಈ ವ್ಯಾಪಾರಿಗಳು ತೊಡುತ್ತಿದ್ದ ಒಂದು ತರಹದ ಸಡಿಲು ಜುಬ್ಬಕ್ಕೆ ಅವರದೇ ಹೆಸರನ್ನು ಪಾಶ್ಚಾತ್ಯರು ಇಟ್ಟರು. ಈ **ಬನಿಯನ್** ಅನಂತರ ಹೇಗೋ ಬಿಗಿಯಾದ ಒಳ ಅಂಗಿಗೆ ಅನ್ವಯಿಸಿ ಈಗ **ನೆಟ್ ಬನಿಯನ್, ಸ್ಯಾಂಡೋ ಬನಿಯನ್** ಮುಂತಾದ ವೈವಿಧ್ಯಗಳಿಂದ ನಮ್ಮಲ್ಲಿ ಬಳಕೆಯಾಗಿದೆ.

**ಆಲದ** ಮರ ಬನಿಯನ್ ಆದದ್ದೂ ಈ ಪ್ರವಾಸಿ ಬನಿಯಾಗಳಿಂದಲೇ. ಅರಬ ಬಂದರವಾದ ಗಂಬ್ರೂನ್‌ನಲ್ಲಿ ಆಲದ ಜಾತಿಯ ವಿಶಾಲ ವೃಕ್ಷವೊಂದಿತ್ತು. ಆ ಮರದ ಬುಡದಲ್ಲಿ ನೆರೆಯುತ್ತಿದ್ದ ಶ್ರೀಮಂತ ಗುಜರಾಥಿ ವ್ಯಾಪಾರಿಗಳು ಅಲ್ಲಿಯೇ ತಮ್ಮದೊಂದು

ದೇವಾಲಯವನ್ನು ಕಟ್ಟಿದ್ದರಂತೆ. ಹೀಗೆ ಆ ಮರ **ಬನಿಯನ್** ಎನಿಸಿತು.

ನಮಗೆ ಅಷ್ಟು ಗೊತ್ತಿಲ್ಲದ ಬೇರೆರಡು ಶಬ್ದಗಳೂ ಇಂಗ್ಲೀಷಿಗೆ ಈ ಬನಿಯಾಗಳಿಂದಲೇ ಸಿಕ್ಕಿವೆ. **ಬನಿಯನ್ ಆಸ್ಪತ್ರೆ** (ಹಾಸ್ಪಿಟಲ್) ಅಂದರೆ ಪ್ರಾಣಿಗಳ ಶುಶ್ರೂಷಾಲಯ. ಗುಜರಾಥಿ ವ್ಯಾಪಾರಿಗಳು ಪ್ರಾಣಿದಯಾಪರರಾದ ವೈಷ್ಣವರಾಗಿದ್ದು ಅವರು ಪ್ರಾಣಿಗಳ ಆರೈಕೆಗೆ ವ್ಯವಸ್ಥೆ ಮಾಡುತ್ತಿದ್ದುದು ಇದಕ್ಕೆ ಪ್ರೇರಣೆ. (ಈಗ ಕೂಡ ಜೈನರು ದಿಲ್ಲಿಯಲ್ಲೊಂದು ರುಗ್ಣ ಪ್ರಾಣಿಗಳ ಆಸ್ಪತ್ರೆ ನಡೆಸುತ್ತಿದ್ದಾರೆ.) ಅದೇ ಪ್ರಕಾರ ಮಾಂಸವರ್ಜಕರಾದ ಬನಿಯಾಗಳಿಂದಾಗಿ **ಬನಿಯನ್ ಡೇ** (ಬನಿಯಾ ದಿನ) ಎಂಬುದು ಕೊರತೆ ದಿನಗಳಲ್ಲಿ ಇಂಗ್ಲೀಷಿನಲ್ಲಿ ಮಾಂಸರಹಿತ ಊಟ ಕೊಡುವುದಕ್ಕೆ ಹೆಸರಾಯಿತು.

ತದ್ವಿರುದ್ಧವಾಗಿ ಬನಿಯನ್ನಿನ ಇನ್ನೊಂದು ಹೆಸರಾದ **ಗಂಜೀಫರಾಕು** ನಮಗೆ ಮರಾಠಿಯಿಂದ ಬಂದದ್ದಾದರೂ ಅದೂ ಇಂಗ್ಲೀಷಿನಿಂದಲೇ ಸ್ವೀಕರಿಸಿದ್ದು. ಇಂಗ್ಲೀಷಿನಲ್ಲಿ **ಗ್ಯೂರ್ನ್‌ಜಿ** (guernsey) ಅಂದರೆ ನಾವಿಕರು ಧರಿಸುವ ಒಂದು ತರದ ಬಿಗಿಯಾದ ಫ್ರಾಕು. **ಗ್ಯೂರ್ನ್‌ಜೀ** ನಮ್ಮವರ ಬಾಯಲ್ಲಿ ಗಂಜಿ ಆಯಿತು. **ಫ್ರಾಕ್** ಅಂದರೆ ಒಂದು ಬಗೆಯ **ಉಣ್ಣೆ ಜಾಕೀಟು**. ಇಂಗ್ಲೀಷಿನಲ್ಲಿ, ಬಂಗಾಲಿಯಲ್ಲಿ ಬರೇ **ಗ್ಯೂರ್ನ್‌ಜಿ** ಮತ್ತು **ಗಂಜಿ** ಅಂದರೆ ಸಾಕು; ಮರಾಠಿ, ಕನ್ನಡಗಳಲ್ಲಿ **ಫ್ರಾಕೂ** ಸೇರಿ ದ್ವಿರುಕ್ತಿ ಪದವಾಗಿದೆ ಅಷ್ಟೆ. (Guernsey ಎಂಬುದು ಇಂಗ್ಲೀಷ್ ಕಡಲಗಾಲುವೆಯಲ್ಲಿಯ ಒಂದು ದ್ವೀಪ)

ಭಾರತದ **ಪಂಚಾಮೃತ** ಇಂಗ್ಲೆಂಡಿಗೆ ಹೋಗಿ **ಪಂಚ್** (punch) ಆಯಿತು. ಹಾಲು, ಮೊಸರು, ತುಪ್ಪ, ಜೇನು, ಸಕ್ಕರೆ ಸೇರಿದ್ದು **ಪಂಚಾಮೃತ.** ಇಂಗ್ಲೀಷಿನದೂ ಐದು ರಸಗಳದೇ ಮಿಶ್ರಣ. ಆದರೆ ಅದರಲ್ಲಿ ಸೇರುವುದು ಮದ್ಯಾರ್ಕ, ನೀರು, ಸಕ್ಕರೆ, ಲಿಂಬೆ ರಸ ಮತ್ತು ಮಸಾಲೆ. ಹದಿನಾರನೇ ಶತಮಾನದ ಮಧ್ಯದಿಂದ ಇಂಗ್ಲೀಷರಲ್ಲಿ ಚಾಲ್ತಿಯಲ್ಲಿರುವ ಈ ಪೇಯದ ಹೆಸರನ್ನು ಹಿಂದಿ ಅಥವಾ ಮರಾಠಿಯಿಂದ ಎತ್ತಿಕೊಳ್ಳಲಾಯಿತೆಂದು ಇಂಗ್ಲೀಷ್ ನಿರುಕ್ತಿಕಾರರು ಭಾವಿಸಿದ್ದಾರೆ. ಅಥವಾ ಮಾದಕ ಪ್ರೇಮದಲ್ಲಿ ಹಿಂದುಳಿಯದ ನಮ್ಮ ಮಹಾರಾಷ್ಟ್ರದ ಕರಾವಳಿ ನಿವಾಸಿಗಳು ತಮ್ಮದೇ ಮಾದಕ ಪಂಚಾಮೃತವನ್ನು ಸೃಷ್ಟಿಸಿಕೊಂಡಿದ್ದರೋ !

**ಹೊಲಿಗೆ** ಮಾನವನ ಅತಿ ಪುರಾತನ ಕಲೆಗಳಲ್ಲೊಂದು. ಉತ್ತರ ಯುರೋಪಿನ ಭಾಷೆಗಳಲ್ಲೂ ಸಂಸ್ಕೃತದಲ್ಲೂ **ಸ್ಯೂ, ಸ್ಯೂತ** ಇತ್ಯಾದಿ ಪದಗಳು ಹೊಲಿಗೆ, ಜೋಡಿಸುವಿಕೆಗಳಿಗೆ ಸಮಾನವಾಗಿವೆ. ದಕ್ಷಿಣ ದ್ರಾವಿಡ ಭಾಷೆಗಳಲ್ಲಿಯೂ **ಪೊಲ್, ಹೊಲಿಗೆ** ಮುಂತಾದ ಪದಗಳು ಅದೇ ಅರ್ಥ ಕೊಡುವಂತಿವೆ. ಹೊಲಿಗೆ ಕೆಲಸದವನಿಗೆ ಕನ್ನಡದಲ್ಲಿ ಬಳಸುವ **ಸಿಂಪಿಗ, ಚಿಪ್ಪಿಗ** ಶಬ್ದಗಳು ಸಂಸ್ಕೃತ **ಶಿಲ್ಪಿ** ಶಬ್ದಜನ್ಯವಾಗಿವೆ. ಪ್ರಪಂಚದ ಪ್ರಥಮ **ಶಿಲ್ಪಿ**ಯೇ ಸಿಂಪಿಗನಾಗಿದ್ದರೂ ಇದ್ದಾನು. ಆದರೂ ಈ ಕಲೆಗೆ ಸಂಬಂಧಿಸಿದ ಎಷ್ಟು ವಿದೇಶಿ ಪದಗಳು ಕನ್ನಡದಲ್ಲಿ ಸೇರಿ ಹೋಗಿವೆಯೆಂಬುದು ಸೋಜಿಗ ತರುತ್ತದೆ. **ದರ್ಜಿ** ಕನ್ನಡ ತೆಲುಗು ಎರಡರಲ್ಲಿಯೂ ಸಿಂಪಿಗನಿಗೆ ಪರ್ಯಾಯವಾಗಿ ಬಂದಿದೆ : ದಕ್ಷಿಣ ಕನ್ನಡದಲ್ಲಂತೂ ದರ್ಜಿ ಅರ್ಥವಾದೀತು : ಸಾಮಾನ್ಯರಿಗೆ ಸಿಂಪಿ ಅರ್ಥವಾಗಲಿಕ್ಕಿಲ್ಲ. ಈ **ದರ್ಜಿ** ಪಾರಸೀಕ ಪದ. ಹೊಲಿಯುವಾಗ ಬೆರಳಿಗೆ ಹಾಕಿಕೊಳ್ಳುವ ಲೋಹದ ಟೊಪ್ಪಿ **ಅಂಗುಸ್ತಾನ್** ಎಂಬುದು ಪಾರಸೀಕ **ಅಂಗುಶ್ತಾನ್. ಅಂಗುಶ್ತ್** ಅಂದರೆ ಸಂಸ್ಕೃತ **ಅಂಗುಷ್ಠ**ದ (ಬೆರಳು) ಪಾರಸೀಕ ಜ್ಞಾತಿ. ಇಡಿ ಕೈಯ ಬೋಳು ಅಂಗಿ **ಜುಬ್ಬಾ** ಇದೆಯಲ್ಲ, ಅದು ಅರಬ್ಬಿಯಲ್ಲಿ ಫಕೀರರ

ನಿಲುವಂಗಿಗೆ ಹೆಸರು. ಮಕ್ಕಳ **ಜುಬಲಾ** ಬಹುಶಃ ಜುಬ್ಬಾದ್ದೇ ಚಿಕ್ಕ ಆವೃತ್ತಿ. **ಜೇಬು** ಪಾರಸೀಕ; **ಕಿಸೆ** ಎಂಬುದೂ ಅದೇ ಭಾಷೆಯ **ಕೀಸಾ** (ಜೇಬು, ಚೀಲ). **ಶರ್ಟು** ಇಂಗ್ಲೀಷಿನದು; ಅದು **ಶಾರ್ಟ್** (ಕುಳ್ಳ) ಪದದ ಮೂಲದಿಂದಲೇ ಹೊರಟಿದ್ದಂತೆ – ಚಿಕ್ಕಂಗಿ. **ಕೋಟೂ** ಇಂಗ್ಲೀಷೇ.

**ಇಜಾರ** ಶಬ್ದ ಉದ್ದಕಾಲಿನ ಕಾಲಂಗಿ ಎಂಬರ್ಥದಲ್ಲಿ ನಾವು ಶಾಲೆಗೆ ಹೋಗುವಾಗ ಕೇಳಿಸುತ್ತಿತ್ತು. ಮುಂದೆ **ಪೈಜಾಮ** ಜನಪ್ರಿಯವಾಯಿತು. ಮೊದಲನೆಯದು ಸ್ವಲ್ಪ ದಪ್ಪ ಬಟ್ಟೆಯಲ್ಲಿ ಹೊಲಿದದ್ದು; ಎರಡನೆಯದು ಸ್ವಲ್ಪ ತೆಳು ಬಟ್ಟೆಯಲ್ಲಿ ದೊಗಳೆಯಾಗಿ ಹೊಲಿದದ್ದು. ಎರಡೂ ಪಾರಸೀಕ ಮೂಲದವೇ (ಪೈಜಾಮ < ಪಾ + ಜಾಮಾ = ಕಾಲು ಮುಸುಕು).

ಈಗ ಸಾರ್ವತ್ರಿಕವಾಗುತ್ತಿರುವ ಇಂಗ್ಲೀಷ್ **ಪ್ಯಾಂಟು** ಸ್ವಾರಸ್ಯಕರ ಇತಿಹಾಸ ಹೊಂದಿದೆ. ಇಟಲಿಯ ವೆನಿಸ್ ನಗರದಲ್ಲಿ Pantaleone ಎಂಬ **ಸಂತ** ಫಕೀರ ಜನಪ್ರಿಯನಾಗಿದ್ದ. ಅನಂತರ ಈತನನ್ನು ಮಾದರಿ ಮಾಡಿ ಇಟಾಲಿಯನ್ ಹಗರಣ ನಾಟಕಗಳಲ್ಲಿ ಸೊರಗಿ ಕಡ್ಡಿಯಾದ ದೊಗಳೆ ಪೋಷಾಕಿನ ಮುದುಕಯ್ಯನ ಹಾಸ್ಯ ಪಾತ್ರ ಸೃಷ್ಟಿಯಾಯಿತು. ಅವನ ಇಜಾರಕ್ಕೂ ಅವನದೇ ಹೆಸರು ಬಿದ್ದು ಅದು ಇಂಗ್ಲೀಷಿನಲ್ಲಿ pantaloon ಆಯಿತು. ೧೮ನೇ ಶತಮಾನದಿಂದ ಅದು ಬಗೆ ಬಗೆಯ ಇಜಾರಗಳಿಗೆ ಹೆಸರಾಗಿ ಮೆರೆಯಿತು. ಕೋಡಂಗಿ ಪೋಷಾಕಾಗಿದ್ದ ಈ ಉಡುಪು ಈಗ ಗೌರವಾರ್ಹವಾಗಿ ಕುರ್ಚಿಗಳಲ್ಲಿ ಕೂರುತ್ತಿದೆ ಎನ್ನುವಾಗ ಶಬ್ದಗಳ ಚರಿತ್ರೆ ಸ್ತ್ರೀಯರ ಚರಿತ್ರದಂತೆ ಎಷ್ಟು ಚಂಚಲವೆಂದೆನಿಸುತ್ತದೆ! ಅಂದಹಾಗೆ, ಇಂಗ್ಲೀಷಿನ ಪ್ಯಾಂಟಿಗೆ ಸಮಾನಾರ್ಥದಲ್ಲಿ **ಸುರಾಲು** ಎಂಬ ಪದವೂ ಬಳಕೆಯಲ್ಲಿದೆ.

ನಾವು ತೊಡುವ ಬಟ್ಟೆಗಳಿಗೆಲ್ಲ ಸೇರಿ **ಪೋಷಾಕು** ಎಂಬ ಪದವಿದೆ. ಪಾರಸೀಕ **ಪೋಶ್**ನಿಂದ **ಪೋಶಾಕ್** ಉಂಟಾಗಿದೆ. **ಪೋಶ್** ಅಂದರೆ (ಮೈ) ಮುಚ್ಚುವಂಥಾದ್ದು. ಈಗ ಅದಕ್ಕೆ **ಡ್ರೆಸ್** (ದುಸ್ತು) ಎಂಬ ಇಂಗ್ಲೀಷ್ ಪದ ಹೆಚ್ಚು ಹೆಚ್ಚು ಬಳಕೆಗೆ ಬರುತ್ತಿದೆ. ಮಿಲಿಟರಿ ಪೋಲಿಸ್ ಭಾಷೆಯಲ್ಲಿ ಅದೇ **ದಿರಸು** ಆಗಿ ಭಾರತೀಯತೆಯ ಭ್ರಮೆ ತರುತ್ತದೆ. **ಡ್ರೆಸ್** ಪದ ಮೂಲತಃ **ಓರಣ** ಎಂಬರ್ಥದ್ದು.

ಸಾಂಸ್ಕೃತಿಕವಾಗಿ ನೋಡುವಾಗ ಭಾರತೀಯರಿಗೆ ಹೊಲಿದ ಬಟ್ಟೆ (ಸ್ಯೂತ ವಸ್ತ್ರ) ಅಷ್ಟು ಪ್ರಿಯವಲ್ಲ ಎಂಬ ಅಂಶದಿಂದ ಇಷ್ಟೆಲ್ಲ ವಿದೇಶೀ ಪದಗಳು ಬಂದುವೆ? ಎಂಬ ಸಂಶಯ ಬರಬಹುದು. ಆದರೆ ನಿಜಸ್ಥಿತಿ ಹಾಗಿಲ್ಲ. ಅರಮನೆ ಸಭಾಸ್ಥಾನಗಳಲ್ಲಿ ಒಲಿದ ನಾನಾ ವೇಷಗಳು ಇದ್ದೇ ಇದ್ದುವು. ಇವಕ್ಕೆಲ್ಲ ಸಂಸ್ಕೃತ, ದ್ರಾವಿಡ ಪ್ರಾಕೃತ ಪದಗಳು ಬೇಕಷ್ಟಿವೆ. ಅವು ಈಗ ಮೂಲೆ ಪಾಲಾಗಿದ್ದರೆ ಪರಕೀಯರ ರಾಜಕೀಯ ಪ್ರಭಾವ ಅದಕ್ಕೆ ಕಾರಣ.

೫೮

ಈ ಸಿನೆಮಾ ಯುಗದಲ್ಲಿ **ಸೆನ್ಸಾರ್** ಶಬ್ದ ಹಳ್ಳಿಗರಿಗೂ ತಿಳಿಯುವಂತಾಗಿದೆ. ಈ ಶಬ್ದ ಸಿನೆಮಯುಗ ಬರುವುದಕ್ಕಿಂತಲೂ ಇಪ್ಪತ್ತು ಶತಮಾನ ಹಳೆಯದು. ಅದರ ಮೂಲ

ರೋಮನ್ ಇತಿಹಾಸದೊಡನೆ ತೊಡಕಿದೆ. ರೋಮಿನಲ್ಲಿ ನಾಗರಿಕರ ಶಿಸ್ತು ವರ್ತನೆಗಳ ಮೇಲೆ ಕಣ್ಣಿಟ್ಟು ಸಾರ್ವಜನಿಕ ಚರಿತ್ರವನ್ನು ಕಾಪಾಡುವ ಸಲುವಾಗಿ ವ್ಯಕ್ತಿ ನಡುವಳಿಕೆಯನ್ನು ಕುರಿತ ದಾಖಲೆ ಪುಸ್ತಕವನ್ನೇ ಇಡುತ್ತಿದ್ದರು. ಅದರ ಮೇಲ್ವಿಚಾರಣೆಗೆ ಇಬ್ಬರು ಮೆಜಿಸ್ಟ್ರೇಟರುಗಳನ್ನು ಆರಿಸಿ ನೇಮಿಸಲಾಗುತ್ತಿತ್ತು. ಅವರಿಗೆ **ಸೆನ್ಸಾರ್** (censor)ಗಳೆಂದು ಹೆಸರು. ಲ್ಯಾಟಿನ್ನಿನಲ್ಲಿ **ಸೆನ್ಸುರಾ** ಅಂದರೆ ಅಂದಾಜು. ಸೆನ್ಸಾರರ ಹತ್ತಿರ ನಾಗರಿಕರ ಆಸ್ತಿ, ಆದಾಯ–ವೆಚ್ಚಗಳ ಅಂದಾಜು ಕೂಡ ಇರುತ್ತಿತ್ತು. ಅವರು ಪ್ರಮುಖ ನಾಗರಿಕರ ಗುಟ್ಟುಗಳನ್ನೆಲ್ಲ ಅರಿತವರಾಗಿದ್ದು ಅಶಿಸ್ತು, ಅನೀತಿಗಳ ಆರೋಪವನ್ನು ನಾಗರಿಕರ ಮೇಲೆ ಹೊರಿಸಿ ವಿಚಾರಣೆಗೆಳೆಯುವ ಅಧಿಕಾರವುಳ್ಳವರಾಗಿದ್ದರು. ರೋಮನ್ ರಾಜಕಾರಣದಲ್ಲಿ ಪ್ರಬಲ ಪ್ರಭಾವವುಳ್ಳವರಾಗಿದ್ದುದರಿಂದ ಅವರಿಗೆ ಶ್ರೀಮಂತರು ಕೂಡ ಅಂಜ ಬೇಕಾಗುತ್ತಿತ್ತು. ೧೭ನೇ ಶತಮಾನದ ಪೂರ್ವಾರ್ಧದಲ್ಲಿ ಇಂಗ್ಲೆಂಡ್ ಮೊದಲಾದ ದೇಶಗಳಲ್ಲಿ ಪುಸ್ತಕ, ಪತ್ರಿಕೆ, ನಾಟಕಗಳೇ ಮೊದಲಾದವನ್ನು ಪ್ರಕಟನೆಗಿಂತ ಪೂರ್ವದಲ್ಲಿ ಪರಿಶೀಲಿಸುವುದಕ್ಕೆ ನೇಮಿಸಿದ ಅಧಿಕಾರಿಗಳಿಗೂ ಈ ಪದವಿ ಕೊಡುವುದಾಯಿತು. ಯುದ್ಧ ಕಾಲದಲ್ಲಿ ಹೆಚ್ಚಾಗಿ ಈ ಅಧಿಕಾರಿಗಳ ಕೈವಾಡ ಬಲವಾಗಿರುತ್ತದೆ. ೧೯೭೫ ರಲ್ಲಿ ಭಾರತದಲ್ಲಿ ತುರ್ತು ಪರಿಸ್ಥಿತಿ ಘೋಷಣೆಯಾದ ಮೇಲೆ ಈ ಸೆನ್ಸಾರರ ಕೈವಾಡದ ರುಚಿ ಪತ್ರಿಕೆ ಪ್ರಕಟನೆ ಮೊದಲಾದವನ್ನು ಕೈಕೊಂಡವರಿಗೆ ಚೆನ್ನಾಗಿ ತಿಳಿಯಿತು. ಸಿನೆಮದಲ್ಲಿ ನಾಗರಿಕ ನೀತಿಯನ್ನು ಕೆಡಿಸುವ ಅಂಶಗಳನ್ನು ಪೂರ್ವಪರಿಶೀಲನೆ ಮಾಡುವವರು ಶಾಂತಿ ಕಾಲದಲ್ಲಿ ಸೆನ್ಸಾರರೆನಿಸುತ್ತಾರೆ.

ಈ **ಸೆನ್ಸುರಾ**ದಿಂದಲೇ ನಮಗೀಗ ನೂರು ವರ್ಷಗಳಿಂದ ಪರಿಚಯವುಳ್ಳ **ಸೆನ್ಸಸ್** (ಜನಗಣನೆ) ಎಂಬ ಶಬ್ದವೂ ಹುಟ್ಟಿದ್ದು. ಜನಸಂಖ್ಯೆಯ ಅಂದಾಜು ಎಂದು ಅದರ ತಾತ್ಪರ್ಯ.

ಜನಗಣನೆಗೆ ನಮ್ಮಲ್ಲಿ ಹಿಂದೆ ಬಳಕೆಯಲ್ಲಿದ್ದ **ಖಾನೇಶುಮಾರಿ** ಎಂಬುದು ಪಾರಸೀಕ ಶಬ್ದ. ಅದರ ನಿಜವಾದ ಅರ್ಥ ಜನರ ಗಣನೆ ಎಂದಲ್ಲ: **ಮನೆಗಳ** ಅಂದಾಜು (ಖಾನಃ = ಮನೆ; ಶುಮಾರ್ = ಅಂದಾಜು, ಲೆಕ್ಕ) ಎಂದು. ಜನರ ಗಣನೆಯ ವಿಚಾರವನ್ನು ೨೩ ಶತಮಾನಗಳ ಹಿಂದೆ ಚಾಣಕ್ಯನು ಹೇಳಿದ್ದರೂ ಮನೆಗಳ ಮೇಲೆ ತೆರಿಗೆ ಹಾಕುವುದು ಅದಕ್ಕಿಂತಲೂ ಹಿಂದಿನಿಂದಲೇ ರಾಜಾದಾಯದ ಮೂಲವಾಗಿತ್ತು. ಕನ್ನಡ ಶಾಸನಗಳಲ್ಲಿ ಇದಕ್ಕೆ **ಮನೆದೆರೆ** (= ಮನೆ ತೆರಿಗೆ) ಎಂಬ ಹೆಸರಿದೆ. ಈಗ ಈ **ಮನೆದೆರೆ** ನಗರ ಸಭೆ, ಪಂಚಾಯಿತಿಗಳ ಅಧಿಕಾರ ವ್ಯಾಪ್ತಿಯೊಳಗೆ ಬಂದಿದೆ ಅಷ್ಟೇ ಹೊರತು, ಅದರಲ್ಲಿ ಹೊಸದೇನೂ ಇಲ್ಲ. ತೆರಿಗೆ ಹಾಕುವುದರಲ್ಲಿ ಹಿಂದಿನವರು ಇಂದಿನ ಸರಕಾರಗಳಿಗಿಂತ ಒಂದಡಿ ಮುಂದಿದ್ದರೇ ಹೊರತು ಹಿಂದಿರಲಿಲ್ಲ!

**ಮ್ಯಾಜಿಸ್ಟ್ರೇಟ್** ಶಬ್ದ ಇಂಗ್ಲೀಷ್ ಆಡಳಿತದೊಡನೆ ನಮಗೆಲ್ಲ ಪರಿಚಿತವಾಗಿದೆ. ಊರಲ್ಲಿ ಜಿಲ್ಲೆಯಲ್ಲಿ ಕಾನೂನನ್ನು ಜಾರಿಮಾಡುವ ಅಧಿಕಾರಿಗೆ ಈ ಹೆಸರು. ಹೆಚ್ಚಾಗಿ ಅವನು ನ್ಯಾಯಾಧೀಶನಾಗಿ ಪೋಲೀಸ್ ಕೋರ್ಟುಗಳಲ್ಲಿ ಅಧಿಕಾರ ನಡೆಸುವವನೂ ಹೌದು. ಸೋಜಿಗವೆಂದರೆ ಈ ಪದವೂ ನಮ್ಮ ಮಕ್ಕಳಿಗೆ ಪರಿಚಿತವಾದ **ಮಾಸ್ತರು, ಮೇಷ್ಟು** ಎಂಬವೂ ಒಂದೇ ಲ್ಯಾಟಿನ್ನಿನಲ್ಲಿ **ಮ್ಯಾಗ್ನಸ್** (magnus) ಅಂದರೆ **ಹಿರಿಯ, ದೊಡ್ಡವ** ಎಂದರ್ಥ. ಸಂಸ್ಕೃತದ **ಮಹತ್** ಶಬ್ದದ ಜ್ಞಾತಿ ಇದು. ನಮ್ಮ ಮಹಾನಗರ ಸಭಾಧ್ಯಕ್ಷರನ್ನು **ಮೇಯರ್**

ಎನ್ನುತ್ತೇವಲ್ಲ, ಅದೂ ಸೈನ್ಯದಲ್ಲಿ **ಮೇಜರ್** ಎನ್ನುವ ಅಧಿಕಾರಿಯ ಹೆಸರೂ **ಮ್ಯಾಗ್ನಸ್** ಪದದಿಂದಲೇ ಬಂದವು. ಈ ಪ್ರಕಾರ ಬಡಮಾಸ್ತರೂ ನಿಮ್ಮನ್ನು ಸೆರೆಮನೆಗೆ ಕಳಿಸಬಲ್ಲ ಮ್ಯಾಜಿಸ್ಟ್ರೇಟರೂ ನಿಮ್ಮ ನಗರ ಪಿತಾಮಹ ಮೇಯರೂ ಸೈನಿಕರಿಗೆ ಆಜ್ಞೆಗಳನ್ನು ಗರ್ಜಿಸುವ ಮೇಜರೂ ಶಬ್ದ ನಿಷ್ಪತ್ತಿ ದೃಷ್ಟಿಯಿಂದ ಅಣ್ಣತಮ್ಮಂದಿರು. ಮಾಸ್ತರುಗಳನ್ನು ಹೊಗಳಬೇಕಾದಾಗ **ಗುರು**ಗಳೆಂದು ಹೇಳುತ್ತೇವಲ್ಲ. ಆ **ಗುರು** ಶಬ್ದವೂ **ದೊಡ್ಡದು, ತೂಕವುಳ್ಳದ್ದು** ಎಂದೇ ಅರ್ಥ ಕೊಡುತ್ತದೆ. ಮನುಷ್ಯರು ಎಷ್ಟು ದೂರ ದೂರವಿದ್ದರೂ ವಿಚಾರ ಕಲ್ಪನೆಗಳು ಎಷ್ಟು ಹತ್ತಿರ ಹತ್ತಿರ ಇರಬಲ್ಲವು ನೋಡಿ!

**ಮ್ಯಾನೇಜರ್** ಯಾರಿಗೆ ಗೊತ್ತಿಲ್ಲ ? ಆಡಳಿತ ನೋಡುವವನು ಮ್ಯಾನೇಜರ್. ಇದು ಇಟಾಲಿಯನ್ ಭಾಷೆಯ **ಮನೇಜಿಯೋ** (maneggio)ವಿನಿಂದ ಇಂಗ್ಲೀಷಿಗೆ ದಾಟಿ ರೂಪಾಂತರ ಹೊಂದಿದ ಪದ. ಅದು **ಹತೋಟಿ**ಯಲ್ಲಿಡುವವ, (ಕುದುರೆ ಮೊದಲಾದವನ್ನು) ತರಬೇತು ಮಾಡುವವ ಎಂಬರ್ಥದಿಂದ ಹೊರಟು ಹಲವು ಹಂತಗಳನ್ನು ದಾಟಿ ಈಗಿನ ಅರ್ಥಕ್ಕೆ ಬಂದಿದೆ. **ಮನೇಜಿಯೊ** ಲ್ಯಾಟಿನ್ನಿನ **ಮ್ಯಾನಸ್**ನಿಂದ (manus) ಹುಟ್ಟಿದ್ದು. ಮ್ಯಾನಸ್ ಎಂದರೆ **ಕೈ**. ಹೀಗೆ ಮ್ಯಾನೇಜರ್ ಎಂದರೆ **ಕೈವಾರಿ** ಅಥವಾ **ಕೈವಾಡಿ** ಎಂದ ಹಾಗೆ. ಅಥವಾ **ಹತೋಟಿಗಾರ**. **ಹತೋಟಿ**ಯೂ ಕೈಗೆ ಸಂಬಂದಿಸಿದ್ದು. **ಹಾಥ್–ಹಾತ್** ಎಂದರೆ **ಹಸ್ತ, ಕೈ**. ಹಿಂದೆ ಈ ಮ್ಯಾನೇಜರನಿಗೆ **ಪಾರುಪತ್ಯಗಾರ** ಎನ್ನುತ್ತಿದ್ದರು. ಇದು ದ್ರಾವಿಡ ಶಬ್ದ. ತೆಲುಗು, ಮಲಯಾಳ, ತಮಿಳುಗಳಲ್ಲಿಯೂ ಸ್ವಲ್ಪ ಹೆಚ್ಚು ಕಡಿಮೆ ಇದೆ. ಅದು **ಪಾರುಪತ್ತಿ**ಯ. ಪಾರು ಎಂದರೆ **ನೋಡು**; **ಪತ್ತು** ಎಂದರೆ **ಹಿಡಿ** ಅಂದರೆ **ಮೇಲ್ವಿಚಾರಣೆ** ನೋಡುವಾತ ಎಂದು ತಾತ್ಪರ್ಯ. **ದಿಗ್ದರ್ಶಕ** ಎಂದ ಹಾಗೆ.

ನಾವೀಗ (ಉತ್ತರ ಕರ್ನಾಟಕದಲ್ಲಿ) **ಕ್ಲರ್ಕ್** ಎಂಬರ್ಥದಲ್ಲಿ ಬಳಸುವ **ಕಾರಕೂನ** ಶಬ್ದ ಪಾರಸೀಕ ಭಾಷೆಯಲ್ಲಿ **ಮ್ಯಾನೇಜರ್** ಎಂಬರ್ಥ ಕೊಡುತ್ತದೆ. **ಕಾರ್** ಎಂದರೆ ಕಾರ್ಯ; **ಕುನ್** ಎಂದರೆ ವ್ಯವಸ್ಥೆ ನೋಡುವವ. ದಕ್ಷಿಣ ಕರ್ನಾಟಕ ಭಾಗದಲ್ಲಿ **ಕ್ಲರ್ಕ್** ಎಂಬರ್ಥದಲ್ಲಿ ಬಳಸುವ **ಗುಮಾಸ್ತ** (ಗುಮಾಶ್ತಾ) ಶಬ್ದಕ್ಕೆ ಪಾರಸೀಕ ಭಾಷೆಯಲ್ಲಿ ದೊಡ್ಡ ವ್ಯಾಪಾರಿಗಳ ಪರವಾಗಿ ಖರೀದಿ ಕೆಲಸಕ್ಕೆ ನೇಮಿಸಲ್ಪಟ್ಟವನೆಂದು ಅರ್ಥ. ಈಗ ಅಂತವರಿಗೆ **ಏಜೆಂಟ್** ಎಂಬ ಇಂಗ್ಲೀಷ್ ಶಬ್ದವನ್ನು ಪ್ರಯೋಗಿಸುತ್ತೇವೆ. **ಏಜಂಟ್** ಶಬ್ದದ ಮೂಲ ಲ್ಯಾಟಿನ್ ಅರ್ಥ : **ಮಾಡುವವ, ಮಾಡಿಸುವವ**. ಇಲ್ಲಿ ನಾವು ನಮ್ಮದೇ ಹಳೇ ಶಬ್ದವಾದ **ಕರಣಿಕ**ಕ್ಕೆ ಬರುತ್ತೇವೆ. ಮಹಾರಾಷ್ಟ್ರ, ಉತ್ತರ ಕರ್ನಾಟಕಗಳಲ್ಲಿ ಇದರದೇ ವಿಸ್ತರಣೆಯಾದ **ಕುಲಕರಣಿ** ಶ್ಯಾನುಭಾಗ, ಗ್ರಾಮಲೆಕ್ಕಿಗ ಎನಿಸುತ್ತದೆ; ಆಂಧ್ರದಲ್ಲಿ **ಕರಣಂ** ಎಂದು ಪರಿಭಾಷೆ. ಈ **ಕರಣ** ವೇದ ಕಾಲದಷ್ಟು ಹಳೇ ಪದ, ವೈದಿಕ ಭಾಷೆಯಲ್ಲಿ **ಕರಣನು ಕಾರ್ಯ ಸಹಾಯಕ**. ಆ ಮೇಲೆ ಸಂಸ್ಕೃತದಲ್ಲಿ ಇವನು ಬರಹಗಾರ ಎಂದಾದ; **ಕರಣ** ಎಂದರೆ ದಸ್ತಾವೇಜೂ ಹೌದು.

೫೯

ಒಂದು ಭಾಷಾ ಬಳಗದಲ್ಲಿ ಕೆಲ ಪ್ರಾಣಿಗಳ ಹೆಸರಿನ ಸಾಮ್ಯ ಕೆಲ ಸೋಜಿಗದ ಸಂಗತಿಗಳನ್ನು ಹೇಳುತ್ತದೆ. ನಮ್ಮನ್ನು ಕಾಡುವ, ನೊಣ ಸೊಳ್ಳೆಗಳಿಗೆ ಸಂಸ್ಕೃತದಲ್ಲಿ **ಮಶಕ** ಎಂದು ಹೆಸರು, ಇದು ಅಥರ್ವ ವೇದದಲ್ಲೇ ಸಿಗುವ ಪದ. ಇಂಗ್ಲೀಷಿನಲ್ಲಿ ಇದಕ್ಕೆ

**ಮಾಸ್ಕಿಟೋ** (mosquito) ಎನ್ನುತ್ತಾರಲ್ಲ. ವಾಸ್ತವಿಕವಾಗಿ ಇದು ಸ್ಪ್ಯಾನಿಶ್ ಮತ್ತು ಪೋರ್ಚುಗೀಸ್ ಭಾಷೆಗಳಿಂದ ೧೬ನೇ ಶತಮಾನದಲ್ಲಿ ಇಂಗ್ಲೀಷಿಗೆ ಬಂದ ಪದ; ಅದಕ್ಕೆ ಪ್ರಾಚೀನ ಯುರೋಪಿಯನ್ ಭಾಷೆಯಾದ ಲ್ಯಾಟಿನ್ನಿನ **ಮುಸ್ಕ** (musca) ಮೂಲ. ಈ ಕ್ಷುದ್ರ ಜಂತುಗಳಿಗೆ ಸಂಸ್ಕೃತದಲ್ಲಿಯೂ ಲ್ಯಾಟಿನ್ನಿನಲ್ಲಿಯೂ ಒಂದೇ ಹೆಸರಿರುವುದು ಅವುಗಳಿಗೂ ನಮಗೂ ಇರುವ ಪುರಾತನ ಸಂಬಂಧವನ್ನು ಹೇಳುವುದಿಲ್ಲವೆ ?

ಈ **ಮುಸ್ಕ** ಅಥವಾ **ಮಶಕ** ಒಂದು ಪಾಶ್ಚಾತ್ಯ ಆಯುಧಕ್ಕೂ ತನ್ನ ಹೆಸರು ಕೊಟ್ಟಿದೆ. ಅದೆಂದರೆ **ಮಸ್ಕೆಟ್**. ಅದೊಂದು ತರಹದ ಬಂದೂಕು. **ಸೊಣ**ದಂತೆ ಹಾರುತ್ತದೆಂದೋ ಏನೋ ಅದಕ್ಕೆ ಲ್ಯಾಟಿನ್ ಮುಸ್ಕದಿಂದ ಉದ್ಭವಿಸಿದ ಹೆಸರಿಟ್ಟಿದ್ದಾರೆ.

ನಮ್ಮ ಗಣಪತಿಯ ವಾಹನ **ಮೂಷ**(ಕ)ವನ್ನು ನೋಡಿ. ಇಲಿಯ ಹೆಸರು. ಗ್ರೀಕಿನಲ್ಲಿ **ಮೂಸ್** (mys) ಲ್ಯಾಟಿನ್ನಿನ್ನಲ್ಲಿ ಅದೇ (mus); ಪಶ್ಚಿಮತಮ ಯುರೋಪಿನ ಇಂಗ್ಲೀಷಿನಲ್ಲಿ (mouse) **ಮೌಸ್**. ಟ್ಯೂಟಾನಿಕ್ ಮತ್ತು ಇಂಡೋ-ಜರ್ಮನಿಕ್ ಭಾಷೆಗಳಲ್ಲೆಲ್ಲ ಇಲಿಗೆ ಸಮಾನ ಹೆಸರುಗಳಿವೆ. ಪ್ರಾಚೀನ ಇಂಗ್ಲೀಷಿನಲ್ಲಿ mus; ಪ್ರಾಚೀನ ಸ್ಯಾಕ್ಸನ್ನಿನಲ್ಲಿಯೂ ಅದೇ; ಡಚ್‌ನಲ್ಲಿಯೂ muis; ಆಧುನಿಕ ಜರ್ಮನ್ನಿನಲ್ಲಿ maus. ನಮ್ಮ ಮನೆಗಳಲ್ಲಿ ಬಿಲಗಳನ್ನು ತೋಡಿ ತಿಂಡಿಗಳನ್ನು ಕದಿಯುವ ಈ ಪೀಡೆ ಪುರಾತನದಿಂದ ನಮ್ಮ ಬೆಂಬಿಡದ ಪಿಡುಗಾಗಿತ್ತೆಂದು ಈ ನಾಮಸಾಮ್ಯ ಹೇಳುತ್ತದೆ. ಸಂಸ್ಕೃತದವರು **ಮೂಷ**(ಕ) ಶಬ್ದ **ಮುಷ್** (= ಕದಿ) ಧಾತುವಿನಿಂದ ಹುಟ್ಟಿತೆನ್ನುವುದು ಸಾರ್ಥಕವಾಗಿಯೇ ಇದೆ. ಈ ಮನೆ ಇಲಿ ಏಶಿಯದಲ್ಲಿ ಉದ್ಭವಿಸಿ ಮದಗಾಸ್ಕರ್ ದ್ವೀಪವೊಂದನ್ನು ಬಿಟ್ಟು ಜಗತ್ತನ್ನೆಲ್ಲ ವ್ಯಾಪಿಸಿತೆಂದು ಪ್ರಾಣಿಚರಿತ್ರಕಾರರು ಹೇಳುತ್ತಾರೆ; ಅದು ನಿಜವಾದರೆ ಈ ಸಾಮ್ರಾಜ್ಯ ವಿಸ್ತರಣೆ ಅತಿ ಪ್ರಾಚೀನದಲ್ಲಿ ಆಗಿರಬೇಕು.

ಆದರೆ ಹೆಗ್ಗಣದ ಕತೆ ಬೇರೆ. ಅದಕ್ಕೆ ಸಂಸ್ಕೃತದಲ್ಲಿ ಪ್ರತ್ಯೇಕ ಹೆಸರಿದ್ದಂತೆ ಕಾಣೆ. ಇಲಿಗಿರುವ ಹೆಸರುಗಳೇ ಅವುಗಳಿಗೂ ಅನ್ವಯಿಸುತ್ತವೆ. ಯುರೋಪಿನಲ್ಲಿ ಲ್ಯಾಟಿನ್, ಸ್ಪಾನಿಶ್, ಪೋರ್ಚುಗೀಸ್, ಹಳೇ ಇಂಗ್ಲೀಷ್, ಡಚ್, ಜರ್ಮನ್ ಎಲ್ಲ ಭಾಷೆಗಳಲ್ಲಿಯೂ rat (ರ್‍ಯಾಟ್) ಮತ್ತು ಅದಕ್ಕೆ ಹತ್ತಿರವಾದ ಹೆಸರುಗಳು ಕಾಣಿಸಿದರೂ ಎಲ್ಲಿಯೂ ಅದು ಬಹು ಪ್ರಾಚೀನವಲ್ಲ. ಕ್ರಿ.ಶ. ೧೦ನೇ ಶತಮಾನದ ಸುತ್ತಮುತ್ತ ಅದು ಮೊದಲು ಉತ್ತರ ಯುರೋಪಿನ ಟ್ಯೂಟಾನಿಕ್ (ಜರ್ಮನ್, ಇಂಗ್ಲೀಷ್ ಇತ್ಯಾದಿ) ಭಾಷೆಗಳಲ್ಲಿ ಪ್ರವೇಶಿಸಿ ಆ ಮೇಲೆ ಬೇರೆ ಪ್ರಾದೇಶಿಕ ಭಾಷೆಗಳಿಗೂ ಲ್ಯಾಟಿನ್ನಿಗೂ ಹಬ್ಬಿತಂತೆ. ರ್‍ಯಾಟ್ ಪದದ ಮೂಲವೂ ಅನಿಶ್ಚಿತ. ಮಧ್ಯ ಏಶಿಯವೇ ಹೆಗ್ಗಣದ ತವರೆಂದೂ ಕಪ್ಪು ಹೆಗ್ಗಣ ಯುರೋಪಿಗೆ ೧೩ನೇ ಶತಮಾನದಲ್ಲಿ, ಕಂದು ಹೆಗ್ಗಣ ೧೮ನೇ ಶತಮಾನದಲ್ಲಿ ಬಂತೆಂದೂ ಹೇಳಲಾಗಿದೆ.

ದ್ರಾವಿಡದಲ್ಲೇ ಆದರೂ ಇಲಿಗೆ ಜ್ಞಾತಿ ಪದಗಳು ಪಾಕಿಸ್ತಾನದ ತುತ್ತ ತುದಿಯ ಬ್ರಾಹುಯಿ (ಹಲ್)ಯಿಂದ ದಕ್ಷಿಣತಮ ತಮಿಳಿನ (**ಎಲಿ** ವರೆಗೆ ಹೆಚ್ಚು ಕಡಿಮೆ ಎಲ್ಲ) ಭಾಷೆಗಳಲ್ಲಿ ಕಾಣಿಸುತ್ತವೆ. ಆದರೆ **ಹೆಗ್ಗಣ**ಕ್ಕೆ ಜ್ಞಾತಿ ಪದಗಳು ಕನ್ನಡ ಮತ್ತು ಕರ್ನಾಟಕಕ್ಕೆ ಸೇರಿದ ಇತರ ದ್ರಾವಿಡ ಭಾಷೆಗಳಲ್ಲಿ ಮಾತ್ರ ಇವೆ. ಇತರ ದ್ರಾವಿಡ ಭಾಷೆಗಳಲ್ಲಿ **ಹೆಗ್ಗಣ**ಕ್ಕೆ ಬೇರೆ ಪದಗಳಿವೆ. ಇಂಗ್ಲೀಷಿನಲ್ಲಿ **ರ್‍ಯಾಟ್** ಎನ್ನುವ ಪ್ರಾಣಿ ದ್ರಾವಿಡ ಪ್ರದೇಶವನ್ನು ತಡವಾಗಿಯೇ ಪ್ರವೇಶಿಸಿತೋ ಏನೋ. **ಹೆಗ್ಗಣ** (ಹಳೆಗನ್ನಡ ಪೆಗ್ಗಣ), ತುಳುವಿನ **ಪೆರ್ಗುಡೆ** ಎಂಬವು ದೊಡ್ಡದು (ಪೆರ್) ಮತ್ತು **ಕಣ**, **ಗಣ**

(ತೋಡಿದ್ದು), **ಕುಡೆ** (ತುಳುವಿನಲ್ಲಿ ಬಿಲ) ಅಂದರೆ ಬಿಲ ತೋಡುವ ದೊಡ್ಡ ಪ್ರಾಣಿ ಎಂದೇ ಅರ್ಥ ಕೊಡುವ ಗುಣವಾಚಕ ನಾಮಗಳು.

ಅದಂತಿರಲಿ, ಇಂಗ್ಲೀಷಿಗೆ ಭಾರತ ಕೊಟ್ಟ **ಬ್ಯಾಂಡಿಕೂಟ್** (bandicoot) ದೊಡ್ಡ ಒಂದು ಜಾತಿಯ **ಹೆಗ್ಗಣವನ್ನು** ನಿರ್ದೇಶಿಸುತ್ತದೆಂದು ಗಮನಿಸಬೇಕು. **ಬ್ಯಾಂಡಿಕೂಟ್** ನಿಜಕ್ಕೂ ತೆಲುಗು ಪದ. **ಪಂದಿಕೋತು** ಎಂದರೆ ತೆಲುಗಿನಲ್ಲಿ **ಹಂದಿ ಇಲಿ** ಎಂದರ್ಥ. ಈ ಸ್ವೀಕೃತ ಪದದಿಂದ ಈ ಭಾರಿ ಇಲಿ ಇಂಗ್ಲೀಷ್ ಜನರಿಗೆ ಭಾರತದಲ್ಲೇ ಪರಿಚಯವಾದದ್ದು ಎಂದರೆ ಅದು ತಪ್ಪು ಊಹೆಯಾಗದು. ಏಕೆಂದರೆ ಅದರ ತವರು ಭಾರತ ಮತ್ತು ಸಿಂಹಳ ಎಂದು ಜ್ಞಾನಕೋಶಗಳು ಹೇಳುತ್ತವೆ. ಈ ಮಹಾಮೂಷಕ ಹಂದಿಯಂತೆ ಗುಟುರುಹಾಕುತ್ತದೆಂದು ಪ್ರತೀತಿ.

ನಾವು **ಕಸ್ತೂರಿ** ಎಂದು ಕರೆಯುವ ಆ ಪರಿಮಳ ದ್ರವ್ಯಕ್ಕೆ ಇಂಗ್ಲೀಷಿನಲ್ಲಿ **ಮಸ್ಕ್** (musk) ಎಂಬ ಹೆಸರಿರುವುದು ಸಾಧಾರಣ ಇಂಗ್ಲೀಷ್ ಬಲ್ಲವರಿಗೂ ಗೊತ್ತು. **ಕಸ್ತೂರಿಯನ್ನು** ತನ್ನ ಕೋಶದಲ್ಲಿ ಉತ್ಪಾದಿಸುವ ಕಸ್ತೂರೀಮೃಗ ಹಿಮಾಲಯದಲ್ಲಿ ಮಾತ್ರ ಇರುವ, ಇದ್ದ ಪ್ರಾಣಿ. ಆದ್ದರಿಂದ ಕಸ್ತೂರಿ ಪರದೇಶಗಳಿಗೆ ರಫ್ತಾಗುವಾಗ ಅದು ತನ್ನ ಭಾರತೀಯ ಹೆಸರನ್ನೇ ಹಿಡಿದುಕೊಂಡು ಹೋಯಿತೆಂದು ನಾವು ಸಹಜವಾಗಿ ನಿರೀಕ್ಷಿಸಬೇಕು. ಆದರೆ ಹಾಗಾಗಲಿಲ್ಲ. **ಕಸ್ತೂರಿ** ಎಂಬ ಹೆಸರು ಪರದೇಶದ ಭಾಷೆಗಳಲ್ಲಿ ಅದಕ್ಕೆ ಬರಲಿಲ್ಲ. ಇಂಗ್ಲೀಷ್ **ಮಸ್ಕ್** ಪಾರಸೀಕ **ಮುಷ್ಕ್‌ನಿಂದ** ಅರಬ್ಬೀ ಮೂಲಕ ಯುರೋಪಿಗೆ ಹೋದ ಹೆಸರು. ಇದೂ ಅಸ್ವಾಭಾವಿಕವಲ್ಲ! ಏಕೆಂದರೆ ಅರಬವ್ಯಾಪಾರಿಗಳೇ ಕಸ್ತೂರಿಯ ರಫ್ತಿನ ಮಧ್ಯಸ್ಥರು. ಆದರೆ **ಮುಷ್ಕ** ಎಂಬುದೂ ಪಾರಸೀಕ ಅಥವಾ ಅರಬ್ಬಿ ಪದವಲ್ಲ. ಅದು ಸಂಸ್ಕೃತದ **ಮುಷ್ಕ** ಇರಬೇಕೆಂದು ನಿರ್ವಚನಕಾರರು ಊಹಿಸಿದ್ದಾರೆ. **ಮುಷ್ಕವೆಂದರೆ** ಅಂಡಕೋಶ, ಎಂದರೆ ತರಡು. ಕಸ್ತೂರಿ ಮೃಗದ ಕಸ್ತೂರಿ ಕೋಶವನ್ನು ಅದರ ಅಂಡವೆಂದೇ ಭ್ರಮಿಸಿ ಈ ಹೆಸರನ್ನು ಕೊಟ್ಟಿರಬಹುದೆಂದು ಅವರ ತರ್ಕ.

ಭಾರೋಪ್ಯ ಜನಾಂಗದ ಮೂಲಸ್ಥಾನ ಯಾವುದೇ ಇರಲಿ, ಈ ಜನಕ್ಕೆಲ್ಲ ಮೂಲ ನೆಲೆಯಲ್ಲೇ ಕರಡಿ, ಕಾಡುಹಂದಿ, ತೋಳ ಇವು ಸುಪರಿಚಿತ ಕಾಡುಪ್ರಾಣಿಗಳಾಗಿರಬೇಕು. ಕರಡಿಗೆ ಸಂಸ್ಕೃತದಲ್ಲಿ **ಭಲ್ಲ** ಎಂದು ಹೆಸರಾದರೆ ಇಂಗ್ಲೀಷಿನಲ್ಲಿ **ಬೇರ್** (bear), ಜರ್ಮನ್ ಭಾಷೆಯಲ್ಲಿ **ಬರ್**, ಡಚ್ ಭಾಷೆಯಲ್ಲಿ **ಬೀರ್** (beer) ಇತ್ಯಾದಿ ಹೆಸರು. ಭಾಷೆಗಳಲ್ಲಿ ರ ಮತ್ತು ಲ ವಿನಿಮಯ ಸಾರ್ವತ್ರಿಕವಾಗಿರುವುದರಿಂದ ಇವೆಲ್ಲ ಮೂಲದಲ್ಲಿ ಒಂದೇ ಪದವಿರಬೇಕು. ಪ್ರಾಕ್ ಇಂಡೋ-ಜರ್ಮನ್ ಭಾಷೆಯಲ್ಲಿ **ಭೇರೊ (beero)** ಎಂಬುದು **ಕಂದು** (brown) ಬಣ್ಣ ಎಂಬರ್ಥ ಕೊಡುತ್ತದೆಂದೂ ಕರಡಿಯ ಬಣ್ಣದಿಂದಾಗಿ ಅದಕ್ಕೀ ಹೆಸರು ಬಿದ್ದಿತೆಂದೂ ತರ್ಕ.

ತೋಳಕ್ಕೆ ಸಂಸ್ಕೃತದಲ್ಲಿ **ವೃಕ** ಎಂದು ಹೆಸರಾದರೆ ಇಂಗ್ಲೀಷಿನ **ವುಲ್ಫ್** (wolf), ಜರ್ಮನ್ ಭಾಷೆಯ **ವೂಲ್ಫ್**, ಲ್ಯಾಟಿನ್ನಿನ ಲೂಪಸ್, ಗ್ರೀಕಿನ ಲೈಕೋಸ್ (lykos) ಇವೆಲ್ಲ ವೃಕದ ಜ್ಞಾತಿಪದಗಳೇ. ನಾವು ಹೀನೈಸುವ ಈ ಪ್ರಾಣಿ ಪ್ರಾಚೀನ ಭಾರೋಪ್ಯ ಜನಾಂಗಗಳಲ್ಲಿ ಗೌರವಾರ್ಹ ಪ್ರಾಣಿಯಾಗಿರಬೇಕು. ಏಕೆಂದರೆ ನಮ್ಮ ಭೀಮನ ಇನ್ನೊಂದು ಹೆಸರು ವೃಕೋದರ (ತೋಳ-ಹೊಟ್ಟೆ). ಇಂಗ್ಲೀಷ್ ಮತ್ತು ಜರ್ಮನ್ ಆದಿ ಟ್ಯೂಟಾನಿಕ್ ಜನಾಂಗಗಳಲ್ಲಿ **ವೂಲ್ಫ್** ಎಂಬ ಹೆಸರು ಅರಸರಲ್ಲಿಯೂ ಸರದಾರರಲ್ಲಿಯೂ ಸಾಕಷ್ಟು

ಜನಪ್ರಿಯವಾಗಿತ್ತು. ಇನ್ನೊಂದೆಂದರೆ ತೋಳ ಮತ್ತು ನರಿಗಳ ಬಗ್ಗೆ ಈ ಭಾಷೆಗಳಲ್ಲಿ ಹೆಸರಿನ ಗೊಂದಲ ಇತ್ತು, ಸಂಸ್ಕೃತದಲ್ಲಿ ನರಿಯನ್ನೂ ವೃಕವೆಂದು ಕರೆಯುವುದಿದ್ದ ಹಾಗೆ ಲ್ಯಾಟಿನ್ನಿನಲ್ಲಿ ಕೂಡ ತೋಳನಿಗೆ **ಲೂಪಸ್** ಎಂಬ ಹೆಸರಾದರೆ ನರಿಗೆ ಅದರದೇ ಇನ್ನೊಂದು ರೂಪವಾದ **ವುಲ್ಪೀಸ್** ಎಂಬ ಹೆಸರು.

೬೦

**ಮುದ್ರಾ** ಎಂಬ ಶಬ್ದ ನಮಗೆ ಎಷ್ಟರ್ಥಗಳಲ್ಲಿ ಎಷ್ಟು ಮಟ್ಟಿಗೆ ಪರಿಚಿತವೆಂದರೆ ಅದು ಬೇರೊಂದು ದೇಶದಲ್ಲಿ ಉದ್ಭವಿಸಿರಬಹುದು ಎಂಬ ಕಲ್ಪನೆಯೂ ಅಸಾಧ್ಯವೆನಿಸುತ್ತದೆ. ಯಾವುದಾದರೂ ತಲದ ಮೇಲೆ ಒತ್ತಿದ ಗುರುತು ಮತ್ತು ಆ ಗುರುತನ್ನು ಮಾಡಲು ಉಪಯೋಗಿಸಿದ ಸಾಧನ **ಮುದ್ರಾ** ಎನ್ನಿಸುತ್ತದೆ. ಮಹಾಭಾರತ ಮತ್ತು ಹರಿವಂಶದಷ್ಟು ಹಿಂದೆ ಹೋಗುವ ಈ ಪದಕ್ಕೆ **ಅಚ್ಚು, ಗುರುತು,** ಗುರುತಿಗಾಗಿ ಕೊಡುವ ವಸ್ತು, **ರಹದಾರಿ** ಮೊದಲಾದ ಅರ್ಥಗಳು ಟಿಸಿಲೊಡೆದುವು. ರಾಜಮಹಾರಾಜರೇ ಮೊದಲಾದ ಆಢ್ಯರು ತಾವು ಬರೆಸುವ ಪತ್ರ, ಸನದು ಮೊದಲಾದ ದಾಖಲೆಗಳ ಮೇಲೆ ತಮ್ಮ ಹೆಸರು ಅಥವಾ ರಾಜಚಿಹ್ನವನ್ನು ಒತ್ತುವ ಮುದ್ರೆಯನ್ನು ತಮ್ಮ ಉಂಗುರಗಳ ಮೇಲೆ ಕೆತ್ತಿಸಿರುತ್ತಿದ್ದುದರಿಂದ ಆ **ಉಂಗುರವೂ** ಮುದ್ರೆಯಾಯಿತು. ಹೀಗೆ **ಮುದ್ರಾರಾಕ್ಷಸ** ನಾಟಕಕ್ಕೆ ಹೆಸರು. ಇಂಥ ಪಡಿಯಚ್ಚಿನಿಂದ ಬಹಳ ಪ್ರತಿಗಳನ್ನು ಮಾಡುವುದಕ್ಕೆ **ಮುದ್ರಣವೆಂಬುದು** ಆಧುನಿಕ ಅನ್ವಯ. ಅಧಿಕಾರವಂತರು ಕಳಿಸುವ ಗುಪ್ತಪತ್ರವನ್ನು ಮುಚ್ಚಿ ಅದನ್ನು ಯಾರಿಗೆ ಉದ್ದೇಶಿಸಿದೆಯೋ ಅವರಲ್ಲದೆ ಇತರರು ಓದದಂತೆ ಅದರ ಬಾಯಿಗೆ ಕರಗಿಸಿದ ಅರಗು ತಾಗಿಸಿ ಅದರ ಮೇಲೆ ತಮ್ಮ ಕುರುಹನ್ನು ಅಚ್ಚೊತ್ತಿದರೆ ಅದು **ಮುದ್ರಿತ** ಪತ್ರ. ಈ ಅಭಿಸಂಧಿಯನ್ನೇ ವಿಸ್ತರಿಸಿದರೆ ಮನೆಗೆ **ಬೀಗ ಮುದ್ರೆ** ಆಗುತ್ತದೆ; ಮತ್ತೂ ವಿಸ್ತರಿಸಿ, ಮುಚ್ಚಿದ್ದೆಲ್ಲ **ಮುದ್ರಿತವಾಯಿತು** – ಹೀಗೆ **ಮುದ್ರಿತ ನೇತ್ರ** – ಮುಚ್ಚಿದ ಕಣ್ಣು. ಇರುಳು ಮುದ್ರಿತಕೊಂಡ ಕಮಲಿನಿಯ ಕಣ್ಣಿಗೆ ಸೂರ್ಯನು ಕಿರಣಗಳಿಂದ ಮುತ್ತಿಟ್ಟು ಅದನ್ನು ತೆರೆಯುತ್ತಾನೆಂದು ಕವಿ ಕಲ್ಪನೆ! ನಮಗೆ ಅರ್ಥವಾಗದ್ದು ನಮಗೆ **ಮುದ್ರಿತ,** ಅಂದರೆ ರಹಸ್ಯವಾಗಿಯೆ ಉಳಿಯುತ್ತದೆ. ಬೆರಳುಗಳ ಅಚ್ಚು **ಅಂಗುಲಿ ಮುದ್ರೆ.** ಆ ಮೇಲೆ ಯಾವ ಅಚ್ಚೊತ್ತು ಕೂಡ ಇಲ್ಲದೆ, ಮಾಡುವ ನೃತ್ಯಕಾರರ ಬೆರಳುಗಳ ವಲನಗಳು **ನೃತ್ಯ ಮುದ್ರೆಗಳು.** ಯಾವ ತರದ ಹಸ್ತ ಸಂಕೇತದ ಅರ್ಥ ಏನೆಂದು ನಿಮಗೆ ಗೊತ್ತಿದ್ದರೆ ಮಾತ್ರ ಈ ಮುದ್ರೆಗಳನ್ನು ನೀವು ಒಡೆಯಬಲ್ಲಿರಿ. ಧರ್ಮಾಚಾರ್ಯರು ಪಾಠ ಹೇಳುವಾಗ ಹೆಬ್ಬೆರಳು ಕಿರುಬೆರಳುಗಳ ತುದಿಗಳನ್ನು ಜೋಡಿಸಿ ಅದನ್ನು ಶಿಷ್ಯರ ಕಡೆಗೆ ತಿರುಗಿಸುವುದು **ಜ್ಞಾನಮುದ್ರೆ.** ನಿಮ್ಮ ಮುಖದ ವಿಶಿಷ್ಟವಾದ ಪೋಸ್ ಅಥವಾ ಭಾವ ನಿಮ್ಮ **ಮುಖಮುದ್ರೆ.** ನಿಮ್ಮ ಅಂಗೈಯಲ್ಲಿರುವ ಗುರುತುಗಳ ಮೇಲಿಂದ ನಿಮ್ಮ ಭವಿಷ್ಯ ಹೇಳುವುದು **ಸಾ–ಮುದ್ರಿಕ ಶಾಸ್ತ್ರ. ಸಮುದ್ರಕ್ಕೂ ಸಾಮುದ್ರಿಕಕ್ಕೂ** ಸಂಬಂಧ ಇಲ್ಲ. ಅದು ಸು + ಉದ್ + ರ = ಉದಕದ (= ನೀರು) ದೊಡ್ಡ ರಾಶಿ. ನಾಣ್ಯಗಳಲ್ಲಿ ರಾಜನ ಕುರುಹು ಅಚ್ಚೊತ್ತಿರುವುದರಿಂದ **ನಾಣ್ಯವೂ** ಮುದ್ರೆಯೇ.

ಈ ಮತ್ತು ಇನ್ನೆಷ್ಟೂ ಅರ್ಥಚ್ಛಾಯೆಗಳಿಂದ ನಮಗೆ ಪರಿಚಿತವಾದ ಈ ಶಬ್ದ

ಬಂದದ್ದು ಪುರಾತನ ಪಾರಸೀಕ ಭಾಷೆಯಿಂದ. ಸಂಸ್ಕೃತದ ಯಾವುದೇ ಧಾತುವಿನಿಂದ ಈ ಶಬ್ದಕ್ಕೆ ನಿಷ್ಪತ್ತಿ ಸಾಧಿಸುವುದು ಕರಕಷ್ಟ. ಹಾಗೆ ಪಾರಸೀಕ ಭಾಷೆಯಿಂದಲೂ ಅದನ್ನು ಸಾಧಿಸಲುಬಾರದು ; ಹಳೇ ಪರ್ಶಿಯನ್ ಭಾಷೆಯಲ್ಲಿ ಇಜಿಪ್ತ್ ದೇಶಕ್ಕೆ ಮಿಜ್ರ, ಮಿಷ್ರ ಎಂಬ ಪದಗಳಿದ್ದುವು. ಪಾರಸೀಕ ದೇಶಗಳಲ್ಲಿ ಬಳಸುತ್ತಿದುದಕ್ಕಿಂತ ಭಿನ್ನವಾದ ಆಕಾರವುಳ್ಳ ಇಜಿಪ್ತ್ ಮಾದರಿಯ ಅಚ್ಚುಗಳನ್ನು ಬಳಸುವಾಗ ಪ್ರಾಚೀನ ಪಾರಸೀಕರು ಆ ದೇಶದ ಹೆಸರನ್ನೇ ಬಳಸಿದರು. ಸಂಸ್ಕೃತಕ್ಕೆ ಅದನ್ನು ಸ್ವೀಕರಿಸಿದಾಗ ಅದು ಮಿಜ್ರನಿಂದ ಮಜ್ರ–ಮುದ್ರ್–ಮುದ್ರಾ ಎಂದು ರೂಪಾಂತರ ಹೊಂದಿತೆಂದು ಪ್ರೊ. ಸುನೀತಿಕುಮಾರ ಚಟರ್ಜಿ ಹೇಳಿದ್ದಾರೆ.

ಈ ಮುದ್ರೆಯಿಂದ **ಮುದ್ರಿಕೆ**. ಕನ್ನಡದಲ್ಲಿ ಶರಣರು, ದಾಸರು, ಕವಿಗಳು, ಹಾಡು, ವಚನ ಅಥವಾ ಕಾವ್ಯಗಳನ್ನು ಬರೆದಾಗ ಅವು ತಮ್ಮವೆಂದು ಸಾರುವುದಕ್ಕೆ ಕೊನೆಯಲ್ಲಿ ಸೇರಿಸುವ ಪದಪುಂಜ **ಮುದ್ರಿಕೆ**ಯೆನ್ನಿಸಿತು. ಬಸವೇಶ್ವರರ 'ಕೂಡಲ ಸಂಗಮದೇವ,' ಪುರಂದರದಾಸರ 'ಪುರಂದರ ವಿಠಲ' ಇತ್ಯಾದಿ.

ಹಾಗೆಯೇ ಕನ್ನಡದಲ್ಲಿ **ಉಂಡಿಗೆ** ಮತ್ತು **ಮುಂಡಿಗೆ** ಎಂಬೆರಡು ಪದಗಳು ಕೂಡ **ಮುದ್ರಿಕೆ**ಯ ತದ್ಭವಗಳೆಂದು ನನಗೆ ಅನಿಸುತ್ತವೆ. **ಉಂಡಿಗೆ** ಎಂದರೆ ಕೋಟೆ, ಸೈನ್ಯಶಿಬಿರ ಮೊದಲಾದ ರಕ್ಷಿತ ಸ್ಥಳಗಳಲ್ಲಿ ಪ್ರವೇಶಿಸಲು ಅಧಿಕೃತರಾದವರಿಗೆ ಕೊಡುವ **ಕುರುಹಿನ ವಸ್ತು**. ಅದನ್ನು ತೋರಿಸಿದರೆ ಮಾತ್ರ ಪ್ರವೇಶ. ಕನಕದಾಸರೇ ಮೊದಲಾದವರು, ತೋರಿಕೆಗೆ ಅನರ್ಥಕವಾದ ಆದರೆ ವಿಮರ್ಶಿಸಿದರೆ ರಹಸ್ಯಾರ್ಥವುಳ್ಳಂತೆ ಬರೆದ ಪದ್ಯಗಳಿಗೆ **ಮುಂಡಿಗೆ** ಎಂದು ಹೆಸರು. **ಒಗಟು** ಎಂದು ಅದರರ್ಥ. ಸಂಸ್ಕೃತದ ದ, ತ–ಗಳು ಡ, ಟ–ಗಳಾಗಿ (ಅದೂ ಹತ್ತಿರದಲ್ಲಿ ರ–ಕಾರ ಇರುವಾಗ) ಮಾರ್ಪಡುವುದು ಪ್ರಾಕೃತಗಳಲ್ಲಿ ಕಾಣಿಸುವ ಒಂದು ಒಲವು. ಇಲ್ಲಿ ಹಾಗಾಗಿ ಹೊಸ ಶಬ್ದಗಳು ರೂಪುಗೊಂಡಿವೆ. **ಉಂಡಿಗೆ**ಯಲ್ಲಿ ಮೊದಲ ಮಕಾರ ಬಿದ್ದುಹೋಗಿದೆ. ಎರಡೂ ಮುದ್ರಿಕೆಗಳೇ — ರಹಸ್ಯವಾಗಿರುವುದರಿಂದ.

ಪಾರಸೀಕ ಭಾಷೆಯಿಂದಲೇ ಬಂದ ಅದೇ ಅರ್ಥದ ಇನ್ನೊಂದು ಪದ **ಮೊಹರ್**. ಅದು ಕೂಡ ಮೇಲಿನ **ಮುದ್ರಾದ್ದೇ** ಇನ್ನೊಂದು ಆಧುನಿಕ ರೂಪ ಇರಬೇಕು. ಆದರೆ ಅದು ನಮ್ಮ ಭಾಷಾಧಾರೆಯಲ್ಲಿ ಬಂದು ಸೇರಿದ್ದು ಈಚೆಗೆ — ಮುಸಲ್ಮಾನ ಆಳಿಕೆಯ ಸಂಗಡ **ಮೊಹರ್–ಬಂದ್** ಪತ್ರ ಇತ್ಯಾದಿ. ಅದಕ್ಕೆ ಅಚ್ಚು ಒತ್ತುವ ಸಾಧನ, ಬಂಗಾರದ ನಾಣ್ಯ ಇತ್ಯಾದಿ ಅರ್ಥಗಳಿದ್ದರೂ ಮುದ್ರೆಯಷ್ಟು ಶಾಖೋಪಶಾಖೆಗಳನ್ನು ಅದು ಬೆಳೆಸಿಕೊಳ್ಳಲಿಲ್ಲ. ಅದೇ ಅರ್ಥದ ಸಿಕ್ಕಾ ಎಂಬ ಪದವನ್ನು ಕೋಶಗಳು ಅರಬ್ಬಿ ಭಾಷೆಯದೆಂದು ಹೇಳುತ್ತವೆ. ಅದೂ ಕನ್ನಡದಲ್ಲಿ ಮೊಹರಿನ ಅರ್ಥವ್ಯಾಪ್ತಿಯನ್ನಷ್ಟೇ ಹೊಂದಿದೆ; ಟಪಾಲು **ಸಿಕ್ಕಾ**, ಕೋರ್ಟ್ ಸಿಕ್ಕಾ ಇತ್ಯಾದಿ. ಅದು ಮೂಲತಃ **ಅರಾಮಿಕ್** ಭಾಷೆಗೆ ಸೇರಿದ **ಸೈಕ್**, **ಸಿಕ್ಕತ್** ಪದವಾಗಿದೆ. ಅದು ಲ್ಯಾಟಿನ್ ಮೂಲಕ ಯುರೋಪಿಗೆ ಸಾಗಿ ಫ್ರೆಂಚ್, ಇಂಗ್ಲೀಷ್ ಭಾಷೆಗಳಲ್ಲಿ **ಸೈನ್** (sign) = ಗುರುತು, **ಸಿಗ್ನೇಚರ್** (signature) = **ಸಹಿ, ದಸ್ಕತ್ತು**, **ಸಿಗ್ನೆಟ್** (signet) = ಮುದ್ರೆಯುಂಗುರ ಇತ್ಯಾದಿ ಅರ್ಥಗಳನ್ನು ಸಂಪಾದಿಸಿದೆ. **ಸಿಕ್ಕಾ** ಕೂಡ ಈಚೆಗೆ ನಮ್ಮಲ್ಲಿ ಬಂದು ಸೇರಿಕೊಂಡ ಪದ. ಸಂಸ್ಕೃತದಲ್ಲಿ **ಶಿಕ್ಯ** ಎಂಬ ಇನ್ನೊಂದು ಶಬ್ದ ಇದೆ. ಅದರ ಅರ್ಥ **ನೆಲುವು** (ಹಾಲು ಮೊಸರನ್ನಿಡಲು ಹಗ್ಗದಿಂದ ಮಾಡಿ ತೂಗ ಹಾಕಿದ ಸಾಧನ). ಆದಕ್ಕೂ ಮೇಲಿನ ಸಿಕ್ಕಾಕ್ಕೂ ಸಂಬಂಧ ಇಲ್ಲ. ಅದು ಬಹುಶಃ ದ್ರಾವಿಡ

ಮೂಲದ್ದು. ಕೋಲಾಮಿ ಭಾಷೆಯಲ್ಲಿ ಸಿಕ್ಕ್ ಧಾತುವಿಗೆ ತೂಗಹಾಕು ಎಂಬರ್ಥವಿದೆ.

೬೧

**ಕಪಾಟು, ಕವಾಟು** ಶಬ್ದಗಳು ಈಗ ಸ್ವಲ್ಪ ಹಿಂದೆ ಬೀಳುತ್ತಿದ್ದರೂ ಎಲ್ಲರಿಗೂ ಗೊತ್ತಿರುವವೇ. ಕನ್ನಡಿ ಕವಾಟು, ಉಕ್ಕಿನ ಕಪಾಟು ಇವೆ. ಒಳಗೆ ಏನನ್ನಾದರೂ ಭದ್ರವಾಗಿಡಬಹುದಾದಂಥ, ಬಾಗಿಲುಳ್ಳ, ಮರದ ಅಥವಾ ಲೋಹದ ಗೂಡು ಅದು. ಆದರೆ ಈ ಶಬ್ದಗಳ ಬೆನ್ನು ಹತ್ತಿ ಹೋದರೆ ಹಿಂದೆ ಸಂಸ್ಕೃತದಲ್ಲಿ **ಕಪಾಟ**ಕ್ಕೆ ಇದ್ದದ್ದು ಬರೀ ಬಾಗಿಲ **ಪಡಿ** ಅಥವಾ **ಕದ** ಎಂಬರ್ಥ ಮಾತ್ರ. ಮನೆಯ ಕದಗಳೂ ಕಪಾಟ ಅಥವಾ ಕವಾಟಗಳೇ. ಮಹಾಭಾರತದಲ್ಲಿಯೇ **ಕದ** ಎಂಬರ್ಥದಲ್ಲಿ **ಕಪಾಟ** ಇದೆ. ಪ್ರಾಚೀನ ಕನ್ನಡ ಪ್ರಯೋಗಗಳೂ ಇದೇ ಅರ್ಥದಲ್ಲಿವೆ. ಹಿಂದಿ ಬಂಗಾಲಿಗಳಲ್ಲಿ ಕೂಡ ಕಪಾಟಕ್ಕೆ ಬಾಗಿಲುಳ್ಳ ಗೂಡೆಂಬ ಅರ್ಥ ಈಗಲೂ ಇಲ್ಲ. ಕನ್ನಡದಲ್ಲಿ ಇದು ತೀರ ಈಚೆಗೆ ತಾನೇ ಆ ಅರ್ಥ ಕೊಡುವ ಪದವಾಗಿದೆ. ಎಷ್ಟು ಮಟ್ಟಿಗೆಂದರೆ ಅದರ ಮೂಲಾರ್ಥವೇ ಮರೆತುಹೋಗಿದೆ. ಭಾಷೆಗಳಲ್ಲಿ ಆಗಾಗ್ಗೆ ಕಾಣಿಸುವ, ಅಂಶದ ಹೆಸರನ್ನು ಇಡೀಗೆ ಅನ್ವಯಿಸುವ ಒಲವಿನ ಉದಾಹರಣೆಗಳಲ್ಲಿ ಇದೊಂದು. ಕಪಾಟವುಳ್ಳದ್ದು ಕಪಾಟು.

**ಕವಾಟ** ಎಂಬುದು **ಕವಚ** ಶಬ್ದದ ಬಂಧುವೇ ಆಗಿದೆ. ಎರಡೂ **ಕವ್** ಎಂಬ ಬೇರಿನ ಪದಗಳು. ಅರ್ಥ ಮುಚ್ಚು, ಮರೆಮಾಡು ಇತ್ಯಾದಿ. **ಕವಾಟ, ಕಪಾಟ, ಕವಚ**ಗಳು ನಮಗೆ ಬಂದದ್ದು ಸಂಸ್ಕೃತದಿಂದಾದರೂ ಮೂಲತಃ ಅವು ದ್ರಾವಿಡದಿಂದಲೇ ಸಂಸ್ಕೃತಕ್ಕೆ ಹೋದಹಾಗಿವೆ. ಅನೇಕ ದ್ರಾವಿಡ ಭಾಷೆಗಳಲ್ಲಿ **ಕವ್, ಕಪ್** ಬೇರುಗಳು ಮುಚ್ಚು, ಮುಗಿಬೀಳು ಎಂಬರ್ಥವನ್ನು ಸೂಚಿಸುತ್ತವೆ. ಉದಾಹರಣೆಗೆ ಕನ್ನಡದ **ಕವಿ, ಕವಿಚು**. ಆದರೂ ಇಂಗ್ಲೀಷಿನ **ಕವರ್**ನಿಂದ (cover) ವ್ಯಕ್ತವಾಗುವಂತೆ ಈ ಬೇರು ಭಾರೋಪ್ಯ ಭಾಷೆಗಳಲ್ಲಿಯೂ ಇದೆ.

ಇಂಗ್ಲೀಷ್ ಕಲಿತವರಲ್ಲಿ ಕವಾಟದ ಬದಲು **ಅಲ್ಮೈರಾ** (almirah, almyra) ಪ್ರಚಾರಕ್ಕೆ ಬಂದಿದೆ. ಇದರ ಕಥೆ ತುಸು ವಿಚಿತ್ರ. ಆದರ ಉಗಮ ಲ್ಯಾಟಿನ್ ಭಾಷೆಯಲ್ಲಿದೆ. ಮೂಲ ಲ್ಯಾಟಿನ್ನಿನಲ್ಲಿ **ಆಯುಧಾಗಾರ** ಎಂಬರ್ಥದ **ಆರ್ಮಾರಿಯಮ್** (armarium ; arma = ಆಯುಧ, arium ಆಗಾರ) ಎಂಬುದು ಮುಂದೆ ಪೋರ್ಚುಗೀಸ್ ಭಾಷೆಯಲ್ಲಿ **ಅಲ್ಮಾರಿಯೊ** (almario) ಆಗಿ ಅರ್ಥಸಂಕೋಚ ಪಡೆಯಿತು. ಪೋರ್ಚುಗೀಸಿನಿಂದ ಅದು ಹಿಂದುಸ್ತಾನಿಗೆ ಹೋಗುವಾಗ **ಅಲ್ಮಾರಿ** ಆಯಿತು. ಅದನ್ನು ಇಂಗ್ಲೀಷು ೧೯ನೇ ಶತಮಾನದ ಪ್ರಾರಂಭದಲ್ಲಿ **ಅಲ್ಮೈರಾ** ಮಾಡಿ ತೆಗೆದುಕೊಂಡಿತು. ನಮಗೆ ಅದು ಬಂದದ್ದು ನಮ್ಮದೇ ಉರ್ದು ಅಥವಾ ಹಿಂದುಸ್ತಾನಿಯಿಂದಾಗಿರದೆ ಇಂಗ್ಲೀಷಿನಿಂದ. ಹೀಗೆ ಅದು ಯುರೋಪಿನಿಂದ ಒಂದೂವರೆ ಸುತ್ತು ಬಳಸಿ ಕನ್ನಡಕ್ಕೆ ಬಂದಿದೆ.

ಕಪಾಟಿನ ಬದಲು ಬಳಕೆಗೆ ಬರುತ್ತಿರುವ ಇಂಗ್ಲೀಷಿನ **ಬ್ಯೂರೊ** (bureau) ಕೂಡ ಮೂಲತಃ ಕಪಾಟಲ್ಲ. ಕಚೇರಿಗಳಲ್ಲಿ ಬರೆಯುವ **ಡೆಸ್ಕು**ಗಳು ಬ್ಯೂರೋಗಳಾಗಿದ್ದುವು. ಬ್ಯೂರೋಗೆ ಅದಕ್ಕೂ ಹಿಂದಿನ ಅರ್ಥ ಬರೆಯುವ ಮೇಜುಗಳನ್ನು ಮುಚ್ಚಲು ಆಗ ಬಳಸುತ್ತಿದ್ದ ಒಂದು ಬಗೆಯ ಒರಟು ಕೆಂಪು ಉಣ್ಣೆ ಬಟ್ಟೆಯೆಂದು. ಮುಂದೆ ಅದು

ಬರೆಯುವ ಮೇಜಿಗೇ ಅನ್ವಯಿಸಿತು; ಆ ಬಳಿಕ ಅದು ಹೇಗೋ ಏನೋ ಬರೆಯಲು ಮೇಲೊಂದು ಹಲಗೆ ಜೋಡಿಸಿದ, ಚಲಿಸುವ ಅನೇಕ ಅರೆ (ಡ್ರಾಯರು) ಗಳಿಂದ ಕೂಡಿದ ಮೇಜಾಯಿತು. ಕಡೆಗೀಗ ಅದು ಅರೆ ಅಥವಾ ಖಾನೆಗಳುಳ್ಳ ಕಪಾಟ ಎಂಬರ್ಥಕ್ಕೆ ಬೆಳೆದಿದೆ. ಎಲ್ಲಿ ಉಣ್ಣೆ ಬಟ್ಟೆ ಎಲ್ಲಿ ಕಪಾಟು! **ಬ್ಯೂರೋ** (ಲ್ಯಾಟಿನ್ ಮೂಲದ) **ಫ್ರೆಂಚ್** ಪದ. ಲ್ಯಾಟಿನ್ನಿನಲ್ಲಿ **ಬುರಸ್** (burrus) ಅಂದರೆ ಕೆಂಪು.

ಇನ್ನೂರೈವತ್ತು ವರ್ಷದ ವಿಕಾಸದಲ್ಲಿ ಈ ಪದ ಇಂಗ್ಲೀಷಿನಲ್ಲಿ ತನ್ನ ಅರ್ಥದಲ್ಲಿ ಇನ್ನೂ ಟಿಸಿಲುಗಳನ್ನು ಬೆಳೆಸಿದೆ. **ಬ್ಯೂರೋ** ಅಂದರೆ **ಕಚೇರಿ**; ಏಕೆಂದರೆ ಅರೆಗಳುಳ್ಳ ಬರೆಯುವ ಮೇಜುಗಳನ್ನು ಕಚೇರಿಗಳಲ್ಲಲ್ಲವೇ ಬಳಸುವುದು? ಹೀಗೆ ಸರಕಾರಿ ಕಚೇರಿಗಳೂ ವಿಭಾಗಗಳೂ ಬ್ಯೂರೋಗಳಾಗಿವೆ. ಆ ಕಚೇರಿಗಳಲ್ಲಿ ಕೆಲಸಮಾಡುವ ಅಧಿಕಾರಿಗಳು **ಬ್ಯೂರೋಕ್ರಟ್ಸ್** (bureaucrats) ಆದರು. (ಗ್ರೀಕಿನಲ್ಲಿ kratos ಅಂದರೆ ಅಧಿಕಾರ). ಅವರ ಗುಂಪನ್ನು ನಾವು **ಅಧಿಕಾರಶಾಹಿ** ಅಥವಾ **ನೌಕರಶಾಹಿ** ಎಂದು ಕನ್ನಡಿಸಿದ್ದೇವೆ. ಆದರೆ ನಿಜಕ್ಕೂ ಅದು **ಕಚೇರಿಶಾಹಿ**. ತಮ್ಮ ಅಧಿಕಾರ, ತಮ್ಮ ನಿಯಮಗಳು ಇವುಗಳಲ್ಲೇ ಮಗ್ನರಾಗಿ ಆಡಳಿತಗಾರರು ಮಾನವ ಸುಖ ದುಃಖಗಳನ್ನು ಲೆಕ್ಕಿಸದಿರುವುದರಿಂದ ಇಂದು ಈ ಕೆಟ್ಟ ಅರ್ಥದಲ್ಲಿ **ಬ್ಯೂರೋಕ್ರಟ್** ಪದವನ್ನು ಹೆಚ್ಚಾಗಿ ಪ್ರಯೋಗಿಸಲಾಗುತ್ತದೆ. ಇಂಥ ಅಧಿಕಾರಿಗಳ ಪ್ರಭುತ್ವವನ್ನು **ಬ್ಯುರೋಕ್ರಸಿ** ಎಂದು ಭಯಮಿಶ್ರಿತ ತಿರಸ್ಕಾರದಿಂದ ಕರೆಯುತ್ತೇವೆ. ಈಗ ದೊಡ್ಡದಾಗಿ ಬೆಳೆದ ಖಾಸಗಿ ಸಂಸ್ಥೆಗಳೂ **ಬ್ಯೂರೋಕ್ರಸಿಗಳೇ** ಆಗುತ್ತಿವೆ.

ಪ್ರಸಾಧನ ಮತ್ತು ಕ್ಷೌರ ವಿದ್ಯೆಯ ಅತ್ಯಾಧುನಿಕ ವಿಧಾನಗಳಲ್ಲಿ **ಶಾಂಪೂ** ಅಥವಾ **ಶಂಪೂ** ಒಂದು. ಆಧುನಿಕ ಸಿಂಗಾರಿಗಳು ತಮ್ಮ ತಲೆಗಳನ್ನು **ಶಂಪೂ** ದ್ರವದಿಂದ ತಿಕ್ಕಿ ತೊಳೆಯುತ್ತಾರೆ. ಆಧುನಿಕ ಕ್ಷೌರಿಕರು ನಿಮ್ಮ ತಲೆಗಳನ್ನು **ಶಂಪೂ** ಮಾಡಿ ನಿಮ್ಮಿಂದ ಹಣ ಕೀಳುತ್ತಾರೆ. ಆದರೆ ಈ **ಶಂಪೂ** ಶಬ್ದ ಎಲ್ಲಿಂದ ಬಂತು ಗೊತ್ತೇ? ಶಬ್ದ ಕೇಳಿದರೆ ಅದು ಫ್ರೆಂಚೋ ಮತ್ತೇನೋ ಅನ್ನಿಸುತ್ತದೆ. ಆದರೆ ನಿಜಕ್ಕೂ ಅದು ಭಾರತದಿಂದ ಇಂಗ್ಲೀಷಿಗೆ ಸೇರಿಕೊಂಡ ಹಿಂದೀ ಶಬ್ದ. **ಚಾಂಪನಾ**, **ಚಂಪನಾ** ಎಂದರೆ ಒತ್ತುವುದು, ತಿಕ್ಕುವುದು, ಮಾಲೀಸು ಮಾಡುವುದು. ಬಹುಶಃ ನಮ್ಮ **ಚಪ್ಪರಿಸು** ಪದದ ಜ್ಞಾತಿ ಇದು. ನಮ್ಮ ಕ್ಷೌರಿಕರು ಈ ಒತ್ತುವಿಕೆ, ಮರ್ದನದಲ್ಲಿ ಬಲು ಪ್ರವೀಣರು. ೧೭೬೨ರಿಂದ ಇಂಗ್ಲೀಷಿನಲ್ಲಿ ಕಾಣಿಸಿಕೊಳ್ಳುವ ಈ ಪದ ಮೈ ತಿಕ್ಕುವುದು, ಕುದುರೆ ಮಾಲಿಸು ಇತ್ಯಾದಿ ಅರ್ಥಗಳನ್ನು ಒಳಗೊಂಡಿದೆ. ಯುರೋಪಿಯನ್ನರಿಗೆ ಈ **ಶಾಂಪೂ** ಗೊತ್ತಿದ್ದಿಲ್ಲ; ಅದು ಚೀನಿಯರಿಗೆ ಪ್ರಿಯವಾಗಿತ್ತು; ಟಿಪ್ಪೂ ಸುಲ್ತಾನನು ದಿನಾ ನಸುಕಿನಲ್ಲಿ ಶಾಂಪೂ ಮಾಡಿಸಿಕೊಳ್ಳುತ್ತಿದ್ದ ಇತ್ಯಾದಿ ಉಲ್ಲೇಖಗಳು ಇಂಗ್ಲೀಷ್ ಪ್ರವಾಸ ಕಥನಗಳಲ್ಲಿ ಬರುತ್ತವೆ.

ಇಂಗ್ಲೀಷಿನ **ಗೋಡೌನ್** (godown) ಸಾಮಾನು ಶೇಖರಿಸುವ ವಖಾರ ಅಥವಾ ಉಗ್ರಾಣ ಎಂಬರ್ಥದಲ್ಲಿ ಈಗ ಸರ್ವಪರಿಚಿತವಾಗಿದೆ. ಇದನ್ನು ಮಲಯಿ ಭಾಷೆಯಿಂದ (ಗುಡಂಗ್) ಇಂಗ್ಲೀಷರು ತೆಗೆದುಕೊಂಡರಂತೆ. ಆದರೆ ಅದು ಮಲಯಿಗೆ ತೆಲುಗಿನಿಂದ ಹೋಯಿತು. ತೆಲುಗಿನಲ್ಲಿ **ಗಿಡಂಗು** ಎಂದರೆ ದಾಸ್ತಾನಿನ **ಉಗ್ರಾಣ**. ಕನ್ನಡದ **ಗಡಂಗು** ಕೂಡ ಅದೇ. ತಮಿಳಿನಲ್ಲಿ ಅದೇ **ಕಿಟಂಕು** ಅಥವಾ **ಕಿಡಂಗು**. ಕನ್ನಡ **ಗಡಂಗು** ಹೆಂಡದಂಗಡಿ ಎಂಬ ವಿಶೇಷಾರ್ಥವನ್ನೂ ಸಂಪಾದಿಸಿದೆ. ೧೬ನೇ ಶತಮಾನದ ಅಂತ್ಯದಿಂದ ಇಂಗ್ಲೀಷಿನಲ್ಲಿ

ಸೇರಿಕೊಂಡ **ಗಡಂಗು ಗೋಡೌನ್** (= ಇಳಿದು ಹೋಗು) ಎಂಬರ್ಥ ಕೊಡುವ ಸ್ಪೆಲ್ಲಿಂಗನ್ನು ಪಡೆದದ್ದಕ್ಕೂ ಒಂದು ಕಾರಣವಿದೆ. ಈ ದಾಸ್ತಾನಿನ ಉಗ್ರಾಣಗಳು ಬಹುತರವಾಗಿ ನೆಲಮಾಳಿಗೆಗಳಾಗಿರುತ್ತಿದ್ದುವು. **ಇಳಿದು** ಹೋಗಬೇಕಾದ ಸ್ಥಳವಾದ್ದರಿಂದ ಅದು **ಗೋಡೌನ್** ಎಂಬುದಾಗಿ ಅಂಗೀಕೃತವಾಯಿತು. ಕನ್ನಡದಲ್ಲಿ ಮೊದಲು ಸಾಮಾನಿನ ಉಗ್ರಾಣ ಎಂಬರ್ಥ **ಗಡಂಗಿಗೆ** ಇದ್ದರೂ ಕಾಲಾಂತರದಲ್ಲಿ ಅದು ಹೆಂಡದಂಗಡಿಯೆಂಬರ್ಥಕ್ಕೆ ತಿರುಗಿದ್ದರಿಂದಲೋ ಏನೋ ಇಂಗ್ಲೀಷಿನಿಂದ ತೆಗೆದುಕೊಂಡ **ಗೋಡೌನ್** ಹೊಸ ರೂಪ ತಳೆದು **ಗುದಾಮು** ಆಗಿದೆ.

೬೨

ದೊಡ್ಡ **ರಾದ್ಧಾಂತ** ಆಗಿಹೋಯಿತು ಅಥವಾ ಎದ್ದುಹೋಯಿತು ಎನ್ನುತ್ತೇವೆ, ದೊಡ್ಡ ಜಗಳ, ಕೋಲಾಹಲ ಎದ್ದಿತು ಎಂದು ತಾತ್ಪರ್ಯ. ಆದರೆ **ರಾದ್ಧಾಂತ** ಎಂಬ ಶಬ್ದಕ್ಕೆ ಸಂಸ್ಕೃತ, ಹಿಂದಿ, ಬಂಗಾಲಿ ಅಥವಾ ಮರಾಠಿ ಕೋಶಗಳಲ್ಲಿ ಕೋಲಾಹಲ ಅಥವಾ ಗಲಾಟೆ ಎಂಬರ್ಥ ಕಾಣಿಸುವುದಿಲ್ಲ. ಇದು ಕನ್ನಡದಲ್ಲಿಯೂ ಕಿಟ್ಟೆಲ್ ಕೋಶದ ಹೊಸ ಆವೃತ್ತಿಯಲ್ಲಿ ತಾನೇ ಹೊಸದಾಗಿ ಸೇರಿಸಿದ ಅರ್ಥವಾಗಿದೆ. ನಿಜಕ್ಕೂ ಸಂಸ್ಕೃತದಲ್ಲಿ **ರಾದ್ಧಾಂತ** ಎಂದರೆ **ಸಿದ್ಧಾಂತ.** ರಾದ್ಧಾಂತ ಎಂಬ ಒಳ್ಳೇ ಅರ್ಥದ ಪದಕ್ಕೆ ಈ ವಿಪರೀತಾರ್ಥ ಹೇಗೆ ಉಂಟಾಯಿತು ? **ರಾಧ್** ಧಾತುವಿಗೆ ಸಂಸ್ಕೃತದಲ್ಲಿ ಬೇರೆ ಅರ್ಥಗಳೊಡನೆ ಹೊಡೆ, ಬಡಿ, ಕೊಲ್ಲು ಎಂಬರ್ಥಗಳು ಇರುವುದು ನಿಜವಾದರೂ ಆ ಅರ್ಥಚ್ಛಾಯೆಯಿಂದ ಕನ್ನಡದ **ರಾದ್ಧಾಂತ** ತನ್ನ ಅರ್ಥವನ್ನು ರೂಪಿಸಿಕೊಂಡಂತೆ ಕಾಣದು. **ಸಿದ್ಧಾಂತದಿಂದಲೇ** ಅರ್ಥಹ್ರಾಸವಾಗಿ ನಿಜಾರ್ಥಕ್ಕೆ ಅದು ಜಾರಿದೆ. **ಸಿದ್ಧಾಂತ** ಎಂದರೆ ಏನು ? ವಾದವಿವಾದವಾಗಿ ಕೊನೆಯಲ್ಲಿ ಒಂದು ಪಕ್ಷದ ವಾದವೇ ಸರಿ ಎಂದು ಸಿದ್ಧವಾಗುವುದಲ್ಲವೆ ? ಈ ವಾದ ವಿವಾದದಲ್ಲಿ ಸಾಕಷ್ಟು ಗಲಾಟೆ, ಜಗಳ, ಹಟಸಾಧನೆ ಇದ್ದೇ ಇರುತ್ತವೆ. ಆದಕ್ಕೇ **ರಾದ್ಧಾಂತಕ್ಕೆ ಕೋಲಾಹಲ** ಎಂಬೊಂದು ಅಪಾರ್ಥ ಬೆಳೆದಿರಬೇಕು. ಕರ್ನಾಟಕದಲ್ಲಿ **ಸಿದ್ಧಾಂತದ** ಸ್ಥಾನದಲ್ಲಿ ರಾದ್ಧಾಂತವನ್ನು ಹೆಚ್ಚು ಬಳಸುವ ಧಾರ್ಮಿಕ ಪಂಗಡಗಳು ಕೆಲವಿವೆ. ಹಿಂದಿನವರ ನಿರ್ಣಯಗಳನ್ನು ಪ್ರಶ್ನಿಸಿ ತಮ್ಮವನ್ನು ಸ್ಥಾಪಿಸುವುದರಲ್ಲಿ ಈ ಪಂಗಡಗಳು ತೋರಿಸುವ ಉತ್ಸಾಹವೂ ಈ ಅರ್ಥವೈಪರೀತ್ಯಕ್ಕೆ ಕಾರಣವಾಗಿರಬಹುದು.

**ಪಂಚಾಯತಿ** ಶಬ್ದವೂ ಇದೇ ರೀತಿ ಅರ್ಥ ಕೆಡಿಸಿಕೊಂಡಿದೆ. ''**ಪಂಚಾಯತಿ** ಆಯಿತಲ್ಲ'' ಅಥವಾ ''**ಪಂಚಾಯತಿಗೆ** ಬಿದ್ದೆ'' ಅನ್ನುವಾಗ ಸುಲಭದಲ್ಲಿ ಬಗೆಹರಿಯದ ಪೇಚಾಟಕ್ಕೆ ಸಿಕ್ಕಿಬಿದ್ದಂತೆ ತಾತ್ಪರ್ಯ ಬರುತ್ತದೆ. **ಪಂಚಾಯತಿಯೂ** ಎರಡು ಪಕ್ಷಗಳಲ್ಲಿ ತೀವ್ರ ವಿವಾದಗಳುಂಟಾದಾಗ ಮೂರನೆಯವರು ಸೇರಿ ನಡೆಸುವ ಪರಿಹಾರ ಪ್ರಯತ್ನ ತಾನೆ ? ವಿವಾದವನ್ನು ಪಂಚಾಯತಿಗೆ ಒಯ್ದಾಗ ಮಧ್ಯಸ್ಥಿಕೆಗೆ ಬಂದವರೆದುರು ತಮ್ಮ ಪಕ್ಷವನ್ನು ತೃಪ್ತಿಕರವಾಗಿ ಮಂಡಿಸುವುದು, ಅವರನ್ನು ಒಪ್ಪಿಸುವುದು ಸುಲಭವಲ್ಲ. ಇದರ ಜಟಿಲತೆಯಿಂದಲೇ **ಜಟಿಲ ಸಮಸ್ಯೆಗೆ ಪಂಚಾಯತಿ** ಎಂಬ ಅರ್ಥ ರೂಢವಾಯಿತು.

ಸುಮಾರಾಗಿ ಇದೇ ಅರ್ಥದಲ್ಲಿ **ಪೇಚಿನಲ್ಲಿ** ಬಿದ್ದ, ಸಿಲುಕಿದ ಎಂದೂ ಹೇಳುತ್ತೇವೆ.

ಇದು ತಮಿಳು **ಪೇಚು, ಪೇಶು** (= ಮಾತಾಡು = ಪೇಳು) ಎಂಬುದರಿಂದ ಬಂತೆಂದು ಡಾ. ಮಾಸ್ತಿ ಹೇಳುತ್ತಾರೆ. ಮಾತು–ಮಾತು ಸೇರಿ ಜಟಿಲತೆ ಹುಟ್ಟುತ್ತದೆ ಎಂಬುದು ಸಯುಕ್ತಿಕವಾಗಿದ್ದರೂ ಈ **ಪೇಚು** ಮಾತ್ರ ದಕ್ಷಿಣದಿಂದಲ್ಲ, ಉತ್ತರದಿಂದ ಕನ್ನಡದಲ್ಲಿ ಹೊಕ್ಕಿತೆಂಬುದು ಹೆಚ್ಚು ಸಾಧಾರವಾಗಿದೆ. ಹಿಂದಿ, ಮರಾಠಿ, ಬಂಗಾಲಿ ಎಲ್ಲದರಲ್ಲಿಯೂ **ಪೇಚ್** ಇದೆ. **ಸುತ್ತಾಟ, ತಿರುಗಣೆ, ಜಟಿಲತೆ, ಸುಳಿ, ಭ್ರಮಣೆ, ಗಲಿಬಿಲಿ, ತೊಡಕು, ಧೂರ್ತತೆ** ಎಂದೆಲ್ಲ ಅರ್ಥ ಕೊಡುವ ಈ ಪದ ಪಾರಸೀಕ ಭಾಷೆಯಿಂದ ಬಂದದ್ದು. ಭ್ರಮೆಗೆ ಒಳಗಾಗುವುದು, ತೊಡಕಿನಲ್ಲಿ ಸಿಗುವುದು–ಸಿಗಿಸುವುದು ಇತ್ಯಾದಿಯಾಗಿ ಅದರ ಅರ್ಥ ವ್ಯಾಪ್ತಿ. ಮೂಲಾರ್ಥ **ತಿರುಪು, ತಿರುಗಣೆ.** ಹಾಗೆ **ಪೇಚ್‌ಕಶ್** ಎಂದರೆ ತಿರುಗಣೆಯಲ್ಲಿ ತಿರುಪು ಮೊಳೆಯನ್ನು ಕೂರಿಸುವ ಇಲ್ಲವೆ ತಿರುಗಣೆಯಿಂದ ತೆಗೆಯುವ ಉಪಕರಣ. ತಿರುಗಣೆಯಲ್ಲಿ ಸಿಲುಕಿದ್ದು ಸುಲಭವಾಗಿ ಹೊರಗೆ ಬರುವುದಿಲ್ಲ ತಾನೆ? ಆದ್ದರಿಂದ ''**ಪೇಚಿನಲ್ಲಿ** ಬೀಳುವುದು'' ಎಂದರೆ ಇಕ್ಕಟ್ಟಿನಲ್ಲಿ ಸಿಕ್ಕುವುದು. ನಮ್ಮ ಹಳೇ **ಬವಣೆ** (= ಭ್ರಮಣೆ) ಕೂಡ ಇದೇ. ಆದರೆ ಅದರ ಅರ್ಥ ಪೇಚಿನಷ್ಟು ಗಡುಸಾಗಿ ಉಳಿದಿಲ್ಲ.

**ಪೆಚ್ಚು** ಎಂಬುದು ಮಾತ್ರ ಮೇಲಿನ **ಪೇಚಿಗೆ** ಸಂಬಂಧಿಸಿದ್ದಲ್ಲ. **ಪೆಚ್ಚು ಬಿದ್ದ** ಎನ್ನುವಾಗ ಮೋಸ ಹೋದ, ಮುಂಗಾಣದಾದ ಎಂಬುದು ನಮ್ಮ ತಾತ್ಪರ್ಯ. ಇದು **ಪಿತ್ತ** ಎಂಬ ಸಂಸ್ಕೃತ ಪದದ ತದ್ಭವವೆಂದು ಕಿಟ್ಟೆಲ್ ಕೋಶ ಹೇಳುತ್ತದೆ. **ಪಿತ್ತ** ಏರಿದವನು ಹುಚ್ಚನಾಗುತ್ತಾನೆ; ವಿವೇಕ, ವಿಚಾರಶೂನ್ಯನಾಗುತ್ತಾನೆ. ತಮಿಳಿನಲ್ಲಿ ಹುಚ್ಚಿಗೆ **ಪೈತ್ಯ** ಎನ್ನುತ್ತಾರೆ. ತೆಲುಗು, ಮಲೆಯಾಳಿ, ತಮಿಳುಗಳಲ್ಲಿ **ಪಿಚ್ಚು, ಪಿಚ್ಚಿ** ಇವೆ. ಕೊಂಕಣಿಯಲ್ಲಿ **ಪಿಶ** ಎಂದರೆ ಹುಚ್ಚ. ಮರಾಠಿಯಲ್ಲಿ ಕೂಡ **ಪಿಸಾ** ಇದ್ದಾನೆ. ತುಳುವಿನಲ್ಲಿ **ಪಿಸ್ಸ್** ಎಂದರೆ ಹಠಾತ್ **ಕೋಪೋದ್ರೇಕ.** ಆದರೆ ಕನ್ನಡದಲ್ಲಿ ಈಗ **ಪೆಚ್ಚು** ಎಂಬುದು ಪಿತ್ತೋದ್ರೇಕವನ್ನು ಸೂಚಿಸದೆ ಬರೇ ಹೆಡ್ಡತನವನ್ನು ಸೂಚಿಸುತ್ತದೆ. ಹುಚ್ಚಿನಲ್ಲಿ ಉದ್ರೇಕ ಸ್ಥಿತಿ ಮತ್ತು ನಿರ್ವಿಣ್ಣ ಸ್ಥಿತಿ ಎರಡೂ ಉಂಟಲ್ಲ.

ಉಗ್ರವಾದ ಜಗಳಕ್ಕೆ **ಕೇಶಾಕೇಶಿ, ಮುಷ್ಟಾಮುಷ್ಟಿ, ಖಡಾಖಡಿ, ಖಾಡಾಖಾಡಿ, ಜಟಾಪಟಿ** ಇತ್ಯಾದಿಯಾಗಿ ಹೇಳುತ್ತೇವೆ. **ಕೇಶಾಕೇಶಿ, ಮುಷ್ಟಾಮುಷ್ಟಿ** ಸುಲಭದಲ್ಲಿ ಅರ್ಥವಾಗುವಂಥವು. ಜಗಳದಲ್ಲಿ ತೊಡಗಿದವರು ಕೂದಲು ಕೂದಲು ಜಗ್ಗಿ ಹೋರಾಡಿದರೆ **ಕೇಶಾಕೇಶಿ; ಮುಷ್ಟಿ** ಮುಷ್ಟಿಯಲ್ಲಿ ಕುಟ್ಟಿಕೊಂಡರೆ **ಮುಷ್ಟಾಮುಷ್ಟಿ. ಖಡಾಖಡಿ** ಎಂಬುದು ಮರಾಠಿ, ಹಿಂದಿಯಿಂದ ಬಂದದ್ದು. **ಖಡಾ** ಅಂದರೆ ನಿಂತದ್ದು. ನಿಂತಲ್ಲಿಂದ ಕದಲದೆ ಅಥವಾ ಮಾತಿನಲ್ಲಿ ಸ್ವಲ್ಪವೂ ಒಬ್ಬರಿಗೊಬ್ಬರು ಬಿಟ್ಟುಕೊಡದೆ ಮಾಡುವಂಥಾದ್ದು **ಖಡಾಖಡಿ.** ಹಿಂದಿಯಲ್ಲಿ **ಖಡೇಖಡ್.** ಸಾಹಿತ್ಯ ಪರಿಷತ್ತಿನ ಕೋಶ **ಖಡಾಖಡಿ, ಖಾಡಾಖಾಡಿಗಳನ್ನು** ಒಂದೇ ಶಬ್ದದ ರೂಪಗಳೆಂದು ಗಣಿಸಿದ್ದರೂ **ಖಾಡಾಖಾಡಿಯ** ನಿಷ್ಪತ್ತಿಗೆ ಪ್ರಶ್ನ ಚಿಹ್ನೆ ಹಾಕಿದೆ. ಹಿಂದಿ, ಮರಾಠಿಗಳಲ್ಲಿ ಈ ಪುನರುಕ್ತ ಪದ ಕಾಣಿಸುವುದಿಲ್ಲ. ಆದರೆ ಕುಮಾರವ್ಯಾಸ ಅನೇಕ ಕಡೆ ಬಳಸಿದ್ದಾನೆ. ಇದು **ಅಖಾಡಾ–ಅಖಾಡಿಯ** ಸಂಕ್ಷಿಪ್ತ ರೂಪವೆಂದು ತೋರುತ್ತದೆ. **ಅಖಾಡಾ** ಅಂದರೆ **ಗರಡಿ** ಅಥವಾ **ಕುಸ್ತಿಕಣ. ಅಖಾಡಾ–ಅಖಾಡಿ** ಅಂದರೆ ಜಟ್ಟಿ ಕಾಳಗ ಎಂದಾಗುತ್ತದೆ. **ಅಖಾಡಾ** ಎಂಬುದು ಸಾಧುಗಳ ಶ್ರೇಣಿಗಳ ಹೆಸರೂ ಹೌದು: ಸಾಧುಗಳ ಎರಡು ತಂಡಗಳಲ್ಲಿ ಆಗುವ ಉಗ್ರ ಕಲಹದಿಂದಲೂ **ಖಾಡಾಖಾಡಿ** ಹುಟ್ಟಿರಬಹುದು. ಈ ದೃಷ್ಟಿಯಿಂದ

**ಜಟಾಪಟ**ಯನ್ನು ನೋಡಿದರೆ ಅದೂ ಬೈರಾಗಿಗಳ ಕಲಹವನ್ನೇ ಮುಂದಿಟ್ಟುಕೊಂಡು ಹುಟ್ಟಿರಬಹುದು. **ಜಟಾ** ಅಂದರೆ ಸಾಧುಗಳ ಜಡೆಕಟ್ಟಿದ ಕೂದಲು ; **ಪಟ** ಎಂದರೆ ಅವರ ಬಟ್ಟೆ. **ಜಟಾಪಟ** ಎಂದರೆ ಒಬ್ಬ ಇನ್ನೊಬ್ಬನ ಜಡೆ ಹಿಡಿದೆಳೆದರೆ ಆತ ಈತನ ನಿಲುವಂಗಿ ಎಳೆದ ಎಂಬ ಅರ್ಥ ಹೊರಡುತ್ತದೆ. ಇದು ಸ್ವಾರಸ್ಯವಾದ ಊಹೆಯೇನೋ ನಿಜ; ಬೈರಾಗಿಗಳಲ್ಲಿ ಜಗಳವಾಗುವುದೂ ವಿರಳವಲ್ಲ. ಆದರೆ ಈ ಊಹೆಗೆ ನನಗೆ ಸದ್ಯ ಲಭ್ಯವಿರುವ ಕೋಶಗಳ ಬಲ ಸಾಲದು. ಹಿಂದಿಯಲ್ಲಿ **ಜಟಾಪಟ** ಇಲ್ಲ; ಬಂಗಾಲಿಯಲ್ಲಿ **ಝಟಾಪಟ** ಇದೆ. **ಝಟ್** ಎಂಬುದು ಶೀಘ್ರತ್ವ ಸೂಚಕ ಅನುಕರಣ ಪದ. ಆದ್ದರಿಂದ ಬೈರಾಗಿಗಳನ್ನು ಖಚಿತವಾಗಿ ಎಳೆತರಲು ಗಟ್ಟಿ ಪುರಾವೆ ಇಲ್ಲ.

**ರಾಶಿ** ಎನ್ನುವುದಕ್ಕೆ ಸಂಸ್ಕೃತದಲ್ಲಿ ಒಂದು ಶಬ್ದ **ಸಂದೋಹ.** ಕನ್ನಡಕ್ಕೂ ಈ ಶಬ್ದ ದಾಟಿ ಬಂದಿದೆ. **ಜನ ಸಂದೋಹ, ಸುಖ ಸಂದೋಹ, ದುಃಖ ಸಂದೋಹ** ಇತ್ಯಾದಿ ಪ್ರಯೋಗಗಳು. ಈ ಪದ ನಮ್ಮ ಆರ್ಥಿಕತೆಯ ಒಂದು ಗತ ಹಂತವನ್ನು ಸೂಚಿಸುತ್ತದೆಂದು ಸಹಸಾ ನಾವು ಗಮನಿಸುವುದಿಲ್ಲ. **ದೋಹ** ಎಂದರೆ **ಹಾಲು ಕರೆಯುವುದು,** ಹಿಂಡುವುದು. **ಸಂದೋಹಕ್ಕೂ** ಅದೇ ಪ್ರಾಥಮಿಕ ಅರ್ಥ. ಬಹುಶಃ ಹಲವು ಹಸುಗಳನ್ನು ಕರೆದು ತುಂಬ ಹಾಲನ್ನು ಒಂದು ಪಾತ್ರದಲ್ಲಿ ತುಂಬಿದ್ದು ಸಂ ( = ಕೂಡಿಸಿದ, ಒಟ್ಟು ಮಾಡಿದ) + **ದೋಹ.** ನಮ್ಮ ಪಶುಪಾಲನಾ ಅವಸ್ಥೆಯ ಈ ಪದ ಮುಂದೆ ಕಲೆಹಾಕಿದ, ಕಲೆತುಬಿದ್ದ ಎಲ್ಲ ಸನ್ನಿವೇಶಗಳಿಗೂ ಅನ್ವಯವಾಯಿತು. ಮೂಲದ 'ಕರೆದು ತೆಗೆದದ್ದು' ಎಂಬುದು ಗೌಣವಾಯಿತು. ಜನ, ಸುಖ, ದುಃಖ ಯಾವುದಾದರೂ ಕಲೆತು ಬಿದ್ದದ್ದು ಸಂದೋಹವಾಯಿತು.

೬೩

**ಮಂತ್ರಿ, ಮಿನಿಸ್ಟರು, ಸಚಿವ, ಸೆಕ್ರೆಟರಿ, ಪ್ರಧಾನ, ಸರಕಾರ** ಮೊದಲಾದ ಶಬ್ದಗಳು ಇಂದು ಹಳ್ಳೀ ಮಕ್ಕಳಿಗೂ ದಿನ ಬಳಕೆಯವುಗಳಾಗಿವೆ.

**ಮಂತ್ರಿ** ಶಬ್ದ ಸಂಸ್ಕೃತದ **ಮಂತ್ರ್** ಧಾತುವಿನಿಂದ ಬಂದದ್ದೆಂದು ನಿರುಕ್ತಕಾರರು ಹೇಳುತ್ತಾರೆ. ಕೊನೆಗೆ ಅದು ಮನಸ್ಸಿಗೆ ಸಂಬಂಧಿಸಿದ್ದು. ಆಲೋಚನೆ ಮಾಡುವವ ಎಂಬರ್ಥ ಕೊಡುತ್ತದೆ. ತನ್ನೊಳಗೇ ಆಲೋಚನೆ ಮಾಡುವವನೂ ಇತರರಿಗೆ ಆಲೋಚನೆ ಹೇಳುವವನೂ ಮಂತ್ರಿಯೇ. ಹೀಗೆ ಅರಸರಿಗೆ ಆಲೋಚನೆ ಹೇಳುವವನು **ಮಂತ್ರಿ**ಯಾಗಿದ್ದಾನೆ. ಮಂತ್ರವನ್ನು ಮನಸ್ಸಿನಲ್ಲೇ ರಹಸ್ಯವಾಗಿ ಚಿಂತಿಸಬೇಕಾದಂತೆ ಮಂತ್ರಿಯೂ ಗುಪ್ತವಾಗಿ ಅರಸನಿಗೆ ಆಲೋಚನೆ ಹೇಳುತ್ತಾನೆ. ಅದು **ಮಂತ್ರಣ.** ವೇದಗಳಲ್ಲಿ ಮಂತ್ರಿಗೆ **ವಾಕ್ಚತುರ** ಎಂಬರ್ಥ ಇದೆ. ಆಲೋಚಿಸಬಲ್ಲವನು ಮಾತೂ ಬಲ್ಲವನಲ್ಲವೇ. ಮನಸ್ಸಿನಲ್ಲೇ ಧ್ಯಾನಿಸಬೇಕಾದ ಮಂತ್ರದಂತೆ ಗುಪ್ತವಾಗಿ ಮಾಡುವ ರಾಜಕೀಯ ನಿರ್ಣಯವೂ **ಮಂತ್ರ** ಎನಿಸುತ್ತದೆ. ಅರಸರಿಲ್ಲದ ಅಥವಾ ಇದ್ದರೂ ಅಧಿಕಾರ ಶೂನ್ಯರಾದ ಈ ಕಾಲದಲ್ಲಿ ಮಂತ್ರಿಮಂಡಲಗಳ ನಿರ್ಣಯಗಳು ಮಂತ್ರಗಳಾಗುತ್ತವೆ.

ಮಂತ್ರಿ ಪದಕ್ಕೆ ಸಮಾನವಾಗಿ ಬಳಸುವ **ಮಿನಿಸ್ಟರ್** (minister) ಎಂಬ ಇಂಗ್ಲೀಷ್ ಪದದ ಕಥೆ ಬೇರೆ ಇದೆ. ಕೇಳುವುದಕ್ಕೆ ಅದು ಇಂಗ್ಲೀಷಿನ **ಮೈಂಡ್** (mind = ಮನಸ್)

ನಂತಿದ್ದರೂ ಮನಸ್ಸಿಗೂ ಮಿನಿಸ್ಟರಿಗೂ ಸಂಬಂಧವಿಲ್ಲ. ಅದರ ಆದಿಮೂಲ ಲ್ಯಾಟಿನ್ ಭಾಷೆಯ **ಮಿನಿ** (mini = ಚಿಕ್ಕ), ಕಡಿಮೆಯ ಎಂಬ ಪದದಲ್ಲಿದೆಯೆಂದು ತಿಳಿದರೆ ನಮ್ಮ ಮಿನಿಸ್ಟರುಗಳು ಅದಕ್ಕೆ ಹೆದರಿ ಹಿಂಜರಿದಾರು. ಚಿಕ್ಕ, ಕ್ಷುಲ್ಲಕ ಎಂಬರ್ಥದಿಂದ ಅದು **ಸೇವಕ** (ಚಿಕ್ಕಪುಟ್ಟ ಕೆಲಸ ಮಾಡುವವನು) ಎಂಬರ್ಥಕ್ಕೆ ತಿರುಗಿತು. Ministering to the needs (ಅಗತ್ಯಗಳಿಗೆ ನೆರವಾಗುವುದು) ಎಂಬಲ್ಲಿ ಈ ಸೇವಕತ್ವದ ಅರ್ಥ ಈಗಲೂ ಜೀವಂತ ಇದೆ. ಪಾದ್ರಿ ದೇವರ ಮತ್ತು ಆಸ್ತಿಕರ ಸೇವಕನಾದ್ದರಿಂದ ಸ್ವಲ್ಪ ಕೆಳದರ್ಜೆಯ ಕ್ರೈಸ್ತ ಪುರೋಹಿತನಿಗೆ **ಮಿನಿಸ್ಟರ್** ಎಂಬ ಹೆಸರೇ ಇದೆ. ನಮ್ಮ **ದಾಸಕೂಟ**ದವರು ಇದ್ದಾರಲ್ಲ, ಹಾಗೆಯೆ. ಆಡಳಿತದಲ್ಲಿ ಪ್ರಭುಗಳಿಗೆ ನೆರವಾಗುವವರು **ಮಿನಿಸ್ಟರ**ರು. ಈಗ ಜನಗಳೇ ಪ್ರಭುಗಳಾಗಿರುವುದರಿಂದ ಮಂತ್ರಿಗಳು ನಾವು ನಿಮ್ಮ ಸೇವಕರೆಂದು ಚುನಾವಣೆಗಳಲ್ಲಿ ಮತ ಕೇಳುವಾಗ ಹೇಳುವುದು ಅಕ್ಷರಶಃ ಮಿನಿಸ್ಟರ್ ಪದಕ್ಕೆ ಸರಿಹೊಂದುತ್ತದೆ.

ಬ್ರಿಟನ್ನಿನಲ್ಲಿಯೂ ಅಮೇರಿಕದಲ್ಲಿಯೂ ಕೆಲ ಸರಕಾರಿ ಶಾಖೆಗಳ ಮಂತ್ರಿಗಳಿಗೆ **ಸೆಕ್ರೆಟರಿ**ಗಳೆಂದು ಹೆಸರಿದೆ. ನಮ್ಮಲ್ಲಿ ಸೆಕ್ರೆಟರಿ ಶಬ್ದಕ್ಕೆ **ಕಾರ್ಯದರ್ಶಿ** ಎಂಬ ಪದವನ್ನುಪಯೋಗಿಸುವುದು ರೂಢಿ. ಆದರೆ **ಸೆಕ್ರೆಟರಿ**ಯೇ **ಮಂತ್ರಿ**ಗೆ ಹೆಚ್ಚು ಯುಕ್ತ ಪದ. ಏಕೆಂದರೆ **ಸೆಕ್ರೆಟರಿ**ಯ ಬುಡದಲ್ಲಿ secemere (ಬೇರ್ಪಡಿಸು, ಆದ್ದರಿಂದ ಗುಪ್ತವಾಗಿಡು) ಎಂಬ ಲ್ಯಾಟಿನ್ ಪದವಿದೆ. ಯಜಮಾನನ ಕಾರ್ಯ ಯೋಜನೆಯನ್ನು ಆತ ಗುಪ್ತವಾಗಿಡುವುದರಿಂದ ಅವನು ಬರೇ **ಕಾರ್ಯದರ್ಶಿ**ಗಿಂತ ಹೆಚ್ಚಿನವನಾಗುತ್ತಾನೆ.

ಮಂತ್ರಿಗಳಿಗೆ **ಸಚಿವರು** ಎನ್ನುವುದೂ ಉಂಟು. ಇದು **ಸಚ್** ಧಾತುವಿನಿಂದ ಬಂದದ್ದು. ವೇದಗಳಲ್ಲಿ ಇದಕ್ಕೆ **ಸಹಾಯಮಾಡು, ಒಟ್ಟಿಗೆ ಇರು, ಹಿಂಬಾಲಿಸು** ಇತ್ಯಾದಿ ಅರ್ಥಗಳು. **ಸಚಿವ**ನೆಂದರೆ **ಆಪ್ತಸಖ, ಸ್ನೇಹಿತ,** ಆಪ್ತನಾಗಿರುವುದರಿಂದ ರಹಸ್ಯಗಳಲ್ಲಿ ಭಾಗಿ ; ಆದ್ದರಿಂದ **ಮಂತ್ರಿ**. ನಿಜಕ್ಕೂ ಈಗ **ಆಪ್ತ ಕಾರ್ಯದರ್ಶಿ** (personal secretary, private secretary) ಎನ್ನುವುದಕ್ಕೆ **ಸಚಿವ** ಹೆಚ್ಚು ಯುಕ್ತ ಎನ್ನಬಹುದು.

ನಮ್ಮ **ಮಂತ್ರಿ** ಮಲಯ ದೇಶಕ್ಕೆ ದಾಟಿ ಹೋಗಿ ಮಲಯಿ ಭಾಷೆಯಿಂದ ಇಂಗ್ಲೀಷಿನಲ್ಲಿ mandarin (ಮಂಡರಿನ್) ಆಗಿದ್ದಾನೆ. ಚೀನೀ ಸಾಮ್ರಾಜ್ಯದಲ್ಲಿದ್ದ ಒಂಭತ್ತು ಅಂತಸ್ತುಗಳ ಅಧಿಕಾರಿ ವರ್ಗಕ್ಕೂ ಸುಶಿಕ್ಷಿತ ಚೀನೀಯರ ಭಾಷೆಗೂ ಈ ಶಬ್ದವನ್ನು ಮಲಯಿಗಳು ಬಳಸುತ್ತಿದ್ದು ಅವರಿಂದ ಪೋರ್ಚುಗೀಸರು ಅದನ್ನು ಎತ್ತಿಕೊಂಡದ್ದು ಇಂಗ್ಲೀಷಿಗೂ ಬಂದಿದೆ.

ಮಂತ್ರಿ ಶಬ್ದಕ್ಕೆ ಸಮಾನವಾಗಿ ಹಿಂದೆ ಬಳಸುತ್ತಿದ್ದು, ಈಗ ಅಷ್ಟಾಗಿ ಕಾಣಸಬರುವ ಇನ್ನೊಂದು ಪದ **ಅಮಾತ್ಯ**. ಇದೂ ವೇದದಷ್ಟು ಪ್ರಾಚೀನವಾದದ್ದು. **ಅಮಾ** ಅಂದರೆ ಇಲ್ಲಿ, ಹತ್ತಿರ, ಮನೆಯಲ್ಲಿ, ಒಟ್ಟಿಗೆ ಇತ್ಯಾದಿ ಅರ್ಥವಿದ್ದು **ಅಮಾತ್ಯ** ಅಂದರೆ **ಸಹಚರ, ಅಂತರಂಗ ಸಖ** ಎಂದು ತಾತ್ಪರ್ಯ. ಹೀಗೆ ಇದು **ಸಚಿವ**ಕ್ಕೆ ಹತ್ತಿರದ್ದು.

ಮುಸ್ಲಿಮ್ ಆಳಿಕೆಯ ಕಾಲದಲ್ಲಿ ಮಂತ್ರಿಗಳಿಗೆ ಅದೂ ಮುಖ್ಯಮಂತ್ರಿಗಳಿಗೆ **ವಜೀರ್, ದೀವಾನ್** ಪದಗಳು ಚಲಾವಣೆಗೆ ಬಂದುವು. ಇವುಗಳಲ್ಲಿ **ದೀವಾನ್** ಅಥವಾ ಅದರದೇ ಭಾರತೀಕೃತರೂಪ **ದಿವಾಣ** ಬ್ರಿಟಿಷರ ಕಾಲದ ಅನೇಕ ಹಿಂದೂ ಸಂಸ್ಥಾನಗಳಲ್ಲೂ ಪ್ರಯೋಗದಲ್ಲಿತ್ತು.

**ವಜೀರ್** ಎಂಬುದು ಅರಬ್ಬೀ ಭಾಷೆಯ **ವಜಾಹಾ** ( = ಹೊರು, ಸಾಗಿಸು)

ಧಾತುವಿನಿಂದ ಉದ್ಭವಿಸಿದ್ದು. ಅದರ ಮೂಲಾರ್ಥ **ಹಮಾಲ** ಅಥವಾ **ಸಾಮಾನು ಹೊರುವವ** ಎಂದು. ರಾಜ್ಯದ ಆಡಳಿತದ ಭಾರ ಹೊರುವವನಾಗಿದ್ದುದರಿಂದ ಮುಖ್ಯಮಂತ್ರಿಯೂ **ವಜೀರನೆನಿಸಿದ**. ತಮಾಷೆಯಾಗಿದೆ ಎನ್ನುತ್ತೀರಾ? ನಮ್ಮದೇ ಆದ **ಧುರೀಣ, ಧುರ್ಯ** ಎಂದರೂ **ಭಾರವಾಹ** ಎಂದೇ ಅರ್ಥ. ಧುರ = ಭಾರ. ಅನೇಕ ವೇಳೆ ಶಬ್ದಗಳು ಸಾಮಾಜಿಕ ಗೌರವಾಗೌರವಗಳನ್ನು ಧಿಕ್ಕರಿಸಿ ಸೃಷ್ಟಿಯಾಗುತ್ತವೆ.

**ದೀವಾನ್** ಅಥವಾ **ದಿವಾಣ** ನಡೆದು ಬಂದ ದಾರಿ ಕಡಿಮೆ ಬಳಸಿನದಲ್ಲ. ಇದು ಮೂಲತಃ ಪಾರಸಿಯಾಗಿದ್ದು ಮುಂದೆ ಅರಬ್ಬಿಯಲ್ಲಿ ಬೇರೂರಿತೆಂದು ಆಕ್ಸ್‌ಫರ್ಡ್ ಮಹಾನಿಘಂಟಿನಲ್ಲಿ ಹೇಳಿದೆ. **ದೀವಾನ್** ಎಂದರೆ ಮೊದಲು **ದಾಖಲೆ ಪತ್ರ, ದಾಖಲೆ ಪುಸ್ತಕ** (ರಿಜಿಸ್ತ್ರಿ). ಸರಕಾರಿ ರಿಜಿಸ್ತ್ರಿಗಳು ಬಹುತರವಾಗಿ ಹಣಕಾಸಿಗೆ ಸಂಬಂಧಪಟ್ಟವಾದ್ದರಿಂದ ಹಣಕಾಸಿನ ಅಂದರೆ ಆರ್ಥಿಕ ಶಾಖೆಯ ಕಚೇರಿಯೂ **ದೀವಾನ್** ಆಯಿತು. **ದಾಖಲೆ ಪುಸ್ತಕ** ಎಂಬರ್ಥದಿಂದ ಪುಸ್ತಕ. ಅದರಲ್ಲಿಯೂ **ಗಜಲ್** ಕವನಗಳ ಸಂಗ್ರಹ **ದೀವಾನ್** ಎನಿಸಿತು. ಹಣಕಾಸಿನ ಕಚೇರಿ ಎಂಬುದರಿಂದ **ಹಣಕಾಸಿನ ಶಾಖೆಯ** ಮುಖ್ಯಸ್ಥ ದೀವಾನನಾದ. ರಾಜ್ಯಕ್ಕೆ ಅರ್ಥವೇ ಪ್ರಧಾನವಾದ್ದರಿಂದ **ಅರ್ಥಮಂತ್ರಿಯೇ** (ದೀವಾನ) ಮುಖ್ಯಮಂತ್ರಿ ಅಥವಾ ಪ್ರಧಾನಿಯಾದ.

ಅತ್ತ **ಕಚೇರಿ** ಎಂಬ ಅರ್ಥ ಟಿಸಿಲೊಡೆದು **ದೀವಾನ್** ಎಂಬುದು **ಸಭಾಭವನವಾಯಿತು**. ಹೀಗೆ ಮೊಗಲ ಬಾದಶಾಹರು **ದೀವಾನೇಖಾಸ್** (ಅಂತರಂಗ ಸಭಾಶಾಲೆ) ಮತ್ತು **ದೀವಾನೇ ಆಮ್** (ಭೂರಿ ಸಭಾಭವನ) ಎಂಬವುಗಳನ್ನು ನಿರ್ಮಿಸಿಕೊಂಡಿದ್ದರು. ಖಾಸಗಿ ಶ್ರೀಮಂತರೂ ಹಿಂದೆ ಬೀಳಲಿಲ್ಲ. ಭೆಟ್ಟಿಗೆ ಬರುವವರೊಡನೆ ಸಂಭಾಷಣೆ ಮಾಡುವ ತಮ್ಮ **ಪಡಸಾಲೆಯನ್ನು** ಅವರು ತಮ್ಮ **ದೀವಾನ್ ಖಾನಾ** ಎಂದು ಕರೆದರು. ಉತ್ತರ ಭಾರತದಲ್ಲಿ ಈಗಲೂ ಇದು ಇದೆ.

**ಮಂತ್ರಿ ಮಂಡಲ** ಅಥವಾ **ಸಂಪುಟಕ್ಕೆ** ಸಮಾನವಾಗಿರುವ ಇಂಗ್ಲೀಷ್ **ಕೆಬಿನೆಟ್** ಶಬ್ದ ಫ್ರೆಂಚ್ **ಕಬೇನ್**‌ನಿಂದ (cabane) ಹುಟ್ಟಿದ್ದು. ಅದು ಅರ್ವಾಚೀನ ಲ್ಯಾಟಿನ್ನಿನ **ಕಪನ್ನದ** (capanna) ಅಪಭ್ರಂಶ. ಅದರ ಮೂಲಾರ್ಥ **ಗುಡಿಸಲು, ಚಿಕ್ಕಕೋಣೆ. ಕೆಬಿನೆಟ್** ಎಂದರೆ ಚಿಕ್ಕ **ಕೆಬಿನ್ನು**. ರಹಸ್ಯಗೋಷ್ಠಿಗಳು ಚಿಕ್ಕ ಕೋಣೆಗಳಲ್ಲಿ ಕೂಡುವುದರಿಂದ ಮಂತ್ರಿ ಸಭಾಮಂದಿರ **ಕೆಬಿನೆಟ್** ಎನಿಸಿತು. ಮಂತ್ರಿಗಳ ಸಭಾನಿರ್ಣಯಗಳೇ ಸಿಂಧುವಾಗುವುದರಿಂದ ಹೀಗೆ ಸೇರುವ ಮಂತ್ರಿಗಳ **ಕೂಟ ಕೆಬಿನೆಟ್** ಆಯಿತು.

೬೪

**ದೇವತೆ**ಗಳ ಮೂಲ ಹುಡುಕುವುದು ಬಲು ಜಿಡುಕಿನ ಕೆಲಸ. ಅವರು ಒಂದು ಜನಾಂಗದಿಂದ ಇನ್ನೊಂದು ಜನಾಂಗಕ್ಕೆ ದಾಟಿ ಹೋಗುತ್ತಾರೆ. ಆಳುವ ಜನಾಂಗದಿಂದ ಆಳಿಸಿಕೊಳ್ಳುವ ಜನಾಂಗಕ್ಕೆ ಹೇಗೋ ಹಾಗೇ ದಾಸೀಕೃತ ಜನಾಂಗದಿಂದ ಪ್ರಭು ಜನಾಂಗಕ್ಕೂ ಸೇರಿಕೊಳ್ಳುವುದುಂಟು. ಕೆಲವು ಸಲ ಅವರು ಈ ಉತ್ಕ್ರಮಣದಲ್ಲಿ ತಮ್ಮ ಹೆಸರುಗಳನ್ನು ಹೊಸ ಜನಾಂಗದ ಭಾಷೆಗೆ ಅನುವಾದಿಸಿಕೊಂಡರೆ ಕೆಲವು ಸಲ ಸ್ವಲ್ಪ ಅಕ್ಷರ ವ್ಯತ್ಯಾಸದೊಡನೆ ಮೂಲ ಹೆಸರುಗಳೊಡನೆಯೇ ವಲಸೆ ಹೋಗುತ್ತಾರೆ.

ನಮ್ಮ ಶಿವನನ್ನೇ ತೆಗೆದುಕೊಳ್ಳಿ. ಅವನಿಗೆ ಸಂಸ್ಕೃತದಲ್ಲಿ **ಶಂಕರ, ಶಂಭು** ಇತ್ಯಾದಿ ಹೆಸರುಗಳೂ ಇವೆ. **ಶಿವ, ಶಂ** ಎಂಬ ಪದಗಳಿಗೆ ವೈದಿಕ ಸಂಸ್ಕೃತದಲ್ಲೇ **ಮಂಗಲ** ಮಂಗಲಕರ ಎಂಬ ಅರ್ಥಗಳಿವೆ. ಶಿವನು ಆ ಗುಣಗಳುಳ್ಳ ವೈದಿಕಾರ್ಯರ ದೇವತೆಯೆಂದು ತಟ್ಟನೆ ಗುರುತಿಸಿಬಿಡುತ್ತೇವೆ. ಆದರೆ ಶಿವನನ್ನು ಹೋಲುವ ದೇವತೆ ವೈದಿಕ ವಾಙ್ಮಯದಲ್ಲಿ **ಮಹಾದೇವನಾಗಿ** ಯಜುರ್ವೇದದಲ್ಲಿ, ಅಂದರೆ ತಡವಾಗಿ ತಾನೇ ಕಾಣಿಸಿಕೊಳ್ಳುತ್ತಾನೆ.

ದೇವತೆಗಳ ತಳ ಶೋಧನೆ ಮಾಡಿದ ವಿದ್ವಾಂಸರ ಪ್ರಕಾರ **ಶಿವ** ಎಂಬವನು ಆರ್ಯರು ಇಲ್ಲಿ ವಸತಿ ಹೂಡುವ ಮೊದಲೇ ಇದ್ದ ದೇವತೆ. ಹಳೇ ತಮಿಳಿನಲ್ಲಿ **ಚಿವನ್** ಎಂದರೆ ಕೆಂಪು ಬಣ್ಣದವನು. ದ್ರಾವಿಡ ಭಾಷೆಗಳಲ್ಲಿ **ಚಿಂ, ಚಿವ್, ಕೆಂ** ಎಂದರೆ ಕೆಂಪೆಂದರ್ಥ. (ತಮಿಳಿನಲ್ಲಿ ಇಂದಿಗೂ ಚ, ಶ–ಗಳು ಬೇರೆಯಲ್ಲ.) **ಚಿವಪ್ಪನ್** ಎಂದರೆ ತಮಿಳಿನಲ್ಲಿ ಕೆಂಪಗಿರುವಾತ. **ಶಂಭು** ಎಂಬ ಅವನ ಇನ್ನೊಂದು ಹೆಸರು (ದ್ರಾವಿಡ **ಚೆಂಬು** ತಾಮ್ರ, ಕೆಂಪು) ಕೂಡ ಕೆಂಪುತನವನ್ನೇ ಹೇಳುವಂಥಾದ್ದು. ಯಜುರ್ವೇದದಲ್ಲಿ ಶಿವಪರವಾದ ಶತರುದ್ರೀಯ ಸೂಕ್ತಗಳಲ್ಲಿ ಈತನನ್ನು **ನೀಲಲೋಹಿತ** (= ನೀಲಿ ಕೆಂಪಾದವ) ಎಂಬ ಹೆಸರಿಂದಲೂ ಕರೆದಿದೆ. ಇದೂ ಅವನ ಕೆಂಪುತನವನ್ನು ಸಿದ್ಧಪಡಿಸುತ್ತದೆ. ಕರ್ನಾಟಕದಲ್ಲಿ **ಕೆಂಪಣ್ಣ, ಕೆಂಪಯ್ಯ, ಕೆಂಪಿ, ನೀಲಯ್ಯ, ನೀಲವ್ವ** ಎಂಬ ಹೆಸರುಗಳು ಮೊದಲಿಂದ ಕಾಣಿಸುತ್ತವೆ. ಅವೂ ಶಿವನಾಮಗಳೇ. ಶಿವನು ನೀಲಿ ಕೊರಳ ದೇವತೆ ಎಂದು ಪುರಾಣಪ್ರಸಿದ್ಧನಾಗಿದ್ದಾನೆ. ಈ ದ್ರಾವಿಡ **ಚಿವ, ಶಿವನನ್ನು** ಸ್ವೀಕರಿಸಿ ಅವನನ್ನು ವೈದಿಕರು ತಮ್ಮ ಹಳೆಯ ರುದ್ರನಿಗೆ ಸಮೀಕರಿಸಿದರು. ರುದ್ರರು ಉಗ್ರ ದೇವತೆಗಳು : **ಶಿವನೂ** ಉಗ್ರನೇ. ಈ **ರುದ್ರ** ಮೂಲದಲ್ಲಿ **ರುಧ್ರನೆಂದು** ಪೂರ್ವ ವೈದಿಕ ಭಾಷಾ ಪುನಾರಚನೆ ಮಾಡಿದವರ ಮತ. **ರುದ್ರರು ರೋದಿಸುವವರು** ಎಂದರೆ ಆರ್ಭಟಿಸುವವರು ಎನ್ನುವುದು ವೇದಸಿದ್ಧವಾಗಿದ್ದರೂ **ರುಧಿರ** ಶಬ್ದಕ್ಕೆ ರಕ್ತ, ಕೆಂಪು ಎಂಬರ್ಥಗಳಿರುವುದನ್ನೂ ಗಮನಿಸಬೇಕು; **ರುದ್ರದ** ಮೂಲ ರೂಪ **ರುಧ್ರನಾಗಿದ್ದರೆ** ಅವನು **ಚಿವ, ಚೆಂಬುಗಳಿಗೆ** ಸಮವರ್ಣನೇ ಆಗುತ್ತಾನೆ. ಶಿವನು ಪುರುಷ ಲಿಂಗದ ಸಂಕೇತದವನಾಗಿರುವುದರಿಂದ ಅವನಿಗೆ ಕೆಂಪುತನ ಆರೋಪಿತವಾಗಿರಬೇಕು.

ಕನ್ನಡಿಗರಿಗೆ ಪ್ರಿಯವಾದ **ಹನುಮಂತ** ಕೂಡ ದ್ರಾವಿಡನೇ. ಅವನ ಹೆಸರಿಗೆ ಸಂಸ್ಕೃತದಲ್ಲಿ **ಹನೂ** + ಮಾನ್ (= ಹನುವುಳ್ಳವ) ಎಂದು ಅರ್ಥಮಾಡಲಾಗಿದೆ. **ಹನು** ಎಂದರೆ ಗಲ್ಲ, **ದವಡೆ**. ಕಪಿಯಾಗಿರುವುದರಿಂದ ದೊಡ್ಡ ದವಡೆ ಅಥವಾ ಮುಂದೆ ನೀಡಿದ ಮುಸುಡು ಎಂದರ್ಥ ಮಾಡುವುದು ಅಸಂಗತವಲ್ಲ. ಆದರೆ ಸುನೀತಿಕುಮಾರ ಚಟರ್ಜಿಯವರ ಅಭಿಪ್ರಾಯದಲ್ಲಿ ಹನುಮಂತ ಎಂಬುದು ದ್ರಾವಿಡದ **ಆಣ್**ಮಂತಿಯ ಸಂಸ್ಕೃತೀಕರಣ. **ಆಣ್** (= ಗಂಡು) ಮಂತಿ (= ಮಂಗ). ಅದನ್ನೇ ಸಂಸ್ಕೃತಕ್ಕೆ ಭಾಷಾಂತರಿಸಿ **ವೃಷಾಕಪಿ** (= ಗಂಡುಮಂಗ) ಮಾಡಿದ್ದಾರೆಂದು ಚಟರ್ಜಿ ಹೇಳುತ್ತಾರೆ. ಆದರೆ ಈ ಹೆಸರು ಪುರಾಣಗಳಲ್ಲಿ ವಿಷ್ಣುವಿಗೆ, ಶಿವನಿಗೆ ಸಲ್ಲುತ್ತದೆ ಹೊರತು ಹನುಮಂತನಿಗಲ್ಲ ಎಂಬುದು ಚಟರ್ಜಿಯವರ ಊಹೆಯನ್ನು ಚಿಂತ್ಯವಾಗಿ ಮಾಡುತ್ತದೆ.

ಶಿವನನ್ನು ನಾವು **ಲಿಂಗರೂಪದಲ್ಲಿ** ಪೂಜಿಸುತ್ತೇವೆ. **ಲಿಂಗ** ಎಂಬುದು ಪುರುಷ ಜನನೇಂದ್ರಿಯದ ಹೆಸರೆಂದು ಬಗೆಯುತ್ತೇವೆ. ಆದರೆ **ಲಿಂಗದ** ಮುಖ್ಯಾರ್ಥ **ಗುರುತು**. ಕುರುಹು, ಸಂಕೇತ, ಅಂಕಿತ, ಗುಣ ಎಂದಲ್ಲದೆ ಪುರುಷ ಜನನೇಂದ್ರಿಯವೆಂದಲ್ಲ.

ಪುರುಷನನ್ನು ಅವನ ಜನನೇಂದ್ರಿಯದಿಂದ **ಗುರುತಿಸುವುದರಿಂದ** ಅದು ಅವನ **ಲಿಂಗ**. (ಈ ದೃಷ್ಟಿಯಿಂದ ಸ್ತ್ರೀ ಯೋನಿಯೂ ಕುಚಗಳೂ ಲಿಂಗವೇ.) ಶಿವನನ್ನು ವಿಶ್ವಸೃಷ್ಟಿಯ ಜನಕ ಎನ್ನುವುದರಿಂದ **ಶಿಶ್ನ**ವನ್ನು ಅವನ **ಗುರುತಾ**ಗಿ ಅಂದರೆ **ಲಿಂಗ**ವಾಗಿ ಮಾಡಿಕೊಂಡದ್ದು. ಹೀಗೆ **ಶಿವಲಿಂಗ** ಎಂದರೆ ಶಿವನ ಗುರುತು. ವಚನಕಾರರು **ಕುರುಪು, ಕುರುಹು** ಎನ್ನುವುದು ಇದೇ ಅರ್ಥದಲ್ಲಿ. ಅದೇ ತರ್ಕದಿಂದ ವಿಷ್ಣುವಿನ ಮೂರ್ತಿಯನ್ನೂ ''ವಿಷ್ಣುಲಿಂಗ'' ಎಂದರೆ ತಪ್ಪಲ್ಲ. ವ್ಯಾಕರಣದಲ್ಲಿ ಪುಲ್ಲಿಂಗ, ಸ್ತ್ರೀಲಿಂಗ, ನಪುಸಂಕ ಲಿಂಗ ಎನ್ನುವುದು **ಕುರುಹು** ಲಕ್ಷಣ ಎಂಬರ್ಥದ ವಿಸ್ತರಣೆ. ಹೀಗೆ ಅದು ಜಾತಿವಾಚಕ. (ಇಲ್ಲದಿದ್ದರೆ **ನಪುಂಸಕ ಲಿಂಗ** ಎನ್ನುವುದಕ್ಕೆ ಏನರ್ಥ ?) ಇಂಗ್ಲೀಷಿನಲ್ಲಿ ಇವನ್ನು gender ಎನ್ನುತ್ತಾರಲ್ಲ, ಅದರರ್ಥವೂ **ಜಾತಿ** ಎಂದೇ.

**ಲಿಂಗ**ಕ್ಕೆ ಆಪಟೆ ಕೋಶ ಕನಿಷ್ಠ ಪಕ್ಷ ೧೭ ಅರ್ಥಗಳನ್ನು ಕೊಡುತ್ತದೆ. ಮತವನ್ನು ಗುರುತಿಸಲು ಅನುಕೂಲವಾಗುವ ಹೊರಲಕ್ಷಣವನ್ನು **ಲಿಂಗ**ವೆಂದು ಕರೆದ ಮೇಲೆ, ತೋರಿಕೆಗೆ ಮಾಡಿಕೊಂಡ **ಠಕ್ಕು ಗುರುತು ಲಿಂಗ**ವಾಯಿತು. ಅರ್ಥಾತ್ ಕೃತಕ ವೇಷ. ತದ್ವಿರುದ್ಧವಾಗಿ ಹೊರಗೆ ವಿಶಿಷ್ಟ ಲಕ್ಷಣಗಳಿಂದ ಗುರುತಿಸಲ್ಪಡುವ, ಒಳಗಿನ ವಾಸ್ತವಿಕ ಸೂಕ್ಷ್ಮ ಆತ್ಮದ ಸ್ವರೂಪವನ್ನೂ **ಲಿಂಗಶರೀರ** ಎನ್ನುವುದಾಯಿತು. ಸ್ಥೂಲ ಶರೀರದ ಒಳಗಿರುವಂಥಾದ್ದು ಅವಿನಾಶಿಯಾದ **ಲಿಂಗಶರೀರ**. ಮನುಷ್ಯನ ಆಲೋಚನೆಯ ರೀತಿ ಒಂದೇ ಪದವನ್ನು ಒಂದಕ್ಕೊಂದು ವಿರುದ್ಧ ಅರ್ಥಗಳಲ್ಲಿ ನಡೆಸುತ್ತದೆ ಎನ್ನುವುದಕ್ಕೆ ಇದೊಂದು ಉದಾಹರಣೆ. ಹೀಗೆ **ಲಿಂಗಿ** ಎಂದರೆ ಯಾವುದಾದರೂ (ಧರ್ಮದ, ದೇವತೆಯ) ಕುರುಹನ್ನು, ವಿಶೇಷವಾಗಿ ಶಿವನದನ್ನು ಧರಿಸಿದವನೂ ಹೌದು, ಹಾಗೆ ಧರಿಸಿ ಮೋಸಮಾಡುವ ಡಾಂಭಿಕನೂ ಹೌದು.

ಭಾರತೀಯ ಜ್ಯೋತಿಷ್ಯದಲ್ಲಿ ಆಕಾಶದ ಗ್ರಹಪಥದ ನಕ್ಷತ್ರಗಳನ್ನು ಹನ್ನೆರಡು ರಾಶಿಗಳಾಗಿ ವಿಂಗಡಿಸಿದ್ದಾರೆ. ಮೇಷ, ವೃಷಭ, ಮಿಥುನ ಇತ್ಯಾದಿಯಾಗಿ, ಇದರ ಮೂಲ ಭಾರತೀಯವಲ್ಲ ಎಂದರೆ ತುಸು ಆಘಾತವೇ ಆದೀತು. ನಿಜಕ್ಕೂ ಇದು ಪುರಾತನ ಮೆಸಪೊಟೇಮಿಯದ ಸುಮೇರಿಯನ್ ಜ್ಯೋತಿಷಿಗಳ ಕೈವಾಡ – ಕ್ರಿಸ್ತನಿಗಿಂತ ೧೫೦೦ ವರ್ಷಗಳಿಗೂ ಹಿಂದಿನದು. ಇದಕ್ಕೆ ಶಬ್ದಗಳು ಸಾಕ್ಷಿ ಹೇಳುತ್ತವೆ. ಗ್ರೀಕ್, ಅರಬ್ಬಿ, ಪಾರಸೀಕ ಮತ್ತು ಭಾರತೀಯ ಜ್ಯೋತಿಷದ ರಾಶಿಗಳ ಹೆಸರುಗಳು ಅನುವಾದಗಳೇ. ಮೇಷ ಅಂದರೆ ಮೇಕೆ; ಗ್ರೀಕ್ Aerias ಎಂದರೂ ಅದೇ; ಪ್ರಾಚೀನ ಪಾರಸೀಕ ವರಕ್ ಎಂದರೂ ಅದೇ ; ಇಂಗ್ಲೀಷ್ ram ಎಂದರೂ ಮೇಕೆ. ನಮ್ಮ ವೇದಾಂಗ ಜ್ಯೋತಿಷದಲ್ಲಿ ೨೮ ನಕ್ಷತ್ರಗಳುಂಟೇ ಹೊರತು ರಾಶಿಗಳಿಲ್ಲ. ಕ್ರಿಸ್ತಶಕಾರಂಭಕ್ಕೆ ಸ್ವಲ್ಪ ಹಿಂದೆ ತಾನೇ ನಮ್ಮ ಜ್ಯೋತಿಷಿಗಳು ಈ ಪದ್ಧತಿಯನ್ನು ಸ್ವೀಕರಿಸಿದಂತೆ ಕಾಣುತ್ತದೆ.

೬೫

ಶಾಸ್ತ್ರ ಪರಿಭಾಷೆಯ ಅನೇಕ ಪದಗಳು, ಒಳಹೊಕ್ಕು ನೋಡಿದಾಗ, ಹೆಚ್ಚು ಗುಟ್ಟನ್ನು ಹೊರಬಿಡುತ್ತದೆ. ನಮಗೆ ಪರಿಚಿತವಾದ ರೇಖಾಗಣಿತ ಅಥವಾ ಜ್ಯಾಮಿತಿ (geometry) ಯಲ್ಲಿಯ ಶಬ್ದಗಳನ್ನು ನೋಡೋಣ. ಈ ಶಾಸ್ತ್ರಕ್ಕೆ **ಭೂಮಿತಿ**, ಅದಕ್ಕಿಂತಲೂ ಹಿಂದೆ

ವೇದಾಂಗಗಳಲ್ಲಿ **ಶುಲ್ವಶಾಸ್ತ್ರ** ಎಂಬ ಹೆಸರುಗಳಿದ್ದುವು. **ಭೂಮಿತಿ** ಎಂಬುದರಿಂದ ಅದು ಪ್ರಥಮತಃ ನೆಲವನ್ನು ಅಳೆಯುವುದಕ್ಕಾಗಿ ಹುಟ್ಟಿದ ಶಾಸ್ತ್ರವೆಂದು ವೇದ್ಯವಾಗುತ್ತದೆ. ಅದು ಕೃಷಿ ಪ್ರಧಾನ ಸಂಸ್ಕೃತಿಯ ಕೊಡುಗೆ. ಇಂಗ್ಲೀಷಿನ geometry ಶಬ್ದ ಗ್ರೀಕಿನ geo (= ಭೂಮಿ) ಮತ್ತು metry (= ಅಳತೆ) ಎಂದೇ ಅರ್ಥಕೊಡುತ್ತದೆ. ಅದಕ್ಕೆ ನಮ್ಮ ಪ್ರಾಚೀನರು ಬಳಸಿದ **ಕ್ಷೇತ್ರಗಣಿತ** ಎಂಬ ಶಬ್ದ ಇನ್ನೂ ಸ್ಪಷ್ಟವಾಗಿ ತನ್ನ ಮೂಲವನ್ನು ತಿಳಿಸುತ್ತದೆ. **ಕ್ಷೇತ್ರ** ಎಂದರೆ **ಹೊಲ, ಗದ್ದೆ**. ಸಂಸ್ಕೃತದಲ್ಲಿ **ಜ್ಯಾ** ಶಬ್ದಕ್ಕೆ **ಭೂಮಿ** ಎಂದೂ ಅರ್ಥವುಂಟು.

**ಶುಲ್ವ** (ಶುಲ್ಬ) ಶಾಸ್ತ್ರವೆಂಬ ಅದರ ಇನ್ನೂ ಪುರಾತನ ಹೆಸರು ಇನ್ನೊಂದು ಕಥೆ ಹೇಳುತ್ತದೆ. ಶುಲ್ವ ಎಂದರೆ ನೂಲು, ದಾರ, ಹಗ್ಗ. ಅಳೆಯುವುದಕ್ಕೆ ಬಳಸುತ್ತಿದ್ದದ್ದು ದಾರ. ಆದರೆ ಶುಲ್ವಶಾಸ್ತ್ರ ಮುಖ್ಯವಾಗಿ ಕಟ್ಟಡಗಳ ಕಟ್ಟುವಿಕೆಗೆ ಸಂಬಂಧಿಸಿ ಬೆಳೆದದ್ದು. ಋಷಿಗಳು ಯಜ್ಞ ವೇದಿಕೆಗಳ ನಿರ್ಮಾಣಕ್ಕೆ **ನೂಲಿಟ್ಟು** ಅಳತೆ ತೆಗೆಯುತ್ತಿದ್ದರು. ವೇದಿಕೆಗಳ ನಿರ್ಮಾಣ ಅತ್ಯಂತ ನಿಖರವಾದ ಅಳತೆಯಲ್ಲಿ ಆಗಬೇಕೆಂದು ವೇದಾಂಗ ಶಾಸ್ತ್ರಗಳಲ್ಲಿ ಹೇಳಿದೆ. ಅನಂತರ ದೇವಾಲಯಾದಿ ಆಯತನಗಳ ನಿರ್ಮಾಣದಲ್ಲಿ ಈ ದಾರವಿಟ್ಟು ಅಳೆಯುವ ಕಾರ್ಯ ಎಷ್ಟು ಪ್ರಾಮುಖ್ಯ ಗಳಿಸಿತೆಂದರೆ ವಾಸ್ತುಶಿಲ್ಪಿಗಳ ಮುಖ್ಯಸ್ಥನಿಗೆ **ಸೂತ್ರಧಾರಿ** (ಸೂತ್ರ = ನೂಲು) ಎಂಬ ಹೆಸರು ಬಿತ್ತು. ಪಟ್ಟದಕಲ್ಲಿನ ಪಾರ್ಶ್ವನಾಥ ದೇವಾಲಯದ ಪ್ರಧಾನ ಶಿಲ್ಪಿ ಸೂತ್ರಧಾರಿ ''ಸರ್ವಸಿದ್ಧಿ ಆಚಾರಿ'' ಎಂದು ಆ ದೇವಾಲಯದ ಶಾಸನ ಹೇಳುತ್ತದೆ. **ಶಿಲ್ವ** ಎಂಬುದು **ಶುಲ್ವದ್ದೇ** (= ನೂಲು) ಇನ್ನೊಂದು ರೂಪ ಇರಬೇಕು. ಏಕೆಂದರೆ **ಸಿಂಪಿಗ** (= ದರ್ಜಿ) ಶಬ್ದ ಶಿಲ್ವಿಕದ ತದ್‌ಭವವೆಂದು ಕೋಶಗಳು ಹೇಳುತ್ತವೆ.

ಇಂಗ್ಲೀಷಿನಲ್ಲಿ ರೇಖೆ ಅಥವಾ ಗೆರೆಯನ್ನು ಸೂಚಿಸುವ ಶಬ್ದ line. **ಲೈನ್** ಶಬ್ದದ ಮೂಲಾರ್ಥ **ಲಿನೆನ್**‌ನಿಂದ (= ನಾರು) ಮಾಡಿದ **ದಾರ**. ರೇಖಾಗಣಿತದ straight lineನ (= ಸರಳರೇಖೆ) ನಿಜಾರ್ಥ stretched line (= ಎಳೆದು ಹಿಡಿದ ದಾರ). ಕಟ್ಟಡ ನಿರ್ಮಾಣಕ್ಕೆ ಮೊದಲು ನೆಲದ ಮೇಲೆ ಪಾಯ ಅಗೆಯುವುದಕ್ಕೆ ನೂಲನ್ನು ಎಳೆದು ಹಿಡಿದು ಬಿಳಿ ಪುಡಿಯಿಂದ ಆಯ ಸೂಚಿಸುವುದು ಅಂದಿನಿಂದಲೂ ನಡೆದು ಬಂದದ್ದು. ಅದೇ ಮುಂದೆ ರೇಖಾಗಣಿತಶಾಸ್ತ್ರದಲ್ಲಿ ಉದ್ದ ಮಾತ್ರ ಇದ್ದು ಅಗಲವಿಲ್ಲದ ಕಾಲ್ಪನಿಕ ಗೆರೆಗೆ ಅನ್ವಯಿಸಲ್ಪಟ್ಟಿತು. ಶಾಸ್ತ್ರ ಪರಿಭಾಷೆಯ ಪದಗಳು ಸ್ಥೂಲದಿಂದ ಸೂಕ್ಷ್ಮದತ್ತ ಸಂಕ್ರಮಿಸುತ್ತವೆ.

ರೇಖಾಗಣಿತದಲ್ಲಿ ವರ್ತುಲಗಳಿಗೆ ಸಂಬಂಧಿಸಿದ ಪರಿಭಾಷೆಯನ್ನು ನೋಡಿದರೆ ಅದು ಯುದ್ಧ ವಿದ್ಯೆಯಿಂದಲೇ ಹುಟ್ಟಿದ ಶಾಸ್ತ್ರಾಂಗವೋ ಎನಿಸಿಬಿಡುತ್ತದೆ. ವರ್ತುಲವನ್ನು ತುಂಡರಿಸುವ ಸರಳ ರೇಖೆಗೆ **ಜ್ಯಾ** ಎಂದು ಹೆಸರು. **ಜ್ಯಾ** ಶಬ್ದಕ್ಕೆ ಋಗ್ವೇದ ಕಾಲದಿಂದ ಕಾಣುವ ಒಂದು ಅರ್ಥ ಬಿಲ್ಲಿನ ಹೆದೆ. ಬಾಣ ಪ್ರಯೋಗಕ್ಕಾಗಿ ಬಿಲ್ಲಿಗೆ ಹೆದೆಯೆಳೆದು ಕಟ್ಟಿದಾಗ ಹೆದೆಯ ದಾರ (= ಜ್ಯಾ) ಸರಳ ರೇಖೆಯಾಗಿ ಬಿಲ್ಲಿನ ಬಾಗಿದ ಬೆನ್ನನ್ನು ಎರಡೂ ಬದಿಗೆ ಕತ್ತರಿಸುವಂತೆ ಕಾಣುವುದಲ್ಲವೇ ? ಆದ್ದರಿಂದ ಆ ರೇಖೆಗೇ ಹೆದೆಯ ಹೆಸರು ಬಿತ್ತು. **ಜ್ಯಾ**ಕ್ಕೆ **ರಜ್ಜು** ಎಂಬ ಇನ್ನೊಂದು ಹೆಸರೂ ಇದೆ. ಅದರ ಅರ್ಥವೂ **ಹಗ್ಗ, ದಾರ** ಎಂದೇ. ಈ ತರ್ಕಕ್ಕೇನಾದರೂ ಆಕ್ಷೇಪವಿದ್ದರೆ ಅದು **ಧನು** ಎಂಬ ಇನ್ನೊಂದು ಜ್ಯಾಮೀತಿಯ ಪದದಿಂದ ನಿರಸನಗೊಳ್ಳಬೇಕು. **ಧನು** ಎಂದರೆ ಬಿಲ್ಲು ತಾನೇ. ರೇಖಾಗಣಿತದಲ್ಲಿ ವರ್ತುಲವನ್ನು ಸರಳ

ರೇಖೆಯಿಂದ ಖಂಡಿಸಿದಾಗ ಖಂಡಿತವಾದ ಪರಿಧಿಯ ಭಾಗಕ್ಕೂ **ಧನು**ವೆಂಬ ಹೆಸರಿಟ್ಟಿದ್ದಾರೆ. ಅರ್ಥಾತ್ ಧನು ಎಂದರೆ, ಹೆದೆಯೇರಿಸಿದ ಬಿಲ್ಲು ಮತ್ತು ಅದು ಮಾಡುವ ಬಾಗು ಆಕೃತಿ.

ರೇಖಾಗಣಿತದ **ಜ್ಯಾ**ಕ್ಕೆ ಇಂಗ್ಲೀಷಿನಲ್ಲಿ chord ಎಂದು ಪರಿಭಾಷೆ. ಅದರ ಅರ್ಥವೂ (ದಪ್ಪನ್ನ) ದಾರ chord (= ಗ್ರೀಕ್‌ನಲ್ಲಿ ದಾರ). Chordನಿಂದ ಖಂಡಿತವಾದ ಪರಿಧಿಗೆ arc ಎಂದು ಹೆಸರು. ಲ್ಯಾಟಿನ್ನಿನ arcus ಅರ್ಥವೂ ಬಿಲ್ಲು = ಧನು ಎಂದೇ.

ಜ್ಯಾಮಿತಿಯನ್ನು ಅಲ್ಲಿಗೇ ಬಿಟ್ಟು **ಅಂಕಗಣಿತದ** ಕಡೆ ಹೊರಳೋಣ. **ಗಣಿತ, ಲೆಕ್ಕ, ಅಂಕೆ, ಸಂಖ್ಯೆ, ಎಣಿಕೆ** ಮೊದಲಾದ ಶಬ್ದಗಳು ತಮ್ಮ ಸೃಷ್ಟಿಯ ಸಂದರ್ಭಗಳನ್ನು ತಮ್ಮೊಡಲುಗಳಲ್ಲಿ ಹೊತ್ತಿವೆ. **ಗಣಿತಕ್ಕೆ** ಮೂಲವಾದ **ಗಣ** ಶಬ್ದಕ್ಕೆ (ಪಶುಗಳ) **ಹಿಂಡು** ಎಂಬ ಪ್ರಧಾನ ಅರ್ಥ ಋಗ್ವೇದದಲ್ಲಿ ಇದೆ ; ಯಾವುದೇ ಕುಲ, ಗುಂಪು, ರಾಶಿಗೂ ಇದೇ ಪದ. **ಹಿಂಡು** ಎಂದ ಮೇಲೆ ಅದರ ಒಡೆಯನಿಗೆ ಅದರ ಲೆಕ್ಕ ಬೇಡವೇ ? ಅದೇ **ಗಣಿತ**. ಆದರೆ **ಗಣಿತ** ಎಂಬುದು ನಿಜಕ್ಕೂ **ಕಣಕ್ಕೆ** ಸಂಬಂಧಿಸಿರಬೇಕೆಂದು ನನ್ನ ಸಂಶಯ. **ಕಣಿಕಾ, ಕನಿಷ್ಠ, ಕನ್ಯಾ** ಮೊದಲಾದ ಸಂಸ್ಕೃತದ ಪದಗಳ ಬಂಧುವಾದ ಕಣಕ್ಕೆ **ಚಿಕ್ಕದು** ಎಂಬುದು ಮೂಲಾರ್ಥ. ವಿಸ್ತರಣೆಯಿಂದ ಅದು ಧಾನ್ಯದ ಕಾಳು, ಬೀಜ, ಚಿಕ್ಕ ಕಲ್ಲು ಅಥವಾ ಉಸುಬಿನ ಹರಳು ಎಂಬರ್ಥವನ್ನೂ ಕೊಡುತ್ತದೆ. ಪ್ರಾಚೀನ ಕಾಲದಲ್ಲಿ ಎಣಿಸುವುದಕ್ಕೆ ಕಲ್ಲಿನ ಹರಳುಗಳು, ಬೀಜಗಳು, ಕವಡೆಗಳು ಬಳಸಲ್ಪಡುತ್ತಿದ್ದುವೆಂದು ಇತಿಹಾಸ ಹೇಳುತ್ತದೆ. ಇಂಗ್ಲೀಷಿನ calculate (= ಲೆಕ್ಕಮಾಡು) ಎಂಬುದು ಕೂಡ calx ಎಂಬ ಲ್ಯಾಟಿನ್ ಪದದಿಂದ ರೂಪಿತವಾದದ್ದು. Calx ಎಂದರೆ **ಕಲ್ಲಿನ ಹರಳು.**

**ಅಂಕೆ, ಸಂಖ್ಯೆ** ಎನ್ನುತ್ತೇವೆ. **ಅಂಕೆ** ಸಂಸ್ಕೃತದಲ್ಲಿ **ಅಂಕ;** ಅಂದರೆ **ಗುರುತು.** ಹೀಗೆ ಅಂಕೆ ಎಂದರೆ **ಗುರುತು ಹಾಕಿದ್ದು;** ಲಿಖಿತ, ಇದನ್ನು ಈಗ ನಾವು ಒಂದು ಸಂಖ್ಯೆಯ ಬಿಡಿ ಬಿಡಿ ಅಂಕೆಗಳಿಗೆ ಅನ್ವಯಿಸಿ ಹೇಳುತ್ತೇವೆ. ೭೬ ಎಂಬ **ಸಂಖ್ಯೆ**ಯಲ್ಲಿ ೭ ಮತ್ತು ೬ ಎಂಬವು ಅಂಕೆಗಳು (= ಗಣನೆಯನ್ನು ಸೂಚಿಸುವ ಗುರುತುಗಳು).

**ಸಂಖ್ಯೆ**ಯೆಂಬ ಪದ ಖ್ಯೈ ಧಾತುವಿನಿಂದ ಹುಟ್ಟಿದ್ದು. ಆಖ್ಯಾನ, ವ್ಯಾಖ್ಯಾನ ಮೊದಲಾದ ಪದಗಳ ಹಾಗೆ ಇದೂ ನುಡಿ, ಗಟ್ಟಿಯಾಗಿ ಹೇಳು ಎಂಬರ್ಥದ್ದು. ಅಂದರೆ ಸಂಖ್ಯೆಯೆಂಬುದು ಮೂಲದಲ್ಲಿ **ಗಟ್ಟಿಯಾಗಿ ಎಣಿಸುವುದಕ್ಕೆ** ಇರುವ ಪದ. ಒಂದೂ, ಎರಡೂ, ಮೂರೂ ಇತ್ಯಾದಿಯಾಗಿ. ಆದರೆ **ಎಣಿಕೆ** ಎಂಬುದು ದ್ರಾವಿಡ **ಎಂಣ್** ಮನಸ್ಸಿನಲ್ಲೇ ನೆನೆ ಎಂಬರ್ಥ ಸೂಚಿಸುತ್ತದೆ. ಇಂಗ್ಲೀಷಿನಲ್ಲಿ digit (ಅಂಕೆ) ಶಬ್ದದ ಲ್ಯಾಟಿನ್ನಿನ ಮೂಲಾರ್ಥ ಬೆರಳು. ಪ್ರಾರಂಭದಿಂದಲೂ ಮನುಷ್ಯ ಎಣಿಸುವುದಕ್ಕೆ ಉಪಯೋಗಿಸುತ್ತಿದ್ದದ್ದು ಬೆರಳಲ್ಲವೆ ? ತದ್ವಿರುದ್ಧವಾಗಿ ನಮ್ಮ **ಲೆಕ್ಕ** ಎಂಬುದು ಬರೆದದ್ದು. **ಲೇಖಾ** ಎಂದರೆ ಪತ್ರ ಇಲ್ಲವೇ ಪುಸ್ತಕದಲ್ಲಿ ದಾಖಲಿಸಿದ ಲೇವಾದೇವಿಯ ವಿವರ. ಅದು ಸರಕಾರಿ ಇರಬಹುದು, ವ್ಯಾಪಾರಿ ಇರಬಹುದು. ಮುಂದೆ ಅದು ಎಲ್ಲ ತರದ ಗಣನಾ ವ್ಯಾಪಾರಕ್ಕೂ ಅನ್ವಯವಾಯಿತೆನ್ನಿ.

೬೬

''ಎರಡಾದ ಮೇಲೆ **ಮೂರಾ**ಗಿಯೇ ಆಗುತ್ತದೆ,'' ''**ಮೂರಕ್ಕೆ** ಮುಕ್ತಾಯ''

ಮೊದಲಾದ ಮಾತುಗಳು ಮನುಷ್ಯನ ಅತಿ ಪುರಾತನ ನಂಬಿಕೆಗಳನ್ನು ಪ್ರತಿಬಿಂಬಿಸುತ್ತವೆ. ಹೆಚ್ಚು ಕಡಿಮೆ ಎಲ್ಲ ಸಂಸ್ಕೃತಿಗಳಲ್ಲಿಯೂ ಸಂಖ್ಯೆಗಳನ್ನು ಕುರಿತ ನಂಬಿಕೆಗಳು ಇವೆ; **ಮೂರನ್ನು** ಕುರಿತವಂತೂ ಸಾರ್ವತ್ರಿಕವಾಗಿವೆ. **ತ್ರಿಮೂರ್ತಿಗಳು** ಹಿಂದುಗಳಿಗೆ ಹೇಗೋ ಕ್ರೈಸ್ತರಿಗೂ ಹಾಗೆ ಇದ್ದಾರೆ. ಸ್ವರ್ಗ ಮರ್ತ್ಯ ಪಾತಾಳ ಎಂಬ **ಮೂರು ಲೋಕಗಳು** ಭಾರತೀಯರಿಗಿವೆ. ಏಳು **ಲೋಕಗಳು** ನಮಗಿರುವಂತೆ ಪಾಶ್ಚಾತ್ಯರಿಗೂ ಇವೆ. ಪರಮ ಸಂತೋಷಗೊಂಡವನನ್ನು ಏಳನೇ ಸ್ವರ್ಗ seventh heaven ನಲ್ಲಿದ್ದಾನೆ ಎಂದು ಪಾಶ್ಚಾತ್ಯರು ಹೇಳುತ್ತಾರೆ. ನಾವು ಸ್ವರ್ಗಕ್ಕೆ **ಮೂರೇ ಗೇಣು** ಉಳಿಯಿತು ಎಂದು ಹೇಳುತ್ತೇವೆ. **ಮೂರು** ಮತ್ತು ಏಳು ಹೆಚ್ಚು ಕಡಿಮೆ ಎಲ್ಲ ಸಂಸ್ಕೃತಿ ನಾಗರಿಕತೆಗಳಲ್ಲಿ ಧಾರ್ಮಿಕ ಮತ್ತು ಶಕುನಾತ್ಮಕ ಮಹತ್ವವನ್ನು ಹೊಂದಿವೆ. ಮಾನವಶಾಸ್ತ್ರಿಗಳ ಅಭಿಪ್ರಾಯದಲ್ಲಿ ಈ ಸಂಖ್ಯೆಗಳ ಗುಣಧರ್ಮಗಳಿಂದ ಪ್ರಾಚೀನ ಮಾನವನಿಗೆ ಆದ ಸೋಜಿಗವೇ ಈ ನಂಬಿಕೆಗಳಿಗೆ ಕಾರಣವಾಗಿದೆ. ಮೂರು, ಐದು, ಏಳು ಪ್ರಥಮ ಅವಿಭಾಜ್ಯ ಸಂಖ್ಯೆಗಳು ತಾನೆ ?

ಸಂಖ್ಯೆಗಳಲ್ಲಿಯ ಧಾರ್ಮಿಕ, ಅಲೌಕಿಕ, ಸಂಬಂಧಗಳ ವಿಶ್ಲೇಷಣೆಯನ್ನು ಬದಿಗಿರಿಸಿ ಭಾಷೆಗಳ ಲೌಕಿಕ ಪ್ರವರ್ತನೆಯಲ್ಲಿ ಅವುಗಳ ಪಾತ್ರವನ್ನು ವಿಚಾರಿಸಿದರೆ, ಅನೇಕ ಕೌತುಕಗಳು ಹೊರಡುತ್ತವೆ. ಬೇರೆ ಬೇರೆ ಭಾಷೆಗಳಲ್ಲಿ ಅವುಗಳ ನಡವಳಿಕೆಗಳ ನಡುವೆ ಸಾಮ್ಯಗಳೂ ಇವೆ, ವೈಷಮ್ಯಗಳೂ ಇವೆ. ಕನ್ನಡದಲ್ಲಿ **ಮೂರು** ಧಾರ್ಮಿಕ, ಶಕುನಾತ್ಮಕ ಪಾವಿತ್ರ್ಯವನ್ನು ಹೊಂದಿರುವಂತೆ ಕ್ಷುಲ್ಲಕತ್ವದ ಧ್ವನಿಯನ್ನೂ ಪಡಿದಿದೆ. ''**ಮೂರು** ಕಾಸಿನ ಬುದ್ಧಿ'' ಎಂದು ಹೇಳುತ್ತೇವೆ. ಆದರೆ ಇಂಗ್ಲೀಷಿನವರು ಅಲ್ಪತ್ವಕ್ಕೆ **ಎರಡನ್ನು** ಆಧಾರ ಮಾಡಿಕೊಂಡು I care a tuppence for you (ನಿನಗೆ ನಾನು **ಎರಡು** ಕಾಸಿನ ಬೆಲೆಯನ್ನೂ ಕೊಡುವುದಿಲ್ಲ) ಎನ್ನುತ್ತಾರೆ. ನಮ್ಮಲ್ಲಿಯೂ ಹಿಂದಿಯಲ್ಲಿ **ದು–ಕಡಹಾ** (**ಎರಡು** = ದಂಬಡಿ) ತುಚ್ಛತ್ವದ ಪ್ರತೀಕವಾಗಿದೆ: ಕನ್ನಡದಲ್ಲಿಯೂ **ದುಗ್ಗಾಣಿ** (= ಎರಡು **ಕಾಣಿ**. ಕಾಣಿ = ಹಳೆಗಾಲದ ಒಂದು ಕ್ಷುಲ್ಲಕ ನಾಣ್ಯ) ಇದೆಯಾದರೂ **ಮೂರು ಕಾಸಿನಷ್ಟು** ಅದಕ್ಕೆ ಚಲಾವಣೆ ಇಲ್ಲ.

**ಮೂರು** ಅವ್ಯವಸ್ಥೆಯ ಅನಾಹುತದ ಸೂಚಕವೂ ಆಗಬಹುದು. ''**ಮೂರಾಬಟ್ಟೆ** ಆಗಿಹೋಯಿತು'' ಎನ್ನುವಾಗ ಮೂರು ದಾರಿ (ಬಟ್ಟೆ) ಎನ್ನುವುದು ಚಲ್ಲಾಪಿಲ್ಲಿ ಎಂಬರ್ಥ ಕೊಡುತ್ತದೆ. ಮರಾಠಿಯಲ್ಲಿಯೂ **ತ್ರೇಧಾ** (ಮೂರು ಬಗೆ) ಎಂದರೆ ಗಾಬರಿ ಮುಂಗಾಣದಂತಾಗುವುದು. **ದುರಾಗ್ರಹಕ್ಕೂ ಮೂರು** ಸಂಕೇತವಾಗುತ್ತದೆ. ''ತನ್ನ ಕೋಳಿಗೆ **ಮೂರು** ಕಾಲು'' ಎಂಬ ಗಾದೆಯುಂಟು. ಸಂಸ್ಕೃತದಲ್ಲಿ ಇದಕ್ಕೆ ''ಮುರಾರೇಃ **ತೃತೀಯಃ** ಪಂಥಾಃ'' (ಮುರಾರಿಯದು ಮೂರನೇ ದಾರಿ) ಎಂಬ ನುಡಿ ಇದೆ.

**ಮೂರು** ಕಾಸಿಗಿಂತಲೂ ಯಾರನ್ನಾದರೂ ಕೆಳಗಿಳಿಸಬೇಕಾದರೆ ನಾವು ''**ಒಂದೂವರೆ** ಕಾಸಿನವ'' ಎನ್ನುತ್ತೇವೆ. ಮರಾಠಿಯಲ್ಲಿ **ಒಂದೂವರೆ** ಇನ್ನೊಂದು ನುಡಿಕಟ್ಟಿಗೆ ಮೂಲವಾಗಿದೆ. ಬುದ್ಧಿವಂತಿಕೆಯನ್ನು ಮರೆಯಲು ಯತ್ನಿಸುವ ಹೆಡ್ಡನನ್ನು ಅವರು **ದೀಡ್** (= ಒಂದೂವರೆ) **ಶಹಾಣೇ** (ಅಥವಾ ಸಾಡೇತೀನ್ = ಮೂರೂವರೆ ಶಹಾಣೇ) ಎಂದು ಲೇವಡಿ ಮಾಡುತ್ತಾರೆ. ಅಂದರೆ **ಒಂದೂವರೆ** ಬುದ್ಧಿವಂತ. ಆಶ್ಚರ್ಯವೆಂದರೆ ಇಂಗ್ಲೀಷಿನಲ್ಲಿಯೂ wise by half (= ಅರ್ಧ ಹೆಚ್ಚು ಬುದ್ಧಿವಂತ) ಎನ್ನುವುದುಂಟು.

**ಒಂದೂವರೆಗೆ** ಹೀಗೆ ಕೀಳರ್ಥವಿದ್ದರೆ **ಒಂದೂಕಾಲಿಗೆ** ಮೇಲರ್ಥ ಬಂದಿರುವು

ದೊಂದು ವಿಪರ್ಯಾಸ. ಸೇರಿಗೆ **ಸವ್ವಾಸೇರು** (ಹಿಂದಿ, ಮರಾಠಿ–ಸವಾ = ಒಂದೂಕಾಲು-ಸಪಾದ) ಎಂದರೆ ಒಬ್ಬನಿಗಿಂತ ಇನ್ನೊಬ್ಬ ಉಪಾಯದಲ್ಲಿ ಮೀರಿದವನಾಗಿರುವುದು. ಸಂಗೀತಾಭಿನಯಗಳಲ್ಲಿ ಶ್ರೇಷ್ಠರಾಗಿದ್ದ ಮರಾಠಿ ನಟ ಬಾಲಗಂಧರ್ವರನ್ನು ಮೀರಿಸುವವರೆಂದು ಕಿರಾಣಾ ಸಂಪ್ರದಾಯದ ಗಾಯಕ ರಾಮಭಾವುರಿಗೆ **ಸವಾಯಿ ಗಂಧರ್ವ** ಎಂಬ ಬಿರುದು ಬಂತು. ಜಯಪುರ ಮಹಾರಾಜರು **ಸವಾಯಿ** ಎಂಬ ಬಿರುದನ್ನೇ ಇಟ್ಟುಕೊಂಡಿದ್ದರು : **ಸವಾಯಿ** ಮಾಧವರಾವ್ ಇತ್ಯಾದಿ. ಒಂದೂಕಾಲಿಗೆ ಏನೊ ಧಾರ್ಮಿಕ ವೈಶಿಷ್ಟ್ಯವೂ ಇದ್ದ ಹಾಗೆ ಕಾಣುತ್ತದೆ. ಸತ್ಯನಾರಾಯಣನಿಗೆ ಎಲ್ಲ ಘಟಕಗಳನ್ನೂ ಒಂದೂಕಾಲರ ಅಳತೆಯಲ್ಲಿ ಸೇರಿಸಿ ಪ್ರಸಾದ ತಯಾರಿಸಬೇಕಂತೆ.

**ಪಂಚಾಯತಿ** ಎನ್ನುವುದು ನ್ಯಾಯದಾನದಲ್ಲಿ ಭಾರತೀಯರದೇ ಆವಿಷ್ಕಾರ ಎನ್ನಲಾಗಿದೆ. **ಐದು** ಜನ ತೀರ್ಪು ಹೇಳುವುದು ಯುಕ್ತ ರೀತಿಯೇ. ಅಭಿಪ್ರಾಯದಲ್ಲಿ ಇಬ್ಬಂದಿಯಾದರೆ ಬಹುಮತದಿಂದ ನಿರ್ಣಯವಾಗಲು ಈ ಸಂಖ್ಯೆ ಅನುಕೂಲ. ಆದರೂ ನಾವು **ನಾಲ್ಕು** ಜನ ಒಪ್ಪುವ ಮಾತಾಗಿರಬೇಕೆಂದು ಹೇಳುತ್ತೇವೆ, ಹೊರತು ಐದು ಜನ ಎನ್ನುವುದಿಲ್ಲ. ಕನ್ನಡಕ್ಕೆ ಇದು ವಿಶಿಷ್ಟ ಎಂದಲ್ಲ. ಹಿಂದಿಯಲ್ಲಿ ಕೂಡ ಇದೇ ರೀತಿಯ ನುಡಿಕಟ್ಟು ಇದೆ. ನಾಲ್ಕನ್ನು ಬಿಟ್ಟರೆ **ಹತ್ತೇ** ಬಹುಜನ ಮೆಚ್ಚಿಕೆಯ ಸೂಚಕ ಸಂಖ್ಯೆ. **ಹತ್ತು** ಜನಕ್ಕೆ ಬೇಕಾದವ, ಇತ್ಯಾದಿ. ಈ **ಹತ್ತು** ಸಂಖ್ಯಾವಾಚಕವಾದರೂ ಅದಕ್ಕೆ ಸಂಸ್ಕೃತದಲ್ಲಿ **ಬಹಳ** ಎಂಬ **ಪರಿಮಾಣವಾಚಕ** ಅರ್ಥವೂ (ವೇದದಲ್ಲಿ) ಕಾಣಿಸುತ್ತದೆ. ಹೀಗೆ **ದಶಪ್ರಮತಿ** ಎಂದರೆ **ಬಹಳ** ಬುದ್ಧಿವಂತ ಎಂದರ್ಥ. ಬಹುಶಃ ರಾವಣನ **ದಶ** ಶಿರಸ್ಸು ಕೂಡ ಬಹಳ ಬುದ್ಧಿಯುಳ್ಳವ ಎಂಬರ್ಥವನ್ನೇ ಸೂಚಿಸುತ್ತದೆ.

**ಏಳು** ಧಾರ್ಮಿಕ ಶಕುನಾತ್ಮಕವಾಗಿ ಶುಭಪ್ರದವಾಗಿರಬಹುದು. ಆದರೆ ದೇಶಭಾಷೆಗಳಲ್ಲಿ ಅದರ ವರ್ತನೆ ವಿಚಿತ್ರವಾಗಿದೆ. ''ಏಳು ಕೆರೆಯ ನೀರು ಕುಡಿಸಿದ'' ಎಂದರೆ **ಬಹಳ** ಸತಾಯಿಸಿದ ಎಂದರ್ಥ (ಊರೂರು ಅಲೆದಾಡಿಸಿದ – ಅಂದರೆ ಪೀಡಿಸಿದ). ಮರಾಠಿಯಲ್ಲಿಯೂ ಏಳು (ಸಾತ್) ನೀಚಾರ್ಥದಲ್ಲಿ ಅತಿಶಯವನ್ನು ಸೂಚಿಸುತ್ತದೆ. **ಸಾತ್ ಲಬಾಡ್** ಎಂದರೆ **ಮಹಾ** ಮೋಸಗಾರ; **ಸಾತ್ಆಳಶೀ** ಎಂದರೆ **ಮಹಾ** ಮೈಗಳ್ಳ. ಕನ್ನಡದಲ್ಲಿ ನಾವು **ಶತ** ಮೈಗಳ್ಳ, **ಶತ** ಮೂರ್ಖ ಎನ್ನುತ್ತೇವೆ, **ಸಂಖ್ಯೆಯಿಂದ ಪರಿಮಾಣವನ್ನು** ಸೂಚಿಸುವ ಉದಾಹರಣೆಗಳೇ ಇವು.

''ಬಹಳ ಕಷ್ಟವಾಯಿತು'' ಎನ್ನುವಲ್ಲಿ ''**ಏಳೂ ಹನ್ನೊಂದು** ಆಯಿತು'' ಎಂಬೊಂದು **ನುಡಿಯಿದೆ.** ಇದು ಸಂಖ್ಯೆಯನ್ನು ಸೂಚಿಸುವಂತೆ ಕಂಡರೂ ಮಹಾಭಾರತ ಯುದ್ಧದ ಸಾಮ್ಯದಿಂದ ಹುಟ್ಟಿದ ಮಾತು. ಒಂದು ಕಡೆ **ಏಳು** ಇನ್ನೊಂದು ಕಡೆ ಹನ್ನೊಂದು ಅಕ್ಷೋಹಿಣಿ ಸೇನೆಗಳು ತಾಕಾಲಾಡಿ ಮಹಾ ಅಧ್ವಾನದಿಂದ ದಾಯಾದ್ಯ ವಿವಾದವನ್ನು ತೀರಿಸಿಕೊಂಡಂತೆ ಮಹಾ ಕಷ್ಟದಿಂದ ಕಾರ್ಯ ಸಾಧಿಸಿದಂತಾಯಿತು ಎಂದು ತಾತ್ಪರ್ಯ.

''ಕುಂಟನಿಗೆ **ಎಂಟು** ಬುದ್ಧಿ'' ಎಂಬಲ್ಲಿ ಅಥವಾ ''**ಎಂಟೆದೆ**'' ಎಂಬಲ್ಲಿ **ಎಂಟು** ಎಂಬುದು ಸಂಖ್ಯಾವಾಚಕವಲ್ಲವೆಂದು ತೋರುತ್ತದೆ. **ಎಂಟು** ಇಲ್ಲಿ **ತಂತ್ರ**ಗಾರಿಕೆ, ದಿಟ್ಟತನವನ್ನು ಸೂಚಿಸುವ ಸ್ವತಂತ್ರ ಶಬ್ದವಿರಬೇಕು. ತುಳುವಿನಲ್ಲಿ ಕೂಡ **ಎಂಟು** ಈ ಅರ್ಥಗಳಲ್ಲಿ ಪ್ರಯೋಗದಲ್ಲಿದೆ. ಅಲ್ಲಿ ಸಂಖ್ಯಾತ್ಮಕ **ಎಂಟು** ''ಎಣ್ಮ'' ಎಂಬ

ರೂಪದಲ್ಲಿರುವುದರಿಂದ **ಎಂಟು** ಬೇರೆಯೇ ಶಬ್ದ ಎಂದೆಣಿಸಲು ಅವಕಾಶವಿದೆ.

೬೭

**ಕಾಣ್ಕೆ, ಕಾಣಿಕೆ** ಎಂದರೆ ದೇವರಿಗೆ, ಹಿರಿಯರಿಗೆ, ಅರಸರಿಗೆ ಒಪ್ಪಿಸುವ ಉಪಹಾರ, ಉಡುಗರೆ. ದೇವರನ್ನು ಅರಸರನ್ನು **ಕಾಣಲು** ಹೋಗುವಾಗ ನಮ್ಮ ಗೌರವ, ಭಕ್ತಿ ಅಥವಾ ಅಧೀನತೆಯನ್ನು ವ್ಯಕ್ತಪಡಿಸಲು ಕೊಡುವ (ಹೆಚ್ಚಾಗಿ ಹಣದ ರೂಪದ) ಉಪಹಾರಕ್ಕೆ ಈ ಹೆಸರು. ಅರಸರಿಗೆ ಕಪ್ಪ, **ಕಾಣಿಕೆ**ಗಳು ಸಲ್ಲುತ್ತವೆ. ಮೊದಲನೆಯದು ನಿಶ್ಚಿತ ಕಾಲಗಳಲ್ಲಿ ತಾನಾಗಲಿ ಪರರ ಮೂಲಕವಾಗಲಿ ಸಂದಾಯ ಮಾಡಬಹುದಾದ್ದು; **ಕಾಣಿಕೆ** ಅವರ **ದರ್ಶನ**ಕ್ಕೆ ಹೋದಾಗ ಒಪ್ಪಿಸತಕ್ಕದ್ದು. ಕಾಣಿಕೆಯ ಸಂಪ್ರದಾಯ ಅನೇಕ ನಾಗರಿಕತೆಗಳಲ್ಲಿ ಸಮಾನವಾಗಿರುವುದು ಕಾಣಿಸುತ್ತದೆ. ದಕ್ಷಿಣ ದ್ರಾವಿಡ ಭಾಷೆಗಳಲ್ಲೆಲ್ಲ **ಕಾಣಿಕೆ** ಇದೆ. ಉರ್ದುವಿನಲ್ಲಿ **ನಜರ್** ಅಥವಾ **ನಜರಾನಾ** ಇದೆ. ಅರಬ್ಬಿ ಭಾಷೆಯಲ್ಲಿ **ನಜರ್** ಎಂದರೆ ನೋಟ ಅಥವಾ **ಕಾಣುವಿಕೆ.** ಸಂಸ್ಕೃತದಲ್ಲಿ **ದರ್ಶನ** ಶಬ್ದಕ್ಕೆ ಹೊಂದಿ **ಕಾಣಿಕೆ**ಯೆಂಬರ್ಥ ಕೊಡುವ ಶಬ್ದ ಕೋಶಗಳಲ್ಲಿ ಕಾಣುವುದಿಲ್ಲವಾದರೂ ಹಿಂದಿಯಲ್ಲಿ **ದರ್ಶನ,** ಬಂಗಾಲಿಯಲ್ಲಿ **ದರ್ಶನೀ** ಶಬ್ದಗಳು ಇವೆ. ಇಂಗ್ಲೀಷಿನಲ್ಲಿ present (ಪ್ರೆಜೆಂಟ್) ಎಂದರೂ ಮೊದಲಿಗೆ ರಾಜಾದಿಗಳ ಮುಂದೆ ಹಾಜರಾಗುವಾಗ ಕೊಡುವ ಉಚಿತ ಧನವೇ. ಆಮೇಲೆ ಅದು ಸಾಮಾನ್ಯ ಉಡುಗರೆಗೂ ಅನ್ವಯಿಸುತ್ತದೆ. Presentನಲ್ಲಿ **ಕಾಣುವ** ಅಥವಾ **ಕಾಣಿಸಿಕೊಳ್ಳುವ** ಸಂದರ್ಭ ನೇರವಾಗಿ ಶಬ್ದದಿಂದ ಸಿದ್ಧಿಸುವುದಿಲ್ಲ; **ಹಾಜರು** ಮಾತ್ರ ಸಿದ್ಧಿಸುತ್ತದೆ. **ಕಾಣಿಕೆ** ಏಶಿಯದ ಒಂದು ಸಾಂಸ್ಕೃತಿಕ ವಿಶೇಷವಾಗಿರಲೂಬಹುದು. ಸಂಸ್ಕೃತದ **ದರ್ಶನ,** ಕನ್ನಡದ **ಕಾಣಿಸಿಕೊಳ್ಳುವಿಕೆ,** ಅರಬ್ಬಿಯ **ನಜರ್** ಈ ಎಲ್ಲವೂ ಶ್ರೇಷ್ಠರು ಕನಿಷ್ಠರಿಗೆ ಗೋಚರವಾಗುವ ಸಂದರ್ಭದ ಗೌರವಾರ್ಥಕ ಛಾಯೆಯನ್ನು ರೂಪಿಸಿಕೊಂಡಿವೆಯೆಂಬುದು ಗಮನಾರ್ಹ. ಹಿರಿಯರನ್ನು, ದೇವರನ್ನು, ಅಧಿಕಾರಸ್ಥರನ್ನು **ಕಾಣ**ಹೋಗುವಾಗ (ಅವರನ್ನು **ನೋಡಲು** ಹೋಗುವುದಲ್ಲ!) ಬರಿಗೈಯಲ್ಲಿ ಹೋಗಬಾರದೆಂಬ ಶಿಷ್ಟಾಚಾರವೇ ಇದೆ. ಬಹುಶಃ ಪೂರ್ವ ದೇಶಗಳಲ್ಲಿ ಸಾರ್ವತ್ರಿಕವಾಗಿರುವ ಲಂಚದ ಮೂಲ ಇದರಲ್ಲೇ ಇದೆ.

ಕರ್ನಾಟಕದಲ್ಲಿ ಭೂಮಾಲಿಕನಿಗೆ ಸಾಗುವಳಿದಾರ ಕೊಡುವ ಬೆಳೆಯ ಅಂಶಕ್ಕೆ **ಲಾವಣಿ** ಎಂದು ಕೆಲವೆಡೆ, **ಗೇಣಿ** ಎಂದು ಕೆಲವೆಡೆ ಹೆಸರುಂಟು. ಇವು ಸುಮಾರಾಗಿ ಮಾತ್ರ ಸಮಾನಾರ್ಥಕ ಪದಗಳು. **ಲಾವಣಿ** ಎಂಬುದು ಮರಾಠಿಯ ಮೂಲಕ ಬಂದ ಶಬ್ದವಾದರೂ ಅದರ ಮೂಲ ಸಂಸ್ಕೃತದ **ಲೂ** (= ಕೊಯ್, ಕತ್ತರಿಸು) ಧಾತುವಿನಲ್ಲಿದೆ. ಹೀಗೆ ಬೆಳೆ **ಕೊಯ್ದಾ**ಗ ಭೂಮಾಲಿಕನಿಗೆ ಸಾಗುವಳಿದಾರ ಕೊಡುವ **ಅಂಶ** (ಲಾವನ = ಕೊಯ್ಯುವಿಕೆ) ಅಥವಾ **ಭಾಗ** ಎಂದು ಅದರ ತಾತ್ಪರ್ಯ. ಕಣದಲ್ಲಿಯೇ ಒಡೆಯ–ಸಾಗುವಳಿದಾರ ನಡುವೆ ಗೊತ್ತಾದ ಪ್ರಮಾಣದಲ್ಲಿ ಕಾಳನ್ನು ಭಾಗಮಾಡುವ ಸಂಪ್ರದಾಯವನ್ನು **ಲಾವಣಿ** ಸೂಚಿಸುತ್ತದೆ. **ಲಾವಣಿ**ಗೆ ಉತ್ತರ ಕರ್ನಾಟಕದಲ್ಲಿ **ಕೋರು** ಎಂದೂ ಹೆಸರಿದೆ. **ಕೋರು, ಕೂರು** ಪದಗಳಿಗೆ ದಕ್ಷಿಣ ದ್ರಾವಿಡದಲ್ಲಿ **ಭಾಗ, ಪಾಲು** ಎಂಬರ್ಥಗಳಿವೆ.

**ಗೇಣಿ**ಯ ಮೂಲ ರೂಪ **ಕೇಣಿ**ಯೆಂದು ಹಳೇ ಶಾಸನಗಳಿಂದ ತೋರಿಬರುತ್ತದೆ.

ಅದು ಸಂಸ್ಕೃತ **ಕ್ರೀಣಿ**ಯ ತದ್ಭವ ರೂಪ. ಮೂಲಾರ್ಥ ಕ್ರಯಕ್ಕೆ (= ಬೆಲೆಗೆ) ಕೊಳ್ಳುವುದು, ಮಾರುವುದು. ಅರ್ಥವಿಸ್ತರಣೆಯಿಂದ ಅದು **ಗುತ್ತಿಗೆಗೆ** ಹಿಡಿಯುವುದು ಎಂಬರ್ಥ ಕೊಡುತ್ತದೆ. ಆದ್ದರಿಂದ **ಗೇಣಿ** ಎಂಬುದು ಬೆಳೆಯ ರೂಪದಲ್ಲೇ ಇರಬೇಕೆಂದಾಗುವುದಿಲ್ಲ. ಹಣದ ರೂಪದಲ್ಲಿ ಕೂಡ **ಗೇಣಿ** ಸಲ್ಲಬಹುದೆಂದು ದಕ್ಷಿಣ ಕನ್ನಡದ ಮಧ್ಯಯುಗೀನ ಶಾಸನಗಳಿಂದ ಅರ್ಥವಾಗುತ್ತದೆ. ಇದು ಗುತ್ತಿಗೆಯಾದ್ದರಿಂದ **ಕಣದಲ್ಲಿ ಬೆಳೆಯ ಪಾಲಿನ** ಪ್ರಶ್ನೆಯೇ ಏಳುವುದಿಲ್ಲ. ಬೆಳೆಯಲಿ, ಬಿಡಲಿ **ಗೇಣಿ ಕೊಡಲೇಬೇಕು. ಶಾಸನಗಳಿಂದ ಇದು** ಸ್ಪಷ್ಟವಾಗುತ್ತದೆ. ಉತ್ತರ ಕರ್ನಾಟಕದಲ್ಲಿ ಗೇಣಿಗೆ **ಗುತ್ತಿಗೆ** ಎಂದೂ ಹೆಸರುಂಟು.

**ಗೇಣಿ**ಯ ಮೂಲ ರೂಪವಾದ **ಕೇಣಿ, ಖೇಣಿ.** ಹಿಂದಿನ ಕಾಲದಲ್ಲಿ ಬರೀ ಭೂಸಾಗುವಳಿದಾರನು ಮಾಲಿಕನಿಗೆ ಕೊಡುವ **ಗುತ್ತಿಗೆ**ಯನ್ನಷ್ಟೆ ಅಲ್ಲದೆ ಎಲ್ಲ ತರಹದ ಗುತ್ತಿಗೆಗಳಿಗೂ ಅನ್ವಯವಾಗುತ್ತಿತ್ತು. ಹೀಗೆ ಸುಂಕದ **ಕೇಣಿಕಾರರು** ಇದ್ದರು. ಅವರು ಸುಂಕ ವಸೂಲಿಯ ಹಕ್ಕನ್ನು ಒಂದು ನಿಶ್ಚಿತ ಮೊಬಲಗಿಗೆ ಗುತ್ತಿಗೆ ಹಿಡಿಯುತ್ತಿದ್ದರು. ಈ ಪದ್ಧತಿಯ ಅವಶೇಷ ಬ್ರಿಟಿಶರ ಕಾಲದಲ್ಲಿ ಕೂಡ ಉಳಿದಿತ್ತು. (ಹೊಳೆ ದಾಟುವಾಗ ಕಡವಿನಲ್ಲಿ ಸುಂಕ ವಸೂಲಿ ಮಾಡುವ ಹಕ್ಕನ್ನು ಬ್ರಿಟಿಶ್ ಸರಕಾರ ಲಿಲಾವಿನ ಮೂಲಕ ಗುತ್ತಿಗೆಗೆ ಕೊಡುತ್ತಿತ್ತು.) ಆದರೆ ಅದಕ್ಕಿದ್ದ ಕೇಣಿ ಎಂಬ ಹೆಸರು ಮಾತ್ರ ಲುಪ್ತವಾಗಿ ಆ ಹಕ್ಕು ಪಡೆದವರು **ಗುತ್ತೇದಾರ**ರೆನಿಸಿದ್ದರಷ್ಟೆ.

ಈ **ಗುತ್ತಿಗೆ, ಗುತಗೆ** ಕನ್ನಡ, ತೆಲುಗುಗಳಲ್ಲಿ ಮಧ್ಯಯುಗದಿಂದಷ್ಟೇ ಪ್ರಚಾರಕ್ಕೆ ಬಂದ ಪದ. ತಮಿಳಿನಲ್ಲಿಯೂ **ಕುತ್ತಗೈ** ಇದೆ. ಆದರೆ ದ್ರಾವಿಡದಲ್ಲಿ ಇದಕ್ಕೆ ತೃಪ್ತಿಕರವಾದ ನಿಷ್ಪತ್ತಿ ಸಿಗುವುದಿಲ್ಲ. **ಗೊತ್ತು** (= ನಿಶ್ಚಿತ ಸ್ಥಾನ) ಪದದಲ್ಲಿ ಅದರ ಬೇರು ಹುಡುಕುವ ಚಪಲ ಬಂದರೂ ಅನೇಕ ಆಡಳಿತ ಪದಗಳಂತೆ ಇದೂ ಕೂಡ ಉತ್ತರದಿಂದ ಬಂದಿದೆಯೆಂದು ತೋರುತ್ತದೆ. ಹಿಂದಿ, ಮರಾಠಿಗಳೆರಡರಲ್ಲೂ **ಗುತ್ತಾ** ಪದ ಇದೆ. ಅದೂ **ಗುತ್ತಿಗೆ**ಯೆಂಬರ್ಥ ಕೊಡುತ್ತದೆ.

**ಕಂದಾಯ** ಎಂಬುದು ಭೂಮಿಗಾಗಿ ರಾಜನಿಗೆ ತೆರಬೇಕಾದ ಕರ. ಇದು ತೆಲುಗು, ತಮಿಳುಗಳಲ್ಲಿ ಕೂಡ ಇದೆಯಾದರೂ ಸಂಸ್ಕೃತದಿಂದಲೇ ಬಂದ ಪದ. ಆಯ ಎಂದರೆ ಗ್ರಾಮಗಳಿಂದ ರಾಜನಿಗೆ ಬರತಕ್ಕ ಆದಾಯವೆಂದು ಪ್ರಾಚೀನವಾದ ಯಾಜ್ಞವಲ್ಕ್ಯ ಸ್ಮೃತಿ ಹೇಳುತ್ತದೆ. **ಕಂದ** ಎಂಬ ಪೂರ್ವಪದ **ಸ್ಕಂಧ್** (= ಸಂಗ್ರಹಿಸು, ವಸೂಲುಮಾಡು) ಧಾತುವಿನಿಂದ ಬಂದದ್ದು. **ಸ್ಕಂಧ** ಎಂದರೆ ಹೆಗಲು. ಪೂರ್ವಕಾಲದಲ್ಲಿ ಕಂದಾಯ ಧಾನ್ಯ ರೂಪದಲ್ಲಿ ಸಲ್ಲುತ್ತಿತ್ತು ಎಂದು ನೆನೆದರೆ ರಾಜನಿಂದ ನೇಮಕವಾದವನಿಗೆ ಹೆಗಲಲ್ಲಿ ಹೊತ್ತು ಹಾಕುವ ಆಯಕ್ಕೆ ಸ್ಕಂಧಾಯ = **ಕಂದಾಯ** ಎಂಬ ಪದ ಬಳಕೆಗೆ ಬಂದದ್ದು ಅರ್ಥವಾಗುವ ಮಾತು.

**ಸುಂಕ** ಎಂಬುದು ಸಂಸ್ಕೃತದ **ಶುಲ್ಕ**ದ ತದ್ಭವ. ಸಂಸ್ಕೃತದಲ್ಲಿ **ಶುಲ್ಕ**ದ ಅರ್ಥ ಹೆಚ್ಚು ವಿಶಾಲವಾಗಿದೆ. ಯಾವುದೇ **ತೆರ**ಕ್ಕೆ (ಮುಂಗಡ, ಹೆಣ್ಣಿಗೆ ಕೊಡಬೇಕಾದ ಬೆಲೆ ಇತ್ಯಾದಿ) ಶುಲ್ಕ ಅನ್ವಯಿಸಿದರೆ ಕನ್ನಡದಲ್ಲಿ ಸಮುದ್ರ, ನದಿ, ಗಡಿ ಇತ್ಯಾದಿ ಸ್ಥಳಗಳಲ್ಲಿ ವಸೂಲು ಮಾಡುವುದು ಮಾತ್ರ **ಸುಂಕ.** ದ್ರಾವಿಡ ಭಾಷೆಗಳಲ್ಲೆಲ್ಲ ಇರುವ **ತೆರ, ತೆರಿಗೆ ಶುಲ್ಕ**ದ ಎಲ್ಲ ಅರ್ಥಗಳನ್ನೂ ಕೊಡುತ್ತದೆ. ಇಂಗ್ಲೀಷಿನಲ್ಲಿ duty (ಡ್ಯೂಟಿ) ಕನ್ನಡದ **ಸುಂಕ**ಕ್ಕೆ ಸಮಾನವಾಗಿರುವಂಥಾದ್ದು. ಅದರ ಅರ್ಥ ಮೂಲದಲ್ಲಿ ಸಂದಾಯವಾಗಬೇಕಾದ್ದು due -

ಲ್ಯಾಟಿನ್ನಿನ debere. ತೆರಿಗೆ ಎಂದರೂ ತೆರತಕ್ಕದ್ದು, ಸಲ್ಲಿಸತಕ್ಕದ್ದು ಎಂದೇ ಅಲ್ಲವೆ? (ತಮಿಳಿನಲ್ಲಿ ಅದಕ್ಕೆ ಕಪ್ಪ ಎಂದು ಅರ್ಥವಿದೆ).

ಅರ್ಥದಲ್ಲಿ ಸುಮಾರು **ಸುಂಕಕ್ಕೆ** ಹತ್ತಿರವಾದ ಇಂಗ್ಲೀಷಿನ cessನ (ಸೆಸ್) ಮೂಲ ಕೌತುಕದ್ದು. ಅದು assesನ (ಅಸೆಸ್) ಸಂಕ್ಷಿಪ್ತರೂಪ. ಅದು cedere ಎಂಬ ಲ್ಯಾಟಿನ್ ಧಾತುವಿನಿಂದ ಹುಟ್ಟಿದ್ದು. ಅದರ ಅರ್ಥ **ಕೂತಿರುವಿಕೆ.** ಜನ ಕೊಡಬೇಕಾದ ಹಣದ ಮೊತ್ತವನ್ನು ನಿರ್ಣಾಯಕರು **ಆಸೀನರಾಗಿ** ಗೊತ್ತುಪಡಿಸುವುದರಿಂದ ಅದು **ಸೆಸ್ಸು.** ಶಬ್ದಗಳು ಎಷ್ಟು ಸುತ್ತು ಬಳಸಿ ಅರ್ಥವನ್ನು ಸಂಪಾದಿಸಬಹುದೆಂಬುದಕ್ಕೆ ಇದೊಂದು ನಿದರ್ಶನ. Cessಗೆ ಶಬ್ದಶಃ ಸಮಾನವಾದ ಪದವನ್ನು ನಾವು ಟಂಕಿಸಬೇಕಾದರೆ ಅದನ್ನು ಸದನ ಎನ್ನಬೇಕಾದೀತು!

೬೮

**ಶಾಪ** ವೃತ್ತಾಂತಗಳಿಂದ ಜಗತ್ತಿನ ಎಲ್ಲ ಪುರಾತನ ಆಖ್ಯಾನಗಳು ತುಂಬಿ ತುಳುಕುತ್ತವೆ. ನಮ್ಮ ವೇದಗಳು, ಬಬಿಲೋನಿಯನ್, ಅಸೀರಿಯನ್ ದಾಖಲೆಗಳು ಮೊದಲಾಗಿ ಎಲ್ಲವುಗಳಲ್ಲಿ ಶಾಪದ ವಿಷಯ ಬರುತ್ತದೆ. **ಶಾಪ** ಎಂದರೆ ಯಾವುದಾದರೂ ಅನ್ಯಾಯಕ್ಕೆ, ಅಪಮಾನಕ್ಕೆ ಅಥವಾ ಅಪರಾಧಕ್ಕೆ ನೊಂದ ಅಥವಾ ಕೋಪಿಸಿದ ದೇವತೆ, ಋಷಿ, ಮುನಿ ಅಥವಾ ಸಾಮಾನ್ಯ ವ್ಯಕ್ತಿ, ಅಲ್ಲದೆ ಪ್ರಾಣಿ ಕೂಡ, ತಪ್ಪಿತಸ್ಥನಿಗೆ ಏನಾದರೂ ಕೇಡು ಹಾರೈಸುವುದು. **ಸಂಸ್ಕೃತಿಶಾಸ್ತ್ರವನ್ನು** ಅಧ್ಯಯನಮಾಡಿದವರು, **ಶಾಪ** ಮತ್ತು ತದ್ವಿರುದ್ಧವಾದ ವರ ಇವೆರಡೂ ಪುರಾತನ ಮನುಷ್ಯನಿಗೆ, ಉಚ್ಚರಿತ (ಅಂದರೆ ಗಟ್ಟಿಯಾಗಿ ಹೇಳಿದ) **ನುಡಿಯ** ಮಾಂತ್ರಿಕ ಶಕ್ತಿಯ ಮೇಲಿದ್ದ ಅಪಾರ ವಿಶ್ವಾಸದ ದ್ಯೋತಕವಾಗಿವೆಯೆಂದು ಹೇಳುತ್ತಾರೆ. ಈ ಅಂಶವನ್ನು **ಶಾಪ** ಶಬ್ದವೇ ಎತ್ತಿ ತೋರಿಸುತ್ತದೆ.

**ಶಪ್** ಧಾತುವಿಗೆ ಪ್ರಮಾಣಪೂರ್ವಕ ಪ್ರತಿಜ್ಞೆ ಮಾಡುವುದು, ಆಣೆಯನ್ನು ಇಕ್ಕುವುದು/ ಇಕ್ಕಿಕೊಳ್ಳುವುದು, ಕೇಡು ಹಾರೈಸುವುದು ಮೊದಲಾದ ಅರ್ಥ ಇದ್ದರೂ **ಶಪ್** ಎಂದರೆ **ಗಟ್ಟಿಯಾಗಿ** ನುಡಿಯುವುದು, ಬೈಯುವುದು ಆಕ್ರೋಶ ಮಾಡುವುದು ಎಂಬುದೇ ಮೂಲಾರ್ಥ. ಆ ಧಾತುವಿಗೂ **ಶಬ್ದಕ್ಕೂ** ಸಂಬಂಧವಿದೆಯೆಂದು ಮೋನಿಯರ್ ವಿಲಿಯಮ್ಸ್ ಹೇಳುತ್ತಾನೆ. (ವೇದಗಳಲ್ಲಿ 'ಶಬ್ದ' ಎಂಬ ಶಬ್ದವಿಲ್ಲ; ಬಹುಶಃ **ಶಪ್ತವೇ ಶಬ್ದ.**)

**ಶಾಪ** ಫಲಕಾರಿಯಾಗಬೇಕಾದರೆ ಅದನ್ನು ಗಟ್ಟಿಯಾಗಿ ಉಚ್ಚರಿಸಬೇಕು; ಮತ್ತು ಅದು ಶಾಪಕ್ಕೆ ಗುರಿಯಾಗತಕ್ಕವನಿಗೆ ಕೇಳಿಸುವಂತಿರಬೇಕು. ಬೇರೆ ಆಗಂತುಕ ಕಾರಣಗಳಿಂದ ಅವನಿಗೆ ಅದು ಕೇಳಿಸದಿದ್ದರೂ ಶಾಪ ಸಫಲವಾಗಬಹುದು ಅಷ್ಟೆ. ಪರೀಕ್ಷಿತನಿಗೆ ಶೃಂಗಿ ಮುನಿ ಅವನ ಪರೋಕ್ಷದಲ್ಲಿ ಶಾಪ ಕೊಟ್ಟರೂ ಅರಸನಿಗೆ ಅದರ ಸುದ್ದಿಯನ್ನು ಹೇಳಿ ಕಳಿಸುತ್ತಾನೆ. ಪ್ರತ್ಯಕ್ಷದಲ್ಲಿ ''ತೆಗೆದುಕೋ ಶಾಪ'' ಎನ್ನುತ್ತ ಕಮಂಡಲದಿಂದ ನೀರೆರಚಿ ಋಷಿಮುನಿಗಳು ಗಟ್ಟಿಯಾಗಿ ಶಾಪ ಕೊಡುತ್ತಿದ್ದರು. ಈ ದೃಷ್ಟಿಯಿಂದ **ಮನಸ್ಸಿನಲ್ಲಿಯೇ ಶಪಿಸುವುದು** ನಿರರ್ಥಕ ಮಾತಾಗುತ್ತದೆ.

**ಶಾಪಕ್ಕೆ** ಸಮವಾದ ಇಂಗ್ಲೀಷ್ curse ಶಬ್ದದ ನಿರ್ವಚನ ಖಚಿತವಾಗಿಲ್ಲವಾದರೂ ಅದು ಫ್ರೆಂಚಿನ curoier = **ಆಕ್ರೋಶಪೂರ್ವಕ** ಕೇಡು ನುಡಿಯುವುದು ಎಂಬ ಪದದಿಂದ

ಬಂದಿದೆಯೆಂದು ತರ್ಕಿಸಲಾಗಿದೆ. ಬಹುಶಃ ಇದು ಸಂಸ್ಕೃತದ ಕ್ರೋಶ ( = ಕೂಗು) ಶಬ್ದಕ್ಕೆ ಸಂವಾದಿಯಾಗಿದೆ. ಪ್ರಾಚೀನ ಬಬಿಲೋನಿಯನ್–ಸೀರಿಯನ್‌ಗಳಲ್ಲಿ **ಮಮಿತ್** (mamit) ಎಂದರೆ **ಶಾಪ, ಮಮಿತು** ಎಂದರೆ ಶಾಪಗ್ರಸ್ತ ಅಥವಾ ಪಾಪಿ ; **ಮಮ್ಮು** ಎಂದರೆ ಗಟ್ಟಿಯಾದ ಧ್ವನಿ ಅಥವಾ ಉಚ್ಚರಿತ ಶಬ್ದ. ಇಸ್ಲಾಮಿನಲ್ಲಿಯೂ ಶಾಪ, ವರ ಕೇಳಿಸುವಂತಿರಬೇಕು. ಸಾಮೋವಾ ದ್ವೀಪದ ಆದಿವಾಸಿಗಳು **ಶಾಪವನ್ನು ಆಕ್ರೋಶಪೂರ್ವಕವಾಗಿಯೇ** ಕೊಡುತ್ತಿದ್ದರು.

**ಶಾಪದ್ದೇ** ಒಂದು ರೂಪ **ಶಪಥ; ಶಪಥ** ಎಂದರೆ ಒಂದು ಘೋರ ಪ್ರತಿಜ್ಞೆ. ಇದನ್ನು ಯಾವುದಾದರೂ ದೇವತೆಯ ಸಾಕ್ಷಿಯಾಗಿ ಮಾಡುತ್ತಿದ್ದರು. ''ವರುಣೇತಿ ಶಪ್'' ವರುಣನ ಹೆಸರಲ್ಲಿ ಶಪಥ ತೊಟ್ಟ ಎನ್ನುವ ಮಾತು ಋಗ್ವೇದದಲ್ಲಿದೆ. ವರುಣ ಸತ್ಯದ (ಋತಸ್ಯ) ದೇವತೆಯೆನಿಸಿದ್ದ. ''ಚತುರಂತ ಕ್ಷಿತಿಕಾಂತೆ ಕೇಳ್....'' ಎಂದು ಮುಂತಾಗಿ ಪಂಚಭೂತ ಸಾಕ್ಷಿಯಾಗಿ ಭೀಮನು ಕೌರವರನ್ನು ಕೊಲ್ಲುವ **ಶಪಥ** ತೊಡುತ್ತಾನೆ. ದೇವತಾಸಾಕ್ಷಿಯಾಗಿ ನ್ಯಾಯಾಲಯದಲ್ಲಿ **ಶಪಥ** ಮಾಡುವುದು ಇಂದಿಗೂ ಉಳಿದುಬಂದಿದೆ. ಇವೆಲ್ಲವೂ ಪುರಾತನ ಮಾನವ ಉಚ್ಚರಿತ ಶಬ್ದದ ಮಹಿಮೆಯಲ್ಲಿಟ್ಟ ಭಯಭರಿತ ವಿಶ್ವಾಸದ ದ್ಯೋತಕವಾಗಿದೆ. ವೇದದಲ್ಲಿಯೇ **ಸುಳ್ಳು ಶಪಥದ** (ಅನೃತಂಶಪ್) ಸುದ್ದಿ ಬರುತ್ತದೆಂಬ ಮಾತು ಬೇರೆ. ಉಚ್ಚರಿತ ಶಬ್ದದ ಮೇಲೆ ನಂಬಿಕೆ ಸಡಿಲಾದದ್ದರಿಂದಲೇ ''ಇದಂ ಬ್ರಾಹ್ಮಂ, ಇದಂ ಕ್ಷಾತ್ರಂ, ಶಾಪಾದಪಿ ಶರಾದಪಿ'' (ಇದು ಬ್ರಾಹ್ಮ, ಇದು ಕ್ಷಾತ್ರ, ಶಾಪವೋ ಸೈ, ಶರವೋ ಸೈ) ಎಂಬ ಮಾತು ಮಹಾಭಾರತದಲ್ಲಿ ಬರುತ್ತದೆ.

**ಶಾಪಕ್ಕೆ** ಪ್ರತಿಯಾದ ವರ ಎಂಬುದು ವೃಧಾತುವಿನಿಂದ ಬಂದದ್ದು. ವೃಧಾತುವಿನ ಒಂದರ್ಥ ಆರಿಸಿಕೊಳ್ಳುವುದು. ಆದ್ದರಿಂದ ಇನ್ನೊಂದಕ್ಕಿಂತ ಮೇಲಾದುದು **ವರ** ; ಬಹಳ ಗಂಡುಗಳಲ್ಲಿ ಇವನೇ ಮೇಲು ಎಂದು ಆರಿಸಿಕೊಂಡವನು **ವರ**; ಹಾಗೆಯೇ **ಇವನೇ ಬೇಕು** ಎಂದು ಆರಿಸಿಕೊಂಡವನೂ **ವರ; ಇದೇ ಬೇಕು** ಎಂದು ದೇವತೆಯಿಂದಲೋ ಮಹಾಮಹಿಮರಿಂದಲೋ ಬೇಡಿಕೊಂಡದ್ದೂ ವರ. ಈ **ವರ** ಕೂಡ ಗಟ್ಟಿಯಾಗಿ ನುಡಿಸಿಕೊಳ್ಳತಕ್ಕದ್ದೆ ಹೊರತು ಮೌನವಾಗಿ ಮನಸ್ಸಿನಲ್ಲೇ ವರ ಕೊಡುವುದು ಸಾಧ್ಯವಿಲ್ಲ. **ಆಶೀರ್ವಾದ** ಕೂಡ ವರ ಆಗುತ್ತದೆ. **ಆಶೀರ್ವಾದ** ಕೂಡ ಗಟ್ಟಿಯಾಗಿ ಉಚ್ಚರಿಸಬೇಕಾದದ್ದೆ. ಮತ್ತೆ ಇಲ್ಲಿಯೂ (ಆಡಿದ) ''ಮಾತು ಜ್ಯೋತಿರ್ಲಿಂಗ.''

**ಶಾಪ** ವರಗಳ ಹಾಗೆಯೇ ತುಂಬ ಪ್ರಾಚೀನವಾದ ಕಲ್ಪನೆ **ಪುಣ್ಯ** ಪಾಪಗಳದ್ದು. **ಪುಣ್ಯ** ಎಂಬ ಧಾರ್ಮಿಕ ಭಾವನೆ ಎಲ್ಲ ಸಂಸ್ಕೃತಿಗಳಲ್ಲಿ ಇಲ್ಲ. (ಒಳ್ಳೆಯದು ಮಾಡುವುದು ಮಾನವ ಕರ್ತವ್ಯವಾದ್ದರಿಂದ ಅದನ್ನು ಮಾಡದಿರುವುದು ಪಾಪ, ಹೊರತು ಮಾಡಿದ್ದಕ್ಕೆ **ಪುಣ್ಯ** ಎಂಬ ಜಮಾ ಲೆಕ್ಕ ಇಲ್ಲವೆಂದು ಕ್ರೈಸ್ತರು ಹೇಳುತ್ತಾರೆ.) ನಮ್ಮ **ಪುಣ್ಯದಲ್ಲಿ** ಕೂಡ ಮೂಲತಃ ಈ ಧಾರ್ಮಿಕ ಅರ್ಥಚ್ಛಾಯೆ ಇಲ್ಲವೆಂದು ತೋರುತ್ತದೆ. ಸಂಸ್ಕೃತ ವಯ್ಯಾಕರಣರು **ಪುಣ್ಯ** ಶಬ್ದವನ್ನು **ಪುಣ್** ಎಂಬ ಧಾತುವಿಗೆ ತಗಲಿಸುತ್ತಾರಾದರೂ ಅದು ನಿಜಕ್ಕೂ **ಪೂ** (ಶುದ್ಧವಾಗಿಸು, ಸೋಸು) ಎಂಬ ಧಾತುವಿನಿಂದಲೇ ಹುಟ್ಟಿದಂತೆ ಅನಿಸುತ್ತದೆ. ''ಸಕ್ತುಮಿವ ತಿತಉನಾ **ಪುನಂತೋ**'' (ಹಿಟ್ಟನ್ನು ಜಾಳಿಗೆಯಲ್ಲಿ **ಸೋಸಿದಂತೆ** ಮನಸ್ಸಿನಿಂದ ಸೋಸಬೇಕು) ಎಂಬ ಮಾತು ವೇದದಲ್ಲಿ ಬರುತ್ತದೆ. ಹೀಗೆ ಪುಣ್ಯ ಎಂದರೆ ಶುದ್ಧ ಎಂಬುದೇ ಮೂಲಾರ್ಥ. ಸುಗಂಧ ಎಂಬರ್ಥದಲ್ಲಿ **ಪುಣ್ಯಗಂಧಾ** ಎಂಬ ಮಾತು

ಋಗ್ವೇದದಲ್ಲಿದೆ. ಶುದ್ಧವಾದದ್ದು ಇಹಕ್ಕೂ ಪರಕ್ಕೂ ಒಳ್ಳೆ ಪರಿಣಾಮ ಮಾಡುವುದರಿಂದ ಪುಣ್ಯ ಶಬ್ದವು ಭಾವಿ ಹಿತಕ್ಕಾಗಿ ಕೂಡಿಹಾಕಲು ಸಾಧ್ಯವುಳ್ಳ **ಒಳಿತು** ಎಂಬರ್ಥಕ್ಕೆ ಚಾಚಿತು. ಈ ಅರ್ಥಕ್ಕೆ ಪುಣ್ಯ ಶಬ್ದ ತಿರುಗುವುದಕ್ಕೆ ದ್ರಾವಿಡದ **ಪೂಣ್** (= ಪ್ರಯತ್ನಿಸು, ಪ್ರತಿಜ್ಞೆ ಮಾಡು) ಧಾತುವಿನ ಪ್ರಭಾವ ಸೇರಿರಲೂಬಹುದು. ಏಕೆಂದರೆ **ಪುಣ್ಯ** ಎಂದು ಈಗ ಭಾವಿಸಲ್ಪಡುವುದರಲ್ಲಿ ಯತ್ನ ಅಡಕವಾಗಿದೆ. ಋಗ್ವೇದದಲ್ಲಿಯೇ ಕಾಣಿಸುವ **ಪುಣ್ಯ** ಒಳಿತು, ಪವಿತ್ರ, ಮಂಗಲಕರ ಎಂಬಿತ್ಯಾದಿ ಅರ್ಥಗಳಲ್ಲಿ ವ್ಯವಹೃತವಾಗಿದೆ.

**ಪಾಪವೂ** ಹಾಗೆಯೇ. ಧಾರ್ಮಿಕತೆ ಅದರಲ್ಲಿ ಸೇರಿರಲಿಲ್ಲ. ಋಗ್ವೇದದಲ್ಲಿ ಇದು ದುಷ್ಟ, ದುಷ್ಕರ್ಮ, ಅಮಂಗಲ ಮೊದಲಾದ ಅರ್ಥಗಳಲ್ಲಿ ಕಾಣಿಸುತ್ತದೆ. ಪ್ರಾಥಮಿಕ ಅದು ಕೇಡು, ಕೇಡಿಗ ಎಂಬ ಅಭಿಪ್ರಾಯವನ್ನು ತಾನೇ ವ್ಯಂಜಿಸುತ್ತದೆ. ಇಂಗ್ಲೀಷಿನ sin (ಸಿನ್) ಎಂಬುದೂ ಹಳೇ ಇಂಗ್ಲೀಷ್, ಹಳೇ ಸ್ಯಾಕ್ಸನ್, ಡಚ್, ಲ್ಯಾಟಿನ್ ಮೊದಲಾದ ಭಾಷೆಗಳಲ್ಲಿಯ ಅದರ ಬಾಂಧವ ಶಬ್ದಗಳೂ ಅಪರಾಧ, ಅನ್ಯಾಯ, ದುಷ್ಕರ್ಮ ಮೊದಲಾದ ಅರ್ಥಗಳಲ್ಲಿ ಪ್ರಯುಕ್ತವಾಗುತ್ತಿದ್ದುವು. ಅರಬ್ಬಿ **ಗುಹಾನ್** ಕೂಡ **ಅಪರಾಧ** ಎಂಬರ್ಥದೊಡನೆ ಪಾಪ ಎಂಬರ್ಥವನ್ನು ಕೊಡುತ್ತದೆ. ಮನುಷ್ಯನ ಅನುಚಿತ, ಕ್ರೂರ ಕರ್ಮಗಳಿಗೆ ಹೊಂದಿದಂತೆ ಇದ್ದ ಈ ಪದಗಳು, ಮುಂದೆ ಧಾರ್ಮಿಕ ವಿಧಿ ನಿಷೇಧಗಳನ್ನು ಮೀರುವ ಮೂಲಕ ಮಾಡುವ ದೈವ–ಧರ್ಮದ್ರೋಹಗಳಿಂದ ಮುಂದೆ ಇಹ ಪರಗಳಲ್ಲಿ ದುಷ್ಫಲಗಳನ್ನು ಕೊಡುವ ಸಂಚಿತ ಕರ್ಮಗಳಿಗೇ ಮುಖ್ಯವಾಗಿ ಅನ್ವಯಿಸುವಂತೆ ಬೆಳೆದುವು.

೬೯

ಸರ್ ಶಬ್ದವನ್ನು ಈಗ ಎಲ್ಲ ಶಾಲಾಬಾಲಕರು ತಮ್ಮ **ಗುರು**ಗಳನ್ನು ಸಂಬೋಧಿಸಲು ಬಳಸುತ್ತಾರೆ. ಕಛೇರಿಗಳಲ್ಲಿ ಮೇಲಧಿಕಾರಿಗಳನ್ನು ಈ ಪದದಿಂದಲೇ ಸಂಬೋಧಿಸುತ್ತಾರೆ. ಇಂಗ್ಲೀಷ್ ವಿದ್ಯೆಯೊಡನೆ, ಆಡಳಿತದೊಡನೆ ಭಾರತಕ್ಕೆ ಆಗಮಿಸಿದ ಈ ಶಬ್ದ ಹಳೇ ಫ್ರೆಂಚ್‌ನಿಂದ ಇಂಗ್ಲೀಷಿಗೆ ಬಂದದ್ದು. ಫ್ರೆಂಚಿನಲ್ಲಿ sire ಆಗಿದ್ದ ಅದು ಮೂಲ ಲ್ಯಾಟಿನ್ನಿನಲ್ಲಿ serrior. ಅದರರ್ಥ **ಹಿರಿಯ.** ನಮ್ಮ **ಗುರು** ಶಬ್ದಕ್ಕೂ **ದೊಡ್ಡದು ಭಾರವಾದ್ದು** ಎಂದಲ್ಲವೇ ಅರ್ಥ ? ಹಿಂದೆ ಪಾದ್ರಿಗಳನ್ನೂ ಈಗ ಬಿ.ಎ. ಎನ್ನುವ ಪದವಿಯನ್ನು ಪಡೆದವರನ್ನೂ sir ಎಂದು ಸಂಬೋಧಿಸುತ್ತಿದ್ದರು. ಬ್ರಿಟನ್ನಿನ ರಾಜರಿಂದ knight (ನೈಟ್) ಎಂಬ ಬಿರುದನ್ನು ಪಡೆದವರನ್ನು ಕುರಿತು ಹೇಳುವಾಗ ಅವರ ಅಂಕಿತ ನಾಮವನ್ನು Sir ಪೂರ್ವಕವಾಗಿ ವಿಶೇಷಿಸುತ್ತಾರೆ. ಉದಾಹರಣೆಗೆ **ಸರ್** ಸಿ. ವಿ. ರಾಮನ್. ಒಮ್ಮೊಮ್ಮೆ ಮರ್ಯಾದಾಪೂರ್ವಕ ಆಕ್ಷೇಪ ವ್ಯಕ್ತಪಡಿಸಬೇಕಾದರೂ 'ಸರ್' ಎಂದು ಗಂಭೀರವಾಗಿ ಸಂಬೋಧಿಸಬಹುದು. ಉದಾಹರಣೆಗೆ. ''ಸರ್ ! ನೀವು ಸುಳ್ಳಾಡುತ್ತಿದ್ದೀರಿ !'' ನಾವು ''ಸ್ವಾಮಿ'' ಎಂಬುದನ್ನು ಈ ಬಗೆಯಾಗಿ ಉಪಯೋಗಿಸುವುದುಂಟಲ್ಲವೆ ?

''ಸರ್'' ಮೂಲ ಬೇರೆ, ಸರದಾರ್ ಮೂಲ ಬೇರೆ. ಎರಡನೆಯದು ಫಾರಸಿಯಿಂದ ಬಂದದ್ದು. ಸರದಾರದ ಸರ್ ಸಂಸ್ಕೃತದ ಶಿರಸ್‌ಗೆ ಸಂಬಂಧಿಯಾಗಿದ್ದು ಅದರ ಅರ್ಥ **ತಲೆ,** ಆದ್ದರಿಂದ **ಮುಖ್ಯ, ಮುಂದಿನ** ಇತ್ಯಾದಿ. **ದಾರ್** ಎಂಬುದು ''ಅದುಳ್ಳ'' ಎಂಬರ್ಥದ (ನಮ್ಮ ಕಾರ, ಗಾರಕ್ಕೆ ಸಮಾನ) ಪ್ರತ್ಯಯ. ಸರದಾರ ಎಂಬುದನ್ನು ಮುಖ್ಯವಾಗಿ ಸೈನಿಕರ

**ನಾಯಕ** ಎಂಬ ಭಾವವನ್ನು ವ್ಯಕ್ತಪಡಿಸಲು ಬಳಸುವುದಾಗಿದೆ. ತಮ್ಮ ಯುದ್ಧಪ್ರಿಯತೆಯನ್ನು ವ್ಯಕ್ತಪಡಿಸಲು ನಮ್ಮ ಸೀಖರೆಲ್ಲ **ಸರದಾರ** ಎನ್ನಿಸಿಕೊಳ್ಳಲು ಇಷ್ಟಪಡುತ್ತಾರೆ.

ತಲೆಯ ಮಹತ್ವ ಎಲ್ಲ ಸಂಸ್ಕೃತಿಗಳಲ್ಲಿ ಇದ್ದದ್ದೇ. ಇಂಗ್ಲೀಷಿನಲ್ಲಿ headman, headmaster (ಹೆಡ್‌ಮ್ಯಾನ್, ಹೆಡ್‌ಮಾಸ್ತರ್) ಇತ್ಯಾದಿ ಇವೆ. ಇದಕ್ಕೆ ಸರಿಯಾಗಿ **ತಲೆಯಾಳು** ಪದ ಕನ್ನಡದಲ್ಲಿ ಇದ್ದರೂ ಅದು ಬಿಎಂಶ್ರೀ ಅನಂತರದ ಪ್ರಯೋಗ. ತಮಿಳಲ್ಲಿ **ತಲೈವನ್** ಇದೆ. ನಮ್ಮಲ್ಲಿ ವ್ಯಕ್ತಿಯ ಶ್ರೇಷ್ಠತೆ ಹೇಳಲು **ತಲೆ**ಗಿಂತಲೂ **ಮುಖ**ವನ್ನೇ ಸಂಕೇತವಾಗಿ ಬಳಸಿದ್ದು ಹೆಚ್ಚು. ಸಂಸ್ಕೃತದಲ್ಲಿ **ಮುಖ್ಯ**, ಹಿಂದಿಯಲ್ಲಿ **ಮುಖಿಯಾ**. ಕನ್ನಡದ **ಮುಂದಾಳು** ಮುಖವನ್ನು ಅಲ್ಲದಿದ್ದರೂ **ಮುಂದೆ**ಯನ್ನು ವರಿಷ್ಠತ್ವದ ಸೂಚಕವಾಗಿ ಮಾಡಿದೆ. ಸಂಸ್ಕೃತದ **ನಾಯಕ** **ನೀ** ಧಾತುವಿನಿಂದ ಹುಟ್ಟಿದ್ದು. (ಒಯ್ಯು, ಕರೆದೊಯ್ಯು.) ಮುಂದಿನಿಂದ ಹೋಗುವವ ಎಂದು ಅದರರ್ಥ. ಸೈನ್ಯಸೇವೆಯಲ್ಲಿ **ನಾಯಕ** ಎಂಬ ಅಂತಸ್ತೇ ಇದೆ.

ರಾಜಕೀಯದಲ್ಲಿ **ಪುಢಾರಿ** ಎಂಬ ಶಬ್ದ ಈಗ ಕನ್ನಡದಲ್ಲಿ ಸ್ವಲ್ಪ ಕೆಟ್ಟ ಅರ್ಥದಲ್ಲಿ ಬಳಸಲ್ಪಡುತ್ತದೆ. ಅದರಲ್ಲಿ ಉಪದ್ವ್ಯಾಪಿತ್ವ ಧ್ವನಿತವಾಗುತ್ತದೆ. ಅದು ಮರಾಠಿ ಪದ. ಮರಾಠಿಯಲ್ಲಿ **ಪುಢೇ** ಎಂದರೆ ಮುಂದೆ : **ಪುಢಾರಿ** ಎಂದರೆ ಬರೇ **ಮುಂದಾಳು**. ಅದಕ್ಕೆ ಕೆಟ್ಟ ಅರ್ಥಚ್ಛಾಯೆ ಇಲ್ಲ. ವಿಶೇಷವೆಂದರೆ, **ಪುರೋಹಿತ** ಶಬ್ದಕ್ಕೂ ಮುಂದಾಳು (ಪುರಸ್ = ಮುಂದೆ, ಹಿತ = ಇರಿಸಲ್ಪಟ್ಟವ) ಎಂದೇ ಮೂಲಾರ್ಥ. ವೇದದಲ್ಲಿ ಅಗ್ನಿಯನ್ನು ''ಪುರೋಹಿತ'' ಎಂದು ಸಂಬೋಧಿಸಿದ್ದಾರೆ. (ಅಗ್ನಿಮೀಳೇ ಪುರೋಹಿತಂ.)

**ಸಾಹೇಬ** ಕನ್ನಡದಲ್ಲಿ ಹಲವು ಅರ್ಥಾವತಾರಗಳನ್ನು ಹೊಂದಿದೆ. ಉತ್ತರ ಕರ್ನಾಟಕದಲ್ಲಿ ಅದು (ವಿಶೇಷವಾಗಿ ಸರಕಾರಿ) ಅಧಿಕಾರಿಗಳನ್ನು (ಜಾತ್ಯತೀತವಾಗಿ) ಸಂಬೋಧಿಸುವ ಗೌರವಾರ್ಥಕ ಪದವಾಗಿದೆ. ಮುಸ್ಲಿಮ್ ಆಳಿಕೆಯ ದಾಯವಾದ ಈ ಪದಕ್ಕೆ ಅರಬೀ ಭಾಷೆಯ **ಸಾಹಿಬ್** ಮೂಲ. ಅದರ ಅರ್ಥಗಳು ಉಳ್ಳವ, ಒಡೆಯ, ಮಹಾಶಯ. ದಕ್ಷಿಣ ಕರ್ನಾಟಕದಲ್ಲಿ ಎಲ್ಲ **ಮುಸ್ಲಿಮರೂ** **ಸಾಹೇಬರೇ**. ಅದೂ ಸರಿಯೇ. ಮುಸ್ಲಿಮರು ತಂದ ಮಾತು ತಾನೇ ಅದು ? ಅದೇ ಕೆಳ ವರ್ಗದ ಮಹಮ್ಮದೀಯರನ್ನು **ಸಾಬಿ**ಗಳಾಗಿ (ಜಟಕಾ **ಸಾಬಿ**, ಕಲಾಯಿ **ಸಾಬಿ**) ಮಾಡಲಾಗಿದೆ. ದಕ್ಷಿಣ ಕನ್ನಡದಲ್ಲಿ ಮುಸ್ಲಿಮ್ ಜಾತಿಯನ್ನೇ **ಸಾಯ್ಬ**ರು ಎನ್ನುತ್ತಾರೆ. ಉತ್ತರ ಕರ್ನಾಟಕದಲ್ಲಿ **ಸಾಹೇಬ**ನನ್ನು **ಸಾಬ** ಮಾಡಿದರೆ ಅದು ಮುಸ್ಲಿಮ್ ಜಾತಿ ವಾಚಕವಾಗುತ್ತದೆ. ಕೊಂಕಣಿಗರು ಅದನ್ನು ಗೌರವಾರ್ಥ ಹೀನಾರ್ಥ ಎರಡರಿಂದಲೂ ಮುಕ್ತಗೊಳಿಸಿದ್ದಾರೆ. ಅದು ಕೇವಲ ತುಂಬ ಸಲಿಗೆಯ ಮಾತಾಗಿ ನಮ್ಮ **ಮಾರಾಯ**ಕ್ಕೆ ಸಮಾನವಾಗಿದೆ. (''ಕಸಲ್ **ಸಾಯ್ಬಾ**'' ಎಂದರೆ ''ಏನು ಮಾರಾಯ ?'' ಅಂತ.) ಅದೇ ಹೆಂಗಸರಿಗೆ ಅನ್ವಯಿಸುವಾಗ **ಸಾಯ್ಬಿಣೆ** ಆಗುತ್ತದೆ. ವಿಚಿತ್ರವೆಂದರೆ ಉರ್ದು ಭಾಷೆಯಲ್ಲಿ **ಸಾಹಬ್ ಲೋಗ್** ಅಂದರೆ **ಬಿಳೀ ಜನರೂ** ಹೌದು ! ಅಧಿಕಾರ ಬಿಳಿಯರ ಕೈಗೆ ಹೋದದ್ದನ್ನು ಮುಸ್ಲಿಮರು ಸ್ವೀಕರಿಸಿದ್ದರ ದ್ಯೋತಕ ಇದು.

**ಸವಾರ** ಎಂದರೆ ಕುದುರೆ (ಅಥವಾ ಬೇರೆ ವಾಹನದಲ್ಲಿ) ಹೋಗುವಾತ. ಇದು ಬೇರೆ ಬೇರೆ ಎರಡು ಕಾಲಗಳಲ್ಲಿ ಭಾರತಕ್ಕೆ ಬಂದ ಪದ : ಮೊದಲು ಕ್ರಿಸ್ತಪೂರ್ವ ಮೂರನೇ ಶತಮಾನದಲ್ಲಿ **ಅಸವಾರ** (ಅಶೋಕನ ಸಾಂಚಿ ಶಾಸನ) ಎಂಬ ರೂಪದಲ್ಲಿ; ಹಳೇ ಪರ್ಶಿಯನ್ **ಅಸವಾರಿ–ಅಸಬಾರಿ** ಕುದುರೆ ಏರಿದವ (ಸಂಸ್ಕೃತ **ಅಶ್ವ–ಭಾರಿ**.) ಹೊಸ ಪಾರಸೀಕ ಭಾಷೆಯಲ್ಲಿ ಅದು **ಸವಾರ** ಎಂದಾಗಿ ಮುಸ್ಲಿಮ್ ಆಳಿಕೆಯೊಡನೆ ಮತ್ತೆ ಬಂತು.

ಹಿಂದೀ, ಉರ್ದುಗಳಲ್ಲಿಯೂ ಅನಂತರ ಕನ್ನಡದಲ್ಲಿಯೂ ಅದು ಈ ಹೊಸ ರೂಪದಲ್ಲಿಯೇ ಪ್ರಚಲಿತವಾಗಿದೆ. ಕುದುರೆಯಲ್ಲದೆ ಬೇರೆ ವಾಹಗಳನ್ನೇರಿದ್ದೂ ಸವಾರಿಯೇ. ಕನ್ನಡದಲ್ಲಿ ಆಢ್ಯರ ಆಗಮನವಾದಾಗ **ಸವಾರಿ** ಅಥವಾ **ಸ್ವಾರಿ** ಬಂತು ಎನ್ನುವ ವಿಶೇಷಾರ್ಥವನ್ನೂ ಅದು ಪಡೆದುಕೊಂಡಿದೆ. ಇದಕ್ಕೆ ಹಿಂದೀ ಉರ್ದುವಿನಲ್ಲಿ **ವಾಹನಗಳ ಮೆರವಣಿಗೆಗೆ ಸವಾರಿ** ಎಂಬ ಪದ ಪ್ರಯೋಗವಿರುವುದು ಕಾರಣವಾಗಿರಬಹುದು. **ಮೈಸೂರಿನ ಜಂಬೂ ಸವಾರಿ** ಪ್ರಸಿದ್ಧ.

ಕವೀಂದ್ರ ರವೀಂದ್ರರಿಂದಾಗಿ ಅವರ ಕುಲನಾಮ **ಟಾಗೋರ್** ಶಬ್ದ ಎಲ್ಲರಿಗೂ ಪರಿಚಿತ. ಬಂಗಾಲಿಯಲ್ಲಿ ಅದು **ಠಾಕೂರ್.** ಬಿಹಾರ ಉತ್ತರ ಪ್ರದೇಶಗಳಲ್ಲಿ **ಠಾಕೂರರೆಂಬ** ಭೂಮಾಲಿಕ ಜಾತಿಯೇ ಇದೆ. ಗುಜರಾತದಲ್ಲಿಯೂ **ಠಕ್ಕರ** ಎಂಬ ಕುಲನಾಮ ಇದೆ. **ಠಾಕುರ, ಠಕ್ಕರ, ಠಕ್ಕುರ** ಮೊದಲಾದವು ಆಢ್ಯ ಜನರಿಗೆ ಅನ್ವಯಿಸುವ ಗೌರವ ಪದವಾಗಿರುವಂತೆ **ದೇವತಾ ಮೂರ್ತಿ** ಎಂಬರ್ಥವೂ ಅದಕ್ಕಿದೆ. ಭಾರತೀಯ ಭಾಷೆಗಳಲ್ಲಿ ಈ ಪದಕ್ಕೆ ಸಮರ್ಪಕ ವ್ಯುತ್ಪತ್ತಿ ಸಿಗುವುದಿಲ್ಲ. ಆದರೆ ಹಳೇ ತುರ್ಕಿ ಭಾಷೆಯಲ್ಲಿ ರಾಜ, ಸಾಮಂತ ಇತ್ಯಾದಿ ಅರ್ಥಕೊಡುವ **ತಗೀನ್** (ತಗಿತ್ – ಬಹುವಚನ) ಇದೆ. ಅದಕ್ಕೂ ಹಿಂದೆ ಹೋದರೆ ಪ್ರಾಚೀನ ಸುಮೇರಿಯನ್ ಭಾಷೆಯಲ್ಲಿ **ದಿಂಗಿರ್** (= ದೇವರು) ಇದೆ. ಇದೇ ತುರ್ಕಿಯಲ್ಲಿ **ತಗೀನ್** ಆಗಿ, **ಟಕ್ಕಣ, ಠಕ್ಕುಣ** ರೂಪದಲ್ಲಿ ೧೨ನೇ ಶತಮಾನದಲ್ಲಿ ಕಾಶ್ಮೀರ ಕವಿ ಕಲ್ಹಣನ ''ರಾಜತರಂಗಿಣಿ''ಯಲ್ಲಿ ಸಂಸ್ಕೃತದಲ್ಲಿ ಕಾಣಿಸಿ ಉತ್ತರ ಭಾರತದಲ್ಲಿ **ಠಕ್ಕುರ**ವಾಗಿರಬೇಕೆಂದು ಸುನೀತಿಕುಮಾರ ಚಟರ್ಜಿಯವರು ತರ್ಕಿಸಿದ್ದಾರೆ. ಶ್ರೀಮಂತರನ್ನು, ಶ್ರೇಷ್ಠರನ್ನು ''ದೇವರು'' ಎನ್ನುವ ಪರಿಪಾಠ ಇರುವಂತೆ **ಠಕ್ಕುರ** ಕೂಡ ಕುಲೀನರನ್ನು ಸಂಬೋಧಿಸುವ ಗೌರವಾರ್ಥಕ ಪದವಾಗಿದ್ದರೆ ಆಶ್ಚರ್ಯವಿಲ್ಲ.

## ೭೦

ಶುಭ ಎನ್ನುತ್ತೇವೆ. ಈ ಶಬ್ದದಲ್ಲಿ ಈಗ ಮತ್ತು ಮುಂದೆ ಒಳಿತು ಆಗುತ್ತದೆಂಬ ಅರ್ಥ ಧ್ವನಿಸುತ್ತದೆ. ಆದರೆ **ಶುಭ** ಎಂಬುದು **ಶುಭ್** ಎಂಬ ಧಾತುವಿನಿಂದ ಹುಟ್ಟಿದ್ದೆಂದು ನಿರುಕ್ತಕಾರರು ಹೇಳುತ್ತಾರೆ. ಅದರ ಪ್ರಾಥಮಿಕ ಅರ್ಥ ತೊಳಗು, ಬೆಳಗು, ಹೊಳೆ, ಪ್ರಕಾಶಿಸು ಎಂದು. ಶುಭ್ರ ಎಂಬುದೂ ಇದೇ ಧಾತುವಿನ ಮಗು. ಎಂದರೆ ಶುಭಕ್ಕೂ ಬೆಳಕು ಸ್ವಚ್ಛತೆಗೂ ಇರುವ ಸಂಬಂಧ ತಿಳಿಯುತ್ತದೆ. ಪುರಾತನ ಮಾನವನಿಗೆ ಕತ್ತಲ ಮೇಲಿದ್ದ ಭಯ ಎಷ್ಟೆಂದರೆ ಬೆಳಕೇ ಶುಭ ಎಂದು ಅವನು ಭಾವಿಸುತ್ತಿದ್ದ. ಎಲ್ಲ ಒಳ್ಳೆ ಕಾರ್ಯಗಳು ದೀಪದ ಸನ್ನಿಧಾನದಲ್ಲಿ ಜರುಗಬೇಕು. ಮಂಗಳಾರತಿ ಎಂದರೆ ದೀಪಗಳನ್ನು ಸುಳಿಯುವುದು. ಶುಭ ಕಾರ್ಯದ ನಡುವೆ ದೀಪ ಆರಿದರೆ ಅದು ಕೆಟ್ಟದ್ದನ್ನು ಸೂಚಿಸುತ್ತದೆ. ಕುಲಕ್ಕೊಂದು ''ದೀಪ'' ವನ್ನು ಹಡೆಯುವುದಕ್ಕಾಗಿ ಮೊದಲ ಸಲ ಧರ್ಮಪತ್ನಿಯನ್ನು ಕೂಡುವುದನ್ನು **ಶೋಭನ** ಪ್ರಸ್ತವೆನ್ನುತ್ತಾರೆ.

**ಭಾಗ್ಯ** ಎಂಬುದು ಕೂಡ ಮೂಲದಲ್ಲಿ ಬೆಳಕಿಗೇ ಸಂಬಂಧಿಸಿದ್ದೆಂದು ಅನುಮಾನಿಸಬಹುದು. **ಭಗ** ಉಳ್ಳದ್ದು **ಭಾಗ್ಯ**, **ಭಜ್** ಧಾತುವಿನಿಂದ ಇದು ಹುಟ್ಟಿದ್ದು. ಅದಕ್ಕೆ ಪಡೆ, ಹೊಂದು ಇತ್ಯಾದಿ ಅರ್ಥಗಳಿದ್ದರೂ ಸೌಭಾಗ್ಯವನ್ನು ಕೊಡುವ ದೇವತೆಗೆ **ಭಗ**

ಎಂಬ ಹೆಸರು ಇರುವುದನ್ನೂ ಈತ ಸೂರ್ಯನ ಒಂದು ರೂಪವೆಂದೂ ಗಮನಿಸಬೇಕು. ಈ ಭಗನು ಪ್ರಾಚೀನ ಪಾರಸೀಕರ ಬಗ, ಅವನೂ ಸೂರ್ಯನ ಅಂಶ. ಪ್ರಾಚೀನ ಪಾರಸೀಕರು ಭಾಗ್ಯವನ್ನು **ಬಕ್ಸ್ತ** (ಆಧುನಿಕ ಪರ್ಶಿಯನ್ **ಬಖ್ತ್**) ಎನ್ನುತ್ತಿದ್ದರು. ಹೀಗೆ **ಭಗವಂತನೂ** ಮೂಲದಲ್ಲಿ ತೇಜಸ್ಸುಳ್ಳವನು ಆಗಿರಬೇಕು. ಬೆಳಕೇ ಭಾಗ್ಯ.

**ಮಂಗಳ** ಎಂಬುದು ಶುಭಾರ್ಥಕವಾದ ಇನ್ನೊಂದು ಶಬ್ದ. ಆದರೆ **ಶುಭಕ್ಕೆ** ನಿಷ್ಪತ್ತಿ ಸುಲಭವಾಗಿ ಸಿಗುವಂತೆ ಮಂಗಳಕ್ಕೆ ಸಿಗುವುದಿಲ್ಲ. **ಮಂಗಳ** ಎಂಬುದು **ಮಂಗ್** ಧಾತುವಿನಿಂದ ಬಂದದ್ದೆಂದು ನಿರುಕ್ತ ಹೇಳಲಾಗುತ್ತದೆ. ಆ ಧಾತುವಿಗೆ **ಹೋಗು** ಎಂದರ್ಥವೆಂದೂ ಹೇಳುತ್ತಾರೆ. ಆದರೂ **ಮಂಗ್** ಕ್ರಿಯಾಪದವನ್ನು ಶುಭ ಇಲ್ಲವೇ ಹೋಗು ಎಂಬರ್ಥದಲ್ಲಿ ಎಲ್ಲಿಯೂ ಪ್ರಯೋಗಿಸಿದ್ದು ಸಿಗುವುದಿಲ್ಲ. **ಮಂಗಳ** ಎಂಬುದು **ಕುಜ** (Mars) ಗ್ರಹದ ಹೆಸರೂ ಹೌದು. ಕುಜನು ಕೆಂಪುಗ್ರಹ ಎಂಬುದು ಪ್ರತ್ಯಕ್ಷ. ಆದ್ದರಿಂದ ಮಂಗಳ ಶಬ್ದಕ್ಕೆ ಕೆಂಪು ಅಥವಾ ಅದಕ್ಕೆ ಸಮೀಪವಾದ ಅರ್ಥ ಇರಬಹುದೇ ಎಂದು ನೋಡುವುದು ಅಸಂಗತವಾಗದು. **ಅರಿಸಿನದ** ಬೇರಿಗೆ ದಕ್ಷಿಣ ದ್ರಾವಿಡ ಭಾಷೆಗಳಲ್ಲೆಲ್ಲ **ಮಂಚಳ್, ಮಂಜಳ್** ಎಂಬ ಹೆಸರಿದೆ. ಅರಿಸಿನ ಪುಡಿಯ ಕಡು ಹಳದಿ ಬಣ್ಣಕ್ಕೂ ಅದೇ ಹೆಸರು ಸಲ್ಲುತ್ತದೆ. ಅದಕ್ಕಿಂತಲೂ ಕಡು ಹಳದಿಯಾದ ಕುಂಕುಮ ಕೇಸರಕ್ಕೂ ಕೆಲವೊಮ್ಮೆ **ಮಂಜಳ್** ಪದ ಪ್ರಯೋಗವಾಗುತ್ತದೆ. ಕಡು ಕಿತ್ತಳೆ ಬಣ್ಣದ ಬೀಜವೊಂದಕ್ಕೆ **ಮಂಚಟಿ, ಮಂಜಟಿ** ಎಂಬ ಹೆಸರಿದೆ (ಅದನ್ನು ಗುಲಗಂಜಿಯಂತೆ ಬಂಗಾರ ಮತ್ತು ರತ್ನ ತೂಗುವಲ್ಲಿ ಹಿಂದೆ ಬಳಸುತ್ತಿದ್ದರು.) ಅರಿಸಿನ, ಸಿಂಧೂರ, ಅರಿಸಿನಕ್ಕೆ ಹತ್ತಿರವಾದ ಕೆಂಪು ಬಣ್ಣ ಮತ್ತು ಸ್ವತಃ ಅರಿಸಿನ ಪುಡಿ ಸೌಭಾಗ್ಯಕರವೆಂಬ ನಂಬಿಕೆ ಭಾರತದಲ್ಲೆಲ್ಲ ಇದೆ. ಮಂಗಳ ಮೂರ್ತಿ ಗಣಪತಿ **ಸಿಂಧೂರ** ವರ್ಣದವನು. ಅರಿಸಿನ ಕುಂಕುಮ ಸೌಭಾಗ್ಯ ಚಿಹ್ನೆಗಳು. **ಉಮಾ** ಮತ್ತು **ಲಕ್ಷ್ಮಿ** ಮಂಗಳ ದೇವತೆಗಳೆಂದು ಪ್ರಸಿದ್ಧ. ಕೋಶಗಳನ್ನು ನೋಡಿದರೆ ಉಮಾ, ಲಕ್ಷ್ಮಿ ಎಂದೆರಡೂ ಶಬ್ದಗಳಿಗೂ **ಅರಿಸಿನ** ಬೇರೆಂಬ ಅರ್ಥವೂ ಇದೆ. ಹೀಗೆ ಅರಿಸಿನ ಬಣ್ಣದಿಂದಲೇ ಶುಭಕ್ಕೆ **ಮಂಗಳವೆಂಬ** ಶಬ್ದ ಬಂದಿದೆಯೆಂಬುದು ತರ್ಕಕ್ಕೆ ನಿಲ್ಲುವ ಮಾತು. **ಮಂಜಳ್**-ನಿಂದ **ಮಂಗಳಕ್ಕೆ** ಆದ ಬದಲಾವಣೆ ಸಹಜವಾದದ್ದು. **ಮಂಗಳ** ಗ್ರಹದ ಹೆಸರೂ ಅದರ ಬಣ್ಣದಿಂದ ಬಂದದ್ದೇ ಇರಬೇಕು.

ಯಾವುದೊಂದು ಕೆಲಸವನ್ನು ಚೆನ್ನಾಗಿ ಬಲ್ಲವರೆಂಬರ್ಥದ ಬೇರೆ ಬೇರೆ ಶಬ್ದಗಳು ಗತಕಾಲದ ಬಗ್ಗೆ ಅರ್ಥಪೂರ್ಣವಾದ ತಿಳಿವಳಿಕೆಯನ್ನು ಕೊಡುತ್ತವೆ. ಕನ್ನಡದ **ಬಲ್ಲವನನ್ನೇ** ತೆಗೆದುಕೊಂಡರೆ **ಬಲ್ ವಲ್** ಎಂಬವು ಶಕ್ತಿಯನ್ನು ಸೂಚಿಸುವ ಧಾತುವಾಗಿ ಹೆಚ್ಚು ಕಮ್ಮಿ ಎಲ್ಲ ಭಾಷೆಗಳಲ್ಲಿ ಸಮಾನವಾಗಿವೆ. ಶಕ್ತಿಯುಳ್ಳವನೇ **ಬಲ್ಲವನು** ಇದಕ್ಕೆ ಸೋಜಿಗ ಬೇಡ. ಸಂಸ್ಕೃತದ **ದಕ್ಷ** ಎಂದರೂ ಬಲವುಳ್ಳ, ಸಾಮರ್ಥ್ಯವಂತ. **ಕಾರ್ಯದಕ್ಷ** ಎನ್ನುವಾಗ ಕೆಲಸ ಮಾಡುವಲ್ಲಿ ಬಲವುಳ್ಳವ ಎಂದು ತಾತ್ಪರ್ಯ. ಕನ್ನಡದಲ್ಲಿ ಬುದ್ಧಿಬಲವುಳ್ಳವನನ್ನು ಬಲ್ಲವನೆಂದೂ ಶಾರೀರಿಕ ಮತ್ತು ಅಧಿಕಾರ ಬಲವುಳ್ಳವನನ್ನು ಬಲ್ಲಿದನೆಂದೂ ಸೂಕ್ಷ್ಮ ಭೇದ ಮಾಡಲಾಗಿದೆ.

**ವಿಚಕ್ಷಣನೂ** ಕಾರ್ಯಸಮರ್ಥನೇ. ಆದರೆ ಅವರದು ಬೌದ್ಧಿಕ ದಕ್ಷತೆ. **ಚಕ್ಷ** ಎಂದರೆ ವೇದಗಳಲ್ಲಿ **ಕಾಣುವಿಕೆ, ದರ್ಶನ.** ಅವನು ಜ್ಞಾನಿ. ಜ್ಞಾನಕ್ಕೂ ಕಾಣುವುದಕ್ಕೂ ಅನಾದಿಯಿಂದ ನಂಟು. ''ಕಂಡ''ದ್ದನ್ನು ಅವನು ಪರರಿಗೆ ಹೇಳುವವನೂ ಹೌದು. **ಚಕ್ಷಣಕ್ಕೆ**

ಹೇಳುವವನು ಎಂದೂ ಅರ್ಥ. ಜ್ಞಾನಿಗಳನ್ನು ಕುರಿತು ಪುರಾಣಗಳಲ್ಲಿ ''ವದತಾಂ ವರ'' (ನುಡಿಯುವವರಲ್ಲಿ ಶ್ರೇಷ್ಠ) ಎಂಬ ಮಾತು ಪದೇ ಪದೇ ಬರುತ್ತದೆ. ಇಂಗ್ಲೀಷಿನ wise manಗೆ ಸಮಾನ **ವಿಚಕ್ಷಣ**.

**ನಿಷ್ಣಾತ**ನ ದಾರಿ ಬೇರೆ. ಬಿಂಗಡಿಸಿದರೆ **ನಿಸ್ + ಸ್ನಾತ** ಎಂದಾಗುವ ಈ ಮಾತಿನ ಅರ್ಥ ಚೆನ್ನಾಗಿ ಸ್ನಾನ ಮಾಡಿದವನು. ಇದು ಗುರುವಿನ ಆಶ್ರಮದಲ್ಲಿ ಪೂರ್ತಿ ವಿದ್ಯಾಭ್ಯಾಸ ಮಾಡಿದವನು ಅಲ್ಲಿಂದ ಬೀಳ್ಕೊಳ್ಳುವಾಗ **ಅವಭೃಥ ಸ್ನಾನ** ಮಾಡಿ ಅಪ್ಪಣೆ ತೆಗೆದುಕೊಳ್ಳುವ ಸಂಪ್ರದಾಯವನ್ನು ಸೂಚಿಸುತ್ತದೆ. ನಾವೀಗ **ಸ್ನಾತಕ** ಎನ್ನುವುದು ಈ ಪರಂಪರೆಯನ್ನು ಅನುಸರಿಯೇ. ಹೀಗೆ **ನಿಷ್ಣಾತ** ಪರಿಪೂರ್ಣ ವಿದ್ಯಾಭ್ಯಾಸದಿಂದ ಪರಿಣತಿ ಪಡೆದವ.

ಚತುರ ಇಂಗ್ಲೀಷಿನ cleverಗೆ ಹತ್ತಿರ ಹತ್ತಿರ ಬರುತ್ತದೆಂದು ಅದರ ಮೂಲ ಶೋಧಿಸಿದರೆ ಅರ್ಥವಾಗುತ್ತದೆ. **ಚತುರ**ನನ್ನು **ಜ್ಞಾನಿ**ಯೆನ್ನಲಾಗುವುದಿಲ್ಲ. ಅವನು **ಕಾರ್ಯಸಾಧಕ**. ಸಂಸ್ಕೃತದ **ಚತ್** ಧಾತುವಿಗೆ **ಮುಚ್ಚಿಡು** ಎಂದೂ ಅರ್ಥವಿದೆ. ತನ್ನ ಗುಟ್ಟುಗಳನ್ನು, ಬಹುಶಃ ಉದ್ದೇಶವನ್ನು, ಹೊರಬಿಡದೇ ಕೆಲಸ ಮಾಡಿಸಿಕೊಳ್ಳುವ **ಉಪಾಯಜಾಣನೇ** ಚತುರ. ಆದ್ದರಿಂದ **ರಾಜಕಾರಣಚತುರ** ತುಂಬ ಉಚಿತ ಪ್ರಯೋಗವಾದೀತು. **ಶಾಸ್ತ್ರ ಚತುರ** ಸಲ್ಲದು. ರಾಜಕಾರಣದ ಚತುರ್ ಉಪಾಯ (ನಾಲ್ಕು ಉಪಾಯ)ಗಳು ಚತುರೋಪಾಯಗಳೂ ಹೌದು. **ಕುಶಲ** ಚತುರನಿಗೆ ಹತ್ತಿರದವ. **ಕುಶ** ಎಂದರೆ ಮೊನೆಯಾದ ತುದಿಯುಳ್ಳ ದರ್ಭದ ಹುಲ್ಲು. ಚೂಪಾದ ಬುದ್ಧಿಯುಳ್ಳವ **ಕುಶಲ**.

**ಕೋವಿದ** ಮತ್ತು **ಪ್ರವೀಣ** ಎಂಬ ಎರಡು ಶಬ್ದಗಳ ಬಗ್ಗೆ ನನ್ನದೇ ಊಹೆಯನ್ನು ಈಗ ಮುಂದಿಡುತ್ತಿದ್ದೇನೆ. ಇದು ಮನುಷ್ಯನ ಅತಿ ಪ್ರಾಚೀನ ವಿದ್ಯೆಗಳಲ್ಲಿ ಒಂದಾದ ಬಟ್ಟೆ ನೇಯುವಿಕೆಗೆ ಸಂಬಂಧಿಸಿಲ್ಲವೆ ? **ಕುವಿಂದ** ಎಂದರೆ ನೇಕಾರ, **ವಯನ** ಎಂದರೆ ನೇಕಾರಿಕೆ. ಇದು ಋಗ್ವೇದದಷ್ಟು ಹಳೆ ಶಬ್ದ. ಬಟ್ಟೆ ನೇಯುವಿಕೆ ಅತ್ಯಂತ ಗೌರವಾರ್ಹ ವಿದ್ಯೆಯಾಗಿತ್ತೆಂಬುದಕ್ಕೆ ಋಗ್ವೇದದ ೨, ೬, ೧೦ನೇ ಮಂಡಲಗಳಲ್ಲಿ ಹಲವಾರು ಮಂತ್ರಗಳು ಸಾಕ್ಷ್ಯ ಹೇಳುತ್ತವೆ. ''ಇಮೇ ವಯಂತಿ ಪಿತರಃ'' ''ಕವೇಶ್ಚಿತ್ ತಂತುಂ ಮನಸಾ ವಿಯಂತಾಃ'' ಇತ್ಯಾದಿ ಋಕ್‌ಗಳನ್ನು ಉದಾಹರಿಸಬಹುದು. ೧೦೧ ದೇವತೆಗಳು ತಂತುಗಳನ್ನು ನೇಯಲು ಸೇರಿದ್ದಾರೆ. ವೃದ್ಧರು ನೇಯಲು ಮಾರ್ಗದರ್ಶನ ಮಾಡುತ್ತಾರೆ ಎಂಬರ್ಥದ ಮಂತ್ರ ಯಜುರ್ವೇದದಲ್ಲಿದೆ. ಈ ಹಿರಿದಾದ ವಿದ್ಯೆಯನ್ನು ಬಲ್ಲ **ಕುವಿಂದ**ನೇ ಮುಂದೆ **ಕೋವಿದ** ಪದಕ್ಕೂ **ವಯನ**ವೇ **ವೀನ**ವಾಗಿ **ಪ್ರವೀಣ**ಕ್ಕೂ ಜನ್ಮ ಕೊಟ್ಟಿರಲಾರದೇ ? **ವಯುನ** ಎಂಬ ಶಬ್ದ ಜ್ಞಾನ ಎಂಬರ್ಥದಲ್ಲಿ ಈಶಾವಾಸ್ಯದಲ್ಲಿ ಬರುತ್ತದೆ. ಅದು **ವಯನ**ಕ್ಕೆ ಎಷ್ಟು ಹತ್ತಿರವಾಗಿದೆಯೆಂದರೆ ಎರಡರ ಬೇರೂ ಒಂದೇ ಅನಿಸುತ್ತದೆ.

## ೬೧

ಭಾರತದಲ್ಲಿ ಒಂದೊಂದು ಧಾರ್ಮಿಕ ಸಂಪ್ರದಾಯಕ್ಕೂ ಒಂದೊಂದು ''ಲಾಂಛನ'' (ಗುರುತು) ಇದೆ. ಶೈವರು, ಸ್ಮಾರ್ತರು ಮುಖದಲ್ಲಿ ಮೈಯಲ್ಲಿ **ಅಡ್ಡ**ವಾಗಿ ಭಸ್ಮ ಧರಿಸುತ್ತಾರೆ; ವೈಷ್ಣವರು **ನಾಮ** ಧರಿಸುತ್ತಾರೆ. ಎರಡಕ್ಕೂ ಸೇರಿ **ಪುಂಡ್ರ** ಎಂಬ ಪದವಿದೆ. ಊರ್ಧ್ವ **ಪುಂಡ್ರ** ವೈಷ್ಣವರ **ನಾಮ**ದ ಇನ್ನೊಂದು ಹೆಸರು. ಏಕೆಂದರೆ ಅದು ಮೇಲಿಂದ

ಕೆಳಗೆ ನೀಟವಾಗಿರುತ್ತದೆ.

ಆದರೆ **ನಾಮ** ಎಂದರೇನು? ನಾಮ ಶಬ್ದಕ್ಕೆ ಸಂಸ್ಕೃತ ಮತ್ತು ಹೆಚ್ಚಿನ ಯೌರೋಪ್ಯಾರ್ಯ ಭಾಷೆಗಳಲ್ಲಿ ಹೆಸರು ಎಂದೇ ಅರ್ಥವಿರುವುದು. ಅದು ಧಾರ್ಮಿಕ ಚಿಹ್ನದ ಹೆಸರು ಹೇಗಾಯಿತು ಎಂಬುದೀಗ ಪ್ರಶ್ನೆ. ವಿಷ್ಣುವಿನ ಕೇಶವ ಮೊದಲಾದ ಹನ್ನೆರಡು ಹೆಸರುಗಳನ್ನು ಹೇಳಿ ಆ ಹೆಸರುಗಳ ಗುರುತಾಗಿ ಮೈಮೇಲೆ (ಮುಖವೂ ಸೇರಿ) ಹನ್ನೆರಡೆಡೆಗಳಲ್ಲಿ ಧರಿಸುವುದರಿಂದ ಅದಕ್ಕೆ **ನಾಮ** ಎಂಬ ಹೆಸರು. ಇದು ವೈಷ್ಣವ ಆಗಮಗಳನ್ನು ಬಲ್ಲವರ ವಿವರಣೆ ಇರಬಹುದು. ಆದರೆ ಒಂದು ಆಶ್ಚರ್ಯವೆಂದರೆ, ವೈಷ್ಣವ ಧರ್ಮ ದೇಶದಲ್ಲೇ ಹಬ್ಬಿದ್ದರೂ ನಾಮ ಎಂಬುದಕ್ಕೆ ಹಣೆ ಅಥವಾ ಮೈಮೇಲೆ ಈ ಸಂಪ್ರದಾಯದವರು ಧರಿಸುವ ಮಟ್ಟಿಯ ಗುರುತು ಎಂಬರ್ಥ ಉತ್ತರ ಭಾರತದ ಭಾಷೆಗಳಲ್ಲಿ ಕಾಣಿಸುವುದಿಲ್ಲ. ಅಲ್ಲಿರುವುದು **ತಿಲಕ** ಎಂಬ ಹೆಸರು. ಅದೇ ಮಧ್ಯ ಲಕಾರವನ್ನು ಕಳೆದುಕೊಂಡ **ಟೀಕಾ** ಕೂಡಾ ಆಗಿ ಪ್ರಚಾರದಲ್ಲಿದೆ. **ನಾಮ** ಎಂಬುದೂ ಅದನ್ನು ಲೇವಡಿಗೆ ತಿರುಗಿಸಿದ **ನಾಮ ಹಾಕು** (ವಂಚಿಸಿ ಹಣಕೀಳು) ಇತ್ಯಾದಿ ನುಡಿಕಟ್ಟುಗಳೂ ಇರುವುದು ದಕ್ಷಿಣ ಭಾರತದ ಭಾಷೆಗಳಲ್ಲಿ ಮಾತ್ರ. ಶ್ರೀ ವೈಷ್ಣವರು **ತಿರುನಾಮ** (= ಶ್ರೀನಾಮ ; ಪವಿತ್ರ ನಾಮ) ಹಾಕಿಕೊಳ್ಳುತ್ತಾರೆ. ಆದರೆ ನಾಮ ಎಂಬುದು ವಿಷ್ಣುವಿನ **ಚಿಹ್ನೆ** ಎಂಬ ಅರ್ಥ ದಕ್ಷಿಣದಲ್ಲಿ ಕೂಡ ಬಹಳ ಪುರಾತನವಲ್ಲ. ದಕ್ಷಿಣದ ಪಾಂಡ್ಯ ದೇಶದಲ್ಲಿ ಬೇರೂರಿ ಸುತ್ತಣ ಪ್ರದೇಶಗಳಿಗೆಲ್ಲ ವೈಷ್ಣವ ಧರ್ಮ ಹಬ್ಬ ತೊಡಗಿದ್ದು ಐದನೇ ಶತಮಾನದಿಂದ. **ನಾಮ** ಅಷ್ಟು ಪ್ರಾಚೀನವಾಗಿ ಕಾಣುವುದಿಲ್ಲ. ಹಾಗೆಂದು ತಮಿಳಿನಲ್ಲಿ ಹುಡುಕಿದರೂ ನಾಮಕ್ಕೆ ಬೇರು ಕಾಣಿಸುವುದಿಲ್ಲ.

**ನಾಮ** ಎಂಬುದು ಸಂಸ್ಕೃತದ **ಲಲಾಮ**ದಿಂದ ಹುಟ್ಟಿರಬೇಕೆಂದು ತರ್ಕಿಸಲು ಆಧಾರವಿದೆ. ಲಲಾಮ ಎಂದರೆ ತಿಲಕದಂತೆ ಸೌಂದರ್ಯವರ್ಧಕ ಗುರುತು. ಪ್ರಾಣಿಗಳಲ್ಲಿ ಸಹಜವಾಗಿ ಹಣೆಯ ಮೇಲೆ ಇರುವ **ಬಿಳಿ** ಗುರುತಿಗೂ ಆ ಹೆಸರಿದೆ. (ನಾಮ ಬಿಳಿಯ ಗುರುತಲ್ಲವೆ?) **ಪ್ರಾಣಿಗಳ** ಮೇಲೆ ಬಣ್ಣದಿಂದ ಬರೆದ ಗುರುತೆಂಬರ್ಥದಲ್ಲಿ ಅಥರ್ವವೇದದಷ್ಟು ಹಿಂದೆಯೇ **ಲಲಾಮ** ಶಬ್ದವಿತ್ತು. ಹಾಗೆಯೆ ಧಾರ್ಮಿಕ ಚಿಹ್ನ ಎಂಬರ್ಥವೂ ಇದಕ್ಕೆ ಕೋಶಗಳಲ್ಲಿದೆ. ಲಕಾರಕ್ಕೆ ನಕಾರ ಬರುವುದು ಸಹಜ. ಲಿಂಗ ನಿಂಗವಾಗುತ್ತದೆ. ಲಿಂಬೆ ನಿಂಬೆಯಾಗುತ್ತದೆ – ಕನ್ನಡದಲ್ಲಿ. ಬಂಗಾಲಿಯಲ್ಲಿ ಕೂಡ ಲಾಡು ನಾಡು ಆಗುತ್ತದೆ. ಲೋಲಕ **ನೋಲಕ**ವಾಗುತ್ತದೆ. ಎರಡು ಲಕಾರಗಳು ಒತ್ತೊತ್ತಿಗೆ ಬರುವಾಗ ಮೊದಲನೆಯದು ದುರ್ಬಲವಾಗಿ ಬಿದ್ದುಹೋಗಿರಬೇಕು. ಮೇಲಾಗಿ ತಮಿಳಿನಲ್ಲಿ ಶಬ್ದದ ಪ್ರಾರಂಭದಲ್ಲಿ ಲಕಾರ ಬರುವಂತಿಲ್ಲವಾದರಿಂದ ಅದು ನಕಾರವುಳ್ಳ ರೂಪವನ್ನೇ ಅಂಗೀಕರಿಸಿ ಪ್ರಚುರಪಡಿಸಿರಬೇಕು.

**ಪಂಗ** ನಾಮ ಎಂದು ದಾಸರ ಪ್ರಯೋಗ ಇದೆ. **ಪಂಗ** ಎಂದರೆ ಕವಲು. ವೈಷ್ಣವರ ಮುಖದ **ನಾಮ** ಹುಬ್ಬುಗಳ ಸಂದಿಯಿಂದ ಎರಡು ಕವಲಾಗಿ ಮೇಲೆ ಹೋಗುವುದರಿಂದ ಅದು **ಪಂಗ** ನಾಮ. **ನಾಮ** ಎಂಬುದಕ್ಕೆ ವಂಚನೆ ಎಂಬ ಅರ್ಥ ಬಂದದ್ದು ಬಹುಶಃ ತಿರುಪತಿ ತಿಮ್ಮಪ್ಪನ ಅನುಗ್ರಹದಿಂದ. ಈಚೆಗಿನ ಶತಮಾನಗಳಲ್ಲಿ ತಿರುಪತಿಯಲ್ಲಿ ಯಾತ್ರಿಕರಿಂದ ಕೂತದ್ದಕ್ಕೆ ನಿಂತದ್ದಕ್ಕೆ ದುಡ್ಡು ಸುಲಿಯುವುದು ರೂಢಿಯಾದದ್ದಲ್ಲದೆ ಅಲ್ಲಿ ಕ್ಷೇತ್ರವಾಸಿಗಳಿಂದಲೂ ಇತರರಿಂದಲೂ ಧಾರಾಳವಾಗಿ ವಂಚನೆಯಾಗುತ್ತದೆ. ನಾಮ

ಮಾತ್ರವಲ್ಲದೆ ಮೂರು ನಾಮ ಬೀಳುವುದು ಎಂಬ ನುಡಿಯೂ ಇರುವುದರಿಂದ ಅದಕ್ಕೆ ತಿರುಪತಿಯ ನಂಟು ದೃಢಪಡುತ್ತದೆ.

**ಪುಂಡ್ರ** ಎಂಬುದು ವೈಷ್ಣವ ಶೈವರಿಬ್ಬರ ಮತೀಯ ಗುರುತುಗಳಿಗೂ ಸಮಾನ ಶಬ್ದ. ಶೈವರದು **ತ್ರಿಪುಂಡ್ರ**, ವೈಷ್ಣವರದು **ಊರ್ಧ್ವ ಪುಂಡ್ರ**. ಮತೀಯ ಗುರುತೆಂಬರ್ಥದಲ್ಲಿ ಅದು ಕಾತ್ಯಾಯನ ಶ್ರೌತ ಸೂತ್ರಗಳಷ್ಟು ಪ್ರಾಚೀನ.

ನೀಳ್ಗತೆಗಳು ಬಹು ಪಾತ್ರಗಳಿಂದ ಬಹು ವಿಧ ಘಟನೆಗಳಿಂದ ಕೂಡಿದ್ದಾಗ **ಕಾದಂಬರಿ**ಗಳೆನಿಸುತ್ತವೆ. ವಾಸ್ತವವಾಗಿ ನೀಳವಾಗಿರಲಿ, ಕುಳ್ಳವಾಗಿರಲಿ **ಕಥೆ**ಗೆ ಕಾದಂಬರಿ ಎಂಬುದು ಅರ್ಥ ದೃಷ್ಟಿಯಿಂದ ತಕ್ಕ ಪದವೇ ಅಲ್ಲ. ಅದು ಮಧ್ಯಕಾಲೀನ ಸಂಸ್ಕೃತದ ಮಹತ್ತಮವಾದ ಗದ್ಯ ಪ್ರೇಮಕಥೆಯ ಹೆಸರು ಮಾತ್ರ. ಬಾಣ ಕವಿ ತನ್ನೀಕೃತಿಯ ನಾಯಿಕೆಗೆ **ಕಾದಂಬರಿ** ಎಂಬ ಹೆಸರಿಟ್ಟು ಅವಳ ಹೆಸರನ್ನೇ ತನ್ನ ರಮ್ಯ ಕಥಾನಕಕ್ಕೆ ಇಟ್ಟಿದ್ದನಷ್ಟೇ. ಕಾದಂಬರಿ ಶಬ್ದದ ಅರ್ಥವೋ, **ಕದಂಬ** ಪುಷ್ಪದ ಮದ್ಯ, ಅಥವಾ ಒಟ್ಟಿನಲ್ಲಿ ಮದ್ಯ ಎಂದು. ನಮ್ಮ ಕವಿಗಳು ಹೆಣ್ಣನ್ನು ಮದವತಿ ಪ್ರಮದೆ ಎಂದು ಭಾವಿಸುತ್ತಿದ್ದರು. ತನ್ನ ನಾಯಿಕೆಗೆ ಆ ಭಾವದಿಂದ ಬಾಣಭಟ್ಟ ಆ ಹೆಸರು ಕೊಟ್ಟಿದ್ದ. ಅವನ ಗ್ರಂಥ ಅಖಿಲ ಭಾರತದಲ್ಲಿ ಅತ್ಯಂತ ಜನಪ್ರಿಯವಾಗಿದ್ದು, ಇಂಗ್ಲೀಷ್ **ನಾವೆಲ್ಲು**ಗಳ ಮಾದರಿಯಲ್ಲಿ ನೀಳ್ಗತೆಗಳನ್ನು ಬರೆಯತೊಡಗಿದ ಮರಾಠಿ ಸಾಹಿತಿಗಳು ಈ ಹೊಸ ಸಾಹಿತ್ಯ ಪ್ರಕಾರವನ್ನೇ ಬಾಣ ಕೃತಿಯ ಹೆಸರಿಂದ ಕರೆಯತೊಡಗಿದರು. ಕನ್ನಡ ಸಾಹಿತಿಗಳು ಅವರನ್ನು ಅನುಸರಿಸಿದರು.

ಆಧುನಿಕ ಕಾದಂಬರಿಯೆಂಬ ಸಾಹಿತ್ಯ ಪ್ರಕಾರದ ಇಂಗ್ಲೀಷ್ ಹೆಸರಾದ **ನಾವೆಲ್** ಫ್ರೆಂಚಿನಿಂದ ಬಂದದ್ದು. **ಹೊಸದು** ಎಂಬರ್ಥದ ಲ್ಯಾಟಿನ್ **ನೊವೆಲ್ಲಸ್** ಅದರ ಮೂಲ. ಹೊಸ ಮಾದರಿಯ ಕಥೆಯೆಂದಷ್ಟೆ ಅದರ ಅರ್ಥ. ಯುರೋಪಿನಲ್ಲಿ ಬಾಣ ಕಾದಂಬರಿಯಂತೆಯೆ ಹಳೆಗಾಲದ ಲೋಕೋತ್ತರ ಕಾಲ್ಪನಿಕ **ರೋಮಾನ್ಸ್** ಕಥೆಗಳಿದ್ದುವು. ಅವಕ್ಕಿಂತ ಭಿನ್ನ ಮತ್ತು ವಾಸ್ತವಿಕ ಸ್ವರೂಪದ ನೀಳ್ಗತೆಗಳಿಗೆ **ನವೀನ** ಕಥೆಗಳೆಂಬರ್ಥದಲ್ಲಿ **ನಾವೆಲ್** ಎಂದು ಕರೆದರು.

**ನಾವೆಲ್ಲಿಗೆ** ಇತರ ಭಾರತೀಯ ಭಾಷೆಗಳಲ್ಲಿ ಕಾದಂಬರಿಯೆಂಬ ಹೆಸರಿಲ್ಲ. ಹಿಂದಿಯಲ್ಲಿ ಅದಕ್ಕೆ **ಉಪನ್ಯಾಸ** ಎಂಬ ಹೆಸರಿದೆ. ನಮಗೆ ಉಪನ್ಯಾಸವೆಂದರೆ **ಭಾಷಣ**. ಆದರೆ ಹಿಂದಿಯವರು ಒಟ್ಟಿಗೆ ನ್ಯಾಸ ಶಬ್ದಕ್ಕಿರುವ **ರಚನೆ**, **ರೀತಿ** ಎಂಬ ಒಂದರ್ಥವನ್ನು ಅನುಸರಿಸಿ **ಉಪನ್ಯಾಸ**ವೆಂದು ಕರೆದರಷ್ಟೆ. ಉತ್ತರದಲ್ಲಿ ಆಧುನಿಕ ಸಾಹಿತ್ಯದ ನೇತೃಗಳಾಗಿದ್ದ ಬಂಗಾಲಿಗಳಿಂದ ಹಿಂದಿಯವರು ಆ ಹೆಸರನ್ನು ಎರವಲು ಪಡೆದರು. ದಕ್ಷಿಣ ಕರ್ನಾಟಕದ ಮೊದಮೊದಲ ಸಾಹಿತಿಗಳು **ನಾವಲ್** ಮತ್ತು **ಉಪನ್ಯಾಸ**ದ ಸಮನ್ವಯ ಮಾಡಿ **ನವನ್ಯಾಸ** ಎಂಬ ಹೆಸರನ್ನು ಟಂಕಿಸಿದ್ದೂ ಉಂಟು. ಆಧುನಿಕ ಕನ್ನಡ ಕಾದಂಬರಿಯ ಪಿತಾಮಹರಾದ ವೇ. ತಿ. ಗಳಗನಾಥರು ಮರಾಠಿ ಮಾದರಿಯನ್ನು ಅನುಸರಿಸಿ ಕಾದಂಬರಿಯೆಂಬ ಹೆಸರನ್ನೇ ಸ್ವೀಕರಿಸಿದ್ದರಿಂದ ಅದೇ ಜನಪ್ರಿಯವಾಗಿ ಬಿಟ್ಟಿತಷ್ಟೆ.

(ಈ ಲೇಖನದ **ನಾಮ** ಶಬ್ದದ ಮೂಲದ ಬಗೆಗೆ ನನಗೆ ವಿವರಗಳನ್ನು ಒದಗಿಸಿದ ಪ್ರೊ. ಕೆ. ಎಸ್. ನಾರಾಯಣಾಚಾರ್ಯರಿಗೂ, ಶ್ರೀ ಬನ್ನಂಜೆ ಗೋವಿಂದಾಚಾರ್ಯರಿಗೂ ನಾನು ಋಣಿ.)

೭೨

ನಮ್ಮ ಪಶುಪಾಲನ ವೃತ್ತಿಯ ದಿನಗಳಲ್ಲಿ ಬಳಕೆಗೆ ಬಂದ ಪದಗಳು ಇಂದು ಕೂಡ ನಮ್ಮೊಡನೆ ಇರುವುದು ಎಷ್ಟೇ ಬದಲಾವಣೆ ಹೊಂದಿದರೂ ಭಾಷೆಗಳು ಇತಿಹಾಸದ ಸಂಕೋಲೆ ಕಳಚಿಕೊಳ್ಳಲಾರವೆಂದು ತೋರಿಸುತ್ತದೆ. ನಮ್ಮ ಹಿಂದಿನ ತಲೆಮಾರಿನ ಬರವಣಿಗೆಗಳಲ್ಲಿ ಹಿರಿಯರು ಕಿರಿಯರನ್ನು **ವತ್ಸ** ಎಂದು ಪ್ರೀತಿಯಿಂದ ಸಂಬೋಧಿಸುವ ಉದಾಹರಣೆಗಳು ಸಿಗುತ್ತವೆ. ಈ ಶಬ್ದ ವೇದಕಾಲದಷ್ಟು ಹಳೆಯದು. ಅದರ ಪ್ರಾಥಮಿಕ ಅರ್ಥ **ಆಕಳ ಕರು** ಎಂಬುದಾಗಿ. ಈ ವತ್ಸಕ್ಕೆ ಬೇರೆ ಭಾರೋಪ್ಯ ಭಾಷೆಗಳಲ್ಲಿ ಸಂವಾದಿ ಪದಗಳಿವೆ. ಲ್ಯಾಟಿನ್ನಿನಲ್ಲಿ vatulus ಎಂದರೆ ಕರು. ಹಳೇ ಇಂಗ್ಲೀಷ್, ನಾರ್ಸ್ ಮೊದಲಾದ ಭಾಷೆಗಳಲ್ಲಿ weder, vedr ಮೊದಲಾದವುಗಳಿವೆ. ಅದಕ್ಕೆ ಟಗರು (ಹೆಚ್ಚಾಗಿ ತರಡು ಬಡಿದದ್ದು) ಎಂದೂ ಗಾಥಿಕ್ ಭಾಷೆಯಲ್ಲಿ ಅದರ ಸಂವಾದಿ ಪದಕ್ಕೆ ಕುರಿಮರಿ ಎಂದೂ ಅರ್ಥವಿದೆ. ಹೇಗಿದ್ದರೂ ಸಾಕು ಪ್ರಾಣಿಯ ಮರಿ ಎಂಬ ಸಾಮಾನ್ಯಾರ್ಥ ಅದಕ್ಕಿದೆ. ಕರುವಿಗೆ ತಾಯಿ ಆಕಳು ಪ್ರೀತಿಯಿಂದ ಮೊಲೆಯೂಡಿಸಿ ಮೈನೆಕ್ಕುವುದನ್ನು ನೋಡಿ ಪಶುಪಾಲಕರು ತಮ್ಮ ಮಕ್ಕಳನ್ನು ಪ್ರೀತಿಯಿಂದ 'ವತ್ಸ' ಎಂದೇ ಸಂಬೋಧಿಸಿದ್ದು ಸಹಜ.

ಸಂಸ್ಕೃತಭೂಯಿಷ್ಠ ಶೈಲಿಯಲ್ಲಿ **ವತ್ಸ** ಬಂದದ್ದು ವಿಶೇಷವಲ್ಲ. ಉತ್ತರದ ಪ್ರಾಕೃತಜನ್ಯ ಭಾಷೆಗಳಲ್ಲಿ ಈ ಪದ **ಬಚ್ಚಾ** ಎಂದು ತದ್ಭವ ಹೊಂದಿ **ಮಗ** ಎಂಬ ಅರ್ಥದಲ್ಲೇ ಬಳಕೆಯಲ್ಲಿದೆ. ಆಕಳ ಕರುವಿಗೆ ಅನ್ವಯಿಸುವಾಗ ಹಿಂದಿಯಲ್ಲಿ ಅದಕ್ಕೇ ಒಂದು ಸ್ವಾರ್ಥಕ ಪ್ರತ್ಯಯ ತಗಲಿಸಿ **ಬಛಡಾ** ಮಾಡಿದ್ದಾರೆ.

ಇದೇನು ಆರ್ಯರ ಸಂಸ್ಕೃತಿಯದು, ನಮಗೇನು ಸಂಬಂಧ? ಎನ್ನುವಂತಿಲ್ಲ. ಕನ್ನಡದಲ್ಲಿ ನಾವು **ಕಂದಾ** ಎನ್ನುವಾಗಲೂ ಅದೇ ದನಗಾಹಿ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತೇವೆ. **ಕಂದು** ಎಂದರೆ ಆಕಳು ಕರು; **ಕಂದಿ** ಎಂದರೆ ಈದ ಆಕಳು. ತಮಿಳು ''ಕನ್‌ಜು.' ಮಲಯಾಳಿ 'ಕಜುಜಿ,' ತುಳು 'ಕಂಜಿ', 'ಕುರುಖ್ ಭಾಷೆಯ 'ಖದ್' ಎಲ್ಲ **ಕರು** ಶಬ್ದದ ಜ್ಞಾತಿ ಪದಗಳು. ಕೂಸು ಹಸುಳೆ ಎಂಬರ್ಥದಲ್ಲಿ ಮಲೆಯಾಳ, ತೆಲುಗು ಕುರುಖ್ ಭಾಷೆಗಳಲ್ಲಿ **ಕಂದ**ಕ್ಕೆ ಸಾಮ್ಯವುಳ್ಳ ಪದಗಳಿವೆ. ಕರು ಮತ್ತು ಕಂದ ಮೂಲದಲ್ಲಿ ಒಂದೇ.

ಈ **ವತ್ಸ** ಬೇರೆ ರೀತಿಗಳಲ್ಲಿಯೂ ಭಾಷೆಯಲ್ಲಿ ಸ್ಥಾನಾಪನ್ನವಾಗಿದೆ. ಕಿರಿಯರ ಮೇಲೆ, ಆಶ್ರಿತರ ಮೇಲೆ ಪ್ರೀತಿ, ದಯೆ ಇರುವವರನ್ನು **ವತ್ಸಲ** ಎನ್ನುತ್ತೇವೆ. **ಪುತ್ರ ವತ್ಸಲ** ತಂದೆ; **ಪ್ರಜಾವತ್ಸಲ** ರಾಜ ಇತ್ಯಾದಿ. ದಾಕ್ಷಿಣ್ಯಯುಕ್ತವಾದ ಪ್ರೀತಿ **ವಾತ್ಸಲ್ಯ** ಎನಿಸುತ್ತದೆ. ಪುತ್ರವಾತ್ಸಲ್ಯ ಎನ್ನುತ್ತೇವೆಯೇ ಹೊರತು ಪಿತೃವಾತ್ಸಲ್ಯ ಎನ್ನುವುದಿಲ್ಲ. ಹಾಗೆ ಹೇಳಿದರೆ ಅದು ಔಚಿತ್ಯವಿಲ್ಲದ ಪ್ರಯೋಗವೇ ಸೈ.

ವರ್ಷಕ್ಕೆ **ಸಂವತ್ಸರ, ವತ್ಸರ** ಎಂಬ ಪರ್ಯಾಯ ಪದಗಳಿವೆ. ಇದು ಕೂಡ **ವತ್ಸ**ಕ್ಕೆ (= ಕರು) ಸಂಬಂಧಿಸಿರಬೇಕೆಂದು ನನ್ನ ಅನುಮಾನ. ಒಮ್ಮೆ ಕರು ಹಾಕಿದ ಆಕಳು ಸುಮಾರು ಒಂದು ವರ್ಷದವರೆಗೆ ಕರೆಯುತ್ತ ಆಮೇಲೆ ಮತ್ತೆ ಈಯುತ್ತದೆ. ಇಂಥ ಆಕಳನ್ನು 'ವರ್ಷಕಂದಿ' ಎಂದೇ ಹೇಳುವುದುಂಟು. ಆಕಳು ಒಂದು ಕರು ಈಯುವ ಅವಧಿಯನ್ನು ಕನ್ನಡದಲ್ಲಿ ಒಂದು **ಕರಾವು** ಎನ್ನುತ್ತಾರೆ. ಈ ಕರಾವೆಂಬರ್ಥದಲ್ಲೇ **ವತ್ಸರ** ಜನ್ಮ ತಾಳಿರಬೇಕು. ಪಶುಪಾಲಕರು ತಮ್ಮ ಆರ್ಥಿಕತೆಗೆ ಆಧಾರವಾದ ಕರಾವನ್ನು

ಕಾಲಗಣನೆಗೆ ಬಳಸಿದ್ದರೆ ಆಶ್ಚರ್ಯವಿಲ್ಲ.

**ಗೋಧೂಲಿ** ಲಗ್ನದಲ್ಲಿ ಮದುವೆಗಳಾಗುತ್ತವೆ. ಜ್ಯೋತಿಷದಲ್ಲಿ ಹನ್ನೆರಡು ರಾಶಿಗಳ (ಮೇಷ, ವೃಷಭ ಇತ್ಯಾದಿ) ಹೆಸರುಗೊಂಡ ಲಗ್ನಗಳಿವೆಯೆ ಹೊರತು ಗೋಧೂಲಿ ಎಂಬುದಿಲ್ಲ. ಮೇಯಲು ಹೋದ ಆಕಳ ಹಿಂಡು ಸೂರ್ಯಾಸ್ತದ ಹೊತ್ತಿಗೆ **ಧೂಳೆಬ್ಬಿಸುತ್ತ** ಹಟ್ಟಿಗೆ ಹಿಂತಿರುಗುವ ಹೊತ್ತು **ಗೋಧೂಲಿ** ಲಗ್ನ. ಆ ಹೊತ್ತಿಗೆ ಮೇಷ, ವೃಷಭಾದಿ ಯಾವುದೇ ವಿವಾಹವಿಹಿತ ಮುಹೂರ್ತವಿದ್ದರೆ ಅದರಲ್ಲಿ ಲಗ್ನವಾಗಬಹುದೆಂದು ಜೋಯಿಸರು ಹೇಳುತ್ತಾರಲ್ಲದೆ ಗೋವುಗಳು ಧೂಳೆಬ್ಬಿಸುವ ಮುಹೂರ್ತಕ್ಕೇ ಯಾವ ಪಾವಿತ್ರ್ಯವೂ ಇಲ್ಲ. ಆದರೂ ಸಂಧ್ಯಾಕಾಲದ ಮುಹೂರ್ತವನ್ನು ಗೋಧೂಳಿ ಎಂದು ಕರೆದ ಪಶುಪ್ರಧಾನ ಆರ್ಥಿಕತೆಯನ್ನವಲಂಬಿಸಿದ ನಮ್ಮ ಪೂರ್ವಜರ ಸಂಪ್ರದಾಯವನ್ನು ಆಕಳ ಹಿಂಡನ್ನೇ ಕಂಡರಿಯದಿರಬಹುದಾದ ನಾವು ಇನ್ನೂ ಪದಪ್ರಯೋಗದಲ್ಲಿ ಅನುಸರಿಸುತ್ತೇವೆ.

ಕಣ್ಣಿಗೆ **ಗೋಚರ**ವಾಯಿತು, ಅಥವಾ **ಅಗೋಚರ** ಶಕ್ತಿಗಳು ಎನ್ನುವಾಗಲೂ ನಾವು ಬಹುಶಃ ಪಶುಪಾಲಕ ಸಂಸ್ಕೃತಿ ಉತ್ಪಾದಿಸಿದ ಪದವನ್ನೇ ಬಳಸುತ್ತೇವೆ. **ಗೋಚರ** ಶಬ್ದಕ್ಕೆ ಇತರ ದಾರಿಗಳಿಂದ ನಿರುಕ್ತವನ್ನು ಹುಡುಕಬಹುದಾದರೂ ಆ ಶಬ್ದಕ್ಕೆ ತುರು ಮೇಯುವ ಭೂಮಿ ಎಂದೇ ಪ್ರಾಥಮಿಕ ಅರ್ಥವೆಂದು ಗಮನಿಸಬೇಕು. ಋಗ್ವೇದದ ನಾಲ್ಕನೇ ಮಂಡಲದಲ್ಲಿ 'ಗೋಚರ' ಪದ ಗೋಚರಾವು ಎಂಬರ್ಥದಲ್ಲಿ ಬಂದಿದೆ. ಕಾಠಕ ಉಪನಿಷತ್ತಿನ ಕಾಲಕ್ಕೆ ಅದರ ಅರ್ಥ ವಿಸ್ತರಣೆ ಹೊಂದಿ ಕ್ರಿಯಾಕ್ಷೇತ್ರ ಎಂಬ ಅರ್ಥವೂ ಸೇರಿತು. ಗ್ರಾಮ ದಾಖಲೆಗಳಲ್ಲಿ **ಗೋಚರಾವು** ಭೂಮಿಯ ಉಲ್ಲೇಖಗಳು ಬರುತ್ತವೆ. ಗೋವುಗಳು ಚರಿಸುವ (ಚರ = ನಡೆ, ಮೇಯು) ಪ್ರದೇಶ ಗೋಪಾಲಕನ ಕಣ್ಣಳವಿನಲ್ಲೇ ಇರಬೇಕಲ್ಲ. (ಅದು ಊರಿನ ಎರಡು ಮೈಲು ಅಳವಿನೊಳಗೆ ಇರುತ್ತದೆ.) ಆದ್ದರಿಂದ ಕಣ್ಣಳವಿನಲ್ಲಿರುವಂಥಾದ್ದು ಗೋಚರ. ಮೊದಲು ಕಣ್ಣಿಗಷ್ಟೆ ಅನ್ವಯಿಸುತ್ತಿದ್ದ ಗೋಚರತೆ ಆಮೇಲೆ ಇತರ ಇಂದ್ರಿಯಗಳಿಗೂ ಅನ್ವಯಿಸಿ **ಇಂದ್ರಿಯಗೋಚರ, ಶ್ರವಣ ಗೋಚರ** ಇತ್ಯಾದಿ ಪ್ರಯೋಗಗಳೂ ಹುಟ್ಟಿಕೊಂಡವು.

**ಗವೇಷಣೆ** ಎಂಬ ಪದವೂ ಹೀಗೆಯೆ ಹುಟ್ಟಿತೇ ಎಂದು ಅನುಮಾನಿಸಲೆಡೆಯುಂಟು. **ಗವೇಷಣೆ** ಎಂದರೆ ಹುಡುಕುವುದು, ಅನ್ವೇಷಣೆ. ಗೋವನ್ನು ಈಷಿಸುವುದು ಗವೇಷಣೆಯೆಂಬುದು ಸಹಜವಾಗಿ ಹೊಳೆಯುವ ಮಾತು. ಆಕಳು ಕಳೆದು ಹೋದರೆ ಹುಡುಕಬೇಕಲ್ಲವೆ ? ಈಷಣ ಎಂದರೆ ಅಪೇಕ್ಷೆ, ಆಶೆ ಇತ್ಯಾದಿ. ಆಕಳು ಹುಡುಕುವ ಕೆಲಸಕ್ಕೆ ಅನ್ವಯಿಸುವಂಥಾದ್ದು ಕಡೆಗೆ ಎಲ್ಲ ಅನ್ವೇಷಣೆಗೂ ಅನ್ವಯಿಸಿರಬೇಕು. ಋಗ್ವೇದದಲ್ಲಿ 'ಗವೀಷ್' ಪದಕ್ಕೆ ಆಕಳುಗಳಿಗಾಗಿ ಆಶಿಸುವುದು ಎಂಬ ಪ್ರಾಥಮಿಕ ಅರ್ಥವಿದ್ದು ಆಮೇಲೆ ಸಾಮಾನ್ಯವಾಗಿ ಎಲ್ಲ ಇಚ್ಛೆ, ಹಂಬಲಗಳಿಗೆ ಅದು ಅನ್ವಯಿಸಿತು. ಆಶಿಸುವುದನ್ನು ನಾವು ಹುಡುಕುತ್ತೇವಾದ್ದರಿಂದ ಅನ್ವೇಷಣೆ ಎಂಬರ್ಥವನ್ನೂ ಅದು ಪಡೆಯಿತು.

ಇವಲ್ಲದೇ **ಗೋತ್ರ** ಎಂಬ ಶಬ್ದ **ಕುಲ** ಎಂಬರ್ಥದಲ್ಲಿ ಪ್ರಾಚೀನ ಕಾಲದಿಂದ ನಡೆದುಬಂದಿದೆ. ವೇದದಲ್ಲಿ 'ಗೋತ್ರ' ಶಬ್ದದ ಮೂಲ ಅರ್ಥ 'ದನಗಳ ದೊಡ್ಡಿ' ಎಂದಿದೆ. ಆಮೇಲೆ ದೊಡ್ಡಿಯಂಥ ಯಾವುದೇ ಬೇಲಿ ಅಥವಾ ಪ್ರಾಕಾರದಿಂದ ಆವೃತವಾದ ಸ್ಥಳ. ಆದ್ದರಿಂದ ಅಡವಿಯಲ್ಲಿ ಗೋಪಾಲಕರು ರಚಿಸಿಕೊಂಡ ವಸತಿ 'ಗೋತ್ರ'ವಾಗಿ ಆ ಗೋತ್ರದಲ್ಲಿ ವಾಸಿಸುವ ಕುಟುಂಬ, ಕುಲ ಕೂಡ ಗೋತ್ರವಾಯಿತು. ಇಂದು ಬಳಕೆಯಲ್ಲಿ

ಅನೇಕ ಋಷಿಗಳ ಹೆಸರಲ್ಲಿ ಗೋತ್ರಗಳಿವೆ. ಋಷಿಗಳು ತಮ್ಮ ಕುಟುಂಬ ಮತ್ತು ಶಿಷ್ಯವೃಂದಕ್ಕಾಗಿ ನೂರುಗಟ್ಟಳೆಯಲ್ಲಿ ಹಸುಗಳನ್ನು ಸಾಕುತ್ತಿದ್ದದ್ದು ಪುರಾಣಗಳಿಂದ ತೋರಿಬರುತ್ತದೆ. ಛಾಂದೋಗ್ಯ ಉಪನಿಷತ್ತಿನ ಕಾಲಕ್ಕಾಗಲೇ ಗೋತ್ರಕ್ಕೆ ಕುಲ, ಕುಟುಂಬ ಎಂಬರ್ಥಗಳು ಬಂದಾಗಿತ್ತು.

೭೩

**ಪಾತ್ರ, ಭಾಂಡಿ, ಭಾಜನ** ಇವು ಪಾತ್ರ ಸಾಮಾನ್ಯಕ್ಕೆ ಕನ್ನಡದಲ್ಲಿ ದೊರಕುವ ಪದಗಳು. **ಪಾತ್ರ** ಸಾಧಾರಣವಾಗಿ ಕರ್ನಾಟಕದಲ್ಲೆಲ್ಲ ಅರ್ಥವಾಗುವ ಪದ. **ಭಾಂಡಿ** ಉತ್ತರ ಕರ್ನಾಟಕದಲ್ಲಿ ಪಾತ್ರಕ್ಕೆ ಹೆಚ್ಚು ಪ್ರಚಲಿತವಾದ ಶಬ್ದ. **ಭಾಜನ** ಎಂಬುದು ಹೆಚ್ಚು ವಿರಳವಾದರೂ ಗ್ರಂಥಸ್ಥವಾದದ್ದು. ಮೂರನ್ನೂ ಸಂಸ್ಕೃತದಿಂದಲೇ ಕನ್ನಡ ಸ್ವೀಕರಿಸಿದೆಯಾದರೂ ಇವುಗಳ ಕಥೆ ವಿಭಿನ್ನ.

**ಪಾತ್ರ** ಋಗ್ವೇದದಲ್ಲೇ ಸಿಗುತ್ತದೆ. ಅದರ ಮೂಲ ಅರ್ಥ ಕುಡಿಯುವುದಕ್ಕೆ ಬಳಸುವ ಸಾಧನ ಎಂಬುದಾಗಿ. ಗ್ರೀಕ್, ಲ್ಯಾಟೀನ್, ಸ್ಲಾವಿಕ್ ಭಾಷೆಗಳೊಡನೆ ಸಂಸ್ಕೃತಕ್ಕೆ ಸಮಾನವೆನ್ನಬಹುದಾದ ಪಾ (ಗ್ರೀಕ್ ಪೇ, ಲ್ಯಾಟಿನ್ ಪೋತು, ಸ್ಲಾವಿಕ್ ಪಿ ತಿ) ಧಾತುವಿನಿಂದ ''ಪಾತ್ರ'' ಹುಟ್ಟಿತು. ಭಾಷೆಗಳಲ್ಲಿ ಸಾಮಾನ್ಯವಾಗಿ ಆಗುವ ಹಾಗೇ ವಿಶಿಷ್ಟದಿಂದ ಸಾಮಾನ್ಯಕ್ಕೆ ಅರ್ಥವಿಕಾಸ ಇಲ್ಲಿಯೂ ಆಗಿ, ಕುಡಿಯುವ ತಟ್ಟೆಯಿಂದ ಉಣುವ ತಟ್ಟೆ, ತುಂಬಿಡುವ ಕುಡಿಕೆ, ತಾಟಿನಲ್ಲಿ ಬಡಿಸಿಟ್ಟ ಊಟ ಹೀಗೆಲ್ಲ ವೇದಕಾಲದಲ್ಲೇ ಅದು ಕೈಕಾಲು ಬೆಳೆಸಿಕೊಂಡು ಐತರೇಯ ಬ್ರಾಹ್ಮಣರ ಕಾಲದಲ್ಲಿ ಹೊಳೆ ಹಳ್ಳಗಳ ಹರಿಯುವ ನೀರಿನ ತಳ ಅಥವಾ ಪಥವೆಂಬ ಅರ್ಥವನ್ನು ಕೊಡತೊಡಗಿತು. (ಕನ್ನಡದಲ್ಲಿ ಕೂಡ ಈ ಅರ್ಥದಲ್ಲಿ ಪಾತ್ರ ಶಬ್ದ ಬಳಕೆಯಲ್ಲಿದೆ). **ಪಾತ್ರ** ಎಂಬುದು ದ್ರವಾದಿ ಪದಾರ್ಥಗಳನ್ನು ತನ್ನಲ್ಲಿ ಅಡಕ ಮಾಡಿಕೊಳ್ಳುತ್ತದೆ ಎಂಬುದರಿಂದ (''ಪಾ'' ಧಾತುವಿಗೆ ಪಡೆದುಕೊಳ್ಳು ಎಂಬರ್ಥವೂ ಸಂಸ್ಕೃತದಲ್ಲಿದೆ) ಏನನ್ನಾದರೂ ಪಡೆದವನು ಮತ್ತು ಪಡೆಯಲು ಯೋಗ್ಯನಾದವನು ಕೂಡ ಪಾತ್ರವೆನಿಸಿದ. ಕರುಣಾಪಾತ್ರ, ದಾನಪಾತ್ರ ಇತ್ಯಾದಿ. ''ಸತ್ಪಾತ್ರರೊಳ್ ದಾನಮಂ.'' ಯೋಗ್ಯನಲ್ಲದವನು ''ಅಪಾತ್ರ''ನಾದ. ''ಅಪಾತ್ರೆ ರಮತೇ ನಾರೀ'' (ಹೆಣ್ಣು ಅಪಾತ್ರನಿಗೆ ಒಲಿಯುತ್ತಾಳೆ). ಮಹಾಭಾರತ ಕಾಲಕ್ಕಾಗಲೇ ''ಪಾತ್ರ''ಕ್ಕೆ ಈ ಅರ್ಥ ಪ್ರಾಪ್ತವಾಗಿತ್ತು. ಅಷ್ಟರಲ್ಲೇ (ಮಣ್ಣಿನ) ಪಾತ್ರಗಳು ನಿಶ್ಚಿತ ಗಾತ್ರಗಳಲ್ಲಿ ತಯಾರಾಗುತ್ತಿರಬೇಕು. ಆದ್ದರಿಂದ ಶತಪಥ ಬ್ರಾಹ್ಮಣ, ಶ್ರೌತ ಸೂತ್ರಗಳಲ್ಲಿ ''ಪಾತ್ರ'' ಎಂಬುದಕ್ಕೆ ಒಂದು ವಿಶಿಷ್ಟ ಅಳತೆ (ಒಂದು ಆಢಕ) ಎಂಬರ್ಥ ಕಾಣಿಸುತ್ತದೆ.

ನಾಟಕದಲ್ಲಿ ಬೇರೊಬ್ಬನ ರೂಪದಲ್ಲಿ ನಟಿಸುವವನೂ ''ಪಾತ್ರ''ನಾದ. ಏಕೆಂದರೆ ಆ ಇನ್ನೊಬ್ಬನನ್ನು ಇವನು ತನ್ನಲ್ಲಿ ಅಡಕ ಅಥವಾ ಸಮಾವೇಶ ಮಾಡಿಕೊಳ್ಳುತ್ತಾನೆ. ಕರಾವಳಿ ಕರ್ನಾಟಕದಲ್ಲಿ ದೇವತೆಗಳ ಅಥವಾ ಭೂತಗಳ ಆವೇಶ ಹೊಂದಿ ನರ್ತಿಸುವವನನ್ನು ''ಪಾತ್ರಿ'' ಎನ್ನುತ್ತಾರೆ. ಉತ್ತರ ಕರ್ನಾಟಕದಲ್ಲಿ ವೇಶ್ಯೆಯರನ್ನು ''ಪಾತರ''ದವರು ಎನ್ನುತ್ತಾರೆ.

ಉತ್ತರ ಕರ್ನಾಟಕದಲ್ಲಿ ಪಾತ್ರ ಸಾಮಾನ್ಯಕ್ಕೆ ಇರುವ **ಭಾಂಡಿ** ಶಬ್ದದ ಮೂಲ ಸಂಸ್ಕೃತದ

**ಭಾಂಡ**. ಇದು ವೇದಕಾಲದಷ್ಟು ಹಳೆಯದಲ್ಲದಿದ್ದರೂ ಮನು, ಮಹಾಭಾರತದಷ್ಟು ಹಿಂದಿನಿಂದ ಪಾತ್ರ ಸಾಮಾನ್ಯಕ್ಕೆ ಮಾತ್ರವಲ್ಲದೆ ಪೆಟ್ಟಿಗೆ ಮೊದಲಾದ ತಮ್ಮೊಳಗೆ ಅಡಕಮಾಡಿಕೊಳ್ಳಬಲ್ಲ ಉಪಕರಣಗಳಿಗೆ ಕೂಡ ಅನ್ವಯವಾಗಿದೆ. ಯಾಜ್ಞವಲ್ಕ್ಯಸಂಹಿತೆಯ ಕಾಲದಿಂದಲೂ **ಭಂಡ, ಭಾಂಡ** ಶಬ್ದಗಳು ವ್ಯಾಪಾರದ ಸರಕುಗಳಿಗೆ ಹೆಸರಾಗಿದ್ದುವು. **ಬಂಡಸಾಲೆ, ಭಂಡಾರ ಭಾಂಡಾಗಾರ** ಮೊದಲಾದ ಶಬ್ದಗಳಲ್ಲಿ ಅದು ಇನ್ನೂ ವ್ಯಾಪಕಾರ್ಥ ಪಡೆದು **ಬಂಡವಾಳ**ದಲ್ಲಿ ಅದು ಸರಕು ಎಂಬರ್ಥವನ್ನು ಮೀರಿ ಹಣದ ಕ್ಷೇತ್ರವನ್ನೂ ಆಕ್ರಮಿಸಿದೆ. ಆದರೆ ಈ ಶಬ್ದ ಮೂಲತಃ ಸಂಸ್ಕೃತದ್ದೋ ಎಂಬುದೇ ಸಂಶಯಾಸ್ಪದ. ದೊಡ್ಡ ಮಣ್ಣಿನ ಮಡಕೆ ಎಂಬರ್ಥದ ತಮಿಳು **ಪಾಣೈ, ಪಾಣಾ** (ಕನ್ನಡ ಬಾನ ಬಾನಿ) ಶಬ್ದದ ಪ್ರಾಚೀನ ರೂಪದಿಂದ ಭಾಂಡ ಹುಟ್ಟಿರಬಹುದು.

**ಭಾಜನ** ಕೂಡ **ಭಾಂಡ**ದಷ್ಟೇ ಪ್ರಾಚೀನ, **ಭಾಜ್** (= ಪಾಲು ಪಡೆ) ಧಾತುವಿನಿಂದ ಅದು ಬಂದಿದೆ. ಪಡೆದದ್ದು ತನಗೆ ಸೇರಿರುವುದರಿಂದ **ಭಾಜನ** ಎನ್ನುವುದಕ್ಕೆ ಸೇರಿಸಿಕೊಳ್ಳುವುದು, ಅಡಕವಾಗಿರುವುದು, ಪಾಲಿಗೆ ಅರ್ಹವಾಗಿರುವುದು ಎಂದಿತ್ಯಾದಿಯಾಗಿ ಅರ್ಥ ವಿಸ್ತರಣೆಯಾಗಿದೆ. ಭಾಜನ ಎಂಬುದು ಪಾತ್ರದ ಅನೇಕ ಅರ್ಥಗಳನ್ನು ಸ್ವೀಕರಿಸಿದೆ.

ಆದರೆ ಪಾತ್ರದ ಎಲ್ಲ ಅರ್ಥಗಳಿಗೆ **ಭಾಜನ** ಪಾತ್ರವಾಗಲಿಲ್ಲ. **ನದೀ ಭಾಜನ** ಎಂದು ಯಾರೂ ಹೇಳುವುದಿಲ್ಲ. ಹಾಗೆ **ಭಾಂಡ** ಪದ **ಮೂಲಧನ** (ಬಂಡವಾಳ) ಅಥವಾ **ಸರಕು** ಎಂಬರ್ಥ ಪಡೆದಂತೆ ಪಾತ್ರ, ಭಾಜನಗಳು ಪಡೆಯಲಿಲ್ಲ. ಹಾಗೆಯೇ ''ಅಪಾತ್ರ'' ಎನ್ನುವ ಬದಲು ''ಅಭಾಜನ'' ಸಲ್ಲದು. ಶಬ್ದಗಳು ಅರ್ಥ ವಿಸ್ತರಿಸಿಕೊಳ್ಳುವ ರೀತಿ ಅಗಮ್ಯವಾಗಿದೆ.

ಭಾಷೆಯಿಂದ ಭಾಷೆಗೆ ವಲಸೆ ಹೋಗುವಾಗಲೂ ಪದಗಳು ವಿಚಿತ್ರವಾಗಿ ವರ್ತಿಸುತ್ತವೆ. ಉದಾಹರಣೆಗೆ, ದಕ್ಷಿಣ ಕನ್ನಡದಲ್ಲಿ ''ಪಾತ್ರ'' ಪದವನ್ನು ತುಳು ಬ್ರಾಹ್ಮಣರು ಹೆಚ್ಚಾಗಿ ಬಳಸುತ್ತಿದ್ದರೆ ಇತರರು ಭಾಜನ (ಬಾಜೆನ) ಪದವನ್ನು ಸ್ವೀಕರಿಸಿದ್ದಾರೆ.

ಇಂಗ್ಲೀಷಿನಲ್ಲಿ ಪಾತ್ರ ಸಾಮಾನ್ಯಕ್ಕೆ **ವೆಸಲ್** (vessel) ಶಬ್ದ ಇದೆ. ಇದು ಲ್ಯಾಟಿನ್ನಿನ **ವಾಸ್** ಶಬ್ದದಿಂದ ಬಂದಿದೆ. ಅಡಕವಾಗಿಸಿಕೊಳ್ಳುವುದು ಎಂಬರ್ಥದ ಧಾತುವಿನಿಂದ ಸಂಸ್ಕೃತ ಪಾತ್ರವಾದಂತೆಯೇ ಇದರ ಜನನ. ಇದೇ ಶಬ್ದವನ್ನು **ಹಡಗು** ಎಂಬರ್ಥದಲ್ಲಿಯೂ ಬಳಸುತ್ತಾರೆ. ಹಡಗು ಕೂಡ ತನ್ನಲ್ಲಿ ಸರಕನ್ನು ಅಡಕ ಮಾಡಿಕೊಳ್ಳುತ್ತದೆ ತಾನೆ. ಇಂಗ್ಲೀಷಿಗೂ ದ್ರಾವಿಡ ಭಾಷೆಗಳಿಗೂ ಇರುವ ದೂರ ಎಷ್ಟು! ಆದರೂ ತಮಿಳಿನ **ಕಲ** (ಮ್) ಮತ್ತು ತೆಲುಗಿನ **ಕಲಮು** ಶಬ್ದಗಳು ಪಾತ್ರವೆಂದೂ ಹಡಗು ಎಂದೂ ಅರ್ಥ ಕೊಡುತ್ತವೆ. ತಮಿಳಿನಲ್ಲಿ **ಕಲವರ್** ತೆಲುಗಿನಲ್ಲಿ **ಕಲಮಡಿ** ಎಂದರೆ ಹಡಗು ನಡೆಸುವವರು. ಕಲ್ಪನೆಯ ಸಾಮ್ಯಕ್ಕೆ ಇದೊಂದು ನಿದರ್ಶನ.

ವೇದಕಾಲದಿಂದ ನಮ್ಮೊಡನಿರುವ ಇನ್ನೊಂದು ಪಾತ್ರ **ಸ್ಥಾಲೀ**. ಅನ್ನ ಬೇಯಿಸುವ ಹಂಡೆ. ಪಾತೇಲಿ ಇತ್ಯಾದಿಗಳಿಗೆ ಅಥರ್ವವೇದ, ಬ್ರಾಹ್ಮಣ ಮೊದಲಾದವುಗಳಲ್ಲಿ ಆ ಹೆಸರು ಇತ್ತು. ಆಹುತಿಗಾಗಿ ಅನ್ನ ಬೇಯಿಸುವುದು ಎಂಬರ್ಥದಲ್ಲಿ **ಸ್ಥಾಲೀಪಾಕ** ಎಂಬ ಪದ ಇದೆ. ಕನ್ನಡದಲ್ಲಿ ಈ ಪದ **ಥಾಲಿ** ಎಂಬುದಾಗಿ ಚಿಕ್ಕ ಕವಳಿಗೆ ಅಥವಾ ಕೊಳಗ ಎಂಬರ್ಥದಲ್ಲಿ ಜೀವಂತವಾಗಿದೆ. ಹಿಂದಿಯಲ್ಲಿ ಇದು **ಥಾಲೀ** ಎಂಬ ರೂಪದಲ್ಲಿ ಊಟದ ತಾಟು ಅಥವಾ ಹರಿವಾಣ ಎಂಬರ್ಥ ಕೊಡುತ್ತದೆ. ಈ ಎರಡೂ ಅರ್ಥಗಳಲ್ಲಿ ''ಸ್ಥಾಲೀ'' ಪುರಾತನ

ಕಾಲದಿಂದ ನಡೆದು ಬಂದಿದೆ. ಕನ್ನಡದ **ತಳಿಗೆ** ಕೂಡ ಬಹುಶಃ ಸಂಸ್ಕೃತದ **ಸ್ಥಾಲಿಕಾ** ಶಬ್ದದ್ದೇ ತದ್ಭವ. ಅದು ಹರಿವಾಣ ಎಂಬರ್ಥ ಕೊಡುತ್ತದೆ. ಈ ರೂಪದಲ್ಲಿ ಈ ಪದ ತಮಿಳು, ತೆಲುಗುಗಳಲ್ಲೂ ಇದೆ.

**ಕಲಶ** ಎಂಬುದು ಅತ್ಯಂತ ಪುರಾತನವಾದ ಇನ್ನೊಂದು ಪಾತ್ರ. ನೀರು ತುಂಬುವ ಕೊಡ ಮತ್ತು ಅದೇ ಆಕಾರದ ಗುಂಡಾದ ಜಾಡಿ, ತಂಬಿಗೆ ಮೊದಲಾದವುಗಳನ್ನು ಅದು ಸೂಚಿಸುತ್ತದೆ. ಋಗ್ವೇದದಲ್ಲೇ ಅದು ಕಾಣಿಸುವುದಲ್ಲದೇ ಗ್ರೀಕ್, ಲ್ಯಾಟಿನ್ನುಗಳಲ್ಲಿಯೂ calyx ಎಂಬ ರೂಪದಲ್ಲಿ ಅದು ಇರುವುದರಿಂದ ಆರ್ಯ ಜನಾಂಗಗಳು ವಿಭಜನೆ ಹೊಂದುವುದಕ್ಕಿಂತ ಮುಂಚೆಯೇ ಅಂಥದೊಂದು ಪಾತ್ರ ಅವರೊಡನೆ ಇದ್ದಿರಬಹುದು.

ಅವಲಕ್ಕಿ ಅಥವಾ ಚುರುಮುರಿಯ **ಭಟ್ಟಿ** ಎನ್ನುತ್ತೇವಲ್ಲ ಅದು ಕೂಡ ವೇದಗಳಷ್ಟಿಲ್ಲದಿದ್ದರೂ ಶ್ರೌತ ಸೂತ್ರಗಳಷ್ಟು ಪ್ರಾಚೀನ. ಧಾನ್ಯ ಹುರಿಯುವುದಕ್ಕೆ ''ಭ್ರಜ್ಜನ'' ವೆಂದು ಸಂಸ್ಕೃತದಲ್ಲಿ ಶಬ್ದ. ಅದಕ್ಕೆ ಸಂವಾದಿಯಾಗಿ ಗ್ರೀಕಿನಲ್ಲಿ phrygein, ಲ್ಯಾಟಿನ್ನಿನಲ್ಲಿ fregere ಪದಗಳಿವೆ. **ಭ್ರಾಷ್ಟ್ರ** ಎಂದರೆ ಹುರಿಯುವ ಹಂಚು. ಭ್ರಷ್ಟ ಎಂದರೆ ಹುರಿಯುವ ಕೆಲಸ. ಅದರಿಂದಲೇ ಭಟ್ಟಿ ಬಂದಿದೆ. ಹುರಿದ ಧಾನ್ಯದಿಂದ ಮಾಡುವ ಖಾದ್ಯಗಳ ವಿಚಾರ ಯಜ್ಞ ಕರ್ಮದಲ್ಲಿ ಉಕ್ತವಾಗಿದೆ.

೭೪

''ತುರುಕರು ಕರೆದರೆ ಉಣಬಹುದಣ್ಣಾ'' ಎಂದು ಪುರಂದರದಾಸರು ಹೇಳಿ **ತುರು** ಮತ್ತು ಕರು ಎಂಬ ಕನ್ನಡ ಪದಗಳ ಜೋಡಣೆಯಿಂದ ಚಮತ್ಕಾರ ಮಾಡಿದರು. ಮುಸಲ್ಮಾನರು ಎಂಬರ್ಥದಲ್ಲಿ **ತುರುಕರು** ಎನ್ನುವುದು ಇಂದಿಗೂ ಹಳೇ ಮಂದಿಯ ಬಾಯಲ್ಲಿ ಕೇಳಿಸುತ್ತದೆ. ಇದು ಭಾರತೀಯ ಇತಿಹಾಸದ ಒಂದು ಅಧ್ಯಾಯವನ್ನು ಗರ್ಭೀಕರಿಸಿಕೊಂಡಿದೆ. ತುರುಕರು ಮೂಲ ಮುಸಲ್ಮಾನರೇನೂ ಅಲ್ಲ. ಅರಬರು ಮೂಲ ಮುಸಲ್ಮಾನರು. ಪ್ರಥಮತಃ ಭಾರತದಲ್ಲಿ ಅರಬರದೇ ದಾಳಿ ಆದದ್ದು. ಕುಲದಲ್ಲಿಯೂ ತುರುಕರು ಅರಬರಿಗೆ ಹತ್ತಿರದವರಲ್ಲ. ಮಧ್ಯ ಏಶಿಯದ ಅನಾಗರಿಕ ಯೋಧ ಕುಲ ಅದು. ಇಸ್ಲಾಮ್ ಧರ್ಮಕ್ಕೆ ಅವರ ಮತಾಂತರ ಪೈಗಂಬರದ ಅನಂತರ ಕೆಲ ಶತಮಾನಗಳ ಮೇಲೆ ಆದದ್ದು. ಆದರೆ ಭಾರತದ ಮೇಲೆ ವ್ಯಾಪಕ ದಾಳಿ ಮಾಡಿ ಗೆದ್ದು ಭಾರತದ ಬಹುಭಾಗದಲ್ಲಿ ತಮ್ಮ ಆಯುಧದ ಹರಿತವನ್ನು ಪ್ರದರ್ಶಿಸಿ ನೆನಪು ಬಿಟ್ಟು ಹೋದವರು ತುರ್ಕಿ ಮೂಲದ ಮುಸಲ್ಮಾನ ಸೇನಾನಿಗಳು ; ಕುತ್ಬುದ್ದೀನನಿಂದ ಬಾಬರನವರೆಗೆ ಅನೇಕ ಮಹಾ ಸೇನಾನಿಗಳು ತುರ್ಕಿ ಕುಲದವರು. ಹೀಗೆ ಭಾರತದ ಬಹುತರ ಭಾಷೆಗಳಲ್ಲಿ **ತುರುಕ** ಎಂಬುದು **ಮುಸಲ್ಮಾನ**ಕ್ಕಿಂತಲೂ ಹೆಚ್ಚು ಪ್ರಚಲಿತವಾದ ಪದವಾಗಿದೆ. **ಯವನ** ಎಂಬ ಪದದೊಡನೆ ಸಂಸ್ಕೃತದಲ್ಲಿ **ತುರುಷ್ಕ** ಪ್ರಾಕೃತದಲ್ಲಿ ತುರುಕ್ಕ ಇವೆ. ೧೩ನೇ ಶತಮಾನದಿಂದಲೇ ಕನ್ನಡದಲ್ಲಿ **ತುರುಕ** ಕಾಣಿಸಿಕೊಂಡಿದ್ದಾನೆ.

ತುರ್ಕಿ ಭಾಷೆ ಈ ದೇಶದಲ್ಲಿ ಆಡಳಿತದಲ್ಲಿ ವ್ಯಾಪಕವಾಗಿ ಬಳಕೆಗೆ ಬಾರದಿದ್ದರೂ ತುರ್ಕಿ ಸುಲ್ತಾನರ ಮತ್ತು ಸೇನಾಪತಿಗಳ ಆಯುಧ ಕೌಶಲ ಭಾರತದ ಭಾಷೆಗಳಿಗೆ ಕೆಲ ಶಬ್ದಗಳನ್ನು ಕೊಟ್ಟಿದೆ. **ತೋಪು** (ಫಿರಂಗಿ), **ತುಪಾಕಿ** (ತೋಪ್, ತುಪಕ್), **ಚಾಕೂ**

(= ಚೂರಿ), **ಕೈಂಚೀ** (= ಕತ್ತರಿ) ತುರ್ಕಿ ಪದಗಳು. **ಉರ್ದು** ಭಾಷೆಯ ಹೆಸರೂ ತುರ್ಕರಿಟ್ಟದ್ದು. ತುರ್ಕಿಯಲ್ಲಿ **ಒರ್ದು** ಎಂದರೆ ಶಿಬಿರ, ಬೀಡು. ಪರ್ಶಿಯನ್ ಭಾಷೆ ಆ ಪದವನ್ನು ಸ್ವೀಕರಿಸಿ ಪೇಟೆ, ಬಾಜಾರ್ ಎಂಬರ್ಥಕ್ಕೆ ವಿಸ್ತರಿಸಿದೆ. ಅಂಗಡಿ ಪೇಟೆಯ ಭಾಷೆ ಅಂದರೆ ತಾವು ಗೆದ್ದ ಪ್ರದೇಶದ ಜನಸಾಮಾನ್ಯರ ಭಾಷೆ - ಹಿಂದಿ. ಮಾರ್ಕೆಟಿನ ಭಾಷೆಯಿಂದ ಅದೀಗ ಸಮೃದ್ಧ ಸಾಹಿತ್ಯ ಭಾಷೆಯಾಗಿ ಬೆಳೆದಿದೆ ಎಂಬುದು ಅದೃಷ್ಟದ ಲೀಲೆ. ಇವಲ್ಲದೆ **ಕೂಲಿ** (ತುರ್ಕಿ ಕುಲೀ = ಗುಲಾಮ), **ಬೀಬಿ, ಬೇಗಮ್, ಖಾನ್** (ತುರ್ಕಿ ಖಾನ್ = ಪ್ರಭು, ಒಡೆಯ), **ಬಕ್ಷಿ** (ತುರ್ಕಿ ಬಖ್‌ಶೀ = ಹಣ ಹಂಚುವ ಅಧಿಕಾರಿ) ಎಂಬ ಪದಗಳನ್ನು ತುರ್ಕರು ನಮಗೆ ಕೊಟ್ಟರು. **ಖಜಾಂಚಿಯ ಖಜಾನಾ** ಪಾರಸಿಕ ಪದವಾದರೂ **ಚೀ** ಪ್ರತ್ಯಯ ತುರ್ಕಿ. ಅಷ್ಟೇಕೆ, **ಚಕಮಕಿ** ಎಂಬುದು ತುರ್ಕಿ ಮೂಲದ್ದು (ಚಕ್‌ಮಾಕ್) ಎಂದು ಸಹಸಾ ತೋರುವುದೇ ಇಲ್ಲ. ಈಗೀಗ ಜನಪ್ರಿಯವಾಗುತ್ತಿರುವ **ಕೂರ್ಮಾ** ಎಂಬ ತಿಂಡಿಗೂ ಸಂಸ್ಕೃತದ **ಕೂರ್ಮ**ನಿಗೂ ಸಂಬಂಧವಿಲ್ಲ. ಅದು ಮೂಲತಃ ತುರ್ಕರ ಒಂದು ಮಾಂಸದ ತಿನಿಸು. (ತುರ್ಕಿಕವುರ್ಮ). ನಾವು ಶಾಕಾಹಾರಿ ಕುರ್ಮಾವನ್ನು ರೂಪಿಸಿಕೊಂಡಿರುವುದು ಭಾರತೀಯ ಪಾಕ ವಿದ್ಯೆಯ ಸಾಧನೆ ಅಷ್ಟೇ.

ಶ್ರೇಷ್ಠ ಉಣ್ಣೆ-ರೇಶ್ಮೆ ನೇಯ್ಗೆಯ ಅಂಗವಸ್ತ್ರವನ್ನು ಹಿಂದಿನವರು **ಸಕಲಾತಿ** ಎನ್ನುತ್ತಿದ್ದರು, ನಮ್ಮ ಪಂಡಿತರು ಸಕಲಾತಿ ಹೊತ್ತುಕೊಂಡು ತಮ್ಮ ಆಢ್ಯತೆ ಮೆರೆಯುತ್ತಿದ್ದರು. ನಮ್ಮದೇ ಕಾಶ್ಮೀರ ದೇಶ ಜಗತ್ತಿನ ಶ್ರೇಷ್ಠ ಉಣ್ಣೆ ಬಟ್ಟೆಗಳ ಆಗರವಾಗಿದ್ದರೂ (ಪಾಶ್ಚಾತ್ಯ ಭಾಷೆಗಳಲ್ಲಿ **ಕಾಶ್ಮೀರ** ಎಂದರೆ ಉಣ್ಣೆಬಟ್ಟೆ) **ಸಕಲಾತಿ** ಸಂಸ್ಕೃತವೂ ಅಲ್ಲ, ದೇಶ್ಯವೂ ಅಲ್ಲ, ಅದು ಪಾರಸಿಕ **ಸಕಲಾತ್** ಪದದ ದೇಶೀಕರಣ, ಅದರ ಅರ್ಥ ಬೆಲೆಬಾಳುವ ಪದಾರ್ಥ. ಮುಂದೆ ಶಾಲುಗಳಿಗೆ ಅನ್ವಯಿಸುವಾಗ ಅದು ಕೆಂಬಣ್ಣದ ಅಮೂಲ್ಯ ಬಟ್ಟೆ ಎಂದು ಪ್ರಚಲಿತವಾಯಿತು.

ನಮ್ಮ ವಸ್ತ್ರೋದ್ಯಮದ ಪದಸಂಪತ್ತಿನಲ್ಲಿ ನನಗೆ ಬಂದ ಒಂದು ಸಮಸ್ಯೆಯನ್ನು ಬಿಡಿಸುವುದು ಕಷ್ಟವಾಗಿದೆ. ಜರಿ ಬಟ್ಟೆಗೆ ದೇಶೀ ಶಬ್ದವೇನು? **ಕಲಾಬತ್ತಿನ** ಬಟ್ಟೆ ಎಂದೂ ಅದನ್ನು ಕರೆಯುತ್ತಾರೆ. ಬಂಗಾರದ ಎಳೆಯೊಡನೆ ನೇಯ್ದ ಬಟ್ಟೆಯನ್ನು ಭಾರತದ ಆಢ್ಯರು ಧರಿಸುತ್ತಾರೆಂದು ಚಂದ್ರಗುಪ್ತ ಮೌರ್ಯನ ಕಾಲದ ವಿದೇಶಿ ಪ್ರವಾಸಿಕರೂ ಬರೆದಿದ್ದಾರೆ. ಆದರೆ **ಜರಿ, ಕಲಾಬತ್ತು, ಬ್ರೊಕೇಡ್** ಇವು ಯಾವುವೂ ಸಂಸ್ಕೃತವೂ ಅಲ್ಲ, ದೇಶ್ಯವೂ ಅಲ್ಲ. ಜರಿ ಪಾರಸಿಕ ಪದ. **ಜರ್** ಎಂದರೆ ಚಿನ್ನ; **ಜರೀ** ಎಂದರೆ ಚಿನ್ನದ್ದು. **ಜರತಾರಿ** ಎಂದರೆ ಬಂಗಾರದ ಸರಿಗೆಯುಳ್ಳದ್ದು. **ಜರ್‌ದಾರ್** ಎಂದರೆ ಬಂಗಾರವುಳ್ಳದ್ದು. **ಜರದಾರಿ** ಎಂದರೆ ಬಂಗಾರದ್ದು. **ಕಲಾಬತ್ತು** ಎಂಬುದು ತುರ್ಕಿಪದ. **ಬ್ರೊಕೇಡ್** ಪಾಶ್ಚಾತ್ಯ ದೇಶದ್ದು, ಇಟಾಲಿಯನ್ ಮೂಲದ್ದು. ಮೈಸೂರ ಕಡೆ, ತಮಿಳು ನಾಡಿನಲ್ಲಿ **ಸರಿಗೆ** ಪೇಟಾ ಇತ್ಯಾದಿಯಾಗಿ ಹೇಳುತ್ತಾರೆ. ಚಾಲುಕ್ಯ ಸೋಮನಾಥನು ತನ್ನ ''ಅಭಿಲಷಿತಾರ್ಥ ಚಿಂತಾಮಣಿ'' ಯಲ್ಲಿ ರಾಜರಿಗೆ ಧರಿಸಲು ಯೋಗ್ಯವಾದ ''ಸರಕೈರ್ಯುಕ್ತಂ'' (ಸರಕದಿಂದ ಕೂಡಿದ) ಬಟ್ಟೆಯ ವಿಷಯ ಹೇಳುತ್ತಾನೆ; ಇದು **ಸರಿಗೆಯೂ** (ತಮಿಳು ಚರಿಕೈ) ಒಂದೇ ಎಂಬಲ್ಲಿ ಸಂಶಯವಿಲ್ಲ. ಆದರೆ **ಸರಕಕ್ಕೆ** ನಿಜವಾದ ಪ್ರಾಚೀನ ಸಂಸ್ಕೃತ ಕೋಶಾಧಾರ ಸಿಗುವುದಿಲ್ಲ. ಸರಕ ಎನ್ನುವುದು ಪಾರಸಿಕ ಜರ (zar)ದ ಭಾರತೀಕರಣವಿರಬೇಕೆಂದು ಬಲವಾದ ಸಂಶಯ ಬರುತ್ತದೆ. **ಜರಗು** ಎಂಬೊಂದು ಪದ ಪ್ರಾಚೀನ ಕನ್ನಡ ಕಾವ್ಯಗಳಲ್ಲಿ

ಸಿಗುತ್ತದೆ. (ಜರಗು ಕರ್ಚು). ಅರ್ಥ ಚಿನ್ನದ ಕಣಗಳು ಎಂದು. ಅದಕ್ಕೂ ೧೨ನೇ ಶತಮಾನಕ್ಕಿಂತ ಹಿಂದಿನ ಪ್ರಯೋಗಗಳು ಸಿಗುವುದಿಲ್ಲ.

ಕ್ರಿ.ಶ. ಒಂದನೇ ಶತಮಾನದವನೆಂದು ನಂಬಲಾದ ಅಶ್ವಘೋಷನ "ಬುದ್ಧಚರಿತೆ"ಯಲ್ಲಿ ಬಂಗಾರದಿಂದ ಹಂಸ ಚಿತ್ರಗಳನ್ನು ರಚಿಸಿದ ರೇಶ್ಮೆ ಬಟ್ಟೆಯ (ಕಾಂಚನ ಹಂಸ ಚಿಹ್ನಂ) ಸುದ್ದಿ ಇದೆ. ಆದರೆ ಅದಕ್ಕೆ ಬೇರೆ ಹೆಸರಿಲ್ಲ. ಅನೇಕ ಸಾಂಸ್ಕೃತಿಕ ವಿಷಯಗಳ ಕೋಶದಂತಿರುವ ಬಾಣಭಟ್ಟನ ಕಾದಂಬರಿಯಲ್ಲಿ ಜರಿ ಬಟ್ಟೆಯ ಪ್ರಸ್ತಾಪವಿಲ್ಲ. ಅಲ್ಲಿ ಸರಕದ ಸುದ್ದಿಯೂ ಇಲ್ಲ. ಬದಲಿಗೆ ಗೋರೋಚನದಿಂದ ರಚಿಸಿದ ಹಂಸಾದಿಗಳನ್ನೊಳಗೊಂಡ ಚಿತ್ತಾರದ ಅಂಚಿನ ಮೇಲುದದ ವರ್ಣನೆ ಇದೆ. ಅತ್ಯಂತ ವೈಭವೋಪೇತವಾದ ಹರ್ಷನ ಕಾಲದಲ್ಲಿ ಜರಿಬಟ್ಟೆ ಇರಲಿಲ್ಲವೆ? ಅದು ಇರಾಣದಿಂದ ಆಮದಾಗುತ್ತಿದ್ದುದರಿಂದ **ಸರಕ** ಶಬ್ದವೂ ಅದರೊಡನೆ ಬಂತೇ? **ದೌತಕೌಶೇಯ** ಮತ್ತು **ಪತ್ರೋರ್ಣ** ಎಂಬ ಎರಡು ಪದಗಳು ಬಟ್ಟೆಗೆ ಸಂಬಂಧಿಸಿ ಸಂಸ್ಕತದಲ್ಲಿದ್ದು ಅವೆರಡೂ ಜರಿ ಬಟ್ಟೆಗಳಿಗೆ ಅನ್ವಯಿಸುತ್ತಿರಬೇಕೆಂದು ನನ್ನ ವಿದ್ವಾನ್ ಮಿತ್ರರಾದ ಶ್ರೀ ಬನ್ನಂಜೆ ಗೋವಿಂದಾಚಾರ್ಯರು ಹೇಳುತ್ತಾರೆ. **ಪತ್ರ** ಎಂದರೆ ತೆಳ್ಳಗೆ ಬಡಿದ ಲೋಹದ ತಗಡು. **ಧೌತ** ಎಂದರೆ **ಬೆಳ್ಳಿ**, ಬೆಳ್ಳಿಬಂಗಾರದ ತೆಳ್ಳನ ತಗಡಿನಿಂದ ರಚಿಸಿದ ಕಲಾಪಗಳಿಂದ ಕೂಡಿದ್ದು ಪತ್ರೋರ್ಣ. ಧೌತ ಕೌಶೇಯ (ಊರ್ಣ = ಮುಚ್ಚಿದ್ದು; ಕೌಶೇಯ = ರೇಶ್ಮೆ) ತೆಳ್ಳನ್ನ ಚಿನ್ನ, ಬೆಳ್ಳಿಯ ತಗಡನ್ನು ತಗಲಿಸಿ ಮಾಡಿದ್ದೇ ಮೊದಲನೇ ಜರಿ ಬಟ್ಟೆಯಾಗಿದ್ದು ಅದರ ಸೂಕ್ಷ್ಮತಂತಿ ಎಳೆದು ನೇಯ್ದ ಬಟ್ಟೆಗಳು ಅನಂತರ ಬಂದಿರಬಹುದು. **ಬ್ರೊಕೇಡ್** ಎಂದರೆ ಮೊದಲನೇ ತರಹದ್ದು. ಆದರೆ ಕೋಶಕಾರರಿಗೂ ನಿಜವಾದ ಮೂಲಾರ್ಥ ಮರೆತುಹೋಗುವಷ್ಟು ಮಟ್ಟಿಗೆ ಈ ಪ್ರಾಚೀನ ಶಬ್ದಗಳು ಮೂಲೆಗೆ ಬಿದ್ದದ್ದು ಆಶ್ಚರ್ಯ. ನೇಯ್ಗೆಯಲ್ಲಿ ಚಿನ್ನ ಬೆಳ್ಳಿಯ ಸೂಕ್ಷ್ಮ ತಂತುಗಳನ್ನು ಬಳಸುವ ಕಲೆ ಇರಾಣದಲ್ಲೇ ಬೆಳೆದು ಭಾರತಕ್ಕೆ ಬಂತೇ? ತಗಡು ಹೊಲಿಯುವ ಹಳೇ ಪದ್ಧತಿಯೊಡನೆ ಅದರ ಹೆಸರೂ ಅಸ್ತವಾಯಿತೆ?

೭೫

**ಯಜಮಾನ** ಎನ್ನುವಾಗ ಈಗ ನಮಗೆ ತಟ್ಟನೆ ಪ್ರತೀತವಾಗುವುದು ಒಡೆತನದ ಭಾವನೆ. ಮನೆಯ ಒಡೆಯ ಎನ್ನುವುದರೊಡನೆ ಊರಲ್ಲಿ ಆಢ್ಯನಾಗಿರುವವನಿಗೂ ಅದು ಅನ್ವಯವಾಗುತ್ತದೆ. ಹಳೇ ಮೌಲ್ಯಗಳ ಜನ ಎಂಬ ತುಚ್ಛ ಅರ್ಥವೂ ಅದಕ್ಕೆ ಬಂದಿದೆ. ಈಗ ಉತ್ತರ ಕರ್ನಾಟಕದಲ್ಲಿ ಸ್ವಲ್ಪ ಹಳೇ ಮಾದರಿಯ ವೇಷ ಭೂಷಣದವರನ್ನೂ ಹಳ್ಳಿಗರನ್ನೂ 'ಯಜಮಾನ'ರೆಂದು ಸಂಬೋಧಿಸಿ, ಹೊಸ ಮಾದರಿಯ ಪ್ಯಾಂಟುಧಾರಿಗಳನ್ನು ಅದೂ ಅಧಿಕಾರಸ್ಥರಂತೆ ಕಾಣುವವರನ್ನು 'ಸಾಹೇಬ'ರೆಂದು ಮರ್ಯಾದೆಯಿಂದ ಮಾತಾಡಿಸುತ್ತಾರೆ.

ಆದರೆ ಮೂಲದಲ್ಲಿ 'ಯಜಮಾನ' ಶಬ್ದ ವೈದಿಕ ಸಂಸ್ಕೃತಿಗೆ ಮತ್ತು ಪೌರೋಹಿತ್ಯ ಸಂಪ್ರದಾಯಕ್ಕೆ ಸೇರಿದ ಪದ. **ಯಜಮಾನ** ಎಂದರೆ ಯಜ್ಞ ಮಾಡುವವನು, ಪೂಜೆ ಮಾಡುವವನು. ಯಜ್ಞ ಸಂಸ್ಥೆ ಸರಳವಾಗಿದ್ದಾಗ ತಮ್ಮ ಯಜ್ಞಕಾರ್ಯಗಳನ್ನು ಜನರು ತಾವೇ

ಮಾಡಿಕೊಳ್ಳುತ್ತಿದ್ದರು; ಅದರ ವ್ಯಾಪ್ತಿ ವಿಸ್ತಾರವೂ ಜಟಿಲವೂ ಆದಾಗ ಯಜ್ಞ ಮಂತ್ರಗಳನ್ನೂ ತಂತ್ರಗಳನ್ನೂ ವಿಶೇಷವಾಗಿ ಅಭ್ಯಾಸ ಮಾಡಿದ ಪುರೋಹಿತರ ವರ್ಗವೇ ಉಂಟಾಗಿ ಅವರ ಮೂಲಕ ಯಜ್ಞ ಮಾಡಿಸುವುದು ಅನಿವಾರ್ಯವಾಯಿತು. ಹೀಗೆ ಯಜ್ಞ ಮಾಡುವವರು ಪುರೋಹಿತರೂ ಅವರಿಗೆ ದಕ್ಷಿಣೆ ಕೊಟ್ಟು ಮಾಡಿಸುವವರು ಯಜಮಾನರೂ ಆದರು. ಮಾಡಿಸುವವನು ಮನೆಯೊಡೆಯನಾದ್ದರಿಂದ ಮನೆಯೊಡೆಯನು ಬರುಬರುತ್ತ ಯಜ್ಞಕ್ಕೆ ಸಂಬಂಧವಿಲ್ಲದೆಯೂ ಯಜಮಾನನಾದನು. ಬಳಿಕ, ಯಜಮಾನರು ಸ್ಥಿತಿವಂತರಾಗಿದ್ದುದರಿಂದ ಒಳ್ಳೇ ಸ್ಥಿತಿವಂತರನ್ನು ಯಜಮಾನರೆಂದು ಕರೆಯುವುದಾಯಿತು. ಯಜ್ಞ ಮಾಡಿಸದಿದ್ದರೂ ಅದರ ಖರ್ಚು ಕೊಡುವಷ್ಟು ಶ್ರೀಮಂತನಾಗಿದ್ದರೆ ಸಾಕು, ಅವನು ಯಜಮಾನ ಪದಕ್ಕೆ ಅರ್ಹನಾದವನು. ಕೊನೆಗೆ ಯಜ್ಞಕ್ಕೆ ಏನೂ ಸಂಬಂಧವಿಲ್ಲದ ದೊಡ್ಡ ಕಾರ್ಯಗಳಲ್ಲಿ ಕೂಡ ಜವಾಬ್ದಾರಿ ಹೊರುವುದನ್ನು 'ಯಾಜಮಾನ್ಯ ವಹಿಸುವುದು ಎನ್ನುವಂತಾಯಿತು. ಯಜ್ಞ ಹೋದರೂ **ಯಜಮಾನಿಕೆ** ಉಳಿಯಿತು.

**ಅಧ್ವರ್ಯು** ಎಂದು ಯಾವುದಾದರೂ ಕೆಲಸದಲ್ಲಿ ಮುಂದೆ ಬಿದ್ದು ನಿರ್ವಹಿಸುವವರನ್ನು ಕರೆಯುತ್ತೇವಲ್ಲ, ಅದು ಕೂಡ ಯಾಜ್ಞಿಕ ಪರಂಪರೆಯದೇ. ಅಧ್ವರ್ಯು ಎಂದರೆ ಅಧ್ವರದ (ಯಜ್ಞ) ವ್ಯವಸ್ಥಾಪಕ ಪುರೋಹಿತ. ಈಗ ಅಧ್ವರಗಳಿಲ್ಲದಿದ್ದರೂ ಅಧ್ವರ್ಯುಗಳಿದ್ದಾರೆ! ಅದೇ ರೀತಿ **ಆಹುತಿ**. ಯಜ್ಞ ಕಾಲದಿಂದ ದೇವತೆಗಳಿಗೆ ಮಂತ್ರ ಪೂರ್ವಕವಾಗಿ ಒಂದೊಂದಾಗಿ ಅಗ್ನಿಯಲ್ಲಿ ಕೊಡುವ ತುತ್ತು ಆಹುತಿ. ಸಾವಿರಾರು ಜನರು ಬರಗಾಲಕ್ಕೆ ಆಹುತಿಯಾದರು ಎಂದು ನಾವೀಗ ಹೇಳುವಾಗ ಯಜ್ಞದಲ್ಲಿ ಆಹುತಿಗಳು ಸುಟ್ಟು ಲಯವಾಗಿ ಹೋಗುವ ಹಾಗೆ ಜನರು ನಷ್ಟವಾಗಿ ಹೋದರು ಎಂದು ಆಲಂಕಾರಿಕವಾಗಿ ಹೇಳುತ್ತಿದ್ದೇವೆಂದು ನೆನೆಯುವುದೇ ಇಲ್ಲ.

''ಲಕ್ಷಾಂತರ ಹಣವನ್ನು ಸ್ವಾಹಾ ಮಾಡಿದ'' ಎಂದು ಲಘುವಾಗಿ ಹೇಳುವಾಗಲೂ ನಾವು ಯಜ್ಞ ಪರಿಭಾಷೆಯನ್ನೇ ಪ್ರಯೋಗಿಸುತ್ತೇವೆ. 'ಸ್ವಾಹಾ' ಎನ್ನುವುದು ಯಾಗದಲ್ಲಿ ಪುರೋಹಿತನು ದೇವತೆಗಳ ಹೆಸರು ಹೇಳಿ ಅವರಿಗೆ ಅಗ್ನಿಯಲ್ಲಿ ಆಹುತಿ ಕೊಡುವಾಗ ಹೇಳುವ ಒಂದು ತಾಂತ್ರಿಕ ಶಬ್ದ: ''ಇಂದ್ರಾಯ ಸ್ವಾಹಾ,'' ''ಅಗ್ನಯೇ ಸ್ವಾಹಾ,'' ಇತ್ಯಾದಿ. ಊಟಮಾಡುವುದು ಕೂಡ ದೇಹಾಭಿಮಾನಿ ದೇವತೆಗಳ ಪ್ರೀತ್ಯರ್ಥವಾಗಿ ನಾವು ಮಾಡುವ ಯಜ್ಞ ಎಂದು ವೈದಿಕ ತತ್ವಜ್ಞಾನದ ಭಾವನೆಯಾದ್ದರಿಂದ ಊಟದಲ್ಲಿ ಮೊದಲ ಐದು ತುತ್ತುಗಳನ್ನು ''ಪ್ರಾಣಾಯ ಸ್ವಾಹಾ,'' ''ಅಪಾನಾಯ ಸ್ವಾಹಾ'' ಇತ್ಯಾದಿಯಾಗಿ ಐದು ಜನ ಪ್ರಾಣದೇವತೆಗಳಿಗೆ, ನಮ್ಮ ಬಾಯಲ್ಲಿರುವುದೆಂದು ಭಾವಿಸಲಾದ ಅಗ್ನಿಯಲ್ಲಿ ಆಹುತಿ ಕೊಡುವುದು ವೈದಿಕರ ಸಂಪ್ರದಾಯ. ಈ ಮಂತ್ರಗಳನ್ನು ವ್ಯಂಗ್ಯವಾಗಿ ತಿರುಗಿಸಿಕೊಂಡು ನಾವೀಗ ಹಣ ನುಂಗುವುದನ್ನು ಸ್ವಾಹಾಕರಿಸುವುದೆಂದು ಹೇಳುತ್ತೇವಷ್ಟೇ.

''ಇದೇ ಗಲಭೆಗೆ ನಾಂದಿಯಾಯಿತು.'' ಎಂದು ಮೊದಲಾಗಿ ಹೇಳುವಾಗ ವೈದಿಕ ಧರ್ಮದ ಇನ್ನೊಂದು ಪರಿಭಾಷೆಯನ್ನು ನಾವು ಬಳಸುತ್ತೇವೆ. ಯಾವುದಾದರೊಂದು ಶುಭಕರ್ಮ (ಉದಾ. ವಿವಾಹ) ಪ್ರವರ್ತನೆಗೆ ಮುಂಚೆ ಪಿತೃಗಳನ್ನು ಆಹ್ವಾನಿಸಿ ಪ್ರಾರ್ಥಿಸುವ ಕ್ರಮ 'ನಾಂದಿ' ಎನಿಸುತ್ತದೆ. ''ನಾಂದೀಮುಖಾನ್ ಪಿತ್ಯನ್ ವಾಚಯಿಷ್ಯೇ'' ಮೊದಲಾದ ಮಂತ್ರಗಳು ವೈದಿಕ ಗೃಹ್ಯಸೂತ್ರಗಳಲ್ಲಿ ಬರುತ್ತವೆ. 'ನಂದ್' ಎಂಬ ಸಂತೋಷಾರ್ಥಕ ಧಾತುವಿನಿಂದ ಹುಟ್ಟಿದ ಶುಭ ಕರ್ಮಾರಂಭದ ನಾಂದಿ ಶಬ್ದವನ್ನೀಗ ಯಾವುದೇ ಘೋರ

ಕೃತ್ಯದ ಆರಂಭಕ್ಕೂ ಆಲಂಕಾರಿಕವಾಗಿ ಪ್ರಯೋಗಿಸುವುದು ಒಂದು ವೈಪರೀತ್ಯವೇ. ಭಾಷೆಗಳು 'ಇಂಥ ವೈಪರೀತ್ಯಗಳಿಂದ ತುಂಬಿವೆ.

''ನಾಂದಿ ಹಾಡಿದರು'' ಎಂಬ ಇನ್ನೊಂದು ನುಡಿಕಟ್ಟು ವೈದಿಕ ನಾಂದಿಯಿಂದಲೇ ಕವಲೊಡೆದ ನಾಟಕ ಪರಿಭಾಷೆಗೆ ಸೇರಿದ್ದು. ನಾಟಕದ ಆದಿಯಲ್ಲಿ ಕವಿ ತನ್ನ ಇಷ್ಟ ದೇವತೆಯನ್ನು ಕುರಿತು ಬರೆದ ಪ್ರಾರ್ಥನಾ ಪದ್ಯವನ್ನು ಹಾಡುವುದು ಸಂಸ್ಕೃತ ರಂಗ ಭೂಮಿಯ ಸಂಪ್ರದಾಯ. ಇದೇ ನಾಟಕದ ನಾಂದಿ. ''ನಾಂದಿ ಹಾಡಿದರು'' ಎಂದರೆ ವಿಧಿವತ್ತಾಗಿ ಪ್ರದರ್ಶನ ಕಾರ್ಯಾರಂಭ ಮಾಡಿದರೆಂದು ತಾತ್ಪರ್ಯ. ಇದೇ ಪ್ರಕಾರ ನಾಟಕ ಪರಿಭಾಷೆಯಲ್ಲಿ 'ಮುಗಿಸಿದರು' ಎನ್ನುವುದಕ್ಕೆ **ಭರತವಾಕ್ಯ** ಹಾಡಿದರು ಎನ್ನುವುದುಂಟು. 'ಭರತವಾಕ್ಯ' ಎಂದರೆ ನಾಟಕದ ಕೊನೆಯಲ್ಲಿ, ಹೆಚ್ಚಾಗಿ, ದೇಶವನ್ನಾಳುವ ರಾಜನಿಗೆ ಮಂಗಳವನ್ನು ಕೋರಲು ಕವಿ ರಚಿಸಿದ ಪದ್ಯ.

ಯಜ್ಞಯಾಗಗಳ ಸಂಸ್ಕೃತಿ ಪೂಜಾ ಪುರಶ್ಚರಣ ಸಂಸ್ಕೃತಿಗೆ ಸ್ಥಳ ಬಿಟ್ಟುಕೊಟ್ಟ ಅನಂತರವೂ ಆ ಸಂಸ್ಕೃತಿಯ ಪದಗಳು ನಮ್ಮೊಡನೆ ಉಳಿದುಕೊಂಡಂತೆ ಬೇರೆ ಜನಪ್ರಿಯ ಧರ್ಮಗಳ ಪದಗಳು ಆ ಧರ್ಮಗಳಿಗೆ ಸಂಬಂಧಿಸದ ಜನಗಳ ಬಾಯಲ್ಲಿಯೂ ಅವರಿಗರಿವಿಲ್ಲದೆ ನುಸುಳಿ ಸ್ಥಾನಾಪನ್ನವಾಗುತ್ತವೆ. **ಅಂಗೈ, ಲಿಂಗ, ಹಿಡಿಲಿಂಗ** ಶಬ್ದಗಳನ್ನು ನೋಡಿ. ಬಹಳ ಮೋಹದಿಂದ ಬೆಳೆಸಿ ಸದಾ ಎತ್ತಿಕೊಂಡೇ ಇರಬೇಕೆಂದು ಹಟ ಮಾಡುವ ಮಕ್ಕಳಿಗೆ ಇವನ್ನು ಅನ್ವಯಿಸುತ್ತಾರೆ. ವಾಸ್ತವಿಕವಾಗಿ ಇದು ಲಿಂಗವಂತ ಧರ್ಮದ ಸಂಪ್ರದಾಯಕ್ಕೆ ಅನ್ವಯಿಸುವ ಶಬ್ದ. ಲಿಂಗಾಯತರು ಶೈವರಾದರೂ ಗುಡಿಗುಂಡಾರ ಅಥವಾ ಮನೆಯಲ್ಲಿ ಸ್ಥಾಪಿಸಿದ ಸ್ಥಾವರ ಲಿಂಗವನ್ನು ಆರಾಧಿಸುವವರಲ್ಲ. ಅವರು ಶರೀರದ ಮೇಲೆ ಸದಾ ಧರಿಸುವ ಇಷ್ಟಲಿಂಗವನ್ನು **ಅಂಗೈ** ಮೇಲಿರಿಸಿಕೊಂಡು ದಿನವೂ ಪೂಜಿಸುತ್ತಾರೆ. ಅದನ್ನು ಮೇಲಿಡುವುದು ಸಲ್ಲ. ಆದ್ದರಿಂದ ಸದಾ ಎತ್ತಿಕೊಂಡಿರಬೇಕೆಂದು ರೆಚ್ಚೆ ಹಿಡಿಯುವ ಮಕ್ಕಳು 'ಅಂಗೈಲಿಂಗ', '**ಹಿಡಿಲಿಂಗ**' ಎಂಬ ವಿಶೇಷಣಕ್ಕೆ ಪಕ್ಕಾಗಿವೆ. ಈ ಪದಗಳು ಲಿಂಗವಂತ ಧರ್ಮದ ಪ್ರಭಾವವಿಲ್ಲದ ಕರಾವಳಿ ಕರ್ನಾಟಕದಲ್ಲಿ ಕೂಡ ಪ್ರಚುರವಾಗಿರುವುದು ಶಬ್ದಗಳು ಗಡಿಮೇರೆಗಳನ್ನು ಒಪ್ಪುವುದಿಲ್ಲ ಎಂಬ ತಥ್ಯವನ್ನು ಸೂಚಿಸುತ್ತದೆ.

೭೬

ಗತ ಕಾಲ ಆಗಾಮಿ ಕಾಲಗಳನ್ನು ವ್ಯಂಜಿಸುವ ಪದಗಳು ಎಲ್ಲ ಭಾಷೆಗಳಲ್ಲಿ ಇವೆ. ಕನ್ನಡದಲ್ಲಿ ಆಗಾಮಿ ಕಾಲದ ಮೊದಲ ದಿನವನ್ನು **ನಾಳೆ** ಎನ್ನುತ್ತೇವೆ. ಈ ನಾಳೆ ಎಂಬುದು **ನಾಳ್** ಎಂಬ ಶಬ್ದದಿಂದ ರೂಪುಗೊಂಡದ್ದು. **ನಾಳ್** ಎಂದರೆ ದಿನ ಎಂದು ವ್ಯಾವಹಾರಿಕ ಅರ್ಥ. ತಮಿಳಿನಲ್ಲಿ ಮಲೆಯಾಳದಲ್ಲಿ **ನಾಳ್**, ತೆಲುಗಿನಲ್ಲಿ **ನಾಡು**, ಉತ್ತರ ಭಾರತದ ಕೊಲಾಮಿಯಲ್ಲಿ **ನಲ್**, ಗೋಂಡಿಯಲ್ಲಿ **ನಾಕ್** ಇತ್ಯಾದಿ ರೂಪಗಳಲ್ಲಿ ಆ ಶಬ್ದ ಇದೆ. ಹಳೆಗನ್ನಡದಲ್ಲಿಯೂ ಇದ್ದು ಈಗ ಮರೆತುಹೋಗಿದೆ. ಆದರೆ ಈ **ನಾಳ್** ಪದದ **ಅರ್ಥ** ಮೂಲತಃ **ನಸುಕು, ಬೆಳಗು, ಉಷಃಕಾಲ** ಎಂದು. ಆದ್ದರಿಂದ **ನಾಳೆ** ಎಂದು ಹೇಳುವಾಗ ನಿಜಕ್ಕೂ ಬೆಳಗ್ಗೆ ಎಂದು ಹೇಳುತ್ತೇವೆ. ಈ ಹೊತ್ತಿನ ಸಂಜೆ ಮಾತಾಡುವಾಗ ಬೆಳಗ್ಗೆ ಎಂದರೆ ನಾಳೆಯೆಂದೇ ತಾನೆ?

ಎಂಬುದನ್ನು ಮುಂದಿನ ರಾತ್ರಿಯವರೆಗೂ ಅನ್ವಯಿಸುತ್ತವೆ.

ನಾಳೆ ಎಂಬ ಪದವೊಂದೇ ಹೀಗೆಂದು ಅಲ್ಲ. ತೆಲುಗಿನಲ್ಲಿ ನಾಳೆಗೆ ಇನ್ನೊಂದು ಪದ ಚಲಾವಣೆಯಲ್ಲಿದೆ. ಅದು **ರೇಪು. ಏರ್ಪು** ಶಬ್ದದ ವರ್ಣಪಲ್ಲಟದಿಂದ **ರೇಪು** ಆಗಿದೆಯೆಂದು ನಿರುಕ್ತಿಕಾರರು ಹೇಳುತ್ತಾರೆ. **ಏರ್ಪು** ಎಂಬುದು ಏಱು ಶಬ್ದದ ನಾಮಪದರೂಪ. ಈ ಶಬ್ದಕ್ಕೂ ಬೆಳಗ್ಗೆ ಎಂದೇ ಅರ್ಥ. ಬೆಳಗ್ಗೆ ಸೂರ್ಯ ಏಳುತ್ತಾನೆ ಅಥವಾ ಏರುತ್ತಾನೆ. ಸಂಸ್ಕೃತದ **ಉದಯ** (ಉದ್ = ಮೇಲೆ + ಆಯ = ಚಲನೆ) ಕೂಡ ಏರು ಎಂಬರ್ಥವನ್ನೇ ಕೊಡುವುದು. ಹೀಗೆ ತೆಲುಗನು ''ರೇಪು ವಸ್ತಾನು'' ಎಂದು 'ನಾಳೆ ಬರುತ್ತೇನೆ' ಎಂಬರ್ಥದಲ್ಲಿ ಹೇಳಿದರೂ ವಾಸ್ತವವಾಗಿ ಬೆಳಗ್ಗೆ ಬರುತ್ತೇನೆ, ನಸುಕಿಗೆ ಬರುತ್ತೇನೆ ಎಂಬುದೇ ಶಬ್ದಶಃ ಅರ್ಥ.

ಸಂಸ್ಕೃತದಲ್ಲಿ ನಾಳೆ ಎನ್ನುವುದಕ್ಕೆ ''ಶ್ವಃ'' ಎಂಬೊಂದು ಪದವಿದ್ದರೂ **ಕಲ್ಯ** ಎಂಬುದು ಮಹಾಭಾರತ ಕಾಲದಿಂದಲೂ ಬಳಕೆಯಲ್ಲಿದೆ. ಈ ಶಬ್ದಕ್ಕೂ ನಸುಕು, ಬೆಳಗ್ಗೆ ಎಂಬುದೇ ಮೂಲಾರ್ಥ. ಒಂದು ವಿಶೇಷವೆಂದರೆ ನಿನ್ನೆಗೂ 'ಕಲ್ಯ' 'ಕಲ್ಯೇ' ಶಬ್ದಗಳ ಪ್ರಯೋಗವಾಗುವುದು. ಇದೇ ಹಿಂದಿಯಲ್ಲಿ **ಕಲ್** ಆಗಿದೆ. 'ಕಲ್' ಎಂದರೆ ನಿನ್ನೆಯೂ ಹೌದು. ನಾಳೆಯೂ ಹೌದು. ಇದು ಭಾಷೆಗಳಲ್ಲಿ ಆಗಾಗ್ಗೆ ಕಾಣಿಸುವ ಒಂದು ಪ್ರವೃತ್ತಿ. ವಿರುದ್ಧಾರ್ಥಗಳಲ್ಲಿ ಒಂದೇ ಪದದ ಪ್ರಯೋಗ. ಈ ಪ್ರಕಾರ ದೂರಕ್ಕೂ ಹತ್ತಿರಕ್ಕೂ ಒಂದೇ ಶಬ್ದ ಇರುವ ಭಾಷೆಗಳಿವೆ.

ಮರಾಠಿಯಲ್ಲಿ ನಾಳೆಗೆ **ಉದ್ಯಾ** ಎನ್ನುತ್ತಾರಲ್ಲ. ಅದಾದರೂ **ಉದಯ ಕಾಲದಲ್ಲಿ** ಎಂಬ ಮೂಲ ಅರ್ಥದಿಂದಲೇ ಇಡೀ ಮುಂದಿನ ದಿನಕ್ಕೆ ಅನ್ವಯ ಹೊಂದಿದ ಶಬ್ದ.

ಭಾರತೀಯ ಭಾಷೆಗಳ ಹೊರಗೂ ಈ ಪ್ರವೃತ್ತಿ ಕಂಡುಬರುತ್ತದೆ. ಇಂಗ್ಲೀಷಿನ tomorrow ತೆಗೆದುಕೊಳ್ಳಿ. Morrow ಎಂದರೆ ಬೆಳಿಗ್ಗೆ (morningನ ಒಂದು ರೂಪ). ಜರ್ಮನ್ ಮೊದಲಾಗಿ ಅನೇಕ ಉತ್ತರ ಯುರೋಪಿಯನ್ ಭಾಷೆಗಳಲ್ಲಿ ಜ್ಞಾತಿ ಪದಗಳನ್ನುಳ್ಳ ಈ ಶಬ್ದದ ಮೂಲಾರ್ಥ **ಮಿನುಗು, ಹೊಳೆ** ಎಂದು ಇರಬೇಕೆಂದು ಎಸ್ತೋನಿಯನ್ ಭಾಷೆಯ ಸಮಾನ ಪದದಿಂದ ತರ್ಕಿಸಲ್ಪಟ್ಟಿದೆ ; ಉಷಃ ಕಾಲದಲ್ಲಿ ಎನ್ನಿ. ಹೀಗೆ tomorrow ಎಂದೆನ್ನುವಾಗ ಮುಂಬರುವ ನಸುಕಿನಲ್ಲಿ ಎಂದೇ ಇಂಗ್ಲೀಷ್ ಮನುಷ್ಯ ಹೇ[illegible]ನೆ.

ಇಷ್ಟ[illegible]ಷೆಗಳಲ್ಲಿ ನಾಳೆಯನ್ನು ಮುಂಬರುವ ನಸುಕು ಅಥವಾ ಮುಂಜಾವಿನಿಂದ ಗುರುತಿಸುವುದರಿಂ[illegible] ಅದೊಂದು ಮಾನವನ ಸಾಮಾನ್ಯ ಭಾವನೆಯೆಂದು ಹೇಳಬೇಕಾಗುತ್ತದೆ. ಉದಯ ಕಾಲಕ್ಕೂ ಮೊದಲೇ ಎದ್ದು ಕೆಲಸ ಆರಂಭಿಸುತ್ತಿದ್ದ ಕಾಲದ ಪಳೆಯುಳಿಕೆ ಇದೆಂದು ಕೂಡ ಇಂದಿನ ಸೂರ್ಯಮಿತ್ರರಾದ ನಾವು ಮೂಗು ಮುರಿಯಬಹುದು !

**ಹಣ್ಣು** ಎಂದರೆ ತಿನ್ನಲು ಅಣಿಯಾಗಿರುವ ಫಲ, **ಕಾಯಿ** ಎಂದರೆ ಇನ್ನೂ ಹಣ್ಣಾಗದ ಫಲ ಎಂದು ಎಲ್ಲರಿಗೂ ಗೊತ್ತು. ಹಾಗೆಯೇ **ಎಲೆ** ಎಂದರೆ ಸಸ್ಯದ ಹಸುರು ಎಂದು ಸಾಮಾನ್ಯ ಅರ್ಥ. ಆದರೆ ಈ ಶಬ್ದಗಳು ಬೇರೆ ಬೇರೆ ಸಾಂಸ್ಕೃತಿಕ ಸಂದರ್ಭಗಳಲ್ಲಿ ಕೊಡುವ ಕ್ರಮ[illegible] ನೋಡಿ. ದೇವರಿಗೆ **ಹಣ್ಣು ಕಾಯಿ** ಮಾಡಿಸಿದ ಎನ್ನುವಾಗ **ಹಣ್ಣು** ಎಂದರೆ **ಬಾಳೆ** ಮಂತ್ರಗಳು [illegible] **ಕಾಯಿ** ಎಂದರೆ **ತೆಂಗಿನ ಕಾಯಿ** ಎಂದೇ ಅರ್ಥ. ನೆರೆಯ ತುಳು ಧಾತುವಿನಿಂದ ಹುಟ್ಟಿದ [illegible] (**ಪಳ್ಂದ್**) **ಕಾಯಿ** ಎಂದರೆ **ಬಾಳೆಹಣ್ಣು** ಮತ್ತು **ತೆಂಗಿನ**

ಕಾಯಿಯೆಂದೇ ಅರ್ಥ. ದೇವರ ನೈವೇದ್ಯಕ್ಕೆ ತೆಂಗಿನ ಕಾಯಿ ಮತ್ತು ಬಾಳೇ ಹಣ್ಣು ವಿಶೇಷವೆಂದು ನಂಬುವ ಸಾಂಸ್ಕೃತಿಕ ಪರಂಪರೆಗೆ ಇದು ಸಾಕ್ಷಿಯಾಗಿದೆ. ಬೇರೆ ಕೆಲ ದ್ರಾವಿಡ ಭಾಷೆಗಳಲ್ಲಿಯೂ ಕಾಯಿ ಎಂದರೆ ತೆಂಗಿನ ಕಾಯಿಯೇ. ಉದಾಹರಣೆಗೆ ಕೊಡವ ಭಾಷೆಯಲ್ಲಿ. ಆದರೆ ತಮಿಳಿನಲ್ಲಿ ಪ್ರತ್ಯೇಕವಾಗಿ ವಿಶೇಷಿಸಿ ಹೇಳದಿದ್ದರೆ ಕಾಯಿ ಎಂದರೆ **ಬಾಳೇ ಕಾಯಿ**. ತುಳುವಿನಲ್ಲಿ ಪ್ರತ್ಯೇಕ ವಿಶೇಷಿಸದಿದ್ದರೆ ಕಾಯಿ ಎಂದರೆ **ಅಡಿಕೆ**. ಇದು ಬಹುಶಃ ವಿಸ್ತೃತವಾದ ಎಲೆ ಅಡಿಕೆ ಜಗಿಯುವ ಚಟವನ್ನು ಸೂಚಿಸುತ್ತದೆ. ಇದೇ ಸಂಸ್ಕೃತಿಯನ್ನು ಸೂಚಿಸುವಂತೆ ಕನ್ನಡದಲ್ಲಿ ಕೂಡ ವಿಶೇಷಿಸದೆ **ಎಲೆ** ಎಂದು ಹೇಳಿದರೆ **ವೀಳ್ಯದೆಲೆ**ಯೆಂದೇ ಅರ್ಥವಾಗುತ್ತದಲ್ಲವೆ? **ಎಲೆ ಬಳ್ಳಿ ತೋಟ** ಎಂದರೆ ವೀಳ್ಯದೆಲೆ ತೋಟವೆ. ಅದೇ ಪ್ರಕಾರ ಹಿಂದಿ ಮರಾಠಿಗಳಲ್ಲಿ **ಪಾನ್** ಶಬ್ದಕ್ಕೆ ನಿಜವಾದ ಅರ್ಥ **ಎಲೆ** ಮಾತ್ರವಾಗಿದ್ದರೂ ರೂಢಿಯಲ್ಲಿರುವ ವೀಳ್ಯದೆಲೆಯೆಂಬರ್ಥ ಎಲೆ ಅಡಿಕೆ ಅಭ್ಯಾಸದ ಸಾರ್ವತ್ರಿಕತೆಯನ್ನು ಬೊಟ್ಟು ಮಾಡುತ್ತದೆ. ಹೀಗೆ ಕರ್ನಾಟಕದ ಕೆಲ ಪ್ರದೇಶಗಳಲ್ಲಿ ವಿಶಿಷ್ಟಾರ್ಥ ಕೊಡುವ ಇನ್ನೊಂದು ಸಾಮಾನ್ಯ ಪದ **ಪುಡಿ** (ತುಳು **ಪೊಡಿ**). **ಪುಡಿ** ಎಂದರೆ ಕುಟ್ಟಿ ಹಿಟ್ಟಾಗಿ ಧೂಳಿನಂತಿರುವ ಪದಾರ್ಥ. **ಧೂಳಿ**ಯೆಂಬರ್ಥದಲ್ಲಿಯೂ ಪುಡಿ ಪ್ರಯೋಗವಿದೆ. ''ಪುಡಿಯೊಳ್ ಪೊರಳ್ಚಿದಂ.'' ಆದರೆ ಕರಾವಳಿಗೆ ಹೋದರೆ ನಿರ್ವಿಶೇಷವಾಗಿ **ಪುಡಿ** ಎಂದಲ್ಲಿ **ನಶ್ಯದ ಪುಡಿ** ಎಂಬ ವಿಶೇಷಾರ್ಥವನ್ನೇ ಕೊಡುತ್ತದೆ. ಬೇರೆ ಪುಡಿಗಳನ್ನು 'ಅಡಿಕೆ ಪುಡಿ' 'ದಂಟಿನ ಪುಡಿ' ಮುಂತಾಗಿ ಹೆಸರಿಸಿ ಹೇಳಬೇಕಾಗುತ್ತದೆ.

೭೭

ಅಡಿಕೆ ಮತ್ತು ವೀಳ್ಯ ಭಾರತದ ದೇಶ್ಯ ಅಥವಾ ಜಾನಪದ ಬದುಕಿನಲ್ಲಿ ಬಹಳ ಮಹತ್ವ ಪಡೆದ ವಸ್ತುಗಳು. ಎಲೆ ಅಡಿಕೆಯ ಅಭ್ಯಾಸ ಭಾರತ ಮತ್ತು ಅದರ ಪೂರ್ವದ ದೇಶಗಳಲ್ಲಿ ವ್ಯಾಪಕವಾಗಿದೆ. ಅಡಿಕೆಯಲ್ಲಿ ಹಲವು ತರಹಗಳು ಇವೆ. ಅವುಗಳಲ್ಲಿ **ಆಪಿ** ಅಡಿಕೆ ಒಂದು. ಪರಿಷತ್ತಿನ ನಿಘಂಟಿನಲ್ಲಿ ದುರ್ದೈವದಿಂದ ಈ ಶಬ್ದ ಇಲ್ಲ. ಸಿರಸಿ, ತೀರ್ಥಹಳ್ಳಿಗಳಲ್ಲಿ ಅಡಿಕೆಯನ್ನು ಎಳೆಯದಾಗಿರುವಾಗಲೇ ಕೊಯ್ದು ಬೇಯಿಸಿ, ಸಿಪ್ಪೆ ತೆಗೆದು ತೆಳ್ಳಗೆ ದುಂಡಗೆ ಹೋಳು ಮಾಡಿ ಪಾವು ಕೊಟ್ಟು ಒಣಗಿಸಿದ ತಳತಳಿಸುವ **ಆಪಿ ಅಡಿಕೆ** ವಿಲಾಸಿಗಳಿಗೆ ಪ್ರಿಯವಾದದ್ದು. ಆದರೆ **ಆಪಿ** ಅಂದರೇನು? ತುಂಬ ವಿಚಾರ ಮಾಡಿ ಇದು ಪಾರಸಿಕ ಭಾಷೆಯ **ಆಬಿ** ಎಂಬ ತರ್ಕಕ್ಕೆ ಬಂದಿದ್ದೇನೆ. **ಆಬ್** ಎಂದರೆ ಪಾರಸಿಕ ಭಾಷೆಯಲ್ಲಿ ನೀರು (ಸಂ. ಆಪಃ) ; ವಿಸ್ತಾರಿತ ಭಾವದಲ್ಲಿ ಅದಕ್ಕೆ **ಹೊಳಪು**, **ಕಾಂತಿ** ಎಂದೂ ಅರ್ಥವುಂಟು. **ಆಬೀ** ಅಂದರೆ ಹೊಳಪು ಕೊಟ್ಟದ್ದು, ಮಸಾಲೆ ಅಥವಾ ಪಾವು ಕೊಟ್ಟದ್ದು. ಆಪೀ ಅಡಿಕೆ ಈ ಗುಣಗಳುಳ್ಳದ್ದು. ಇದೇ ತರಹದ **ಚಿಕಣಿ** ಎಂಬ ಅಡಿಕೆ ಇದೆ. **ಚಿಕ್ಕಣ** ಎಂದರೆ ಸಂಸ್ಕೃತದಲ್ಲಿ ಒಂದು ಜಾತಿಯ ಅಡಿಕೆ ಅಥವಾ ಅಡಿಕೆ ಮರ. ಆದರ ಚಿಕ್ಕಣ ಶಬ್ದಕ್ಕೆ ಪ್ರಾಕೃತದಲ್ಲಿ, ಸಂಸ್ಕೃತದಲ್ಲಿ ಎಣ್ಣೆ, ಜಿಡ್ಡು, ನುಣ್ಣಗಿನ ಕೆಸರು, ಮೆತ್ತಗಿನದು, ಸ್ನಿಗ್ಧ ಎಂದರ್ಥವಿದೆ. ಆಪಿ ಅಡಿಕೆಗೆ ಹಿಂದಿಯಲ್ಲಿ **ಚಿಕನೀ ಸುಪಾರಿ** ಎಂದೇ ಹೆಸರಿದೆ. ದ್ರಾವಿಡ **ಚಿಕ್ಕ**ದಿಂದಲೇ (= ಎಳೆಯ, ಸಣ್ಣ) ಸಂಸ್ಕೃತಕ್ಕೆ ಹೋಗಿರಬಹುದಾದ ಈ ಗುಣವಾಚಕವನ್ನು ಹಲಗಾಲ ಪಶ್ಚಿಮ ಕರಾವಳಿಯ ವ್ಯಾಪಾರವನ್ನು ಗುತ್ತಿಗೆ ಮಾಡಿಕೊಂಡಿದ್ದ ಮುಸ್ಲಿಮ್ ವ್ಯಾಪಾರಿಗಳು

ಅಥವಾ ರಾಜ್ಯಕರ್ತರು (ಅಡಿಕೆ ಒಂದು ರಾಜಾದಾಯದ ಮೂಲವಾಗಿತ್ತು) ಪಾರಸಿಕ ಭಾಷೆಗೆ ಅನುವಾದಿಸಿಕೊಂಡಂತಿದೆ.

**ಸುಪಾರಿ** ಎಂಬುದು ಅಡಿಕೆಗೆ ಸಾಮಾನ್ಯಕ್ಕೆ ಹಿಂದಿ, ಬಂಗಾಲಿ, ಮರಾಠಿ ಮೊದಲಾದ ಉತ್ತರದ ಭಾಷೆಗಳಲ್ಲಿ ಹೆಸರು. **ಪಾನ್–ಸುಪಾರೀ** ಎಂದರೆ ಎಲೆ–ಅಡಿಕೆ. ಸುಪಾರಿ ಎಂಬ ಹೆಸರು ಇನ್ನೊಂದು ವಾಣಿಜ್ಯ ಕಥೆಯನ್ನು ಹೇಳುತ್ತದೆ. ಅಶೋಕನ ಕಾಲಕ್ಕಿಂತಲೂ (ಕ್ರಿ.ಪೂ. ೩ನೇ ಶತಮಾನ) ಹಿಂದಿನಿಂದ ಪಶ್ಚಿಮ ಕರಾವಳಿಯ **ಶೂರ್ಪಾರಕ** (ಪ್ರಾಕೃತ, ಪಾಲಿ–**ಸುಪ್ಪಾರಕ**) ಎಂಬುದು ಅಂತಾರಾಷ್ಟ್ರೀಯ ವ್ಯಾಪಾರದ ಬಂದರವಾಗಿತ್ತು. ಅದು ಮುಂದೆ **ಸೊಪಾರಾ** ಎಂದಾಯಿತು. ಅಡಿಕೆಯ ಪ್ರಧಾನ ಉತ್ಪಾದನಾ ಕೇಂದ್ರಗಳು ಕರ್ನಾಟಕ–ಕೇರಳಗಳ ಘಟ್ಟದ ಭಾಗಗಳಾಗಿದ್ದು ಅಲ್ಲಿಂದ ರಫ್ತಾಗಿ ಉತ್ತರ ಭಾರತಕ್ಕೆ ಮುಖ್ಯವಾಗಿ ಸೊಪಾರಾ ಬಂದರದ ಮೂಲಕ ಅಡಿಕೆ ತಲುಪುತ್ತಿರಬೇಕು. ಏಕೆಂದರೆ ಉತ್ತರ ಭಾರತದಲ್ಲೆಲ್ಲ ಮುಸ್ಲಿಮ್ ಯುಗದಲ್ಲಿ ಕೂಡ ವೀಳ್ಯದ ಚಟ ಹಿಂದು ಮುಸ್ಲಿಮರೆನ್ನದೆ ಎಲ್ಲರಿಗೂ ಅಂಟಿದ್ದಾಗಿತ್ತು. (ಶ್ರೇಷ್ಠ ವೀಳ್ಯದೆಲೆ ಉತ್ತರ ಭಾರತದಲ್ಲಿ ಉತ್ಪಾದಿಸಲ್ಪಡುತ್ತದೆ.) ಸ್ಥಳದಿಂದ ಪದಾರ್ಥಕ್ಕೆ ಹೆಸರು ಬರುವ ಉದಾಹರಣೆಗಳಲ್ಲಿ ಇದೊಂದು.

ಒಂದು ಪದಾರ್ಥ ಎಲ್ಲಿಂದ ಬರುತ್ತದೋ ಆ ಸ್ಥಳದ ಹೆಸರು ಅದಕ್ಕೆ ಬರುವುದು ಸಹಜ. ಆದರೆ ಎಲ್ಲಿಗೆ ವಿಶೇಷವಾಗಿ ಹೋಗುತ್ತದೋ ಅಲ್ಲಿಯ **ಸ್ಥಳನಾಮ** ಅದಕ್ಕೆ ಬೀಳುವುದೂ ಉಂಟು. ಕರ್ನಾಟಕದ ಪಶ್ಚಿಮ ಕರಾವಳಿಯಲ್ಲಿ **ಮಸ್ಕತಿ** ಅಕ್ಕಿ ಎಂಬ ಉಚ್ಚ ದರ್ಜೆಯ ಕುಚ್ಚಲಕ್ಕಿಯೊಂದು ಉತ್ಪಾದಿತವಾಗುತ್ತಿತ್ತು. ಅದಕ್ಕೆ ಆ ಹೆಸರು ಬೀಳಲು ಕಾರಣ ಅದು ರಫ್ತಾಗುತ್ತಿದ್ದದ್ದು **ಮಸ್ಕತ್** ಬಂದರಕ್ಕೆ. ಅದು ಮಧ್ಯಪೂರ್ವದ ಪ್ರಸಿದ್ಧ ಅರಬ್ ಬಂದರು.

**ರಸಾಯನಶಾಸ್ತ್ರ**ವನ್ನು ಇಂಗ್ಲೀಷಿನಲ್ಲಿ **ಕೆಮಿಸ್ಟ್ರಿ** (chemistry) ಎನ್ನುತ್ತಾರೆ. ಈ ಶಾಸ್ತ್ರದ ಬೆಳವಣಿಗೆ ನಿಮ್ಮ ನಮ್ಮ ಜೀವನದ ಮೇಲೆ ಬೀರಿದ ಪ್ರಭಾವಕ್ಕೆ ಸಮವಾದದ್ದು ಬಹುಶಃ ಮತ್ತಾವ ವಿಜ್ಞಾನಶಾಖೆಯ ಬೆಳವಣಿಗೆಯೂ ಅಲ್ಲ. ಈ ಕೆಮಿಸ್ಟ್ರಿಯ ಹೆಸರು ಬಂದದ್ದು ಅರಬ್ಬಿ ಭಾಷೆಯಿಂದ; ಅರಬ್ಬಿಯಲ್ಲಿ **ಅಲ್–ಕೀಮಿಆ** ಎಂಬುದು ರಾಸಾಯನಿಕ ಪರಿವರ್ತನೆಯ ಶಾಸ್ತ್ರ. ಆದರೆ ಹಿಂದೆ ಆ ಶಾಸ್ತ್ರದ ಪ್ರಧಾನ ಧ್ಯೇಯ ಕೀಳು ಲೋಹಗಳನ್ನು ಬಂಗಾರವಾಗಿ ಪರಿವರ್ತಿಸುವುದಾಗಿತ್ತು. ಇದು ಸಾಧ್ಯ ಎಂಬ ಹುಚ್ಚು ಕಲ್ಪನೆಗೆ ಒಳಗಾಗಿ ಬಹುಶಃ ನೂರಾರು ಮಹಾ ಮೇಧಾವಿಗಳು ನಾಗರಿಕ ದೇಶಗಳಲ್ಲೆಲ್ಲ ಜೀವಮಾನವನ್ನೆಲ್ಲ ಕಳೆದರು. ಅವರಲ್ಲಿ ಅರಬರೂ ಇದ್ದರು. ಭಾರತೀಯರೂ ಇದ್ದರು. ಉದಾಹರಣೆಗೆ ನಾಗಾರ್ಜುನ. ಇದು ಕೈಗೂಡಿತ್ತೆಂಬುದಕ್ಕೆ ಆಧಾರಗಳೇನೂ ಇಲ್ಲ. ಆದರೆ ಆ ಪ್ರಯತ್ನದ ಫಲವಾಗಿ ನಾನಾ ರಾಸಾಯನಿಕ ಮಿಶ್ರಣಗಳನ್ನು ಕಾಸುವ ಕುದಿಸುವ ಸಾಹಸಗಳು ನಡೆದು ಕೊನೆಗೆ ಇಂದಿನ ರಸಾಯನಶಾಸ್ತ್ರ ಕಳೆದ ಕೆಲ ಶತಮಾನಗಳಲ್ಲಿ ಒಂದು ಖಚಿತ ವಿಜ್ಞಾನವಾಗಿ ಪರಿಣಮಿಸಿತು. ಅರಬರಿಂದ ಕೀಮಿಆ ತೆಗೆದುಕೊಂಡು ಪಾಶ್ಚಾತ್ಯರು ಅವೈಜ್ಞಾನಿಕ ಹೆಸರನ್ನು ವೈಜ್ಞಾನಿಕಕ್ಕೆ ಇಟ್ಟರು. ಆ ಹಳೇ ಭ್ರಮೆಯನ್ನು ಇಂದೂ ಅರಬ **ಅಲ್–ಕೀಮಿಆ** (alchemy) ಎಂಬ ಹೆಸರಿಂದ ಕರೆಯುತ್ತಾರೆ. ಅದು ಅಲಂಕಾರಿಕ ಪ್ರಯೋಗವಾಗಿ ಯಾವುದಾದರೊಂದು ಅದ್ಭುತದ ಸಾಧನೆ ಎಂಬರ್ಥದಲ್ಲಿ ಉಳಿದಿದೆ. ಮತ್ತೆ ಈ **ಕೀಮಿಆ** ಆದರೂ ಮೂಲದಲ್ಲಿ ಅರಬ್ಬಿ ಅಲ್ಲ. ಅದು ಈಜಿಪ್ತ್ ದೇಶಕ್ಕೆ ಪುರಾತನ ಈಜಿಪ್ತ್ಯನ್ನರು

ಇಟ್ಟುಕೊಂಡಿದ್ದ **ಕಪ್ಪು ನೆಲ** ಎಂಬರ್ಥದ ಹೆಸರಿಂದ ಪ್ರಾಚೀನ ಗ್ರೀಕ್ ಮೂಲಕ ಅರಬ್ಬಿಗೆ ಬಂತೆಂಬ ಅಭಿಪ್ರಾಯವೊಂದಿದೆ. ಇದು ನಿಜವಾಗಿದ್ದರೆ ಪ್ರಾಚೀನ ಈಜಿಪ್ಟಿನಲ್ಲೇ ಈ 'ಅ–ವಿದ್ಯೆ' ಆರಂಭವಾಗಿತ್ತೆನ್ನಬೇಕು. ಆದರೆ ಅದು ಕೈಮ್ (chyme = ಸುರಿ, ಹೊಯ್ಯು) ಎಂಬ ಗ್ರೀಕ್ ಪದದಿಂದ ಹುಟ್ಟಿ ಅರಬಿ ಭಾಷೆಗೆ ಹೋಗಿರಲೂಬಹುದು. ಏಕೆಂದರೆ ನಾನಾ ರಸಗಳನ್ನು ಬೆರೆಸುವುದು, ಹೊಯ್ಯುವುದು, ಅಡುವುದು ಆಗಿನ ಕೆಮಿಸ್ಟರು ಮಾಡುತ್ತಿದ್ದ ಕೆಲಸ.

ನಮ್ಮ ರಸಾಯನಶಾಸ್ತ್ರದ ಕಥೆಯೂ ಅದೇ. ರಸಶಾಸ್ತ್ರ ಎಂಬುದು ಅದರ ಪ್ರಾಚೀನ ಹೆಸರು. ರಸಕ್ಕೆ ಅನೇಕ ಅರ್ಥಗಳಿದ್ದರೂ ಪ್ರಧಾನವಾಗಿ ಅದು ಈ ಸಂದರ್ಭದಲ್ಲಿ **ಪಾದರಸ** ಅಥವಾ **ಪಾರಜದ** ಹೆಸರು. ಈ ವಿಚಿತ್ರ ಧಾತುವಿನಲ್ಲಿ ಏನೋ ದೈವೀ (ಅಥವಾ ಅಸುರೀ) ಶಕ್ತಿ ಇದೆಯೆಂಬುದು ಪುರಾತನ ತತ್ವಜ್ಞಾನಿಗಳ ನಂಬಿಕೆಯಾಗಿತ್ತು. ಅದರಿಂದ ಬಂಗಾರ ತಯಾರಿಸುವ ಹಂಬಲಕ್ಕೆ ಎಷ್ಟೋ ಜೀವಮಾನಗಳು ಮೀಸಲಾಗಿದ್ದುವು. 'ರಸರತ್ನಾಕರ'ದಲ್ಲಿ ನಾಗಾರ್ಜುನ ಬೆಳ್ಳಿಯನ್ನು ಚಿನ್ನ ಮಾಡುವ ವಿಧಾನವೊಂದನ್ನು ಹೇಳಿದ್ದಾನೆ.

## ೭೮

ಜನಾಂಗಗಳಿಗೆ ಹೆಸರುಗಳು ಹೇಗೆ ಬರುತ್ತವೆ? ಹೆಸರುಗಳ ವಿಷಯದಲ್ಲಿರುವ ಮೂಲಭೂತ ತತ್ವವೊಂದನ್ನು ತಿಳಿದುಕೊಂಡರೆ ಇದನ್ನು ಅರ್ಥಮಾಡಿಕೊಳ್ಳಬಹುದು. ನಮಗೆ ನಮ್ಮ ಹೆಸರುಗಳನ್ನು ಕೊಡುವವರು ಇತರರು ಎಂಬುದೇ ಆ ತತ್ವ. ಹಾಗೆಯೇ ಊರುಗಳಿಗೆ ಹೆಸರುಗಳನ್ನು ಕೊಡುವವರು ನೆರೆಯೂರಿನವರು – ಬಹುತರವಾಗಿ. ಜನಾಂಗಗಳೂ ತಮಗೆ ತಾವು ಹೆಸರಿಟ್ಟುಕೊಳ್ಳುವುದು ವಿರಳ. ಆದರೆ ಪರಕೀಯ ಜನರಾದರೂ ಬೇರೊಂದು ನೆರೆಯ ಅಥವಾ ಅಪರಿಚಿತ ಜನಾಂಗಕ್ಕೆ ಹೆಸರನ್ನು ಕೊಡುತ್ತಾರೆ ಹೇಗೆ? ನೀವು ಪರ ಜನಾಂಗದವನೊಬ್ಬನನ್ನು ಸಂಧಿಸಿದರೆ, ಅವನ ಭಾಷೆ ನಿಮಗೆ ಬಾರದಿದ್ದರೆ ಸನ್ನೆಗಳಿಂದಲೋ ಇನ್ನಾವ ವಿಧಾನದಿಂದಲೋ ನೀವು ಯಾವ ಜನ? ಎಂದು ಪ್ರಶ್ನಿಸುತ್ತೀರಿ. ಅವನು ಅದನ್ನು ನೀನು ಯಾರು? ಎಂದು ಅರ್ಥ ಮಾಡಿಕೊಂಡು ನಾನು **ಗಂಡಸು** ಎಂದೂ **ಮನುಷ್ಯ** ಎಂದೂ ಅವನ ಭಾಷೆಯಲ್ಲಿ ಹೇಳುತ್ತಾನೆ. ಆಗ ನೀವು ಅವನಿಗೆ ಮತ್ತು/ಅಥವಾ ಅವನ ಜನಾಂಗಕ್ಕೆ ಆ ಹೆಸರನ್ನೇ ಕೊಡುತ್ತೀರಿ. ಹೀಗೆ ಅನೇಕ ಜನಾಂಗಗಳ ಹೆಸರುಗಳು ಆ ಜನಾಂಗಗಳ ಭಾಷೆಗಳಲ್ಲಿ **ಮನುಷ್ಯ** ಅಥವಾ **ಗಂಡಸು** ಎಂಬರ್ಥವನ್ನು ಕೊಡುವವಾಗಿರುತ್ತವೆ. ಉದಾಹರಣೆಗೆ ನಾವು **ನಾಗ** ಜನಾಂಗ ಎಂದು ಕರೆಯುವ ಈಶಾನ್ಯ ಭಾರತದ ಬುಡಕಟ್ಟಿನ ಜನರ ಭಾಷೆಯಲ್ಲಿ **ನಾಗ** ಎಂದರೆ **ಮನುಷ್ಯ** ಅಥವಾ **ಗಂಡಸು** ಎಂದು ದಿವಂಗತ ರಾಮ ಮನೋಹರ ಲೋಹಿಯಾ ಒಂದು ಲೇಖನದಲ್ಲಿ ಬರೆದಿದ್ದರು. ಬೇರೆ ಉದಾಹರಣೆಗಳೂ ಸಿಗುತ್ತವೆ. ನಮ್ಮ ಮಧ್ಯಭಾರತ ಪ್ರದೇಶದ ಪ್ರಾಚೀನ **ಕೋಲ** ಎಂಬ ಗಿರಿಜನರ ಜನಾಂಗನಾಮ ಆ ಜನರ ಮೂಲ ಭಾಷೆಯಲ್ಲಿ ಮನುಷ್ಯ ಎಂಬರ್ಥ ಕೊಡುತ್ತಿರಬೇಕೆಂದು ಡಾ. ಸುನೀತಿಕುಮಾರ ಚಟರ್ಜಿ ಹೇಳುತ್ತಾರೆ. ಏಕೆಂದರೆ ಆ ಗುಂಪಿನ ಅಳಿದುಳಿದ ಇಂದಿನ ಭಾಷೆಗಳಲ್ಲಿ (ಸಂಥಾಲಿ, ಮುಂಡಾರಿ ಇತ್ಯಾದಿ) ಧ್ವನಿಯಲ್ಲಿ ಅದಕ್ಕೆ ಹತ್ತಿರವಾದ **ಹ್ಪೋರ್** (ಸಂಥಾಲಿ), **ಹ್ಪೊರೊ**

(ಮುಂಡಾರಿ), **ಹ್ವೋರ್** (ಕೊರ್ವ) ಪದಗಳು ಮನುಷ್ಯಾರ್ಥಕವಾಗಿವೆ. ದಕ್ಷಿಣ ಕನ್ನಡದ **ಕೊರಗ** ಜನಾಂಗದ ಭಾಷೆಯಲ್ಲಿ **ಕೊರಯಿ** ಎಂದರೆ **ಗಂಡ, ಗಂಡಸು** ಎಂಬರ್ಥವಿದೆ. ಬಹುಶಃ ಈ ಜನಾಂಗ ಕೋಲ ಗುಂಪಿಗೆ ಸೇರಿದ್ದಾಗಿರಬೇಕು. ಆ ಗುಂಪಿನ **ಕೂರ್ಕಿ** ಭಾಷೆಯಲ್ಲಿ **ಕೊರೊ** ಎಂದರೆ ಮನುಷ್ಯ ಎಂದೇ ಇಂದಿಗೂ ಅರ್ಥವಿದೆ.

ಹಾಗೆಯೇ ಒಂದು ವರ್ಗದ ಹೆಸರು ವ್ಯಕ್ತಿಗೆ ಬರುವ ಸಂದರ್ಭಗಳೂ ಇವೆ. ಮಹಾಭಾರತದಲ್ಲಿ ಅರ್ಜುನ ತನ್ನ ದೀರ್ಘ ತೀರ್ಥಯಾತ್ರೆಯಲ್ಲಿ ಸಂಪಾದಿಸಿದ ಹೆಂಡಂದಿರ ಪೈಕಿ ಆಗಿನ ಈಶಾನ್ಯ ಭಾರತದ ನಾಗಕನ್ನಿಕೆ **ಉಲೂಪಿ** ಎಂಬವಳೊಬ್ಬಳು. (ಇವಳು ಪ್ರಸಿದ್ಧ ಬಭ್ರುವಾಹನನ ತಾಯಿಯ ಸಂಬಂಧಿಕಳು.) ಕೆಲ ವರ್ಷಗಳ ಹಿಂದೆ ಒಂದು ನಾಗ ಗುಂಪಿನ ಭಾಷೆಯಲ್ಲಿ **ಲೂಪಿ** ಎಂದರೆ **ಹುಡುಗಿ,** ಕನ್ಯೆ ಎಂದರ್ಥವೆಂದು ಓದಿ ನನಗೆ ಭಾರತದ **ಉಲೂಪಿ** ನೆನಪಾದಳು. **ಆ ಉಲೂಪಿ** ಈಗಿನ **ಲೂಪಿಯೇ** ಇರಬೇಕೆಂಬಲ್ಲಿ ನನಗೆ ಸಂಶಯವಿಲ್ಲ. ಇದು ಆ ಭಾಷೆ ಅರಿಯದ ಪುರಾಣಿಕರು ಸಾಮಾನ್ಯರನ್ನು ವಿಶಿಷ್ಟಕ್ಕೆ ಅನ್ವಯಿಸಿದ ಉದಾಹರಣೆ, (ನಾಗ ಎಂಬುದು ತದ್ವಿರುದ್ಧವಾಗಿ ವಿಶಿಷ್ಟವನ್ನು ಸಾಮಾನ್ಯಕ್ಕೆ ಅನ್ವಯಿಸಿದ ಉದಾಹರಣೆ.)

**ಗಂಡ–ಹೆಂಡತಿ** ಎಂಬ ಸಂಬಂಧವಾಚಕಗಳು ಇತರ ಸಂಬಂಧವಾಚಕಗಳಿಗಿಂತ ಭಿನ್ನ ಸ್ವರೂಪದವು. ಉಳಿದವು ಹುಟ್ಟಿನಿಂದ ಸಿದ್ಧವಾದರೆ ಇವು ಗಂಟು ಹಾಕಿದ ನಂಟುಗಳು. ಈ ಸಂಬಂಧಕ್ಕೆ ಅನ್ವಯಿಸುವ ಪದಗಳ ತಳ ಶೋಧಿಸುವುದೂ ಸ್ವಾರಸ್ಯಕರವಾಗಿದೆ. ಗಂಡ–ಹೆಂಡತಿಯನ್ನೇ ತೆಗೆದುಕೊಳ್ಳಿ, ಇವು ವಾಸ್ತವಿಕವಾಗಿ ಸಂಬಂಧವನ್ನು ಸೂಚಿಸುವ ಪದಗಳೇ ಅಲ್ಲ; ಬರೇ ಲಿಂಗ ಸೂಚಕ ಪದಗಳಷ್ಟೇ. ಹೆಚ್ಚು ಕೇಳಿದರೆ ಇವು ಬರೇ ಮನುಷ್ಯರಿಗೆ ಮಿತವಾದವುಗಳಲ್ಲ. ಕನ್ನಡದಲ್ಲಿ **ಗಂಡ** ಪತಿಯೆಂಬರ್ಥಕ್ಕೆ ತಿರುಗಿಸಲ್ಪಟ್ಟಿದ್ದರೂ ಅದರದೇ ತುಳು, ಮಲಯಾಳಿ ರೂಪವಾದ **ಕಂಟ** ಎಂಬುದು ಬಾವುಗಕ್ಕೆ (ಗಂಡು ಬೆಕ್ಕು) ಅನ್ವಯಿಸುತ್ತದೆ! ಗಂಡ (ಪತಿ) ಎಂದು ಸೂಚಿಸುವುದಕ್ಕೆ ತುಳುವಿನಲ್ಲಿ ಒಂದು ಚಿಕ್ಕ ಪ್ರತ್ಯಯವನ್ನು ಸೇರಿಸಿ **ಕಂಡನಿ** ಮಾಡಿದ್ದಾಗಿದೆ. ಕನ್ನಡದಲ್ಲಿ **ಹೆಣ್ಣು** ಶಬ್ದಕ್ಕೆ ''ತಿ'' ಪ್ರತ್ಯಯ ಸೇರಿಸಿ **ಹೆಂಡತಿ** ಮಾಡಿ ''ಪತ್ನಿ'' ಎಂಬರ್ಥಕ್ಕೆ ತಿರುಗಿಸಲಾಗಿದೆ. ಈಗ ಬಳಕೆ ತಪ್ಪಿದ **ಮಡದಿ** ಶಬ್ದ ಒಟ್ಟಿನಲ್ಲಿ ಬುದ್ಧಿ ಬಲಿಯದ ಹೆಣ್ಣು ಅಥವಾ ಕನ್ಯೆಗೆ ಅನ್ವಯಿಸಿ ಇತರ ದ್ರಾವಿಡ ಭಾಷೆಗಳಲ್ಲಿ ಕಾಣಿಸುತ್ತದೆ!

ಗಂಡ, ಹೆಂಡತಿ ಎಂಬುದಕ್ಕೆ ಲಿಂಗವಾಚಕಕ್ಕಿಂತ ಬೇರೆ ಪದಗಳಿಲ್ಲದಿರುವುದು ದ್ರಾವಿಡ ವಿಶಿಷ್ಟ ದಾರಿದ್ರ್ಯವಲ್ಲ. ಇಂಗ್ಲೀಷಿನ ''ವೈಫ್'' (wife) ಮಧ್ಯಕಾಲೀನ ಇಂಗ್ಲೀಷಿನಲ್ಲಿ **ಹೆಂಗಸು** ಎಂಬರ್ಥ ಕೊಡುವಂಥಾದ್ದೇ. ಹಿಂದಿಯಲ್ಲಿ ''ಉಸ್ ಕಿ ಸ್ತ್ರೀ'' ಉರ್ದುವಿನಲ್ಲಿ ''ಉಸ್ ಕೀ ಔರತ್'' ಎನ್ನುವಾಗಲೂ ''ಅವನ ಹೆಂಗಸು'' ಎಂದೇ ಮೂಲಾರ್ಥ. (ಸಂಸ್ಕೃತದಲ್ಲಿ ಸ್ತ್ರೀ ಮತ್ತು ಅರಬ್ಬಿಯಲ್ಲಿ ಔರತ್ ಸ್ತ್ರೀಸಾಮಾನ್ಯ ವಾಚಕಗಳೇ). ಉರ್ದುವಿನಲ್ಲಿ ಗಂಡ ಎಂಬರ್ಥದಲ್ಲಿ **ಮರ್ದ್** ಎಂಬ ಪದ ಬಳಕೆಯಾಗುತ್ತದೆ. ಮರ್ದ್ ಶಬ್ದ ಪಾರಸಿಕ ಭಾಷೆಯಲ್ಲಿ **ಗಂಡಸು** ಎಂಬುದಕ್ಕೂ **ಗಂಡ** ಎಂಬುದಕ್ಕೂ ಸಾಮಾನ್ಯವಾದದ್ದು.

ಆರ್ಯ ಭಾಷೆಗಳಲ್ಲಿ ಕೆಲ ಸಲ ತುಸು ಭಿನ್ನ ಸ್ವರೂಪದ ಪದಗಳನ್ನು ಕಾಣುತ್ತೇವೆ. ಸಂಸ್ಕೃತದ ಪತಿಯ ಮೂಲಾರ್ಥ ವೈವಾಹಿಕ ಸಂಬಂಧ ಸೂಚಕವಲ್ಲ; ಕೇವಲ **ಒಡೆಯ**

ಎಂಬರ್ಥದ್ದು. ಋಗ್ವೇದದಲ್ಲೇ ಈ ಪದ ಒಡೆಯ, ಗಂಡ ಎರಡೂ ಅರ್ಥಗಳಲ್ಲಿ ಪ್ರಯುಕ್ತವಾಗಿದೆ. **ಪತಿ**ಯ ಸಂವಾದಿಗಳಾದ ಗ್ರೀಕ್ (ಪೋಸಿಸ್), ಲ್ಯಾಟಿನ್ (ಪೋತಿಸ್, ಪೊಸ್ಸಮ್), ಲಿಥುಯೇನಿಯಸ್ (ಪತಿಸ್) ಕೂಡ **ಒಡೆತನದ** ಕಲ್ಪನೆಯೊಡನೆ **ಗಂಡ** ಎಂಬರ್ಥವನ್ನೂ ಸೂಚಿಸುತ್ತವೆ. ಇಂಗ್ಲೀಷಿನಲ್ಲಿ **ಹಸ್ಬಂಡ್** (husband) ಹಳೇ ಇಂಗ್ಲೀಷಿನ hus (ಮನೆ–home) ಮತ್ತು bonda-banda (ವಾಸಿಸುವ ಉಳ್ಳವ, ಭೂಮಾಲಿಕ) ಎಂಬ ಪದಗಳ ಸಮಾಸ. ಸಂಸ್ಕೃತದಲ್ಲಿ "ಗೃಹಪತಿ" ಕನ್ನಡದಲ್ಲಿ "ಮನೆವಾಳ" ಎಂದ ಹಾಗೆ. ಹಾಗೆಯೇ **ಪತ್ನಿ** ಮತ್ತು ಅದರ ಗ್ರೀಕ್ ಸಂವಾದಿ ಪದ (ಪೋತ್ನಿಯ) **ಒಡತಿ** ಎಂಬರ್ಥ ಕೊಡುತ್ತವೆ. ಅವಳ ಒಡೆತನ ಒಡೆಯನ ಹೆಂಡತಿಯಾಗಿ ಅಥವಾ ಸ್ವತಂತ್ರವಾಗಿ ಬಂದಿದ್ದಿರಬಹುದೆಂದು ವೈದಿಕ ಪ್ರಯೋಗಗಳಿಂದ ಸೂಚಿತವಾಗುತ್ತದೆ. ಪತಿ, ಪತ್ನಿ, husband ಮೊದಲಾದವು ಮಾನವನು ಕೃಷಿಕನೂ ಸಂಪತ್ತಿನ ಸಂಗ್ರಾಹಕನೂ ಆದ ಯುಗದಲ್ಲಿ ಬಳಕೆಗೆ ಬಂದ ಪದಗಳೆಂದು ತರ್ಕಿಸಬಹುದು. ಗಂಡ, ಹೆಂಡತಿಯೆಂಬವು ಕೇವಲ ಒಂದು ಗಂಡಿಗೆ ಒಂದು ಹೆಣ್ಣು ಹೆಚ್ಚು ಕಡಿಮೆ ಕಾಯಮಾಗಿ ಅಂಟಿಕೊಳ್ಳತೊಡಗಿದಾಗಿಂದ ಬಂದು ಪತಿ, ಪತ್ನಿ ಪದಗಳಿಗಿಂತ ಪುರಾತನವಾದವಿರಬೇಕು.

೭೯

ಕೈಯಲ್ಲಿ **ದಮ್ಮಡಿ** ಇಲ್ಲ ಎಂಬೊಂದು ನುಡಿಕಟ್ಟು ಎಲ್ಲರೂ ಕೇಳಿದ್ದೇ. ಈ ಶಬ್ದ ಮರಾಠಿ ಮತ್ತು ಹಿಂದಿಯಲ್ಲೂ ಇದೆ. ಅರ್ಥ ಅತ್ಯಂತ ಕನಿಷ್ಠ ಬೆಲೆಯ ತಾಮ್ರದ ನಾಣ್ಯ. ಇದು ತಮಿಳಲ್ಲಿ (ತಮಟ) ತೆಲುಗಿನಲ್ಲಿ (ದಮ್ಮಡಿ) ಕೂಡ ಇದೆಯೆಂದು ಪರಿಷತ್ತಿನ ನಿಘಂಟು ಹೇಳುತ್ತದೆ. ದಮ್ಮಡಿಯ ಪ್ರಯೋಗಗಳು ಬಹಳ ಹಿಂದೆ ಸಿಕ್ಕುವುದಿಲ್ಲ. ಇದ್ದವುಗಳು ಉತ್ತರ ಕರ್ನಾಟಕದಲ್ಲೇ ಹೆಚ್ಚು. ಆದ್ದರಿಂದ ಮರಾಠಿ ಮೂಲಕ ಕನ್ನಡಕ್ಕೆ ನುಸುಳಿರಬೇಕೆಂದು ಗ್ರಹಿಸಬೇಕಾಗುತ್ತದೆ. ಅಲ್ಲಿಗೆ ಬಹುಶಃ ಪಾರಸಿಕ ಭಾಷೆಯಿಂದ ಆಮದಾಗಿರಬೇಕು. ಆ ಭಾಷೆಯಲ್ಲಿ **ದಾಮ** ಎಂದರೆ ಒಂದು ಚಿಕ್ಕ ಪ್ರಾಚೀನ ನಾಣ್ಯ. ಅದಕ್ಕೆ ಕ್ಷುದ್ರಾರ್ಥಕವಾದ 'ಟಿ' ಪ್ರತ್ಯಯ ಸೇರಿ ಹಿಂದಿ ಮರಾಠಿ **ದಮ್ಮಡಿ** ಎಂದಾಯಿತು.

ಆದರೆ ಈ **ದಾಮ–ದಮ್ಮ**ದ ಕಥೆ ಇನ್ನೂ ಹಿಂದಕ್ಕೆ ಹೋಗುತ್ತದೆ. ಗ್ರೀಕಿನಲ್ಲಿ ಪ್ರಾಚೀನ ಕಾಲದಲ್ಲಿ **ದ್ರಾಕ್ಮೀ** ಎಂಬೊಂದು ಬೆಳ್ಳಿ ನಾಣ್ಯ ಚಲಾವಣೆಯಲ್ಲಿತ್ತು. ಗ್ರೀಕ್ ಸಂಬಂಧದಿಂದಾಗಿ ಅದು ಭಾರತದಲ್ಲಿಯೂ ಚಲಾವಣೆಗೆ ಬಂದಿತು. ಏಕೆಂದರೆ ಪ್ರಾಚೀನ ಗ್ರಂಥಗಳಲ್ಲಿ ಮತ್ತು ಶಾಸನಗಳಲ್ಲಿ ಅದರ ಹೆಸರು ಕಾಣಿಸುತ್ತದೆ. ಆದರೆ ಈ ದೇಶದಲ್ಲಿ ಅದು ವಿಶಿಷ್ಟ ತೂಕದ ಚಿನ್ನದ ನಾಣ್ಯವಾಗಿತ್ತು. ಕನ್ನಡದ ಶಾಸನಗಳಲ್ಲಿ ಅದು ಒಂಭತ್ತರಿಂದ ಹನ್ನೊಂದನೇ ಶತಮಾನದವರೆಗೂ ಉಲ್ಲೇಖಿಸಲ್ಪಟ್ಟಿದೆ. **ದ್ರಮ್ಮ**, **ದಮ್ಮ** ಎಂಬ ಎರಡೂ ರೂಪಗಳಲ್ಲಿ ಈ ಪದ ಲಭ್ಯವಾಗುತ್ತದೆ. ಅದೇ ಕಾಲದ ಸಂಸ್ಕೃತ "ಕಥಾ ಸರಿತ್ಸಾಗರ" ದಲ್ಲಿಯೂ ದ್ರಮ್ಮದ ಸುದ್ದಿ ಬರುವುದರಿಂದ ಅದರ ಬಳಕೆ ಭಾರತದಲ್ಲಿ ವ್ಯಾಪಕವಾಗಿತ್ತೆಂದು ಗ್ರಹಿಸಬಹುದು. ಬಳಕೆಯಲ್ಲಿದ್ದವುಗಳು ಗ್ರೀಕ್ ನಾಣ್ಯಗಳೇ ಆಗಿರಲಿಕ್ಕಿಲ್ಲ; ಹೆಸರು ಮಾತ್ರ ಶ್ರೇಷ್ಠ ಲೋಹದ ನಾಣ್ಯ ಎಂಬರ್ಥದಲ್ಲಿ ಗ್ರೀಸಿನಿಂದ, ಬಹುಶಃ ಇರಾಣ ಮೂಲಕ ಬಂದು ಭಾರತದಲ್ಲಿ ತಳವೂರಿದ್ದು.

ಒಂದು ವಿಶೇಷವೆಂದರೆ ಅಮೂಲ್ಯ ಲೋಹದ ದ್ರಮ್ಮ ಕಡೆಗೆ **ದಮ್ಮಡಿ** ಎಂಬ ಕ್ಷುಲ್ಲಕ ನಾಣ್ಯವಾದದ್ದು. ಆದರೆ ಈ ಅವಸ್ಥೆ ಬಂದದ್ದು ದ್ರಮ್ಮಕ್ಕೆ ಮಾತ್ರವಲ್ಲ. **ಕಾಸು** ಎಂಬುದನ್ನೇ ನೋಡಿ. ಇದರ ಮೂಲ ಸಂಸ್ಕೃತದ **ಕಾರ್ಷಾ** ಅಥವಾ **ಕಾರ್ಷಾ ಪಣ.** ಇದು ಕೂಡ ಒಂದು ಪ್ರಾಚೀನ ಚಿನ್ನ ಅಥವಾ ಬೆಳ್ಳಿಯ ನಾಣ್ಯ. ಇದರ ಉಲ್ಲೇಖ ತೈತ್ತಿರೀಯ ಸಂಹಿತೆಯಷ್ಟು ಹಿಂದೆ ಕಾಣಿಸುತ್ತದೆ. ಕಡೆಗೆ ಆ ಹೆಸರು ಕ್ಷುದ್ರ ತಾಮ್ರದ ನಾಣ್ಯಕ್ಕೆ ಅನ್ವಯಿಸುವುದಾಯಿತು. ಆದರೆ ಕಾರ್ಷಾಪಣಕ್ಕೆ ಕಾಸಿನ ಬೆಲೆ ಆದದ್ದು ದಕ್ಷಿಣ ಭಾರತದಲ್ಲಿ ಮಾತ್ರ. **ಕಾಸು** ತಮಿಳು, ಮಲಯಾಳಮ್, ತೆಲುಗುಗಳಲ್ಲಿಯೂ ಕ್ಷುಲ್ಲಕ ನಾಣ್ಯ ಎಂಬರ್ಥದಲ್ಲಿದೆ. ಕನ್ನಡದಲ್ಲಿ ವಚನಕಾರ ಮೋಳಿಗೆಯ ಮಾರಯ್ಯನಿಂದಾರಂಭಿಸಿ ದಾಸರವರೆಗಿನವರ ನಡುಗನ್ನಡ ಬರಹದಲ್ಲಿ ಕಾಸು ತಲೆ ಹಾಕಿದೆ. ಅದನ್ನು ಸಿಂಹಳ (ಶ್ರೀಲಂಕಾ) ಮೂಲಕ ಪೋರ್ತುಗೀಸರು ತಮ್ಮ ಭಾಷೆಗೊಯ್ದು cash ಎಂಬುದಾಗಿ ಇಂಗ್ಲೀಷಿಗೂ ಸಾಗಿಸಲಾಗಿದೆ. ಆದರೆ ಈ cash ಇಂಗ್ಲೀಷಿನ ನಗದು ಹಣ ಎಂಬರ್ಥದ್ದಲ್ಲ, ಪೂರ್ವ ದೇಶದ ಕ್ಷುಲ್ಲಕ ನಾಣ್ಯ ಎಂಬರ್ಥದ್ದು.

ಒಂದು ಸೋಜಿಗದ ಸಂಗತಿಯೆಂದರೆ ಪ್ರಾಚೀನದಲ್ಲಿ ನಾಣ್ಯವನ್ನು ಸೂಚಿಸುವ ಶುದ್ಧ ಸಂಸ್ಕೃತ ಪದಗಳಿಗಿಂತ ವಿದೇಶಿ ಮೂಲದ ಪದಗಳೇ ಈ ದೇಶದಲ್ಲಿ ಹೆಚ್ಚು ಪ್ರಚಲಿತವಾಗಿದ್ದದ್ದು. ದ್ರಮ್ಮವಲ್ಲದೆ ದೀನಾರವೆಂಬ ಇನ್ನೊಂದು ನಾಣ್ಯದ ಹೆಸರು ಕಥಾ ಸರಿತ್ಸಾಗರಾದಿ ಸಂಸ್ಕೃತ ಗ್ರಂಥಗಳಲ್ಲಿದೆ. ಇದೂ ಮಧ್ಯಪೂರ್ವದ ಪ್ರಾಚೀನ ಬಂಗಾರದ ನಾಣ್ಯ. ಶಬ್ದದ ಮೂಲ ಶೋಧನೆಗಿಳಿದರೆ ''ಕಾರ್ಷಾಪಣ'' ಕೂಡ ಎಷ್ಟು ಭಾರತೀಯ ಎಂಬುದು ವಿವಾದಾಸ್ಪದವೆ. (**ಕರ್ಷ** ಮತ್ತು **ಪಣ** ಎಂಬೆರಡು ಪದಗಳ ಜೋಡಣೆ **ಕಾರ್ಷಾಪಣವೆಂದೂ ಕರ್ಷ** ಎಂಬುದು (= ಹಣದ ಮಾನ) ಎಂಬ ಪಾರಸಿಕ ಪದವೆಂದೂ ಪಣ ಎಂಬುದು ಕವಡೆ ಮೊದಲಾದವನ್ನು ಹಣವಾಗಿ ಉಪಯೋಗಿಸುವಲ್ಲಿ ನಾಲ್ಕರ ವಿಭಾಗವನ್ನು ಸೂಚಿಸುವ ಆಸ್ಟ್ರಿಕ್ ಪದವೆಂದೂ ಡಾ. ಸುನೀತಿ ಕುಮಾರ ಚಟರ್ಜಿ ಹೇಳುತ್ತಾರೆ.) ಋಗ್ವೇದದಲ್ಲಿ ಬರುವ **ನಿಷ್ಕ** ಕೂಡ ದೇಶಿಯವೊ ಎಂಬುದು ಖಚಿತವಾಗಿಲ್ಲ. **ನಿಷ್ಕ್** ಧಾತುವಿನಿಂದ **ನಿಷ್ಕ** ಬಂತೆಂದು ನಿಷ್ಪತ್ತಿ ಹೇಳಲಾಗಿದ್ದರೂ ಈ ಧಾತುವೇ ''ನಿಷ್ಕ'' ಶಬ್ದಕ್ಕೆ ನಿಷ್ಪತ್ತಿ ಒದಗಿಸಲೆಂದು ಆ ಮೇಲೆ ಸೃಷ್ಟಿಯಾದ ಕೃತಕ ಧಾತುವೆಂದು ಸಂಶಯಪಡಲು ಎಡೆ ಇದೆ. ನಾಣ್ಯವೆಂಬುದನ್ನು ಸೂಚಿಸಲು ಇರುವ **ನಾಣಕ, ಮುದ್ರಾ, ಶಿಕ್ಯ** ಇತ್ಯಾದಿ ಪದಗಳು ವಿದೇಶಗಳಿಂದಲೇ ಕೈಗಡ ತೆಗೆದುಕೊಂಡವು. **ರೂಪ್ಯ, ರೂಪ** ಎಂಬುವು ಲೋಹದ ನಾಣ್ಯವನ್ನು ಸೂಚಿಸುವ ಬಹುಶಃ ಶುದ್ಧ ಸಂಸ್ಕೃತ ಪದಗಳು. ಚಿನ್ನ, ಬೆಳ್ಳಿ, ಇತ್ಯಾದಿ ಲೋಹದ ನಾಣ್ಯಗಳಿಗೆಲ್ಲ ಹಿಂದೆ ಅನ್ವಯಿಸುತ್ತಿದ್ದ ಈ ಪದ ಬೆಳ್ಳಿಯ **ರೂಪಾಯಿಯನ್ನು** ಸೂಚಿಸತೊಡಗಿದುದು ಮುಸ್ಲಿಮ್ ಯುಗದಲ್ಲಿ. ಈ ಸಂಗತಿಗಳನ್ನೆಲ್ಲ ನೋಡಿದರೆ ಬಂಗಾರ, ಬೆಳ್ಳಿಗಳನ್ನು ಆಭರಣಾದಿಗಳಿಗೆ ಬಹಳ ಪುರಾತನದಿಂದ ನಾವು ಬಳಸುತ್ತಿದ್ದರೂ ವ್ಯವಹಾರಕ್ಕಾಗಿ ಟಂಕ ಹೊಡೆದು ರಾಜ ಬೆಂಬಲವುಳ್ಳ ನಾಣ್ಯಗಳಾಗಿ ಬಳಸುವುದನ್ನು ಆರಂಭಿಸಿದ್ದು ವಿದೇಶಿಯರ ಪ್ರಭಾವದಿಂದ ಇರಬಹುದೆಂದು ಅನಿಸುತ್ತದೆ.

ಹೇಗೇ ಇದ್ದರೂ ಜಗತ್ತಿನಲ್ಲೆಲ್ಲ ಚಿನ್ನ ಬೆಳ್ಳಿಯ ಬಳಕೆ ಮೊದಲು ಆದದ್ದು ಆಭರಣಗಳಿಗಾಗಿ; ಆ ಮೇಲೆ ವ್ಯಾಪಾರ ವ್ಯವಹಾರದ ಮಾಧ್ಯಮವಾಗಿ ಇತ್ತು. **ನಿಷ್ಕ** ಕೂಡ ಕೊರಳಲ್ಲಿ ಧರಿಸುತ್ತಿದ್ದ ಆಭರಣವಾಗಿಯೇ ಮೊದಲು ಕಾಣಿಸಿಕೊಳ್ಳುತ್ತದೆ. ಇದರಲ್ಲಿ ಸೋಜಿಗವಿಲ್ಲ. ದೀನಾರ ಎಂಬ ಅರಬ್ಬೀ ಶಬ್ದಕ್ಕೆ ಕೂಡ ಬಂಗಾರದ ಆಭರಣವೆಂಬುದೆ

ಪ್ರಾಥಮಿಕ ಅರ್ಥ. ಆಗ ವ್ಯಾಪಾರ ನಡೆಯುತ್ತಿದ್ದುದೇ ಹೆಚ್ಚಾಗಿ ವಿನಿಮಯದಿಂದ - ಸರಕು ಕೊಟ್ಟು ಸರಕು ತೆಗೆದುಕೊಳ್ಳುವ ಪದ್ಧತಿಯಿಂದ – ನಾಣ್ಯ ಮೂಲಕವಲ್ಲ.

ಕೆಲವೊಮ್ಮೆ ಶಬ್ದಗಳಿಗೆ ಬರುವ ಹೆಸರುಗಳು ಅಸಂಗತವಾಗಿ ಕಾಣುತ್ತವೆ. ಕಬ್ಬು ಮೂಲತಃ ಭಾರತದ ಹುಲ್ಲೆಂದು ಜಗತ್ತೇ ಒಪ್ಪುತ್ತದೆ. ಸಕ್ಕರೆಯೂ ಭಾರತೀಯವೇ. **ಸಕ್ಕರೆ**ಯೆಂಬ ಹೆಸರೂ (ಸಂ. ಶರ್ಕರಾ) ಭಾರತದಿಂದ ಹೊರಟು ಪಾರಸಿಕ ಭಾಷೆಯಲ್ಲಿ **ಶಕ್ಕರ್** ಆಗಿ ಇಂಗ್ಲೀಷಿನಲ್ಲಿ sugar (ಶುಗರ್) ಆಗಿ ಪ್ರಚುರವಿದೆಯೆಂದೂ ಒಪ್ಪಿತವಾಗಿದೆ. (ವೇದಗಳಲ್ಲಿಯೇ **ಶರ್ಕರಾ** ಶಬ್ದ ಇದೆ; ಆದರೆ ಉಸುಬು ಎಂಬರ್ಥದಲ್ಲಿ. ಸಕ್ಕರೆ ಉಸುಬಿನಂತಿರುವುದರಿಂದ ಆ ಹೆಸರು ಸಕ್ಕರೆಗೆ ಅನ್ವಯಿಸಿತೆಂಬುದು ಅರ್ಥವಾಗುವ ಮಾತು.) ಆದರೆ ಸಕ್ಕರೆಗೆ ಏನೂ ಸಂಬಂಧವಿಲ್ಲದ ಚೀನದ ಹೆಸರಿನಿಂದ (**ಚೀನೀ**) ಪುಡಿ ಸಕ್ಕರೆ ಇರಾಣ ಮತ್ತು ಉತ್ತರ ಭಾರತದಲ್ಲಿ ಹೇಗೆ ಪ್ರಸಿದ್ಧವಾಯಿತು ? ಸಕ್ಕರೆಯ ಶುದ್ಧೀಕರಣದಿಂದ ತಯಾರಾಗುವ ಕಲ್ಲು ಸಕ್ಕರೆ ಇಜಿಪ್ತ್ ದೇಶದ (ಇಜಿಪ್ತ್ = ಮಿಸ್ರ = ಮಿಶ್ರ) ಹೆಸರಿನಿಂದ **ಮಿಶ್ರೀ, ಮಿಸ್ರೀ** ಎಂದು ಅರಬ್ಬೀ ಭಾಷೆಯಲ್ಲಿ ಯಾಕೆ ಕರೆಯಲ್ಪಟ್ಟಿತು ? ಸುನೀತಿ ಚಟರ್ಜಿಯವರಿಗೂ ಇದು ಬಗೆಹರಿದಿಲ್ಲ. (೮೪ ನೋಡಿ)

## ೮೦

ವಸ್ತುಗಳಿಗೆ ಹೆಸರುಗಳು ಯಾವ ಯಾವ ರೀತಿಯಲ್ಲಿ ಬರಬಹುದೆಂಬುದನ್ನು ಹೇಳಬರುವುದಿಲ್ಲ. ನಿಜ ಸ್ವರೂಪವನ್ನು ಬಚ್ಚಿಡುವುದಕ್ಕಾಗಿಯೇ ಒಂದು ವಸ್ತುವಿಗೆ ಒಂದು ಹೆಸರು ಬರಬಹುದು. **ಟ್ಯಾಂಕ್**ಅನ್ನು ಉದಾಹರಿಸುವುದಾದರೆ ಅದು ಚಿಕ್ಕ ಜಲಾಶಯವನ್ನು ಸೂಚಿಸುವ ಶಬ್ದ – ಕೆರೆ. ಪೋರ್ಚುಗೀಸ್ ಭಾಷೆಯ ಮೂಲಕ (tanque) ಲ್ಯಾಟಿನ್ನಿನ stagnum (ನೀರಹೊಂಡ) ಇಂಗ್ಲೀಷಿಗೆ tank ಆಗಿ ಬಂತು. ನಾನಾ ಗಾತ್ರದ ಜಲಾಶಯಗಳಿಗೆ ಮತ್ತು ಅನಂತರ ಎಣ್ಣೆ ಮೊದಲಾದ ದ್ರವ ಪದಾರ್ಥಗಳನ್ನು ತುಂಬಿಡುವ ಆಶಯಗಳಿಗೆ ಈ ಪದ ಅರ್ಥವಿಸ್ತಾರ ಮಾಡಿಕೊಂಡದ್ದು ಸಹಜ. ಆದರೆ ಯುದ್ಧದಲ್ಲಿ ಬಳಸುವ ಕವಚಾನ್ವಿತ ವಾಹನಕ್ಕೆ **ಟ್ಯಾಂಕ್** ಎಂಬ ಹೆಸರು ಬಂದದ್ದೇ ಬೇರೆ ರೀತಿಯಲ್ಲಿ. ಮೊದಲನೇ ಮಹಾಯುದ್ಧದ (೧೯೧೪–೧೮) ಕೊನೆ ಕೊನೆಗೆ ಇಂಗ್ಲೆಂಡ್ ಪ್ರಚಂಡ ಶಕ್ತಿಯ ಕವಚರಕ್ಷಿತ ತುಪಾಕಿಯುಕ್ತ ವಾಹನಗಳನ್ನು ಅತ್ಯಂತ ಗುಪ್ತವಾಗಿ ರೂಪಿಸುತ್ತಿತ್ತು. ಈ ವಾಹನಗಳನ್ನು ಯುರೋಪಿನ ಯುದ್ಧರಂಗದಲ್ಲಿ ಏಕಾಏಕಿ ಜರ್ಮನರ ವಿರುದ್ಧ ಬಳಸಿ ಅವರನ್ನು ಆಶ್ಚರ್ಯಚಕಿತರಾಗಿ ಮಾಡಿ ಕಂಗೆಡಿಸುವುದು ಉದ್ದೇಶವಾಗಿತ್ತು. ಶತ್ರುಗಳ ಬೇಹುಗಾರರನ್ನು ತಪ್ಪು ದಾರಿಗೆಳೆಯುವುದಕ್ಕಾಗಿಯೇ ಈ ವಾಹನಕ್ಕೆ ಅದರ ತಯಾರಿ ಹಂತದಲ್ಲಿ **ಟ್ಯಾಂಕ್** ಎಂಬ ತೀರ ಸರಳ ನಿರುಪದ್ರವಿಯಾಗಿ ತೋರುವ ಹೆಸರನ್ನು ಕೊಟ್ಟರು. ಯುದ್ಧದ ಅಂತಿಮ ವಿಜಯಕ್ಕೆ ಈ ವಾಹನ ಒಂದು ಮುಖ್ಯ ಕಾರಣವಾಗಿ ತನ್ನ ನಿರೀಕ್ಷೆಯನ್ನು ಪೂರೈಸಿತೆನ್ನಿ. ಜರ್ಮನರು ಈ ನಿರುಪದ್ರವಿ ಹೆಸರಿನಿಂದ ಮೋಸ ಹೋಗಿ ಇದರ ಬಗ್ಗೆ ಹೆಚ್ಚು ಮಾಹಿತಿ ಕಲೆ ಹಾಕುವುದನ್ನು ಅಸಡ್ಡೆ ಮಾಡಿದರು.

ನಮ್ಮ ಪ್ರಾಚೀನ ಪುರಾಣಾದಿಗಳಲ್ಲಿ ಅಗ್ನ್ಯಸ್ತ್ರಗಳ ಮಾತೇನೋ ಇದೆ. ಆದರೆ ಸಮರದಲ್ಲಿ ಸಿಡಿಮದ್ದಿನಿಂದ ಪ್ರಚೋದಿತವಾದ ತೋಪು, ತುಪಾಕಿ ಮೊದಲಾದವುಗಳ ಬಳಕೆ

ನಮ್ಮನ್ನು ಆಕ್ರಮಿಸಿದ ಪರಕೀಯರ ಮೂಲಕವೇ ಭಾರತದಲ್ಲಿ ಪ್ರಾರಂಭವಾದದ್ದು. ಸಿಡಿಮದ್ದಿನ ಜನಕರು ಚೀನೀಯರಾದರೂ ಯುದ್ಧದಲ್ಲಿ ಅದನ್ನು ಬಹುವಾಗಿ ಬಳಸಲು ಪ್ರಾರಂಭಿಸಿದವರು ತುರ್ಕರೆಂದು **ತೋಪು** ಎಂಬ ಶಬ್ದ ನಮಗೆ ತಿಳಿಸುತ್ತದೆ. ಅದು ತುರ್ಕಿ ಪದ (ತುರ್ಕಿ **ತೋಫ್**) **ತುಪಾಕಿ** ಎಂಬ ಇನ್ನೊಂದು ಪದವೂ ತುರ್ಕಿಯೇ (**ತುಪಕ್**). **ಬಂದೂಕ್** ಮಾತ್ರ ಅರಬ್ಬೀ ಪದ. (೭೪ ನೋಡಿ)

ಈ ಅಗ್ನ್ಯಸ್ತ್ರದ ವಿದ್ಯೆಯಲ್ಲಿ ಮುಸ್ಲಿಮರನ್ನು ಯುರೋಪಿಯನ್ನರು ಹಿಂದೆ ಹಾಕಿದ್ದನ್ನು **ಫಿರಂಗಿ** ಪದ ಸೂಚಿಸುತ್ತದೆ. **ಫಿರಂಗಿ** ಎಂಬುದು ಮೂಲತಃ **ಫ್ರೆಂಚ**ರನ್ನು ನಿರ್ದೇಶಿಸುವ **ಫ್ರಾಂಕ್** ಪದದ ಅರಬ್ಬೀ ರೂಪ. (ಪಾರಸಿಕದಲ್ಲಿ **ಫರಂಗ್.**) ಕಾಲಾಂತರದಲ್ಲಿ ಫಿರಂಗಿ ಎಂಬುದು ಎಲ್ಲ ಯುರೋಪಿಯನ್ನರಿಗೂ ಅನ್ವಯವಾಯಿತು. ಟಿಪ್ಪೂ ಸುಲ್ತಾನನನ್ನೊಳಗೊಂಡು ಅನೇಕ ಹಿಂದೀ ರಾಜರಿಗೂ ನವಾಬರಿಗೂ ಫ್ರೆಂಚ್ ತಜ್ಞರು ಸಲಹೆಗಾರರಾದರೆಂದು ಇಲ್ಲಿ ನೆನೆದುಕೊಳ್ಳಬಹುದು.

ಈ **ಫಿರಂಗಿ ಫರಂಗಿ** ಭಾರತದಲ್ಲಿ ಇನ್ನೂ ಕೆಲ ಒಳ್ಳೇ ಮತ್ತು ಕೆಟ್ಟ ಪದಾರ್ಥಗಳಿಗೆ ಹೆಸರು ಕೊಟ್ಟಿದೆ. **ಫರಂಗಿ** ಹಣ್ಣುಗಳು (ಕೆಲವೆಡೆ **ಪಪಾಯಿ,** ಕೆಲವೆಡೆ **ಅನಾನಸು**) ಪೋರ್ಚುಗೀಸರು ಈ ದೇಶಕ್ಕೆ ತಂದವುಗಳಾದರೂ ಒಟ್ಟು ಯುರೋಪಿಯನ್ನರನ್ನು ಸೂಚಿಸುವ ಫರಂಗಿ ಪದದಿಂದ ಪ್ರಸಿದ್ಧವಾಗಿವೆ. ಆ ಹಣ್ಣುಗಳನ್ನು ತಂದದ್ದು ಯುರೋಪಿನಿಂದಲ್ಲ, ಅಮೇರಿಕದ ಕಡೆಯಿಂದ ಎಂಬ ಮಾತು ಬೇರೆ. ಹಾಗೆಯೇ **ಪರಂಗಿ ರೋಗ**ವನ್ನು (ಸಿಫಿಲಿಸ್) ಇನ್ನೂ ಹಲವು ದೇಶಗಳಲ್ಲಿ ಹೇಗೋ ಹಾಗೆಯೇ ಭಾರತದಲ್ಲಿ ಹಬ್ಬಿಸಿದವರೂ ಬಿಳಿಯರೆಂಬುದನ್ನು ಆ ಶಬ್ದ ತಿಳಿಸುತ್ತದೆ.

ಇನ್ನು **ಪರಂಗಿ** ರೋಗದ ಇಂಗ್ಲೀಷ್ ಹೆಸರಾದ **ಸಿಫಿಲಿಸ್** ಕೂಡ ವಿಚಿತ್ರ ಕಾರಣದಿಂದ ತನ್ನ ನಾಮಕರಣವನ್ನು ಹೊಂದಿದೆ. ಯುರೋಪಿನಲ್ಲಿ ೧೫–೧೬ನೇ ಶತಮಾನಗಳಲ್ಲಿ ವಿಷದಂತೆ ಹಬ್ಬಿದ್ದ ಈ ರೋಗಕ್ಕೆ ೧೫೩೦ ರಲ್ಲಿ ನಿರ್ಮಿತವಾದ ಪ್ರಕಾಸ್ಟ ರೋಮಿನ ಒಂದು ಲ್ಯಾಟಿನ್ ಕಾವ್ಯದ ನಾಯಕನಿಂದ ಹೆಸರು ಬಂದದ್ದು. ಅವನ ಹೆಸರು **ಸಿಫಿಲಿಸ್.** ಅವನಿಗೆ ಈ ರೋಗ ತಗುಲಿತ್ತೆಂಬುದು ಕಾವ್ಯದ ಕಥೆಯಾದ್ದರಿಂದ ಹೆಸರಿಗಾಗಿ ತವಕಿಸುತ್ತಿದ್ದ ರೋಗಕ್ಕೆ ಅವನ ಹೆಸರೇ ಅಂಟಿಕೊಂಡಿತು.

ಕಚೇರಿಗಳಲ್ಲಿ ಸಾಮಾನ್ಯವಾಗಿ ಕಣ್ಣಿಗೆ ಬೀಳುವ ಪರಿಚಾರಕರು **ಚಪರಾಸಿ, ಪೇದೆ, ಪಟ್ಟೇವಾಲಾ, ಪಿಯೋನ್** ಇತ್ಯಾದಿಗಳು. (ಅವರಲ್ಲಿ ಕೆಲವರು ಈಗ **ಅಟೆಂಡರ್** ಎಂಬ ಇಂಗ್ಲೀಷ್ ಹೆಸರಿಗೆ ಬಡತಿ ಹೊಂದಿದ್ದಾರೆ.) ಈ ಹೆಸರುಗಳಲ್ಲಿ ಕೆಲವು ವಿದೇಶೀ ಮುದ್ರೆ ಧರಿಸಿ ಭಾರತೀಯ ಹೆಸರುಗಳನ್ನು ಮರೆಸಿವೆ. **ಚಪರಾಸಿ** ಪಾರಸಿಕ ಪದ. **ಚಪರಾಸ್** ಎಂಬುದು **ಚಪ್** ಮತ್ತು **ರಾಸ್ತ್** (ಎಡ ಮತ್ತು ಬಲ) ಎಂಬವುಗಳ ಸಮಾಸ ಪದವಾದರೂ ಅದರರ್ಥ ಮಾಲಿಕ ಅಥವಾ ಕಚೇರಿಯ ಹೆಸರು ಕೆತ್ತಿದ ಚಿಕ್ಕ ಹಿತ್ತಾಳೆ ಫಲಕವನ್ನು ತಗುಲಿಸಿದ ಪಟ್ಟಿ ಎಂದು ; ಅದನ್ನು ಧರಿಸಿದವನು **ಚಪರಾಸಿ.** ಅದರದೇ ದೇಶಿ ಅವತಾರ **ಪಟ್ಟಾವಾಲಾ** (ಪಟ್ಟೆಯುಳ್ಳವ). ಹಿಂದೆ ಅರಮನೆಯ ಅಂತಃಪುರದ ದ್ವಾರಪಾಲನಿಗೆ **ಕಂಚುಕಿ** ಎಂಬ ಹೆಸರಿತ್ತು. ಅವನಿಗೂ ಚಪರಾಸಿಯಂತೆ ತಾನು ಧರಿಸಿದ ವೇಷದಿಂದ ಹೆಸರು ಬಂದಿತ್ತು. **ಕಂಚುಕ** ಎಂದರೆ ಕುಪ್ಪಸದಂಥ ಅಂಗಿ. **ಪೇದೆ** ಎಂಬುದು ಉರ್ದು **ಪ್ಯಾದಾ** ಪಾರಸಿಕ **ಪಿಯಾದಃ**ದ ಕನ್ನಡದ ರೂಪ. ಇದು ಸಂಸ್ಕೃತ **ಪದಾತಿ,** ಕನ್ನಡ **ಕಾಲಾಳು**ವಿಗೆ

ಸಮಾನ ಪದ. ಹೆಸರಿಗೆ ತಕ್ಕಂತೆ ಪರಿಚರ್ಯೆಗಾಗಿ ಅತ್ತಿಂದಿತ್ತ ಓಡಾಡುವವನು ಆತ. **ಪಿಯೋನ್** ಎಂಬುದಕ್ಕೂ ಇದೇ ಅರ್ಥ. ಸ್ಪಾನಿಶ್ **ಪಿಯೋನ್**, ಪೋರ್ಚುಗೀಸ್ **ಪಿಯಾಂವ್** ಇವು ಲ್ಯಾಟಿನ್ನಿನ **ಪೇಸ್, ಪೇದಿಸ್**ನ (= ಪಾದ) ಅಪಭ್ರಂಶಗಳು. ಅಲ್ಲಿಂದ ಇಂಗ್ಲೀಷಿಗೆ ಸಾಗಿದಾಗ ಇವರೆಲ್ಲರೂ ಸಂದೇಶ ಅಥವಾ ಆದೇಶವಾಹಕರಾದ ಕಾಲಾಳುಗಳು; ಮೂಲತಃ ಸೈನ್ಯದಲ್ಲಿಯ ನೆಲದಲ್ಲಿ ನಿಂತು ಹೋರಾಡುವವರು. ಕಚೇರಿಗಳಿಗೆ ಇವರ ಭರ್ತಿಯಾಯಿತಷ್ಟೆ. ಕರ್ನಾಟಕದಲ್ಲಿ ಇವರನ್ನು ಹಿಂದೆ **ಪಾಯಿಕ** ಎಂದದ್ದುಂಟು. (ಪಾಯಿಕ = ಪಾದಿಕ).

೮೧

**ಊದುಬತ್ತಿ** ನಮ್ಮ ಧಾರ್ಮಿಕ ಮತ್ತು ಲೌಕಿಕ ಸಮಾರಂಭಗಳಲ್ಲಿ ಎಷ್ಟು ಸಾಮಾನ್ಯವಾಗಿದೆಯೆಂದರೆ ಆ ಶಬ್ದ ಪರಕೀಯ ಇರಬಹುದೆಂಬುದು ನಮಗೆ ಹೊಳೆಯಲಿಕ್ಕೇ ಇಲ್ಲ. ಆದರೂ **ಊದ್** ಶಬ್ದ ಅರಬ್ಬೀ ಮೂಲದ್ದಾಗಿದೆ. **ಬತ್ತಿ** ಮಾತ್ರ ಭಾರತೀಯ. ಸಂಸ್ಕೃತದ **ವರ್ತಿ**ಯ ತದ್ಭವ ಅದು. **ಊದ್** ಎಂಬುದು ಅರಬಿ ಭಾಷೆಯಲ್ಲಿ **ಅಗರು** ಎಂಬ ಸುಗಂಧ ವೃಕ್ಷದ ಹೆಸರು. **ಅಗರು, ಅಗುರು** ಎಂಬ ರೂಪದಲ್ಲಿ ಸಂಸ್ಕೃತದಲ್ಲಿದ್ದು ಅದರ ಮೂಲ ದ್ರಾವಿಡ ಭಾಷೆಯಲ್ಲಿದೆ ಎಂದು ಭಾವಿಸಲಾಗಿದೆ. ಹೀಗೆ ಊದುಬತ್ತಿ ಅಥವಾ ಊದಿನ ಕಡ್ಡಿಗಿಂತ **ಅಗರು ಬತ್ತಿ** ಹೆಚ್ಚು ಭಾರತೀಯವಾಗಿದೆ. ದ್ರಾವಿಡದಲ್ಲಿ **ಅಗಿಲು** ಎಂಬ ರೂಪವೂ ಇದೆ. **ಅಗರು** ೧೦ನೇ ಶತಮಾನದಿಂದಲೇ (ಪಂಪ) ಕನ್ನಡ ಸಾಹಿತ್ಯದಲ್ಲಿದೆ. ಕರಿ ಜಾತಿಯ ಗಂಧದ ಮರಕ್ಕೆ **ಅಗಿಲು ಗಂಧ** ಎಂಬ ಹೆಸರೂ ಇದೆ. **ಅಗಿಲ್** ಎಂಬುದು ಕನ್ನಡದಲ್ಲಿ ಬರೇ ಪರಿಮಳ ಎಂಬರ್ಥದಲ್ಲಿಯೂ ಪ್ರಯೋಗದಲ್ಲಿದ್ದು ೧೨ನೇ ಶತಮಾನದ "ಕಾವ್ಯಾವಲೋಕನ" ಗ್ರಂಥದಲ್ಲಿ ಪರಿಮಳರಹಿತ ಎಂಬರ್ಥದಲ್ಲಿ **ಅಗಿಲಿಲಿ** ಉದಾಹೃತವಾಗಿದೆ. **ಅಗರು** ಶಬ್ದ ಉತ್ತರ ದ್ರಾವಿಡ ಭಾಷೆಯಾದ ಪರ್ಜಿಯಿಂದ ಸಂಸ್ಕೃತದಲ್ಲಿ ಪ್ರವೇಶಿಸಿದಂತೆ ಕಾಣುತ್ತದೆ. ಈ ಅಗರು ವೃಕ್ಷ ಭಾರತದ್ದೇ ಆಗಿದೆಯಾದ್ದರಿಂದ ಇದರ ವೈಜ್ಞಾನಿಕ ಹೆಸರಾದ agallochaದಲ್ಲಿ ಅಗಿಲಿನ ಪ್ರತಿಧ್ವನಿ ಇದೆ. ಅಷ್ಟು ಮಾತ್ರವಲ್ಲ ಇಂಗ್ಲೀಷಿನ **ಈಗ್‌ಲ್‌ವುಡ್** (eaglewood) ಎಂಬ ಪರಿಮಳ ವೃಕ್ಷದ ಹೆಸರು ಕೂಡ ಲ್ಯಾಟಿನ್ನಿನ aquilla ಮೂಲಕ **ಅಗಿಲಿ**ನಿಂದಲೇ ಸ್ಫೂರ್ತವಾಗಿರಬೇಕೆಂದು ಇಂಗ್ಲೀಷ್ ಕೋಶಗಳಿಂದ ಸೂಚಿತವಾಗುತ್ತದೆ.

ಹಳೆಯ ಕನ್ನಡ ಕೋಶಗಳಲ್ಲಿ ಈ **ಊದಾ** ಬಗ್ಗೆ ಸ್ವಲ್ಪ ಗೊಂದಲವಿದೆ. ಅವುಗಳಲ್ಲಿ ಕೆಲವು **ಊದಾ**ವನ್ನು **ಲೋಬಾನ**ಕ್ಕೆ ಪರ್ಯಾಯವಾಗಿ ಕೊಡುತ್ತವೆ. ಆದರೆ ಉರ್ದು ಕೋಶಗಳು **ಊದಾ** ಎಂದರೆ **ಅಗರಿ**ಗೆ ಅರಬ್ಬಿ ಹೆಸರೆಂದೂ **ಲೋಬಾನ** ಎಂಬುದು ಅರಬ್ಬೀ ದೇಶದಲ್ಲೇ ಬೆಳೆಯುವ ಪರಿಮಳ ದ್ರವ್ಯದ ಹೆಸರೆಂದೂ ಹೇಳುತ್ತವೆ. (**ಲೋಬಾನ** ಬಗ್ಗೆ ೩೯ ನೋಡಿ). ಸುಗಂಧ ದ್ರವ್ಯಗಳ ವ್ಯಾಪಾರ ಮಧ್ಯ ಯುಗದಲ್ಲಿ ಅರಬ್ಬೀ ವರ್ತಕರ ಕೈಗೆ ಹೋದದ್ದರಿಂದ ಈ ಗೊಂದಲ ಹುಟ್ಟಿರಬಹುದು. ಊದುಬತ್ತಿ ಕನ್ನಡದಲ್ಲಿ ತೀರ ಈಚೆಗಿನದು.

ಗಾಂಧೀಜಿಯಿಂದಾಗಿ **ಚರಕ, ಚರಖಾ** ನಮ್ಮ ಇತಿಹಾಸದಲ್ಲಿ ಚಿರಂತನವಾಗಿ ಬಿಟ್ಟದ್ದು

**ಚರಖಾ** ಎಂಬುದು ಪಾರಸಿಕ (ಚರ್ಖಹ್) ಶಬ್ದವೆಂಬ ಅಂಶ ನಮಗೆ ಆಶ್ಚರ್ಯ ತರಬಹುದು. ಮೂಲತಃ ಇದು ಸಂಸ್ಕೃತದ **ಚಕ್ರಕ್ಕೆ** ಸಂವಾದಿಯಾದ ಪ್ರಾಕ್ ಆರ್ಯಪದದಿಂದ ಹೊರಟಿದ್ದರೂ ಹತ್ತಿ ನೂಲು ಮತ್ತು ಹತ್ತಿ ಬಟ್ಟೆ ನೇಯುವ ಕಲೆ ಬಹುಶಃ ಭಾರತದಲ್ಲೇ ತಲೆಯೆತ್ತಿರಬಹುದಾದರೂ ನೂಲು ತೆಗೆಯುವ ಚಕ್ರಕ್ಕೆ ಪಾರಸಿಕ ಪದ ಬಳಕೆಗೆ ಬರಲು ಮುಸ್ಲಿಮ್ ಆಳಿಕೆ ಕಾರಣ. ಆ ಕಾಲದಲ್ಲಿ ನೇಯ್ಗೆ ಉದ್ಯೋಗದಲ್ಲಿದ್ದ ಅಸಂಖ್ಯ ಜನರು ಇಸ್ಲಾಮ್ ಧರ್ಮ ಸ್ವೀಕರಿಸಿದ್ದರು.

**ಚಾಕು** ಮತ್ತು **ಚೂರಿಗಳಲ್ಲಿ** ಎರಡನೆಯದು ಭಾರತೀಯ, ಮೊದಲನೆಯದು ತುರ್ಕಿ. **ಚೂರಿಗೆ** ಹಿಂದಿ **ಛುರೀ** ಮೂಲ; ಅದಕ್ಕೆ ಸಂಸ್ಕೃತ **ಕ್ಷುರ** ಮೂಲ. ಕ್ಷುರ ಎಂದರೆ ಕೊಯ್ಯುವ ಆಯುಧ. ''ಕ್ಷುರ ಸ್ಯ ಧಾರಾ ನಿಶಿತಾ'' ಎಂದು ವೈದಿಕ ಸಾಹಿತ್ಯದಲ್ಲೇ ಬರುತ್ತದೆ. ಕ್ಷುರದಿಂದ ಮಾಡುವ ಕೆಲಸ ಕ್ಷೌರ ; ಅದೇ **ಚೌಲ** (ಪ್ರಥಮತಃ ಕೂದಲು ತೆಗೆಯುವ ಸಮಾರಂಭ) ; ಅದೇ ಉತ್ತರ ಕನಾರ್ಟಕದ **ಜವಳ.**

**ಚಕಮಕಿ** ಎಂಬುದು ಈಗ **ತಿಕ್ಕಾಟ** ಎಂಬರ್ಥದಲ್ಲಿ ಪ್ರಚಾರದಲ್ಲಿದೆ. ಮೂಲತಃ ಇದು ಬೆಂಕಿ ಕಡ್ಡಿ ಬರುವ ಮುಂಚೆ ಬೆಂಕಿ ಹೊತ್ತಿಸುವುದಕ್ಕೆ ಬಳಸುತ್ತಿದ್ದ ಬಿರುಸು ಕಲ್ಲು. ಪಾರಸಿಕ ಭಾಷೆಯಿಂದ ಇದು ಬಂತು. **ಚಕ್‌ಮಕ್** ಅಥವಾ **ಚಕ್‌ಮಾಕ್** ಎಂಬ ಪದ ಮೂಲತಃ ತುರ್ಕಿ ಭಾಷೆಯದೆಂದು ಸುನೀತಿಕುಮಾರ ಚಟರ್ಜಿ ಹೇಳುತ್ತಾರೆ. ನಮ್ಮ ದೇಶದಲ್ಲಿ ಪ್ರಾಚೀನ ಕಾಲದಲ್ಲಿ ಬೆಂಕಿ ಮಾಡುವುದಕ್ಕೆ ಎರಡು ಗಟ್ಟಿ ಕಟ್ಟಿಗೆಯ ತುಂಡುಗಳನ್ನು ಬಳಸುತ್ತಿದ್ದು ಅವಕ್ಕೆ **ಅರಣಿ** ಎಂಬ ಹೆಸರಿತ್ತು. ಇದು ವೇದಕಾಲದಷ್ಟು ಹಳೆಯ ಪದವಾಗಿದ್ದರೂ ಬಹುಶಃ ದ್ರಾವಿಡ ಮೂಲದ್ದೆಂದು ಸುನೀತಿ ಚಟರ್ಜಿಯವರ ಊಹೆ. (ಅರೆ, ಒರೆ = ತಿಕ್ಕು, ಕಡೆ). **ಅರಣಿ, ಚಕಮಕಿ** ಇವೆರಡರಿಂದಲೂ ಕಡೆದು ಅಥವಾ ತಿಕ್ಕಿ ಘರ್ಷಣೆಯಿಂದ ಕಿಡಿ ಹುಟ್ಟಿಸುವುದರಿಂದ ಚಕಮಕಿ ಎಂಬುದಕ್ಕೆ **ಘರ್ಷಣೆ, ತಿಕ್ಕಾಟ (ಮಾತಿನ ಚಕಮಕಿ)** ಎಂಬ ಲಕ್ಷಣಾರ್ಥ ಬಂತು.

**ಟೋಪಿ, ಟೊಪ್ಪಿಗೆ, ಟೊಪ್ಪಿ** ಎಂಬ ಪದಗಳನ್ನು ನೋಡಿದರೆ ಇವು ವಿದೇಶದಿಂದ ಬಂದಿರಬಹುದೇ ಎಂಬ ಸಂಶಯ ಹುಟ್ಟಬಹುದು. ಆದರೆ ಇದು ಹುಡುಕಲು ಸಾಧ್ಯವಿರುವಷ್ಟು ಹಿಂದೆ ಹೋದರೂ ಭಾರತೀಯ ಪದವೇ. **ತೋಪಿ, ತೊಪ್ಪಿಗೆ,** ಇತ್ಯಾದಿ ತಕಾರಯುಕ್ತ ರೂಪಗಳೂ ಇವೆ. ಕನ್ನಡದಲ್ಲಿ ಬಸವದೇವರಾಜ ರಗಳೆ (ಹರಿಹರ), ಶಬ್ದಮಣಿ ದರ್ಪಣ ಮೊದಲಾದವಲ್ಲಿ **ಟೋಪಿ** ಒಂದಲ್ಲ ಒಂದು ರೂಪದಲ್ಲಿ ಬರುವುದರಿಂದ ಇದಕ್ಕೆ ಎಂಟು ನೂರು ವರ್ಷಗಳಷ್ಟು ಪ್ರಾಚೀನತೆ ಇದೆ. **ಟೋಪಿಆ** ಎಂಬ ಪ್ರಾಕೃತ ರೂಪವೂ ಇದಕ್ಕಿದೆ. ಕೋಶಗಳಲ್ಲಿ ಇದಕ್ಕೆ **ಕುಲಾವಿ** ಎಂಬ ಸಮಾನ ಪದವಿದೆ. ಇಂಗ್ಲೀಷಿನಲ್ಲಿ topi, topee ಎಂದು ಈ ಪದವಿದೆ. ಇದಕ್ಕೆ ಹಿಂದೀ ಮೂಲವೆಂದು ಇಂಗ್ಲೀಷ್ ಕೋಶ ಹೇಳಿದರೂ ಅದು ಪೋರ್ಚುಗೀಸ್ topo = top = ಮೇಲ್ಭಾಗ, ತುದಿ ಎಂಬುದರಿಂದ ಬಂದಿರಬಹುದೇ ಎಂಬ ಅನುಮಾನ ವ್ಯಕ್ತಪಡಿಸಲಾಗಿದೆ. ಆದರೆ ಭಾರತದಲ್ಲಿ ಪೋರ್ಚುಗೀಸರು ಬರುವ ಮೊದಲೇ ಈ ಶಬ್ದ ಬಳಕೆಯಲ್ಲಿದ್ದುದರಿಂದ ಹಿಂದಿಗೆ ಪೋರ್ಚುಗೀಸಿನಿಂದ ಇದು ಬರುವ ಸಂಭವವಿಲ್ಲ.

**ಮೋಸ ಮಾಡು** ಎಂಬರ್ಥದಲ್ಲಿ **ಟೋಪಿ ಹಾಕು, ಮೋಸ ಹೋಗು** ಎಂಬರ್ಥದಲ್ಲಿ **ಟೋಪಿ ಬೀಳು** ಇಂಥ ಪ್ರಯೋಗಗಳು ಈಚೆಗಿನ ಹೊಸಗನ್ನಡದಲ್ಲಿ ತಾನೇ ತಲೆಯೆತ್ತಿದವು.

ಇದಕ್ಕೆ ಮೂಲ ಎಲ್ಲಿಂದ ಎಂದು ಪತ್ತೆ ಹಚ್ಚುವುದು ಕಷ್ಟ. ಇಂಗ್ಲೀಷಿನಲ್ಲಿ capಗೆ ಅಥವಾ hatಗೆ ಹೊಂದಿ ಇಂಥ ವ್ಯಂಗ್ಯ ಅರ್ಥವಿಲ್ಲ. Cap ಎಂಬುದಕ್ಕೆ ಮೀರಿಸು ಎಂಬೊಂದು ಅರ್ಥವಿದೆಯಷ್ಟೇ. ಸರ್ಕಸ್ ಅಥವಾ ಪ್ರಹಸನಗಳಲ್ಲಿ ಪೆದ್ದನಾಗಿ ವರ್ತಿಸುವ ಹಾಸ್ಯಗಾರನು ಧರಿಸುವ ವಿಚಿತ್ರ ಟೊಪ್ಪಿಗೆಗೆ ಫೂಲ್ಸ್ ಕ್ಯಾಪ್ (FoolsCap) ಎಂಬ ಹೆಸರಿದೆ. ಇದರ ಸಾಮ್ಯದಿಂದ **ಟೊಪ್ಪಿಗೆ ಬೀಳು** ಎಂಬುದು ಚಲಾವಣೆಗೆ ಬಂದಿರಲೂಬಹುದು. ಇನ್ನೊಂದು ಸಾಧ್ಯತೆ ಇದೆ. ಬಂಗಾಲಿಯಲ್ಲಿ **ಟೋಪ್** ಎಂದರೆ ಗಾಳದ ಕೊಕ್ಕೆ. **ಟೋಪ್ ಖಾವಾ** ಎಂದರೆ **ಗಾಳ ನುಂಗುವುದು** ಅರ್ಥಾತ್ ಮೋಸಹೋಗುವುದು. ಬಂಗಾಲಿ ಪ್ರಭಾವ ಆಧುನಿಕ ಸಾಹಿತ್ಯದ ಮೇಲೆ ಆಗುತ್ತಿದ್ದ ಸಮಯದಲ್ಲಿ ಈ ಬಂಗಾಲಿ ಟೋಪ್, ಇಂಗ್ಲೀಷಿನ ಕ್ಯಾಪ್ ಮತ್ತು ದೇಶಿ ಟೋಪಿ ಎಲ್ಲದರ ವ್ಯಂಗ್ಯಾರ್ಥ ಮಿಶ್ರಣವಾಗಿ **ಟೋಪಿ ಹಾಕುವುದು** ಹುಟ್ಟಿದ್ದರೂ ಇರಬಹುದು.

೮೨

ಹತ್ತು ಜನರಿಂದ ಯಾವುದಾದರೂ ಕೆಲಸಕ್ಕೆ ಹಣ ಕೂಡಿಸುವುದಕ್ಕೆ **ಚಂದಾ** ಎನ್ನುತ್ತೇವೆ. ಹೀಗೆ ಪತ್ರಿಕೆಗಳಿಗೆ ನಿಶ್ಚಿತ ಅವಧಿಗಾಗಿ ಗೊತ್ತುಪಡಿಸಿದ ಮೌಲ್ಯ **ಚಂದಾ–ದರ** ಎನ್ನಿಸುತ್ತದೆ. **ಚಂದಾ** ಕೊಟ್ಟು ಪತ್ರಿಕೆಯ ಗ್ರಾಹಕನಾಗುವವನು **ಚಂದಾದಾರ**. ಇದು ದೇಶ್ಯ ಪದವಲ್ಲ. ಪಾರಸಿಕ ಭಾಷೆಯಲ್ಲಿ **ಚಂದ್** ಎಂದರೆ ಸ್ವಲ್ಪ; **ಚಂದಃ** ಎಂದರೆ ಸ್ವಲ್ಪ ಸ್ವಲ್ಪವಾಗಿ ಬೇರೆ ಬೇರೆಯವರಿಂದ ಕಲೆ ಹಾಕಿದ್ದು. ಅದೇ ಉರ್ದುವಿನಲ್ಲಿ **ಚಂದಾ** ಆಗಿ ತಮಿಳು, ಮಲಯಾಳಮ್, ಕನ್ನಡಾದಿಯಾಗಿ ದಕ್ಷಿಣದ ಭಾಷೆಗಳಲ್ಲಿ ಪತ್ರಿಕೆಗಳನ್ನು ತರಿಸುವುದಕ್ಕೆ ನಿಶ್ಚಿತ ಕಾಲಕ್ಕೆ ಕೊಡಬೇಕಾದ ಮೌಲ್ಯವೆಂಬ ವಿಶೇಷಾರ್ಥದಲ್ಲಿ ಪ್ರಚಲಿತವಾಗಿದೆ. ಕನ್ನಡದಲ್ಲಿ ಕೂಡ ಇದು ಕಳೆದ ಶತಮಾನದ ಕೊನೆ ಕೊನೆಗಷ್ಟೇ ಬಂದ ಪದ. **ವಂತಿಗೆ** ಎಂಬರ್ಥದಲ್ಲಿಯೂ ಇದು ಧಾರಾಳವಾಗಿ ಬಳಕೆಯಲ್ಲಿದೆ; ಚಂದಾ ಕೂಡಿಸಿ ಮದುವೆ ಮಾಡಿದ ಎಂದಂತೆ.

ಸುಮಾರು ಇದೇ ಅರ್ಥದಲ್ಲಿರುವ ಇನ್ನೊಂದು ಪದ **ವಂತಿಗೆ**. ಕರಾವಳಿ ಕರ್ನಾಟಕದಲ್ಲಿ **ವರಾಡ** ಎಂಬ ಶಬ್ದವೂ ಇದೆ. ಆದರೆ ಪತ್ರಿಕೆಗಳ ನಿಯತಕಾಲಿಕ ಮೌಲ್ಯಕ್ಕೆ ಈ ಪದಗಳು ಬಳಕೆಯಲ್ಲಿಲ್ಲ – ಅಷ್ಟೇ. ತೆಲುಗಿನಲ್ಲಿ **ಒಂತು**, **ವಂತು** ಎಂದರೆ ಅಂಶ, ಭಾಗ, ಪಾಲು, ಸರದಿ ಎಂಬರ್ಥ ; ಕನ್ನಡದಲ್ಲಿ ಕೂಡ ವಂತಿ ಇದೇ ಅರ್ಥದಲ್ಲಿ ಹಳೇ ಮೈಸೂರಲ್ಲಿ ಇದೆ. ಸಂಸ್ಕೃತದಲ್ಲಿ **ವಂಟ್** ಎಂಬ ಧಾತು ಹಂಚು, ಪಾಲುಮಾಡು ಎಂಬರ್ಥದಲ್ಲಿ ಚಾಣಕ್ಯನ ಕಾಲದಲ್ಲಿಯೇ ಪ್ರಚುರವಾಗಿತ್ತು. ಆದ್ದರಿಂದಲೇ ಹಿಂದೀ **ಬಾಂಟ್** (= ಹಂಚು) ಕನ್ನಡದಲ್ಲಿ **ಬಟವಾಡೆ** (ಉದಾ : ಟಪಾಲು ಬಟವಾಡೆ) ಆಗಿದೆ. ಇದನ್ನು **ಪಡೆ** ಎಂಬರ್ಥದ **ಪೊಂದು**, **ಹೊಂದುವಿಗೆ** ಎಮಿನೋ ಮತ್ತು ಬರೋಸ್ ಜೋಡಿಸಿದ್ದಾರೆ. ನಮ್ಮ ನಮ್ಮ **ಪಾಲಿಗೆ** ಬಂದಷ್ಟನ್ನು ನಮ್ಮ **ಸರದಿ** ಬಂದಾಗ ಕೊಡುವುದು **ವಂತಿಗೆ**ಯೆನಿಸುತ್ತದೆ. ಆದರೆ ತುಳುವಿನಲ್ಲಿ **ವಂತ**, **ವಂದ** ಎಂದರೆ ಸ್ವಲ್ಪ ಎಂಬರ್ಥವಿದೆ. ಇದೂ **ಅಂಶ** ಎಂಬರ್ಥದಿಂದಲೇ ಕವಲೊಡೆದ ಅರ್ಥವಾಗಿರಬಹುದು. ತುಳುವಿನ ಅರ್ಥವನ್ನು ನೋಡಿದರೆ **ವಂತಿಗೆ**ಯೆಂಬುದು ಪಾರಸಿಕ **ಚಂದಃ**ಗೆ ಅರ್ಥ ಸಂಪಾದನೆಯ ಕ್ರಮದಲ್ಲಿ ಹತ್ತಿರ ಬರುತ್ತದೆ.

ಆ ಪ್ರಕಾರ ಸ್ವಲ್ಪ ಸ್ವಲ್ಪ ಕೂಡಿಸಿದ್ದೇ **ವಂತಿಗೆ**ಯಾಗುತ್ತದಲ್ಲವೆ ?

ಕರಾವಳಿಯಲ್ಲಿ ಪ್ರಚುರವಾದ ವರಾಡ ಎಂಬ ಪದ ನೇರವಾಗಿ ಸಂಸ್ಕೃತದ **ವರಾಟ**ದ ಒಂದು ರೂಪವಾಗಿರುವಂತಿದೆ. **ವರಾಟ** ಎಂದರೆ ಕವಡೆ; ಅದು ಒಂದು ಕಾಲದಲ್ಲಿ ಅತ್ಯಲ್ಪ ಬೆಲೆಯ ನಾಣ್ಯದಂತೆ ಬಳಸುತ್ತಿದ್ದದ್ದು. ಸ್ವಲ್ಪ ಸ್ವಲ್ಪವಾಗಿ ಕಲೆ ಹಾಕಿದ್ದೆಂಬುದರಿಂದ **ಚಂದಾ ವರಾಟ**ವೆನಿಸಿರಬಹುದು. ಆದರೆ ತೆಲುಗಿನಲ್ಲಿ **ಒರಗಾ, ವಾರಗಾ** ಎಂದರೆ ಬದಿ, ಅಂಚು ಎಂಬರ್ಥಗಳೊಡನೆ (ಕನ್ನಡ ಒರೆ), ಸ್ವಲ್ಪ, ಅತ್ಯಲ್ಪ ಎಂಬರ್ಥವೂ ಇದೆ. **ಅಂಚು** ಎಂದರೆ ಒಂದು ಪದಾರ್ಥದ ಅಲ್ಪಾಂಶವಲ್ಲವೆ ? (ಅಂಶ = ಅಂಚು) ಆ ರೀತಿಯಲ್ಲಿಯೂ **ವರಾಡ** ವಂತಿಗೆಯೆಂಬರ್ಥ ಪಡೆದಿರಬಹುದು.

ಉತ್ತರ ಕರ್ನಾಟಕ ಮಹಾರಾಷ್ಟ್ರಗಳಲ್ಲಿ ಚಂದಾ ಎಂಬರ್ಥದಲ್ಲಿ ವಿಸ್ತಾರವಾಗಿ ಬಳಕೆಯಲ್ಲಿರುವ ಇನ್ನೊಂದು ಶಬ್ದ **ವರ್ಗಣಿ**. ವಾರ್ಷಿಕ ವರ್ಗಣಿ ಇತ್ಯಾದಿ. ಮರಾಠಿ ವ್ಯುತ್ಪತ್ತಿ ಕೋಶಗಳು ಇದನ್ನು ಸಂಸ್ಕೃತ **ವರ್ಗ** ಶಬ್ದಕ್ಕೆ ಜೋಡಿಸುತ್ತವೆ. **ವರ್ಗ** ಎಂದರೆ ಒಂದೇ ಜಾತಿಯ ಪದಾರ್ಥಗಳ ರಾಶಿ, ಸಂಚಯ. ಹೀಗೆ **ವರ್ಗಣಿ** ಎಂದರೆ ಸಂಚಯ ಎಂದು ಹಿಂದಿಯಲ್ಲಿಯೂ ಇದೆ. ಆದರೆ ಇದು **ವರಾಟ** (= ಅತ್ಯಲ್ಪ, ನಾಣ್ಯ) ದಂತೆಯೇ ಹುಟ್ಟಿದ ದ್ರಾವಿಡ ಶಬ್ದವೇ ಇರಬೇಕೆಂದು ನನಗೆ ಅನುಮಾನವಿದೆ. ಪರಿಷತ್ತಿನ ಕನ್ನಡ ನಿಘಂಟು **ಒರು ಕಾಣಿ** ಎಂಬ ಒಂದು ಪದವನ್ನು ದಾಖಲಿಸಿದೆ. **ಕಾಣಿ** ಎಂದರೆ ಪ್ರಮಾಣಿತ ನಾಣ್ಯದ ಎಂಬತ್ತಂಶದ ಅತಿ ಚಿಕ್ಕ ನಾಣ್ಯ. **ಎರಡು ಕಾಣಿಗಳು ದುಗ್ಗಾಣಿ, ಒಂದೇ ಕಾಣಿ, ಒರ್ ಕಾಣಿ.** ಅದೇ **ವರ್ಗಣಿ**ಯಾಗಿ ಮರಾಠಿಯಲ್ಲಿ ಹೊಕ್ಕು ಕನ್ನಡಕ್ಕೆ ಪುನರಾಗಮನ ಮಾಡಿರಬಹುದು ಎಂಬುದು ಹೆಚ್ಚು ಸುಸಂಗತವಾಗಿದೆ.

* * *

ಪ್ರಾಚೀನ ಕಾಲದಿಂದ ಇಂದಿನವರೆಗೂ ಹೆಸರುಳಿಸಿಕೊಂಡ ತಿಂಡಿ ಪದಾರ್ಥಗಳು ಕೆಲವಿವೆ. ದಕ್ಷಿಣ ಭಾರತದಲ್ಲಿ **ಅಪ್ಪ** ಎಂದು ಕರೆಯುವ ಒಂದು ಕರಿದ ಸಿಹಿ ಪದಾರ್ಥ ಈ ಜಾತಿಯದು. ಋಗ್ ಯಜುರ್ವೇದಗಳ **ಅಪೂಪ ಪೂಪ** ಎಂದು ಹೆಸರಿಸಲ್ಪಡುತ್ತಿದ್ದ ಈ ತಿಂಡಿ ಇಂದ್ರನಿಗೆ ಪ್ರಿಯವಾದದ್ದು. ಇಂದಿಗೂ ಶ್ರಾದ್ಧ ಪಕ್ಷಗಳ ಬ್ರಾಹ್ಮಣ ಭೋಜನಕ್ಕೆ ಅದನ್ನು ಮಾಡಲೇಬೇಕೆಂಬ ಸಂಪ್ರದಾಯ ಕೆಲವೆಡೆಗಳಲ್ಲಿ ಇದೆ. ಹಿಟ್ಟಿನಿಂದ ಮಾಡಿದ ಈ ಸಿಹಿ ತಿಂಡಿ ತುಪ್ಪದಲ್ಲಿ (ಅಥವಾ ಈಗ ಎಣ್ಣೆ) ಕರಿದ ಚಿಕ್ಕ ದೋಸೆಯಾಕಾರದ ಖಾದ್ಯವಾಗಿದೆ. ಹಿಂದಿಯಲ್ಲಿ **ಪುಆ** ಎನ್ನುವುದು ಇದರದೇ ಒಂದು ಅವತಾರ (ಸಂ. ಪೂಪ). ಅದಕ್ಕೆ ಮಾತ್ರ ಸಿಹಿಯನ್ನು ಹಿಟ್ಟಿನಲ್ಲಿ ಬೆರಸದೆ ಹಿಟ್ಟನ್ನು ಪೂರಿಯಂತೆ ತಟ್ಟಿ ಅಥವಾ ಲಟ್ಟಿಸಿ ಕರಿದು ಸಕ್ಕರೆ ಪಾಕದಲ್ಲಿ ಹಾಕಿ ತಯಾರಿಸುತ್ತಾರಷ್ಟೇ. ಒಂದು ವಿಶೇಷವೆಂದರೆ ಛಾಂದೋಗ್ಯ ಉಪನಿಷತ್ತಿನಲ್ಲೇ **ಅಪೂಪ** ಶಬ್ದಕ್ಕೆ **ಜೇನು ಹುಟ್ಟು** ಎಂದೂ ಅರ್ಥವಿದೆ. ಸಂಸ್ಕೃತ **ಅಪೂಪ**ದ ಹೆಸರು ಜೇನು ಹುಟ್ಟಿನ ಸಾಮ್ಯದಿಂದ ಬಂದಿರಲೂಬಹುದು. ಮನುಷ್ಯನಿಗೆ ಸ್ವತಃ ಭಕ್ಷ್ಯಗಳನ್ನು ತಯಾರಿಸುವ ವಿದ್ಯೆಗಿಂತ ಎಷ್ಟೋ ಹಿಂದೆ ಜೇನು ಪರಿಚಿತವಾಗಿತ್ತಲ್ಲವೆ ?

ಜೋಳದ ರೊಟ್ಟಿಯನ್ನು **ಭಕ್ಕರಿ** ಎಂದು ಕನ್ನಡದಲ್ಲಿ ಮತ್ತು **ಭಾಕರಿ** ಎಂದು ಮರಾಠಿಯಲ್ಲಿ ಹೇಳುತ್ತಾರೆ. **ಜೋಳ** ಅನಾದಿಯಿಂದ ಕರ್ನಾಟಕ ಮಹಾರಾಷ್ಟ್ರಗಳ ಬಹುಭಾಗದ ಮುಖ್ಯ ಆಹಾರಧಾನ್ಯವಾಗಿದೆ. **ಅನ್ನ ಋಣ** ಎಂಬುದಕ್ಕೆ **ಜೋಳದ ಪಾಳಿ, ಜೋಳ ವಾಳಿ** ಎಂಬ ನುಡಿಕಟ್ಟು ಕನ್ನಡದ ಅತಿ ಪ್ರಾಚೀನ ಕಾವ್ಯಗಳಲ್ಲಿಯೂ ಸಿಗುತ್ತದೆ.

ಆದರೂ ಕನ್ನಡದಲ್ಲಿ ಅದರ ರೊಟ್ಟಿಗಿರುವ ಹೆಸರು ಕನ್ನಡದ್ದಲ್ಲ. ಪ್ರಾಕೃತದಲ್ಲಿ **ಭಕ್ಕ, ಭಕುಂಡೋ, ಭಕುಲ್ಲೋ, ಭಕಾಸೇ ಭಕ್ಕು** ಇತ್ಯಾದಿ ಪದಗಳಿದ್ದು ಅವುಗಳ ರೂಪಾಂತರವೇ **ಭಕ್ಕರಿ ಸುಡು** ಎಂಬರ್ಥದಲ್ಲಿ **ಭ್ರಜ್ಜ್, ಭೃಜ್** ಎಂಬ ಸಂಸ್ಕೃತ ಧಾತುಗಳಿವೆ. **ಭಕ್ಕರಿ** ತಟ್ಟಿ ಅದನ್ನು ಕೆಂಡದಲ್ಲಿ ಸುಡುತ್ತಾರಲ್ಲವೆ?

**ಜೋಳ** ಎಂಬ ಶಬ್ದವೇ ಅಪರೂಪ ಸ್ವಭಾವದ್ದು. ಎಲ್ಲ ದ್ರಾವಿಡ ಭಾಷೆಗಳಲ್ಲಿ ಇದಕ್ಕೆ **ಜೋಳ** ಎಂಬುದನ್ನು ಹೋಲುವ ಹೆಸರುಗಳಿವೆ. ಚೋಳಂ (ತಮಿಳು), ಜೊನ್ನ (ತೆಲುಗು) ಇತ್ಯಾದಿ. ಆದರೆ ಇದು ದ್ರಾವಿಡವೇ ಎನ್ನುವುದು ಕಷ್ಟ. **ಯವ** ಎನ್ನುವುದು **ಬಾರ್ಲಿ** ಎಂಬುದರ ಸಂಸ್ಕೃತ ಹೆಸರು. ವೇದಗಳಲ್ಲೇ ಬರುವ **ಯವ** ಭಾರತೀಯ ಆರ್ಯರಿಗೆ ಗೋಧಿಗಿಂತಲೂ ಹಿಂದೆ ಪರಿಚಿತವಾದದ್ದು. ಅದರಿಂದ ರೂಪುಗೊಂಡ ಯವನಾಲ(ಳ) ಎಂಬ ಸಂಸ್ಕೃತ ಪದವೇ ಜೋಳದ ಮೂಲವೆಂದು ಶಬ್ದಶಾಸ್ತ್ರಜ್ಞರು ಹೇಳುತ್ತಾರೆ. ಇದು ದ್ರಾವಿಡರಿಂದಲೇ ಸಂಸ್ಕೃತಕ್ಕೆ ಏಕೆ ಹೋಗಿರಬಾರದು? ಅಂದರೆ, ಇತರ ಭಾರೋಪ್ಯ ಭಾಷೆಗಳಲ್ಲಿ ಕೂಡ **ಯವ**ಕ್ಕೆ ಸಂವಾದಿಗಳುಂಟೆಂದು ಉತ್ತರ ಕೊಡಬೇಕಾಗುತ್ತದೆ.

ಗೋಧಿಯ ರೊಟ್ಟಿಗೆ ನಾವು **ಚಪಾತಿ** ಎನ್ನುತ್ತೇವಲ್ಲ. ಅದರ ಮೂಲ ಎಲ್ಲಿ? ಸಂಸ್ಕೃತ **ಚರ್ಪಟ ಚರ್ಪಟೀ**, ಪ್ರಾಕೃತದಲ್ಲಿ **ಚಪ್ಪತಿ, ಛಪ್ಪತಿ** ಅಲ್ಲದೇ ಹಿಂದೀ, ಬಂಗಾಲಿ, ನೇಪಾಳಿ ಭಾಷೆಗಳಲ್ಲಿಯೂ ಹೆಚ್ಚು ಕಡಿಮೆ ಈ ಶಬ್ದ ಇದೆ. ಅರ್ಥವೂ ಸುಮಾರಾಗಿ ಅದೇ. ಚಪ್ಪಟೆ, ತೆಳ್ಳಗೆ ಇರುವಂಥಾದ್ದು. ಆದರೆ ನಮಗೀಗ ಗೊತ್ತಿರುವ **ಚಪಾತಿ** ಟರ್ಕಿ ಭಾಷೆಯಿಂದ ಬಂದದ್ದೆಂದು ಶಬ್ದಗಳ ಇತಿಹಾಸ ಬಲ್ಲವರ ಹೇಳಿಕೆ.

೮೩

ಪೂರಿಯೊಡನೆ ನಂಜಿಕೊಳ್ಳುವ **ಭಾಜಿ** ಇಂದು ಕರ್ನಾಟಕದಲ್ಲೆಲ್ಲ ಸುಪರಿಚಿತ. ಪೂರಿಯಂತೆ ಈ ಭಾಜಿ (ಇದನ್ನು ದ್ರಾವಿಡ ನಾಲಿಗೆ **ಬಾಜಿ**ಯೆಂದೇ ಕರೆದರೂ) ಕೂಡ ಉತ್ತರದಿಂದಲೇ ಬಂದದ್ದು. ಭಾಜಿ ಎಂಬುದು ಸಂಸ್ಕೃತದ **ಭೃಜ್** ಅಥವಾ **ಭ್ರಜ್ಜ್** ಧಾತುವಿನಿಂದ ಹುಟ್ಟಿ ಪ್ರಾಕೃತ ಮೂಲಕ ಆಧುನಿಕ ಔತ್ತರೇಯ ಭಾಷೆಗಳಿಗೆ ಸಾಗಿ ಕರ್ನಾಟಕಕ್ಕೆ ಬಂತು. ಧಾತ್ವರ್ಥ ಮತ್ತು ಅದಕ್ಕೆ ವೈಯಾಕರಣರು ಕೊಟ್ಟ ವಿವರಣೆ ಪ್ರಕಾರ ಇವೆರಡೂ ನೀರು ಹಾಕಿ ಬೇಯಿಸದೆ, ಬೆಂಕಿಯಲ್ಲಿ ಸುಟ್ಟು, ಇಲ್ಲವೆ ಹುರಿದು, ಇಲ್ಲವೆ ಕರಿದು ತಯಾರಿಸಿದ ಖಾದ್ಯಗಳನ್ನು ಸೂಚಿಸುತ್ತವೆ. ಈ ಪ್ರಕಾರ ಭಾಜಿಯೆಂಬುದು ಬಾಣಲೆಯಲ್ಲಿ ಹುರಿದು ಇಲ್ಲವೆ ಕರಿದು ತಯಾರಿಸಿದ ಮೇಲೋಗರ ಅಥವಾ ವ್ಯಂಜನ. ಅರ್ಥಾತ್ ಒಣ ಪಲ್ಯ – **ಸೂಖೀ ಭಾಜಿ**ಯೆಂದು ಔತ್ತರೇಯರು ಇದನ್ನು ಕರೆಯುವುದರಲ್ಲಿ ಅನಾವಶ್ಯಕ ದ್ವಿರುಕ್ತಿ ಇದೆ. ಏಕೆಂದರೆ ಮೇಲೆ ಹೇಳಿದಂತೆ **ಭಾಜಿ**ಯಲ್ಲಿಯೇ ಸೂಖೀತನ (= ಒಣ) ಅಡಕವಾಗಿದೆ.

ಮಹಾರಾಷ್ಟ್ರದವರಿಂದ ಕರ್ನಾಟಕದ ಅಡುಗೆ ಭಟ್ಟರು ಕಲಿತ **ಪಾತಾಳ ಭಾಜಿ**ಯ ಮಾತು ಬೇರೆ. **ಪಾತಾಳ**ಕ್ಕೂ ಈ ಬಾಜಿಗೂ ಏನೂ ಸಂಬಂಧವಿಲ್ಲ ಅನ್ನಿ. ಮರಾಠಿಗರು ಅದನ್ನು **ಪಾತಾಳ** ಎಂದೇ ಬರೆಯುತ್ತಾರೆ. **ಪಾತಾಳ** ಎಂದರೆ ತೆಳ್ಳಗಿನದು. ಭಾಜಿಯಾಗಿದ್ದರೂ ನೀರಿನಲ್ಲಿ ಉದ್ದ ಮಾಡಿರುವುದರಿಂದ ಅದು ತೆಳ್ಳಗಿನ ಎಂಬ ವಿಶೇಷಣ

ಹೊಂದಿದೆ. ಜಗಣಪ್ರಿಯವಾದ ಮರಾಠಿ ನಾಲಗೆ ಕನ್ನಡದ ನಾಲಿಗೆಗಿಂತ ವಿಪರೀತವಾಗಿ ಮಧ್ಯಮ ಅಕ್ಷರದ ಮೇಲೆ ಒತ್ತು ಕೊಟ್ಟು ಉಚ್ಚರಿಸುವುದರಿಂದ ಅದು **ಪಾತ್ಯಾಳ** ಆಗಿ ಹೋಯಿತು. ಕನ್ನಡ ನಾಲಿಗೆ ಅದನ್ನು **ಪಾತಾಳ** ಮಾಡಿತು. ನೀರುಳ್ಳಿ, ಬೆಳ್ಳುಳ್ಳಿ ಘಾಟು ನಿಮಗೆ ಪ್ರಿಯವಾಗಿದ್ದರೆ ಈ ಭಾಜಿಗಿರುವ ಇನ್ನೊಂದು ಹೆಸರಾದ **ರಸ ಭಾಜಿ** ಎಂಬುದು ನಿಮಗೆ ಅತ್ಯಂತ ಅನ್ವರ್ಥಕವಾಗಿ ಕಂಡೀತು.

ಭಾಜಿಗೆ ಶುದ್ಧ ಕನ್ನಡ ಪದ ನಿಮಗೆ ಬೇಕಾಗಿದ್ದರೆ ಅದೂ ಇದೆ. ಇನ್ನೂ ಕನ್ನಡ ನಾಡಿನ ಕೆಲವಾದರೂ ಪ್ರದೇಶಗಳಲ್ಲಿ **ತಾಳ್ಳು** ಅಥವಾ **ತಾಳಲು** ಎಂದು ಕರೆಸಿಕೊಳ್ಳುವ ವ್ಯಂಜನವೊಂದಿದೆ. **ತಾಳು, ತಾಳಿಸು** ಎಂಬ ದ್ರಾವಿಡ ಮೂಲ ಧಾತುವಿನ ಅರ್ಥ ಮಸಾಲೆ ಹಾಕಿ ಹುರಿದು ಅಥವಾ ಕರಿದು ತಯಾರಿಸು ಎಂದೇ ಇದೆ. ಕನ್ನಡದಲ್ಲಿ ತಾಳಿದ, ತಾಳದ, ತಾಳ್ದ, ತಾಳಲು, ತಾಳ್ಳು ಇತ್ಯಾದಿ ರೂಪಗಳಲ್ಲಿ ಇದರ ಪ್ರಯೋಗ ಲಭ್ಯವಾಗುತ್ತದೆ. ಒಣಪಲ್ಯ ಇದು.

ಭಾಜಿಯ ಇನ್ನೊಂದು ಅವತಾರ **ಭಜಿ**. ಇದನ್ನು **ಬಜೆ**ಯೆಂದೂ ಕರೆಯುವುದುಂಟು. ಇದು ಹುರಿದು ಅಲ್ಲ, ಕರಿದು ತಯಾರಿಸಿದ್ದು. ಕಡಲೆ ಹಿಟ್ಟಿನಲ್ಲಿ ಅದ್ದಿ ಕರಿದ ಬಟಾಟೆ ಭಜಿ, ಈರುಳ್ಳಿ ಭಜಿ ಇತ್ಯಾದಿಗಳು ಎಲ್ಲೆಡೆ ಜನಪ್ರಿಯವಾಗಿವೆ. ಅವೂ ಸಂಸ್ಕೃತದ ಭೃಜೀ ಭ್ರಜ್ಜ್ ಧಾತುಗಳ ಅರ್ಥವ್ಯಾಪ್ತಿಯಲ್ಲೇ ಅಡಕವಾಗಿರುವುದರಿಂದ ಹೆಸರಿಗೆ ಅಡ್ಡ ಹೇಳುವಂತಿಲ್ಲ.

ಭಾಜಿಯ ಮೂರನೇ ಅವತಾರವೊಂದು ಕನಿಷ್ಠ ಪಕ್ಷ ದಕ್ಷಿಣ ಕನ್ನಡದಲ್ಲಿ ನಿಮಗೆ ಸಮ್ಮುಖವಾಗದಿರದು. ಅದೇ **ಬಜ್ಜಿ**. ವಾದಿರಾಜ ಗುಳ್ಳದ (ಒಂದು ಜಾತಿಯ ಬದನೆಕಾಯಿ) ಬಜ್ಜಿ ಬಹಳ ಪ್ರಸಿದ್ಧವಾದರೂ ಬೇರೆ ತರಕಾರಿಗಳಿಂದಲೂ ಬಜ್ಜಿ ತಯಾರಿಸುತ್ತಾರೆ; ಹಣ್ಣುಗಳಿಂದಲೂ. ಬಜ್ಜಿ ಅತಿ ರುಚಿಯೆನಿಸಬೇಕಾದರೆ ತರಕಾರಿಯನ್ನು ಸಂಸ್ಕೃತ ಭಸ್ಜ್ ಅಥವಾ ಭೃಜೀ ಧಾತು ಹೇಳುವಂತೆ ನೀರಲ್ಲಿ ಬೇಯಿಸದೆ ಭರ್ಜಿಸಿಯೇ ಅಂದರೆ ಕೆಂಡದಲ್ಲಿ ಹದವಾಗಿ ಸುಟ್ಟೇ ತಯಾರಿಸಬೇಕು. ಸುಟ್ಟ ಮೇಲೆ ಇದನ್ನು ಹುಣಸೇಹಣ್ಣು, ಮೆಣಸಿನಕಾಯಿ, ಸ್ವಲ್ಪ ಬೆಲ್ಲ, ಉಪ್ಪು ಸೇರಿಸಿ ಗಿವಿಚಿ ಒಗ್ಗರಣೆ ಕೊಟ್ಟರೆ ದಿವ್ಯ **ಬಜ್ಜಿ**. ಬಜ್ಜಿಯೆಂಬ ಹೆಸರು ತೋರಿಸಿಕೊಡುವಂತೆ ಇದು ಬ್ರಾಹ್ಮಣರ ಆವಿಷ್ಕರಣವಿರಬೇಕೆಂದಿರಾ ? ಹೆಸರು ಅವರಿಟ್ಟದ್ದಷ್ಟೇ. ಅದಕ್ಕೆ ಕನ್ನಡ ಹೆಸರು **ಗೊಜ್ಜು** (ತಮಿಳು ಕೊಜ್ಜು) ಎಂದಿದೆ. ತಮಿಳರಲ್ಲಿಯೂ ಬದನೆಕಾಯಿ ಗೊಜ್ಜೇ ಜನ ಪ್ರಿಯವಾಗಿರುವಂತೆ ಕಾಣುತ್ತದೆ! ಧಾತುವಿನ ರೂಪ ನೋಡಿದರೆ ಅದು **ಕೊಚ್ಚಿ**ಗೆ ಸಮೀಪವಿದ್ದಂತಿದೆ. ರುಚಿಯಲ್ಲಿ ಅಪ್ರತಿಮವಾದರೂ ಗೊಜ್ಜಿನ ರೂಪಕೊಚ್ಚೆ, ಕೆಸರಿನಂತಿದೆಯಲ್ಲ !

ಹೇಳದೆ ಉಳಿದಿರುವ ಒಂದು ಮಾತೆಂದರೆ **ಭಾಜಿ**ಯ ಮೂಲ ಅರ್ಥ ಏನಿದ್ದರೂ ಅದು ಈಗ ಅರ್ಥ ವಿಸ್ತರಣೆ ಮಾಡಿಕೊಂಡು ಎಲ್ಲ ತರಕಾರಿ ಪಲ್ಯಗಳಿಗೂ ಅನ್ವಯಿಸುತ್ತದೆ. ಹಾಗೆಯೆ **ಬಜ್ಜಿ ಗೊಜ್ಜು** ಕೂಡ ಸುಟ್ಟು ತಯಾರಿಸಬೇಕಾದ್ದನ್ನು ಕಟ್ಟಿಗೆಯ ಕ್ಷಾಮ ಮತ್ತು ಹೊಗೆಗೆ ಭಯಪಡುವ ಈ ಕಾಲದಲ್ಲಿ ಬೇಯಿಸಿ ಅಥವಾ (ಮಾವಿನ ಹಣ್ಣಿನದಾದಾಗ) ಹಸಿಯಾಗಿಯೇ ತಯಾರಿಸಲಾಗುತ್ತದೆ.

**ಭಾಜಿ** ಎಂಬುದು ಇಸ್ಪೇಟಾಟದ ಪರಿಭಾಷೆಯನ್ನು ಕೂಡ ಆಕ್ರಮಿಸಿದೆ. ತುರುಫಿನ ಬಲವಾದ ಎಲೆಗಳನ್ನು ಮೊದಲು ಇಳಿಸದೆ ಖರ್ಚಿನ (ಚಿಲ್ಲರೆ) ಎಲೆಗಳನ್ನು ಉಪಯೋಗಿಸಿ

ಅಥವಾ ತುರುಫಿಲ್ಲದ ಹಿರಿಯ ಎಲೆಗಳನ್ನು ಇಳಿಸಿ ಹೊಡೆದುಕೊಳ್ಳಬಹುದಾದಷ್ಟು "ಪಿಡಿ" ಗಳನ್ನು ದೋಚಿಕೊಳ್ಳುವ ಯತ್ನಕ್ಕೆ **ಭಾಜಿ** ಆಡುವುದು ಎನ್ನುತ್ತಾರೆ. ಮುಖ್ಯ ಭಕ್ಷ್ಯಗಳನ್ನು ತಿನ್ನುವ ಮೊದಲು ಪಲ್ಯ ಮೊದಲಾದವುಗಳಿಂದ ಆದಷ್ಟು ಹೊಟ್ಟೆ ತುಂಬಿಸಿಕೊಳ್ಳುವಂತೆ ಈ ಉಪಾಯ.

"ಇಟಲಿಯ ರಾಜಧಾನಿ ಯಾವುದು?" ಎಂದು ಕೇಳಿದ ಗುರುಗಳಿಗೆ "**ಇಡಲಿಗೆ** ರಾಜಧಾನಿ **ಚಟ್ನಿ** ಸಾರ್" ಎಂದು ಉತ್ತರವಿತ್ತನೆಂದು ಒಂದು ಜೋಕು ಇದೆ. ಇಡಲಿಗೂ ಚಟ್ನಿಗೂ ಅಷ್ಟು ಬಿಡಲಾರದ ನಂಟು. ಆದರೆ ಇವೆರಡು ಖಾದ್ಯಗಳ ಮೂಲ ದಕ್ಷಿಣ ಉತ್ತರದಷ್ಟು ದೂರ. **ಇಡಲಿ** ದಕ್ಷಿಣದಲ್ಲಿ ಬಲು ಪ್ರಾಚೀನ ತಿನಿಸು. ವಡ್ಡಾರಾಧನೆಯಲ್ಲಿ ಅದರ ಸುದ್ದಿ ಬರುವುದರಿಂದ ಕನಿಷ್ಠ ಸಾವಿರ ವರ್ಷದ ಹಿಂದೆಯೇ ಕನ್ನಡಿಗರು **ಇಡ್ಡಲಿ**ಗೆಯನ್ನು ಬಲ್ಲರು. ತಮಿಳಿನಲ್ಲಿ ಸಂಗಮ ಸಾಹಿತ್ಯದಷ್ಟು ಹಿಂದೆಯೇ ಅದರ ಉಲ್ಲೇಖವಿರುವುದರಿಂದ ಅದರ ಚರಿತ್ರೆ ಮತ್ತೂ ಕೆಲ ಶತಮಾನ ಹಿಂದೆ ಹೋಗುತ್ತದೆ. ಈಗಿನಂತೆ ಅಕ್ಕಿ ಅಥವಾ ಗೋದಿ ರವಾದೊಡನೆ ಉದ್ದಿನ ಹಿಟ್ಟು ಬೆರೆಸದೆ ಆಗ ಬರೇ ಉದ್ದಿನ ಹಿಟ್ಟಿನಿಂದಲೇ ಅದನ್ನು ಮಾಡುತ್ತಿದ್ದರೆಂದು ಚಾಲುಕ್ಯ ಸೋಮೇಶ್ವರನ ರಸಿಪೆಯಿಂದ ತಿಳಿಯುತ್ತದಷ್ಟೆ. **ಇಡ್ಡಲಿಗೆ** (ಕನ್ನಡ) ಆಗಲಿ, ಇಟ್ಟಲಿ (ತಮಿಳು) ಆಗಲಿ ಮೂಲದಲ್ಲಿ ಏನರ್ಥದ ಯಾವ ಧಾತುವಿನಿಂದ ಬಂತೆಂಬುದು ಸ್ಪಷ್ಟವಿಲ್ಲದಿದ್ದರೂ ಅದರ ಸಂಗಾತಿ **ಚಟ್ನಿ**ಯ ಮೂಲ ಸ್ಪಷ್ಟವಾಗಿಯೇ ಇದೆ.

**ಚಟ್ನಿ** ನಮಗೆ ಬಂದದ್ದು ಮರಾಠಿಯ ಮೂಲಕ ಹಿಂದಿಯಿಂದ. "**ಚಾಟಿಸು**"ವ (ಚಾಟ್ = ನೆಕ್ಕು) ಪದಾರ್ಥ **ಚಟನೀ**. ಮುಖ್ಯ ಆಹಾರಕ್ಕೆ ನೆರವಾಗಿ ನೆಕ್ಕುವ ವ್ಯಂಜನ; ರುಚಿ ಹೆಚ್ಚಿಸುವುದಕ್ಕಾಗಿ ನಂಜಿಕೊಳ್ಳುವ ಪದಾರ್ಥವೆಂದರೂ ಸರಿ. ಹೀಗಿರುವಾಗ ಅದು ತೆಳ್ಳಗೆ ನಮ್ಮ ಗೊಜ್ಜಿನಂತಿರಬೇಕಾದದ್ದು ಸಹಜವಾದರೂ ಈಗ ಪುಡಿ ಚಟ್ನಿ ಮೊದಲಾದ ಆವಿಷ್ಕಾರಗಳು ಬಹುಶಃ ದಕ್ಷಿಣದ ಪಾಕವಿಶಾರದರಿಂದಲೇ ಆಗಿವೆ.

ಇಡಲಿಯೊಡನೆ "ಚಾಟಿಸು"ವ ಇನ್ನೊಂದು ಪದಾರ್ಥವಾದ **ಸಾಂಬಾರು** ತಯಾರಿಸುವ ಪ್ರಾವೀಣ್ಯ ದಕ್ಷಿಣದ ಅಯ್ಯರುಗಳಿಗೆ ಸೇರಿದ್ದಾದರೂ ಆ ಶಬ್ದದ ಮೂಲ ಸಂಸ್ಕೃತದ **ಸಂಭಾರ**. ಸಂಭಾರ ಎಂದರೆ (ಮುಖ್ಯ ಕಾರ್ಯಕ್ಕೆ ಬೇಕಾದ) ಉಪಕರಣಗಳು ಅಥವಾ ಸಲಕರಣೆಗಳು. ಸಾಂಬಾರು ಸ್ವತಂತ್ರವಾಗಿ ತಿನ್ನತಕ್ಕದ್ದಲ್ಲ. ಮುಖ್ಯ ಖಾದ್ಯಕ್ಕೆ ಸಹಾಯಕವಾಗಿ ಒದಗಿಸಿಕೊಳ್ಳಬೇಕಾದ್ದಲ್ಲವೆ? ಅರಬ್ಬೀ **ಮಸಾಲಾ** ಶಬ್ದ ಕೂಡ ಇದೇ ಅರ್ಥದ್ದು. ಮುಖ್ಯ ಪದಾರ್ಥವನ್ನು ರುಚಿಕಟ್ಟಾಗಿ ಮಾಡುವುದಕ್ಕೆ ಬೇಕಾದ್ದು.

೮೪

ಹಿಂದುಸ್ತಾನೀ ಮೂಲಕ, ಮರಾಠಿ ಮೂಲಕ ಅಥವಾ ನೇರವಾಗಿ ಕನ್ನಡಕ್ಕೆ ಬಂದ ಅರಬ್ಬೀ ಶಬ್ದಗಳು ಸಾವಿರಾರು. ಕೆಲವೊಮ್ಮೆ ಅವು ಪರಕೀಯ ಶಬ್ದಗಳೆಂದು ನಮಗೆ ಸಹಸಾ ಗೋಚರಕ್ಕೇ ಬರುವುದಿಲ್ಲ. **ಮಾಹಿತಿ**ಯನ್ನೇ ತೆಗೆದುಕೊಳ್ಳಿ. ಇದು ನಮಗೆ ಮರಾಠಿಯಿಂದ ಬಂದದ್ದು. ಶಬ್ದದ ರೂಪ ನೋಡಿದರೆ ಇದು ದೇಶೀಯ ಶಬ್ದವೇ ಅನ್ನಿಸಬೇಕು. ಆದರೆ ವಾಸ್ತವಿಕವಾಗಿ ಇದು ಅರಬ್ಬೀ ಪದ. ಮೂಲ ರೂಪ **ಮಾಹಿಯತ್**. ಮರಾಠಿಯಲ್ಲಿ

**ಮಾಹೀತ** ಆಗಿ ಕನ್ನಡದಲ್ಲಿ **ಮಾಹಿತಿ** ರೂಪ ಧರಿಸಿತು. ಪೇಶವೆ ಕಾಲದಲ್ಲಿ ಮರಾಠಾ ಸಾಮ್ರಾಜ್ಯಕರ್ತರು ಮೊಗಲರು ಬಳಸುತ್ತಿದ್ದ ಪಾರಸಿಕ ಭಾಷೆಯನ್ನೇ ಬಹುತರವಾಗಿ ಆಡಳಿತದಲ್ಲಿ ಮುಂದುವರಿಸಿದರಲ್ಲದೆ ಆ ಭಾಷೆಯಿಂದ ಸಾರಾ–ಸಗಟಾಗಿ ಶಬ್ದಗಳನ್ನು ಮರಾಠಿಗೂ ತಂದುಕೊಂಡರು. ಕನ್ನಡದಲ್ಲೀಗ ಈ ಶಬ್ದಕ್ಕೆ ವಿವರ, ತಿಳಿವಳಿಕೆ ಇತ್ಯಾದಿ ಅರ್ಥಗಳಿದ್ದರೆ (''ನನಗೆ ಅವರು ಮಾಹಿತಿ ಕೊಟ್ಟರು'') ಮರಾಠಿಯಲ್ಲಿ ಪರಿಚಿತ. ಬಳಕೆಯಿದ್ದದ್ದು ಎಂಬರ್ಥದಲ್ಲಿ ಇದರ ಪ್ರಯೋಗವಾಗುತ್ತದೆ. ಉರ್ದುವಿನಲ್ಲಿ ಇದರ ಮೂಲ ಅರಬ್ಬಿ ಅರ್ಥಕ್ಕೆ ಸಮೀಪವಾಗಿ ಪದಾರ್ಥದ ವಾಸ್ತವಿಕ ತತ್ವ, ಗುಣ ಅಥವಾ ಸ್ವರೂಪ, ಪಾರಮಾರ್ಥಿಕ ಸ್ವರೂಪ ಎಂಬರ್ಥವಿದೆ. ಈ ಅರ್ಥ ಮರಾಠಿ ಅಥವಾ ಕನ್ನಡ ಅರ್ಥಕ್ಕಿಂತ ಗಂಭೀರವಾಗಿದೆ. ಹೀಗೆ **ಮಾಹಿತಿ** ಮೂಲದಿಂದ ಅರ್ಥಹ್ರಾಸ ಹೊಂದಿದ್ದರೂ ಕನ್ನಡದಲ್ಲಿ ಇದು ಪಡೆದುಕೊಂಡ ಅರ್ಥ ನಮ್ಮ ತತ್ಸಮಾನವಾದ ಯಾವ ಹಳೇ ಶಬ್ದಕ್ಕೂ ಇಲ್ಲದ ವಿಶಿಷ್ಟ ಅಭಿಪ್ರಾಯವನ್ನು ಪ್ರಕಟಿಸಲು ನೆರವಾಗಿದೆ.

**ಮಾಲ್** (ಮಾಲು, ಮ್ಹಾಲು) ಶಬ್ದ ಕನ್ನಡದಲ್ಲಿ ಗಟ್ಟಿಯಾಗಿ ಬೇರೂರಿ ವ್ಯವಹಾರದಲ್ಲಿ ಉಪಯೋಗಕ್ಕೆ ಬಿದ್ದಿದೆ. **ಸರಕು** ಎಂಬರ್ಥದಲ್ಲಿ ಸಾಮಾನ್ಯರಿಗೆ ಅದು ಪರಿಚಿತ. ''ಪರದೇಶದಿಂದ ಮಾಲು ತರಿಸಿದೆ'' ಎನ್ನುತ್ತೇವೆ. **ಮಾಲ್ ಗಾಡಿ** ಎನ್ನುವಾಗ ಸರಕು ಸಾಗಿಸುವ ರೈಲು ಬಂಡಿ ಎಂದು ಅಭಿಪ್ರಾಯ. ಮರಾಠಿಯಲ್ಲಿ ಸರಕಿಗಲ್ಲದೆ **ಸೊತ್ತಿಗೂ** ಈ ಪದ ಅನ್ವಯಿಸುತ್ತದೆ. ಶುದ್ಧ ಕನ್ನಡದಲ್ಲಿ **ಒಡವೆ** ಎನ್ನಿ. **ಮಾಲಿಕ** ಅಂದರೆ ಕನ್ನಡದಲ್ಲಿ ಕೂಡ **ಮಾಲು ಉಳ್ಳವ, ಒಡವೆ ಉಳ್ಳವ, ಒಡೆಯ.** ಇಲ್ಲಿ ವ್ಯಾಪಾರೀ ಸರಕಲ್ಲದೆ **ಸೊತ್ತು** ಕೂಡ ಅಭಿಪ್ರೇತವಾಗುತ್ತದೆ. ಅರಬ್ಬಿಯಲ್ಲಿ **ಮಾಲ್** ಶಬ್ದಕ್ಕೆ ಇವೆರಡಕ್ಕಿಂತ ಉದಾತ್ತ ಅರ್ಥವುಂಟು. ಸಂಪತ್ತು, ಧನ, ಶ್ರೀ, ಅಮೂಲ್ಯ ಪದಾರ್ಥ ಇತ್ಯಾದಿ. ಆದ್ದರಿಂದ ''ಖುದಾ ಮಾಲಿಕ ಹೈ'' (ದೇವರು ಒಡೆಯ) ಇತ್ಯಾದಿಯಾಗಿ ಕೇಳಬರುತ್ತದೆ.

ಲಂಪಟರ ಭಾಷೆಯಲ್ಲಿ ಸೂಳೆಗಾರಿಕೆಗಿಳಿದ ಸುಂದರ ಸ್ತ್ರೀಗೆ **ಮಾಲ್** ಎಂಬ ಶಬ್ದ ಪ್ರಯೋಗವಿದೆ. ಕುಂಟಣಿಗಳು ವಿಟರಿಗೆ ''**ಒಳ್ಳೆ** ಹೊಸ **ಮಾಲು** ಬಂದಿದೆ'' ಎಂದು ಆಮಿಷ ತೋರಿಸುತ್ತಾರೆ. ಇದು ಕೂಡ ಮೇಲ್ಕಾಣಿಸಿದ ಅರಬ್ಬಿ ಶಬ್ದವೇ. ಇದು ಹೆಣ್ಣನ್ನು ಕಳಪೆ ಮಾಡುವ ಶಬ್ದ ಎಂದೇ ಭಾವಿಸಿದ್ದೆ. ಆದರೆ **ಮಾಲ್** ಶಬ್ದಕ್ಕೆ **ಸುಂದರಿ** ಎಂಬ ಅರ್ಥವೂ ಇದೆ ಎಂದು ಉರ್ದು ಕೋಶದಲ್ಲಿ ನೋಡಿ ನನ್ನೆಣಿಕೆ ತಪ್ಪೆನಿಸಿತು.

ಉತ್ತರ ಕರ್ನಾಟಕದ ಕಟ್ಟಡ ಕೆಲಸದ ಭಾಷೆಯಲ್ಲಿ ಸಿಮೆಂಟ್ ಉಸುಬು ಬೆರೆಸಿದ ಹಸಗಾರೆ ಮುದ್ದೆಯನ್ನು **ಮಾಲು** ಎಂದು ನಿರ್ದೇಶಿಸುತ್ತಾರೆ. ಇದು ಸೊತ್ತು, ಆಸ್ತಿ ಎಂಬರ್ಥದ **ಮಾಲ್** ಪದಕ್ಕೆ ಸಂಬಂಧಿಸಿದ್ದಲ್ಲ. ಬಹುಶಃ ಇದು **ಮಾಯಲ್** (= ಮಿಶ್ರಣ) ಎಂಬ ಅರಬ್ಬಿ ಪದದ ಕನ್ನಡೀಕರಣ ಅಥವಾ ಅಪಭ್ರಂಶ. ಹೀಗೆ ಸಣ್ಣ ಉಸುಬು ಅಥವಾ ಸಿಮೆಂಟು ಉಸುಬಿನ **ಮಿಶ್ರಣ** ಮಾಯಲ್ = **ಮಾಲ್** ಆಗುತ್ತದೆ.

* * *

ಕಬ್ಬು ಮತ್ತು ಅದರ ಉಪೋತ್ಪನ್ನಗಳಾದ ಸಕ್ಕರೆ, ಬೆಲ್ಲ ಮೊದಲಾದವೆಲ್ಲ ಭಾರತೀಯ ಮೂಲದವೇ ಎಂಬುದು ಸಾರ್ವತ್ರಿಕ ಗ್ರಹಿಕೆಯಾಗಿದೆ. ಸಂಸ್ಕೃತದಿಂದ ಹೊರಟ **ಶರ್ಕರಾ** ಕನ್ನಡದಲ್ಲಿ **ಸಕ್ಕರೆ**ಯಾದಂತೆ ಗ್ರೀಕ್ sakeheron, ಲ್ಯಾಟಿನ್ saccharum, ಇಂಗ್ಲೀಷ್ sugar, ಅರಬ್ಬಿ **ಸುಕ್ಕರ್**, ಫ್ರೆಂಚ್ sucre, ಇಂಗ್ಲೀಷ್ jaggery (ಬೆಲ್ಲ) ಆಗಿ ವ್ಯಾಪಿಸಿದೆ. ಸಂಸ್ಕೃತದಲ್ಲಿ

ಉಸುಬು ಎಂಬರ್ಥವನ್ನೂ **ಶರ್ಕರಾ** ಶಬ್ದ ಕೊಡುತ್ತದೆ. ಉಸುಬಿನ ರೂಪ ಸಾಮ್ಯದಿಂದ ಸಕ್ಕರೆಗೆ ಆ ಹೆಸರು ಬಂದಿರಬೇಕು. ಹೀಗೆ ಅದು ಭಾರತೀಯ ಮೂಲದ್ದೆಂಬುದು ಖಚಿತವೆನಿಸುತ್ತದೆ. ಆದರೂ ಚೀನಿಯ ಸಂಶೋಧಕರು ಈಚೆಗೆ ಕಬ್ಬು ಮೂಲತಃ ಚೀನದ್ದೇ ಎಂದು ಸಾಧಿಸಿದ್ದಾರೆ. ಇದು ನಿರಾಧಾರವೆಂದು ತೋರಿದರೂ ಅವರಿಗೆ ನಿಲ್ಲಲು ಒಂದಾದರೂ ಕಾಲು ಇದೆ. ಪಾರಸಿಕ ಭಾಷೆಯಲ್ಲಿ ಮತ್ತು ಆ ಮೂಲಕ ಉರ್ದುವಿನಲ್ಲಿ ಸಕ್ಕರೆಗೆ **ಚೀನಿ** ಎಂಬ ಹೆಸರೂ ಇದೆ. ಪಿಂಗಾಣಿ ಮೊದಲಾದ ಕೆಲ ವಸ್ತುಗಳಿಗೂ ಚೀನಿ ಎಂಬ ಹೆಸರಿದ್ದು ಅವು ಚೀನದಲ್ಲಿ ಮೊದಲು ಉತ್ಪತ್ತಿಯಾದವೆಂಬುದು ಎಲ್ಲರೂ ಒಪ್ಪಿದ ಮಾತಾದ್ದರಿಂದ ಸಕ್ಕರೆಯೂ ಇರಾಣಕ್ಕಂತೂ ಚೀನದಿಂದ ಬರುತ್ತಿದ್ದಿರಬಹುದು. ಭಾರತದಲ್ಲಿ ಮೂಲತಃ ಉತ್ಪತ್ತಿಯಾದ ಸಕ್ಕರೆಗೆ ಚೀನಿ ಎಂಬ ಹೆಸರು ಬಿದ್ದದ್ದು ವಿಚಿತ್ರವಾದಂತೆ, ಸಕ್ಕರೆಯದೇ ಇನ್ನೊಂದು ಅವತಾರವಾದ ಕಲ್ಲುಸಕ್ಕರೆಗೆ ಅರಬ್ಬಿ ಭಾಷೆಯಲ್ಲಿ **ಮಿಸರೀ** ಎಂಬ ಹೆಸರಿದ್ದದ್ದೂ ಸೋಜಿಗ. ಏಕೆಂದರೆ **ಮಿಸರಿ** ಎಂದರೆ **ಮಿಸ್ರ** ದೇಶದ್ದು. **ಮಿಸ್ರ** ಎಂದರೆ ಇಜಿಪ್ತ್ ದೇಶ.

ನಮ್ಮ ದಿನ ಬಳಕೆಯ ಶುಚಿ ವಸ್ತುವಾದ **ಸಾಬೂನು** ಎಂಬ ಹೆಸರು ಮೂಲತಃ ಅರಬ್ಬಿ–ಪರ್ಶಿಯನ್ **ಸಾಬುನ್, ಸಾಬೂನ್**‌ನಿಂದ ಎರವಲು ಪಡೆದದ್ದು. ಆದರೆ ಉತ್ತರ ಕರ್ನಾಟಕದಲ್ಲಿಯೂ ಬಂಗಾಲ ಮೊದಲಾದ ಕೆಲ ಪ್ರಾಂತಗಳಲ್ಲಿಯೂ ಅದನ್ನು **ಸಾಬಾಣ, ಸಾಬಾನ್** ಎಂದು ಹೆಸರಿಸಲಾಗುತ್ತದೆ. ಇದು ಮಾತ್ರ ನೇರ ಆಯಾತವಲ್ಲ. ಪೋರ್ಚುಗೀಸರು ಅರಬ್ಬಿ **ಸಾಬೂನ**ನ್ನು ಎರವಲು ತೆಗೆದುಕೊಂಡು ಅದನ್ನು **ಸಾಬಾಂವ್** ಎಂದು ಕರೆದರು. (ಅರಬರಿಗೂ ಸ್ಪೇನ್ ಪೋರ್ತುಗಾಲಗಳಿಗೂ ಪುರಾತನ ಶತ್ರು–ಮಿತ್ರ ಸಂಬಂಧ.) ನೇರ ಎರವಿನ ಬದಲು ಎರವಲಿಗರಿಂದ ಎರವಲು ಪಡೆದವರು ಅದನ್ನು ಸಾಬಾಣ ಮಾಡಿಕೊಂಡರಷ್ಟೇ. ಸಾಬೂನಿಗಿರುವ ಇನ್ನೊಂದು ಹೆಸರಾದ **ಸಬಕಾರ** ಎಂಬುದರ ಕಥೆ ಸ್ವಲ್ಪ ಬೇರೆ. ಕಾರ, ಖಾರ (ಸಂಸ್ಕೃತ ಕ್ಷಾರ) ಎಂಬ ಆಲ್ಕಲಿ ಪದಾರ್ಥ ಮೊದಲಿಂದ ಬಟ್ಟೆ ಒಗೆಯುವುದರಲ್ಲಿ ಬಳಕೆಯಾಗುತ್ತಿತ್ತು. ಕೊಬ್ಬು ಸಹಿತವಾದ ಕಾರ ಸಾಬಾಂವ್. **ಸಾಬಾಂವ್** ಬಂದಾಗ ಈ ಹೊಸ ಶಬ್ದದೊಡನೆ ಹಳೇ **ಕಾರ**ವೂ ಸೇರಿಕೊಂಡು **ಸಬಕಾರ**ವಾಗಿಬಿಟ್ಟಿತು.

ಶಬ್ದಗಳ ಬೆನ್ನಟ್ಟಿ ಹೊರಟರೆ ಕೆಲವೊಮ್ಮೆ ಕಣ್ಣು ಕಾಲು ತಪ್ಪಿಸುವ ಸಾಮ್ಯಗಳು ಎದುರಾಗುತ್ತವೆ. ನಮ್ಮ **ಹರಿಕಾರ** ಶಬ್ದಕ್ಕೆ ಸುದ್ದಿ, ಪತ್ರ ಮೊದಲಾದವುಗಳನ್ನು ದೂರದೂರುಗಳಿಗೆ ಒಯ್ದು ಮುಟ್ಟಿಸುವ ನೌಕರ ಎಂಬರ್ಥವಿದೆ. ಉರ್ದು ಕೋಶಗಳನ್ನು ತಿರುಹುವಾಗ **ಹರಕಾರಾ** ಎಂಬ ಶಬ್ದಕ್ಕೆ ಇದೇ ಅರ್ಥ ಕಂಡು ಬೆರಗಾದೆ. ಅದೇನೂ ದ್ರಾವಿಡದಿಂದ ಉರ್ದುವಿಗೆ ದಾಟಿದ ಶಬ್ದವಲ್ಲ – ಅದು ಪಾರಸಿಕ ಶಬ್ದ ಎಂದು ಕೋಶಗಳಲ್ಲಿ ಸ್ಪಷ್ಟ ನಿರ್ವಚನ ನೋಡಿದರೂ ನನ್ನ ಸೋಜಿಗ ಬಗೆಹರಿಯಲಿಲ್ಲ. ಸಮಾಧಾನವಾಗಬೇಕಾದರೆ ನಮ್ಮ **ಹರಿಕಾರ**ದ ಮೂಲ ಹಳೆಗನ್ನಡದ ರೂಪ **ಪರಿಕಾಱ** ಎಂದೂ ಅದರರ್ಥ ಪರಿ (= ಸಾಗುವಿಕೆ) ಆದರ ಕಾಱ (= ಮಾಡುವವ) ಅಂದರೆ ಸುದ್ದಿ ತೆಗೆದುಕೊಂಡು **ಓಡುವವ** ಎಂದೂ ತಿಳಿಯಬೇಕಾಯಿತು.

೮೫

ಒಂದು **ವಾರ** ಅವಧಿ ಎನ್ನುತ್ತೇವೆ. ಆದಿತ್ಯ **ವಾರ** ಎನ್ನುತ್ತೇವೆ. ಇದರಿಂದ **ವಾರ** ಅಂದರೆ **ದಿವಸ** ಅಥವಾ **ವಾಸರ** ಎಂದು ಕರೆಯುವ ಅರವತ್ತು ಗಳಿಗೆಯ ಅವಧಿ ಎಂಬ ಕಲ್ಪನೆಯಾಗಬಹುದು. ನಿಜ ಹಾಗಿಲ್ಲ. ವಾರ ಶಬ್ದಕ್ಕಿರುವ ಅನೇಕ ಅರ್ಥಗಳಲ್ಲಿ **ಸರದಿ** ಎಂಬುದೊಂದು. ಆದಿತ್ಯವಾರ ಎನ್ನುವಾಗ ಸೂರ್ಯನ ಸರದಿಯೆಂಬುದೇ ಮೂಲ ತಾತ್ಪರ್ಯ. ಪ್ರಾಚೀನ ಖಗೋಲಶಾಸ್ತ್ರಗಳಿಗೆ ಗೊತ್ತಿದ್ದ ಏಳು 'ಗ್ರಹ'ಗಳಲ್ಲಿ (ಸೂರ್ಯ–ಚಂದ್ರ ಸೇರಿ) ಒಬ್ಬೊಬ್ಬರಿಗೂ ಒಂದೊಂದು ದಿನದ ಒಡೆತನವನ್ನು **ಸರದಿಯ ಮೇಲೆ** ಗೊತ್ತುಪಡಿಸಿ ಅವರವರ ಸರದಿಯ ದಿನಕ್ಕೆ ಅವರವರ ಹೆಸರು ಕೊಟ್ಟವರು ಕ್ರಿಸ್ತಪೂರ್ವ ಎರಡನೇ ಸಹಸ್ರಮಾನದಲ್ಲಿದ್ದ ಕಾಲ್ದಿಯನ್ ಜ್ಯೋತಿಷಿಗಳು. ಹೀಗೆ ರವಿವಾರ, ಸೋಮವಾರ ಇತ್ಯಾದಿ. (ವಾರದ ದಿನಗಳ ಆಧಿಪತ್ಯದ ಕಲ್ಪನೆ ವಾರಕ್ಕೆ ಇರುವ ತಮಿಳು ಹೆಸರಾಟ **ಆಟ್ಚೈ** (= ಆಳೆ) ಎಂಬುದರಲ್ಲಿ ಸ್ಪಷ್ಟವಾಗಿ ಎದ್ದು ಕಾಣಿಸುತ್ತದೆ. ತಮಿಳಿನಲ್ಲಿ ವಾರಕ್ಕಿರುವ ಇನ್ನೊಂದು ಹೆಸರಾದ **ಕೀಳಮೈ** ಸಂಬಂಧಸೂಚಕವಾದದ್ದು. **ಬುದನ್‌ಕಿಳಮೈ** ಎಂದರೆ ಬುಧನಿಗೆ ಸೇರಿದ ವಾರ.) ಎಲ್ಲ ಗ್ರಹಗಳ ಸರದಿ ಮುಗಿಯುವಾಗ ಅದೂ ವಾರವೇ – ಏಳು ದಿನಗಳ ಸರದಿ – ಅದೇ **ಸಪ್ತಾಹ** (= ಏಳು ಹಗಲು), ಅದೇ ಪಾರಸಿಕ ಹಫ್ತಾ (ಹಫ್ತಹ್). ಹೀಗೆ ನಾವು **ವಾರ** ಎಂದು ಕರೆಯುವ ಅವಧಿಗೆ ಇಂಗ್ಲೀಷಿನಲ್ಲಿ week (ವೀಕ್) ಎನ್ನುತ್ತಾರಲ್ಲ, ಆ ಜರ್ಮಾನಿಕ್ ಮೂಲದ ಶಬ್ದದ ಅರ್ಥ ಕೂಡ **ಸರದಿ** ಎಂದೇ ಇರಬೇಕೆಂದು ಭಾಷಾಶಾಸ್ತ್ರಿಗಳು ತರ್ಕಿಸಿದ್ದಾರೆ.

ವಾರ ಎಂಬ ಶಬ್ದವೇ ಸೂಚಿಸುವಂತೆ, ವಾರ ಎಂಬ ಕಾಲಾವಧಿ ಏಳೇ ದಿನಗಳದಿರಬೇಕೆಂಬ ನಿಯಮವಿಲ್ಲ. ಒಂದು ತಿಂಗಳಿಗಿಂತ ಕಡಿಮೆಯ ಯಾವ ಅವಧಿಗೂ ಅದು ನಡೆಯಬಹುದೆಂದೂ ಅದು ಗ್ರಹಗಳ ಒಡೆತನಕ್ಕೆ ಸೇರಬೇಕೆಂಬ ನಿಯಮವಿಲ್ಲೆಂದೂ ಬ್ರಿಟಾನಿಕಾ ವಿಶ್ವಕೋಶ ಹೇಳುತ್ತದೆ. ದೆಕಾದ್ (decad) ಎಂಬ ಹತ್ತು ದಿನಗಳ ವಾರವೂ ಹಿಂದೆ ಇತ್ತು. (ಈಗ ಇಂಗ್ಲೀಷಿನಲ್ಲಿ decade ಎಂದರೆ ಹತ್ತು ವರ್ಷ.) ಐದು, ನಾಲ್ಕು, ಮೂರು ದಿನಗಳ ವಾರಗಳೂ ಆಫ್ರಿಕದಲ್ಲಿ ಬೇರೆ ಬೇರೆಡೆ ಇದ್ದವು. ಪ್ರಾಚೀನ ಸ್ಕಾಂಡಿನೇವಿಯದಲ್ಲಿ ಐದು ದಿನಗಳ ವಾರವಿತ್ತು. ವಾರಕ್ಕೆ ಮರಾಠಿಯಲ್ಲಿರುವ ಸಮಾನ ಪದಗಳಲ್ಲಿ ಒಂದಾದ **ಆಠವಡಾ** (= ಆಠವಡಾ) ಪದದಿಂದ ಸೂಚಿತವಾಗುವಂತೆ ಒಂದು ಕಾಲದಲ್ಲಿ **ಏಳು ಅಲ್ಲ, ಎಂಟು** (= ಆಠ್) ದಿನಗಳ ವಾರ ಈ ದೇಶದಲ್ಲಿ ಇದ್ದಿರಬಹುದು ಎನಿಸುತ್ತದೆ. ಈ ಬೇರೆ ಬೇರೆ ಅವಧಿಗಳ ವಾರಗಳಿಗೆ ಹೆಸರುಗಳನ್ನು ಕೊಡುವುದರಲ್ಲಿ ಕೂಡ ವೈವಿಧ್ಯವಿತ್ತು. ಆಫ್ರಿಕದಲ್ಲಿ ಸಮೀಪದ ಯಾವ ಊರಿನಲ್ಲಿ ಸಂತೆ ಯಾವ ದಿನ ನಡೆಯುತ್ತದೋ ಆ ಊರಿನ ಹೆಸರನ್ನೇ ಆ ದಿನಕ್ಕೆ ಕೊಡುತ್ತಿದ್ದರಂತೆ.

ಒಂದು ಪದಾರ್ಥಕ್ಕೆ ಒಂದು ಭಾಷೆಯಲ್ಲಿ ಪ್ರಚುರವಾಗಿದ್ದ ಪದಗಳು ಬಿದ್ದು ಹೋಗಿ ಪರಭಾಷೆಯ ಶಬ್ದಗಳು ಯಾಕೆ ಚಾಲ್ತಿಗೆ ಬರುತ್ತವೆ? ಉಚ್ಚಾರ ಸೌಲಭ್ಯವೇ? ಕೇವಲ ಪ್ಯಾಶನ್ನೇ? ಹೇಳುವುದು ಕಷ್ಟ. ದ್ರಾವಿಡದ **ಅಳೆ** ಶಬ್ದವನ್ನು ತೆಗೆದುಕೊಳ್ಳಿ. ತಮಿಳು, ತೆಲುಗು, ಮಲೆಯಾಳಿ, ತುಳು ಭಾಷೆಗಳಲ್ಲೆಲ್ಲ ಈ ಶಬ್ದ ಇದೆ. ಮೂಲ ಅರ್ಥ **ಮಜ್ಜಿಗೆ, ಮೊಸರು**. ಇಂದಿಗೂ ತುಳುವಿನಲ್ಲಿ ಮಜ್ಜಿಗೆಗೆ ಇದೇ ಪದ ಇದೆ. ಹಳೇ ಕನ್ನಡ ಕಾವ್ಯಗಳಲ್ಲಿ ಬೆಣ್ಣೆ ತೆಗೆದ ಮೊಸರಿಗೆ ಅಳೆಯೆಂದೇ ಕರೆದಿದೆ. ಆದರೆ ಈಗ **ಅಳೆ** ಎಂದರೆ ದಕ್ಷಿಣ ಕನ್ನಡದಲ್ಲಿ

ಬಿಟ್ಟರೆ ಕರ್ನಾಟಕದ ಮತ್ತೆಲ್ಲಿಯೂ ಜನಕ್ಕೆ ಅರ್ಥವೇ ಆಗದು. ಕನ್ನಡದಲ್ಲಿ ಅದನ್ನೀಗ ಮಜ್ಜಿಗೆಯೆಂದೇ ದಕ್ಷಿಣ ಕನ್ನಡಾದಿಯಾಗಿ ಸರ್ವತ್ರ ಕರೆಯಲಾಗುತ್ತಿದೆ. ಉಚ್ಚಾರ ಸೌಲಭ್ಯವಾದರೆ ಅಳೆ ಮಜ್ಜಿಗೆಗಿಂತ ಎಷ್ಟೋ ಸುಲಭ. **ಮಜ್ಜಿಗೆ** ಬಹುಶಃ ತೆಲುಗಿನ ಮೂಲಕ ಕನ್ನಡಕ್ಕೆ ಬಂದ ಪದವಿರಬೇಕು. ಅಲ್ಲಿಗೂ ಅದು ಪ್ರಾಕೃತದಿಂದ ಬಂದ ಪದ. **ಮಜ್ಜಿಅ** (ತೆಲುಗು–ಮಜ್ಜಿಗ) ಸಂಸ್ಕೃತ **ಮಾರ್ಜಿತಾ**. ಮಾರ್ಜಿತಾ ಎಂದರೆ ತೊಳೆದದ್ದು, ಸ್ವಚ್ಛ ಮಾಡಿದ್ದು, ತಿಕ್ಕಿದ್ದು = ಮತ್ತು ಅನ್ವಯದಿಂದ ಕಡೆದದ್ದು ಎಂದರ್ಥ. ಮಜ್ಜಿಗೆ ಕಡೆಯುವುದನ್ನು ಕೆಲ ಪ್ರದೇಶಗಳಲ್ಲಿ **ತೊಳೆಯುವುದು** ಎನ್ನುತ್ತಾರೆಂದು ಗಮನಿಸಬೇಕು. ಸಂಸ್ಕೃತದಲ್ಲಿ **ಮಾರ್ಜಿತಾ** ಎಂದರೆ ಸಕ್ಕರೆ ಮಸಾಲೆ ಬೆರೆಸಿದ (ಕಡೆದ) ಮೊಸರು, ಗುಜರಾಥಿಗಳು ಹೆಚ್ಚಾಗಿ ಮೊಸರಿಗೆ ಸಕ್ಕರೆ ಬೆರೆಸಿಯೇ ಉಣ್ಣುತ್ತಾರೆ. ನಾವು **ಮೊಸರು** ಎನ್ನುವುದಕ್ಕೆ ತೆಲುಗಿನಲ್ಲಿ **ಮೊಗರು**, ತಮಿಳಿನಲ್ಲಿ **ಮೊಚರ್**, **ಮೊಅರ್** ಎಂಬ ಜ್ಞಾತಿ ಪದಗಳಿವೆ. ಆದರೆ ನಮ್ಮಲ್ಲಿ ಹುಳಿ ಹಾಕಿ ಹೆಪ್ಪುಗಟ್ಟಿಸಿದ ಹಾಲಿಗೆ ಮೊಸರೆಂಬ ಹೆಸರು ಸಲ್ಲುತ್ತಿದ್ದರೆ ಚಾಲ್ತಿ ತಮಿಳಿನಲ್ಲಿ ಮಲೆಯಾಳಿಯಲ್ಲಿ **ಮಜ್ಜಿಗೆಗೇ ಮೊಅರ್**, **ಮೋರ್** ಎನ್ನುತ್ತಾರೆ. "ಅಃ ನಲ್ಲ ಪುಳಿ ಮೋರ್!" (ಆಃ ಒಳ್ಳೇ ಹುಳಿ ಮಜ್ಜಿಗೆ) ಎಂದು ಮಲೆಯಾಳಿಗಳು ಮೆಚ್ಚುತ್ತಾರೆ. "ಮೋರ್ ಕೊಳಂಬು" (ಮಜ್ಜಿಗೆ ಪಳಿದ್ಯ) ಅಂದರೆ ತಮಿಳರಿಗೆ ಇಷ್ಟ. ತೆಲುಗಿನಲ್ಲಿ ಮೊಸರಿಗೆ **ಪೆರುಗು** ಎನ್ನುವುದು ಈಗಿನ ರೂಢಪದ. ಪೆರುಗು ಎನ್ನುವುದು ಅನ್ವರ್ಥಕ ಶಬ್ದ ಎನ್ನಿ. ಪೆರು (ಪೆಱು) ಎಂದರೆ ಹೆರೆಗಟ್ಟುವುದು, ಹೆಪ್ಪಾಗು (ಹೆಪ್ಪು = ಹೆರುಪು = ಪೆಱುಪು) ಅರ್ಥಾತ್ ಗಟ್ಟಿಯಾಗುವುದು. **ಹೆತ್ತುಪ್ಪ** ಎಂದು ಉತ್ತರ ಕರ್ನಾಟಕದಲ್ಲಿ ಹೇಳುವುದು (ಹೆತ್ತ ತುಪ್ಪ = ಹೆರೆದ ತುಪ್ಪ = ಗಟ್ಟಿಯಾದ ತುಪ್ಪ). ಇದಕ್ಕೋಸ್ಕರವೇ ಮೊಸರು ಗಟ್ಟಿಯಾಗಿರಬೇಕಲ್ಲವೇ? ಈಗಿನ ಪೇಟೇ ಹಾಲಿನಲ್ಲಿ ಇದು ಆಗದಿದ್ದರೂ! ಇದನ್ನೆಲ್ಲ ಬಿಟ್ಟು ತಮಿಳಿನಲ್ಲಿ ಈಗ ಮೊಸರಿಗೆ **ತೈರ್** ಎಂಬ ಹೆಸರು ಬಳಕೆಯಲ್ಲಿದೆ. ಮಲೆಯಾಳದಲ್ಲಿಯೂ ಅದೇ. **ತೈರೊಡ್ಡೈ** ಮೊಸರೊಡೆ ತಮಿಳರಿಗೆ ಪ್ರೀತಿ. ತೈರೊಡ್ಡೈ ಎಂದು ಅಯ್ಯರುಗಳಿಗೆ ಅಡ್ಡ ಹೆಸರೇ ಇದೆ! ಅದನ್ನು ತಯಾರಿಸುವುದಲ್ಲಿ ಅವರು ಎತ್ತಿದ ಕೈ. ವಿಚಿತ್ರವೆಂದರೆ ಇದು ದ್ರಾವಿಡ ಪದವಲ್ಲ. ಇದು ಸಂಸ್ಕೃತ **ತಕ್ರದ** ಅಪಭ್ರಂಶ. ಸಂಸ್ಕೃತದಲ್ಲಿ ತಕ್ರ ಎಂದರೆ ಮೊಸರಲ್ಲ **ಮಜ್ಜಿಗೆ**! ಸಂಸ್ಕೃತವನ್ನು ಆದಷ್ಟು ದೂರ ಇಟ್ಟ ತಮಿಳು ಏಕೆ ಸಂಸ್ಕೃತದ ತಕ್ರವನ್ನು ಒಳಗೆ ಕರೆಯಿತೋ ಕಂಡವರಾರು?

* * *

**ಗುಂಡಾ** ಜನರ ಹಾವಳಿ ಹೆಚ್ಚಾದ ಈ ಕಾಲದಲ್ಲಿ **ಗುಂಡಾ** ಶಬ್ದ ಎಲ್ಲಿಂದ ಬಂತೆಂಬ ಪ್ರಶ್ನೆ ಕೇಳಿದರೆ ತಪ್ಪಲ್ಲ. ಮರಾಠಿ ವ್ಯುತ್ಪತ್ತಿ ಕೋಶ ಇವನ್ನು ಕನ್ನಡಕ್ಕೆ ಗಂಟು ಹಾಕುತ್ತದೆ. ಆದರೆ ಮರಾಠಿಯಲ್ಲಿ **ಗುಂಡಾ** ಎಂದರೆ ಬುದ್ಧಿವಂತ, ಧೂರ್ತ ಎಂದರ್ಥ. ಕನ್ನಡದ **ಗುಂಡ** ಕಲ್ಲು ಗುಂಡಿನಂತಿರುವವ, ಅವನು ಧೂರ್ತ ಹೇಗಾದನು? ಈ ಕನ್ನಡ ಗುಂಡನಿಗೂ ಉತ್ತರದ ಭಾಷೆಗಳಲ್ಲಿರುವ **ಗುಂಡಾ**ನಿಗೂ ಸಂಬಂಧ ಇರಲಿಕ್ಕಿಲ್ಲ. ಸುನೀತ ಕುಮಾರ ಚಟರ್ಜಿ ಪ್ರಕಾರ ಗುಂಡಾ ಇರಾಣದಿಂದ ಬಂದವನು. **ಗುಂದಾ**, **ಗುಂದ್** ಎಂದರೆ ಹೊಸ ಪರ್ಶಿಯನ್ ಭಾಷೆಯಲ್ಲಿ ತಂಡ, ಜಂಗುಳಿ; ಹಳೇ ಪರ್ಶಿಯನ್ನಿನಲ್ಲಿ ಸೈನ್ಯ, ದಂಡು. ಈ ಶಬ್ದ ತುರ್ಕಿ ಆಕ್ರಮಣಕ್ಕೂ ಮುಂಚೆ ಭಾರತಕ್ಕೆ ನುಸುಳಿ ಕಾಲಾಂತರದಲ್ಲಿ 'ದ' ವನ್ನು 'ಡ' ಮಾಡಿಕೊಂಡಿರಬೇಕು. ದಂಡಿನವರು ಪುಂಡರೆಂಬ ಪ್ರತೀತಿ ಭಾರತದಲ್ಲೆಲ್ಲ ಇದ್ದದ್ದೇ. ಹಳೇ

ಬಂಗಾಲಿ ಶಾಸನಗಳಲ್ಲಿ ಬ್ರಾಹ್ಮಣರಿಗಿತ್ತ ಅಗ್ರಹಾರಗಳಲ್ಲಿ ''ಈ ಗ್ರಾಮದಲ್ಲಿ ದಂಡಿನವರಿಗೆ ಪ್ರವೇಶ ನಿಷೇಧಿಸಿದೆ'' ಎಂದು ಇರುತ್ತಿತ್ತಂತೆ. ಹೀಗೆ ಗುಂಡಾಗಳಿಂದ ಕನ್ನಡಿಗರು ಕೈ ಝಾಡಿಸಿಕೊಂಡು ಭಾರತದ ಗಡಿಯಾಚೆಗೆ ಬೆರಳು ತೋರಿಸಬಹುದು!

ಸುನೀತಿ ಚಟರ್ಜಿ ಹೇಳುವ ಈ ನಿಷೇಧ ಕರ್ನಾಟಕದಲ್ಲಿಯೂ ಇತ್ತು. ಮಳವಳ್ಳಿಯ ಪ್ರಾಕೃತ ಶಾಸನದಲ್ಲಿ ಆ ಅಗ್ರಹಾರವು ''ಅಭಟ ಪ್ರವೇಶಂ'' ಸೈನಿಕರಿಗೆ ಪ್ರವೇಶವಿಲ್ಲದ್ದು ಎಂದು ತಾಕೀತು ಇದೆ.

೮೬

ಉತ್ತರ ಕರ್ನಾಟಕಕ್ಕೆ ಅಕಸ್ಮಾತ್ತಾಗಿ ಬಂದು ಹೋಗುವವರಿಗೆ ಕೂಡ **ಅಗದೀ** ಎಂಬ ಶಬ್ದ ಕಿವಿಗೆ ಬೀಳದೆ ಇರಲಾರದು. **ಅಗದೀ** ಸುಂದರ ಹುಡುಗಿ, **ಅಗದೀ** ಮೂರ್ಖ, **ಅಗದೀ** ಸೋಯಿ ಮಾಲು ಇತ್ಯಾದಿ. ಈ ಶಬ್ದ ಮರಾಠಿಯಿಂದ ಉತ್ತರ ಕರ್ನಾಟಕಕ್ಕೆ ಬಂದು ನೆಲೆಯಾದದ್ದು ಎಂಬಲ್ಲಿ ಎರಡು ಮಾತಿಲ್ಲ. ಮರಾಠಿ ವ್ಯುತ್ಪತ್ತಿ ಕೋಶದಲ್ಲಿ **ಅಗದೀಂ** ಪದಕ್ಕೆ ''ಸರ್ವ, ಆತ್ಯಂತಿಕ, ಪರಾಕಾಷ್ಠೆಯ'' ಎಂಬರ್ಥಗಳನ್ನು ಕೊಟ್ಟಿದ್ದರೂ ಮರಾಠಿ ಭಾಷಾ ವಿದ್ವಾಂಸರಿಗೂ ಈ ಶಬ್ದ ಎಲ್ಲಿಂದ ಬಂತೆಂಬುದು ಅಗದೀ ಖಚಿತವಾಗಿ ಗೊತ್ತಿಲ್ಲ. ''ಸಂಸ್ಕೃತ ಅಗತೀ'' ಎಂದು ಹೇಳಿ ಮುಂದೊಂದು ಪ್ರಶ್ನಾ ಚಿಹ್ನೆ ( ?) ಇಟ್ಟಿದ್ದಾರೆ. ''ಅಗತಿ'' ಎಂದರೆ ಬೇರೆ ಗತಿ ಇಲ್ಲದ್ದು, ಉಪಾಯವಿಲ್ಲದ್ದು, ದಾರಿ ಇಲ್ಲದ್ದು. ಸರಿಯಾಗಿ ಹೇಳುವುದಾದರೆ ಸಂಸ್ಕೃತದಲ್ಲಿ ಅದು **ಅಗತ್ಯಾ** (ಗತಿಯಿಲ್ಲದ್ದರಿಂದ) ಎಂದಾಗಬೇಕು. **ಅಗತ್ಯ** ಎಂಬ ರೂಪದಲ್ಲಿ ''ಅವಶ್ಯ'' ಎಂಬರ್ಥಲ್ಲಿ ಅದು ಕನ್ನಡ, ತಮಿಳು, ತೆಲುಗುಗಳಲ್ಲಿಯೂ ಇದೆ. ಸಂಸ್ಕೃತದ **ಅಗತ್ಯಾ** ಕನ್ನಡಕ್ಕೆ ಬರುವಾಗ ''ಬೇಕಾದ್ದು'' ಎಂಬರ್ಥಕ್ಕೆ ತಿರುಗಿದಂತೆ ಮರಾಠಿಗೆ ಹೋಗುವಾಗ ''ಸಂಪೂರ್ಣ'' ಎಂಬರ್ಥಕ್ಕೆ ತಿರುಗಿದ್ದು ಆಶ್ಚರ್ಯವಲ್ಲ. ಬೇರೆ ಗತಿಯಿಲ್ಲದ್ದು ಸಂಪೂರ್ಣವಾಗಿ ಒಂದೇ ಅವಸ್ಥೆಯಲ್ಲಿರುವಂಥದು ತಾನೇ? ಆದರೂ ಕಡೆಯ ''ತ'' ಕಾರ ''ದ'' ಕಾರವಾದದ್ದು ಹೇಗೆ? ತಮಿಳು ಮಲೆಯಾಳಗಳಲ್ಲಾದರೆ ಇದು ಸಹಜ. ಆದರೆ ಮರಾಠಿಯಲ್ಲಿ?

ಈ ವಿಷಯದಲ್ಲಿ ನನ್ನದೊಂದು ಅನುಮಾನವಿದೆ. ಇದು ಸಂಸ್ಕೃತಕ್ಕೆ ಸಂಬಂಧಿಸುವ ಬದಲು ಅರಬ್ಬಿ – ಉರ್ದುವಿಗೆ ಸಂಬಂಧಿಸಿರಬಹುದೆ? ಉರ್ದುವಿನಲ್ಲಿ ಅರಬ್ಬಿ– ಪಾರಸಿಕ ಮೂಲಕ **ಅಕ್ದ್**, **ಅಕ್ದ್‌ನಾಮಾ**, **ಅಕ್ದ್‌ಬಂದೀ** ಇತ್ಯಾದಿ ಪದಗಳಿವೆ. ''ಅಕ್ದ್'' ಎಂದರೆ ಸಂಬಂಧ ನಿಶ್ಚಯಿಸುವುದು, ''ಅಕ್ದ್‌ನಾಮಾ'' ಎಂದರೆ ನಿಶ್ಚಯ ಪತ್ರ, ''ಅಕ್ದ್‌ಬಂದೀ'' ಎಂದರೆ ಕರಾರು ಮಾಡುವುದು, ನಿಶ್ಚಯಿಸುವುದು ಇತ್ಯಾದಿ. ನಿಶ್ಚಯವಾದದ್ದು ಖಂಡಿತ, ಖಂಡಿತವಾದದ್ದು ಸಂಪೂರ್ಣ ಅಲ್ಲವೇ? ಕನ್ನಡದಲ್ಲಿ ಖಂಡಿತ, ಖಚಿತ ಎನ್ನುವುದಕ್ಕೆ ''ಕರಾರುವಾಕ್ಕು'' ಎನ್ನುತ್ತೇವೆ ತಾನೆ? **ಅಕ್ದೀಂ** ಘಟಿಂಗ ಅಂದರೆ ಅಪ್ಪಟ ಘಟಿಂಗ ಆಗುತ್ತಾನೆ.

ಸ್ವಲ್ಪ ಎಂಬರ್ಥದಲ್ಲಿ **ತುಸ**, **ತುಸು** ಎಂದು ಹೆಚ್ಚಾಗಿ ಉತ್ತರ ಕರ್ನಾಟಕದಲ್ಲಿ ಬಳಕೆಯಲ್ಲಿದ್ದ ಪದ ಈಗ ಎಲ್ಲೆಡೆ ವ್ಯಾಪಿಸಿದೆ. ಕುಮಾರವ್ಯಾಸನ ಕಾಲದಲ್ಲೇ ಈ ಶಬ್ದ ಬಳಕೆಯಲ್ಲಿತ್ತು. ಆದರೆ ಇದು ಎಲ್ಲಿಂದ, ಹೇಗೆ ಬಂತೆಂಬಲ್ಲಿ ಸಾಹಿತ್ಯ ಪರಿಷತ್ತಿನ

ನೈಘಂಟುಕರಿಗೂ ಸಂದೇಹವಿದೆ. **ತುಸ, ತೂಸ್** ಶಬ್ದಗಳು ಮರಾಠಿಯಲ್ಲಿಯೂ ಹಿಂದಿಯಲ್ಲಿಯೂ ಇವೆ. ಆದರೆ ಸ್ವಲ್ಪ ಎಂಬರ್ಥ ಅಲ್ಲಿಲ್ಲ. ಅಲ್ಲಿರುವುದು ಸಂಸ್ಕೃತದ **ತುಷ** ಶಬ್ದದ್ದೇ ಅರ್ಥ. **ತುಷ** ಎಂದರೆ ಧಾನ್ಯದ ಹೊಟ್ಟು. ತವುಡು ಎಂಬರ್ಥ ಸಂಸ್ಕೃತದಲ್ಲಿ ಅಥರ್ವ ವೇದದಷ್ಟು ಹಳೆಯದು. ಕನ್ನಡದಲ್ಲಿಯೂ ಈ ಸಂಸ್ಕೃತ ಶಬ್ದ ಪ್ರವೇಶ ಪಡೆದಿದೆ.

ನನಗನಿಸುವ ಪ್ರಕಾರ **ತುಸ** ಎಂಬುದು ಸಂಸ್ಕೃತದ ತುಷದ್ದೇ ತದ್ಭವ. ತುಶ್, ತುಷ್, ತುಸ್ ದಾತುಗಳು ಸಂಸ್ಕೃತದಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಒಂದೇ ತಾತ್ಪರ್ಯವನ್ನು ಧ್ವನಿಸುತ್ತವೆ. ಇವುಗಳಿಂದ ಉದ್ಭವಿಸಿದ ಪದಗಳು ಸಣ್ಣ ಕಣಗಳಾಗಿರುವ ಪದಾರ್ಥಗಳನ್ನೂ ಸೂಚಿಸುತ್ತವೆ. ತುಷ ಎಂದರೆ ಹೊಟ್ಟು (ಧಾನ್ಯದ ಸಿಪ್ಪೆ), **ತವುಡು** ಎಂದಾಗ ಹಗುರಾದ ಕಣಗಳೇ ಅಭಿಪ್ರೇತವಾಗಿಲ್ಲವೇ ? **ತುಷಾರ** ಎಂದರೆ ಹಿಮದ ಕಣ, ಅಥವಾ ನೀರಿನ ತುಂತುರು, ಅಥವಾ ಹನಿ. **ತೂಸ್ತ** ಎಂದರೆ ಧೂಳಿನ ಕಣ. ವಿಶೇಷವೆಂದರೆ ಇಂಗ್ಲೀಷಿನ dust ಕೂಡ ದೂಳೇ. ಹಳೇ ಇಂಗ್ಲೀಷಿನಲ್ಲಿ ಇದು ದೀರ್ಘವಾಗಿ ಉಚ್ಚರಿಸಲ್ಪಡುತ್ತಿತ್ತು. ಆದರೆ ಜರ್ಮನ್ ಜ್ಞಾತಿ ಪದ dunstಗೆ ಹಿಮ ಅಥವಾ ಇಬ್ಬನಿ ಕಣವೆಂದೇ ಅರ್ಥವಾಗಿದ್ದು ಸಂಸ್ಕೃತದ ತುಷಾರಕ್ಕೂ ಅದೇ ಅರ್ಥ. ಅರ್ಥಾತ್ ಇವೆಲ್ಲವೂ ಒಂದಲ್ಲ ಒಂದು ತರದ **ಕಣ** ಇಲ್ಲವೆ **ಹನಿ**ಗಳು. ಹೊಟ್ಟು, ತವುಡುಗಳೂ ರೂಪ ಸಾದೃಶ್ಯದಿಂದ ಕಣಗಳೇ. ನಾವು **ತುಸು, ತುಸು** ಎಂದು ಹೇಳುವಾಗ ಒಂದು ಕಣ, ಹನಿ ಎಂಬುದರ ಸಾದೃಶ್ಯವನ್ನೇ ಬಳಸುತ್ತೇವೆಂದು ನನಗೆ ತೋರುತ್ತದೆ. ಹೋಲಿಕೆ ಬೇಕಿದ್ದರೆ, ''ಸ್ವಲ್ಪ ಹಾಕಿರಿ'' ಎನ್ನುವುದಕ್ಕೆ ಹವ್ಯಕ ಕನ್ನಡದಲ್ಲಿ ''**ಹನಿಯ ಹಾಕಿ**'' ಎಂದೂ ಬ್ರಾಹ್ಮಣರ ತುಳುವಿನಲ್ಲಿ ''**ಪನೀಪಾಡ್ಲೆ**'' ಎಂದೂ ಹೇಳುತ್ತಾರೆ. ಇಲ್ಲಿ ಸ್ಪಷ್ಟವಾಗಿಯೆ ನೀರಿನ ಹನಿಯನ್ನೇ ಸಾದೃಶ್ಯಕ್ಕಿಟ್ಟುಕೊಂಡು ಅಲ್ಪ ಪ್ರಮಾಣವನ್ನು ಸೂಚಿಸಲಾಗಿದೆ. ತುಸ ಎಂದರೂ ಅದೇ.

* * *

**ಪೂಜಿ** ಮಾರ್ಕು ಬಿತ್ತು ಎನ್ನುತ್ತೇವೆ. ಇದೇ ಶಬ್ದ **ಪೂಜ್ಜ** ಎಂಬ ರೂಪದಲ್ಲಿಯೂ ಕೇಳಿಸುತ್ತದೆ. ಕೆಲ ಮರಾಠಿ ಕೋಶಗಳಲ್ಲಿ **ಪೂಜ್ಯ** ಅಂದರೆ ಶೂನ್ಯ ಎಂದು ಅರ್ಥ ಸಿಗುತ್ತದೆ. ಆದರೆ ''**ಪೂಜ್ಯ**'' ವಾಗಿರುವುದು ಸೊನ್ನೆ ಹೇಗಾದೀತು ? ಈ ಸಮಸ್ಯೆಯ ಬೆನ್ನು ಹತ್ತಿ ಸವಾರಿ ಮಾಡಿ ಕೊನೆಗೆ ಪ್ರಾಚೀನ ಭಾರತೀಯ ಗಣಿತ ಸಿದ್ಧಾಂತಗಳಲ್ಲೊಂದಾದ ''ಬ್ರಹ್ಮ ಸಿದ್ಧಾಂತ'' ಗ್ರಂಥದ ಗಣಿತಾಧ್ಯಾಯವನ್ನು ತಲುಪಿದ್ದಾಯಿತು. ಅಲ್ಲಿ **ಪೂರ್ಣ** ಎಂಬುದಕ್ಕೆ **ಶೂನ್ಯ** ಎಂಬರ್ಥ ಕೊಟ್ಟಿದೆ. ಪೂರ್ಣ ಎಂಬುದು ಪೂಜ್ಯ ಹೇಗಾಯಿತೆಂಬುದಕ್ಕೆ ಹಿಂದಿಯಲ್ಲಿ ಸುಮಾರಾಗಿ ಉತ್ತರ ಕಾಣಬಹುದು. ಸಂಸ್ಕೃತದ **ಪೂರ್ಯತೇ** (ಪೂರ್ಣವಾಗುತ್ತದೆ) ಎಂಬುದು 'ಯ' ಕಾರಕ್ಕೆ 'ಜ' ಕಾರ ಬಂದು ಪೂಜಹಿ ಆಗುತ್ತದೆಂದು ಹಿಂದೀ ವ್ಯುತ್ಪತ್ತಿಕಾರರು ನಿರುಕ್ತ ಹೇಳುತ್ತಾರೆ. ತುಲಸೀ ದಾಸ ರಾಮಾಯಣದಲ್ಲಿ ''ಪೂಜಹಿ ಮನಕಾಮನಾ'' ಎಂಬ ಮಾತು ಬರುತ್ತದೆ. ಹೀಗೆ ಗಣಿತಾಧ್ಯಾಯದ **ಪೂರ್ಣ** ಹಿಂದಿಯಲ್ಲಿ **ಪೂಜ** ಆಯಿತೆಂದುಕೊಳ್ಳೋಣ. ಯಾರೊಬ್ಬನಿಂದ ಬರತಕ್ಕ ಬಾಕಿ ತೀರಿತೆಂದರೆ ಲೆಕ್ಕ **ಪೂರ್ತಿ**ಯಾಯಿತು. ಬಾಕಿ ಇಲ್ಲವಾಯಿತು. ಚುಕ್ತಾ ಆಯಿತು. ಹಾಗಾದಾಗ ಅವನ ಹೆಸರಿನೆದುರಿಗೆ ಒಂದು ಬಿಂದು ಅಥವಾ ಶೂನ್ಯದ ಗುರುತು ಹಾಕುತ್ತಾರೆ. ಹಾಗೆಯೆ ಹಾಜರಿ ಪುಸ್ತಕದಲ್ಲಿ ಒಬ್ಬನು ಹಾಜರಿಲ್ಲದಿದ್ದರೂ ಅದೇ ಗುರುತು ಹಾಕುತ್ತಾರೆ. ಹೀಗೆ ಬಲು ಸುತ್ತು ಬಳಸಿನ ದಾರಿಯಲ್ಲಿ ಸಾಗಿ **ಪೂರ್ಣವೇ ಶೂನ್ಯ**ವಾಯಿತು ! ಬಹುಶಃ ಪೂರ್ಣವನ್ನು '0'

ಗುರುತಿನಿಂದ ಸೂಚಿಸುತ್ತಾರೆ. ಹಾಗೆಯೇ ಇಲ್ಲದಿರುವುದಕ್ಕೂ ಅದೇ ಗುರುತಿನ ಬಳಕೆ ಇದೆ. ಹೀಗೆ ಶಬ್ದಗಳು ಅರ್ಥವನ್ನು ಗಳಿಸುವ ರೀತಿ ದುರ್ಗಮ್ಯವಾದದ್ದು.

೮೭

**ದ್ರಾಬೆ, ದ್ರಾಪೆ** ಎಂಬ ಬೈಗುಳ ಮಾತೊಂದು, ಹೆಚ್ಚಾಗಿ ಕರಾವಳಿ ಕರ್ನಾಟಕದಲ್ಲಿ ರೂಢಿಯಲ್ಲಿದೆ. ಎಲ್ಲ ಬೈಗಳ ಮಾತುಗಳಂತೆ ಇದೂ ಅಸ್ಪಷ್ಟವಾದ ಅರ್ಥದ್ದು. ಗೋಪಾಲಕೃಷ್ಣ ಅಡಿಗರು ಇದನ್ನು ತಮ್ಮ ಕಾವ್ಯದಲ್ಲಿ ಉಪಯೋಗಿಸಿ ಶಾಶ್ವತಗೊಳಿಸಿದ್ದಾರೆ. ಒಟ್ಟಾರೆ ಇದಕ್ಕೆ ದರಿದ್ರ, ನಾಚಿಕೆಗೆಟ್ಟ, ತಿಂಡಿಪೋತ ಇತ್ಯಾದಿ ಅರ್ಥವನ್ನು ಊಹಿಸಬಹುದು. ಸಾಹಿತ್ಯ ಪರಿಷತ್ ಕೋಶದಲ್ಲಿ ಈ ಶಬ್ದ, ತಮಿಳು, ತೆಲುಗುಗಳಲ್ಲಿಯೂ ತುಸು ಉಚ್ಚಾರಭೇದದೊಡನೆ ಇದೆಯೆಂದು ಹೇಳಿ, ಇದು ಸಂಸ್ಕೃತ **ದ್ರಾಪ**ದಿಂದ ಬಂದದ್ದು ಎಂದಿದೆ. ಈ ಪದದ ಬೆನ್ನು ಹತ್ತಿ ಹೋದಾಗ ಇದು ವೇದಕಾಲದಷ್ಟು ಹಿಂದೆ ಹೋಗುತ್ತದಲ್ಲದೆ ಗ್ರೀಕಿನಲ್ಲಿಯೂ ಶಬ್ದ ಬಂಧುಗಳನ್ನು ಹೊಂದಿದ್ದುದು ತಿಳಿಯಿತು. ಇದರ ಧಾತ್ವರ್ಥ (ದ್ರಾ) ಧಡಪಡಿಸುವುದು, ತಿರಿಯುವುದು, ಬಡತನದಲ್ಲಿರುವುದು, ಗರಜಿಯಲ್ಲಿರುವುದು ಇತ್ಯಾದಿ. ಜಡೆಗಟ್ಟಿದ ಕೂದಲಿನ ಶಿವನಿಗೆ ದ್ರಾಪಿ ಎಂಬ ಹೆಸರಿದೆ. ಶಿವನು ತಿರುಕನಾಗಿ ಓಡಾಡುವುದರಿಂದ ಈ ಹೆಸರು ಇದೆ. ಯಜುರ್ವೇದದ ವಾಜಸನೇಯ ಸಂಹಿತೆಯಲ್ಲಿ (೧೬,೪೭) ರುದ್ರನನ್ನು ಕುರಿತ ''ದ್ರಾಪೇ, ಅಂಧಸಸ್ಪತೇ, ದರಿದ್ರ, ನೀಲಲೋಹಿತ' ಎಂದು ಆರಂಭವಾಗುವ ಮಂತ್ರವೊಂದಿದೆ. ಆದ್ದರಿಂದ ಈ ಯುಗದ ದರಿದ್ರ ದ್ರಾಪೆಗಳೂ ಒಳ್ಳೇ ಕಂಪನಿಯಲ್ಲಿದ್ದಾರೆ ಎನ್ನಬಹುದು !

**ಹಲ್ಕಾ** ಮನುಷ್ಯ, **ಹಲ್ಕಾ** ಮಾಲು, **ಹಲ್ಕಟ್** ಹುಡುಗಿ, **ಹಲ್ಕಿ** ಆಗಿ ಹೋಯಿತು ಎಂದು ಬಯ್ಯುವುದುಂಟು. ಇದರಲ್ಲಿಯೂ ಭಾಷೆಗಳು ಶಬ್ದಗಳನ್ನು ಎರವಲು ಪಡೆಯುವಾಗ ಮಾಡಿಕೊಳ್ಳುವ ಅರ್ಥವ್ಯತ್ಯಾಸ ಕಂಡುಬರುತ್ತದೆ. **ಹಲಕಾ** ಎಂದರೆ ಹಿಂದಿಯಲ್ಲಿ **ಹಗುರ** ಎಂದು ಅರ್ಥ. ಬಂಗಾಲಿ, ಮರಾಠಿಗಳಲ್ಲಿಯೂ ಅದೇ ಅರ್ಥದಲ್ಲಿ ಹಲ್ಕಾ ಪ್ರಯೋಗವಾಗುತ್ತದೆ, ತೂಕದಲ್ಲಿ ಕಡಿಮೆ. ಆದ್ದರಿಂದ ಯೋಗ್ಯತೆಯಲ್ಲಿ ಕೊರತೆ, ಸುಲಭ ಇತ್ಯಾದಿ ಅರ್ಥಗಳೊಡನೆ ಒಳ್ಳೇ ಅರ್ಥಗಳಲ್ಲಿಯೂ (ಉದಾ : ಹಲಕೀ ಮುಸಕಾನ್ = ನಸು ನಗೆ) ಈ ಪದದ ಬಳಕೆ ಅಲ್ಲಿ ಇದೆ. ನಮ್ಮ **ಹಗುರ** ಶಬ್ದಕ್ಕಿರುವ ಎಲ್ಲ ಅರ್ಥಗಳೂ ಹಿಂದಿಯಲ್ಲಿ **ಹಲಕಾಕ್ಕೆ** ಇವೆಯೆನ್ನೋಣ. ಆದರೆ ಅದೇ ಶಬ್ದ ಕನ್ನಡಕ್ಕೆ ಬಂದಾಗ ಹಿಂದಿಯಲ್ಲಿ ಅದಕ್ಕಿರುವ ಕೆಟ್ಟ ಅರ್ಥಗಳು ಮಾತ್ರ ಬಂದುವಲ್ಲದೆ ಆ ಕೆಟ್ಟ ಅರ್ಥಗಳಿಗೆ ಹೆಚ್ಚಿನ ಬಲವೂ ಬಂದಿದೆ. **ಹಲ್ಕಿ** ಆಗಿಹೋಯಿತು ಎನ್ನುವಾಗ ನಾವು ಅವಮಾನವನ್ನು ಕುರಿಯುತ್ತೇವೆ (ಅವ–ಮಾನ ಎಂದರೂ ಅಳತೆ ಕಡಿಮೆ ಎಂದೇ ಅರ್ಥ ತಾನೇ!) **ಹಲ್ಕಟ್** ಹುಡುಗಿ ಎನ್ನುವಾಗ ಅವಳ ಚಾರಿತ್ರ್ಯಕ್ಕೇ ನಾವು ಹೆಸರಿಡುತ್ತೇವೆ.

**ಕಲಿ** ಎಂಬ ಶಬ್ದಕ್ಕೆ ಹಲವು ಇಷ್ಟಾನಿಷ್ಟ ಅರ್ಥಗಳು ಉಂಟು. ಆದರೆ ಯಾರಿಗೂ ಗೊತ್ತಿಲ್ಲ ಅನ್ನುವಂತಿಲ್ಲದ್ದು ಅದರ ದುಷ್ಟಾರ್ಥವೇ. ಹೀಗೆ **ಕಲಿಯುಗ**ವೊಂದಿದೆ : ಅವನಿಗೆ **ಕಲಿ** ಹಿಡಿದಿದೆ ಎನ್ನುತ್ತೇವೆ, ಅಮಂಗಲ, ಅನಿಷ್ಟ, ಅವಲಕ್ಷಣ, ದುರ್ದೈವದ ಸ್ವರೂಪದ್ದು ಕಲಿ. ಕಲಿ ಶಬ್ದದ ಈ ಅರ್ಥಗಳನ್ನು ಶೋಧಿಸುತ್ತ ಹೋದರೆ ನಾವು ಪುನಃ ಅಥರ್ವವೇದಕ್ಕೆ

ಮುಟ್ಟುತ್ತೇವೆ. ಆ ವೇದದ ಒಂದು (೭, ೧೦೯, ೧) ಸೂಕ್ತದಲ್ಲಿ ಪಗಡೆಯಾಟದ ಸಂದರ್ಭದಲ್ಲಿ **ಕಲಿ**ಯ ಸುದ್ದಿ ಬರುತ್ತದೆ. ಕಲಿ ಎಂದರೆ ಇಲ್ಲಿ ಪಗಡೆಯಾಟದ ದಾಳದಲ್ಲಿ ಒಂದು **ಚುಕ್ಕಿ** ಇರುವ ಮುಖ. ದಾಳ ಒಗೆದಾಗ ಈ ಮುಖ ಮೇಲಾಗಿ ಬಿದ್ದರೆ ಆಟ ಕಳೆದುಕೊಂಡಂತೆ, ಹಿಂದೆ ಪಗಡೆಯಲ್ಲಿ ದಾಳವಾಗಿ ತಾರಿ ಮರದ ಬೀಜಗಳನ್ನೂ ಬಳಸುತ್ತಿದ್ದರು. ಅದಕ್ಕೂ **ಕಲಿ** ವೃಕ್ಷವೆಂದು ಹೆಸರು. ಪಗಡೆಯಲ್ಲಿ ಪಟ್ಟು ಹಿಡಿದು ಒಂದಂಕೆ ಬೀಳುವುದಕ್ಕೆ ಒಂದು ದುಷ್ಟ ದೇವತೆ ಕಾರಣವೆಂದು ನಂಬಿಕೆ ಹುಟ್ಟಿ ಆ ದೈವಕ್ಕೆ **ಕಲಿ**ಯೆಂದು ಹೆಸರಿಡಲಾಯಿತು. ಅವನೇ **ಕಲಿಪುರುಷ**. ಒಂದಂಕೆ ಬಿದ್ದು ಸೋತಷ್ಟೂ ಆಡುತ್ತ ಹೋಗುವ ಹುಚ್ಚು ಕೂಡ ಕಲಿಯೇ. ನಳರಾಯನಿಗೆ, ಧರ್ಮರಾಜನಿಗೆ ಕಲಿ ಹಿಡಿಯಿತೆಂದರೆ ಇದೇ; **ಕಲಿ** ಶಬ್ದ ಬಹುಶಃ **ಕಲ್** (ಎಣಿಸು) ಧಾತುವಿನಿಂದ ಹುಟ್ಟಿದೆ. ಕಲಿಯೆಂಬುದು ಎಣಿಕೆಯಲ್ಲಿ ಒಂದನೇ ಅಂಕೆಯಾದ್ದರಿಂದ ಅದಕ್ಕೆ ಆ ಹೆಸರು. ಮೇಲೆ ಹೇಳಿದ ಅಥರ್ವ ಮಂತ್ರದಿಂದ ಪಗಡೆಯಲ್ಲಿ (ಅಕ್ಷ) ಜಯವನ್ನು ಕೋರುವವನು ಕಲಿಯ ದಯೆ ದೊರಕಿಸಲು ಹೋಮ ಮಾಡುತ್ತಾನೆ.

ಸಂಸ್ಕೃತ **ದ್ಯೂತ**ದಿಂದ **ಜೂದು, ಜೂಜು; ದ್ಯೂತಕಾರ**ದಿಂದ **ಜುಗಾರ - ಜುಗಾರಿ** ಬಂತು. ದ್ಯೂತ ಶಬ್ದ ಹುಟ್ಟಿದ್ದು **ದಿವ್** ಧಾತುವಿನಿಂದ. ಅದು ಋಗ್ವೇದದಷ್ಟು ಹಳೆಯದು. (ಅಕ್ಷೈರ್ಮಾ ದೀವ್ಯಂ ಕೃಷಿಂ ಇತ್ ಕೃಷಸ್ವ = ಅಕ್ಷಗಳಿಂದ (ಜೂಜು) ಆಡಬೇಡ, ಕೃಷಿ ಮಾಡು ಎಂದು ಋಗ್ವೇದ ಉಪದೇಶಿಸುತ್ತದೆ). ಈ ದಿವ್ (= ಜೂಜಾಡು) ಧಾತು ವೈದಿಕ ಸಂಸ್ಕೃತದಲ್ಲಿ ಮಾತ್ರವಲ್ಲ, ಪ್ರಾಚೀನ ಇರಾಣಿನ ಜೆಂದ್ ಮತ್ತು ಮಧ್ಯ ಯುರೋಪಿನ ಲಿಥುವೇನಿಯನ್ ಭಾಷೆಯಲ್ಲಿ ಸಂವಾದಿ ಧಾತುಗಳನ್ನು ಹೊಂದಿದೆ. ಜೂಜಿನ ಚಟ ಎಷ್ಟು ಹಳೆಯದೆಂದು ಇದು ತೋರಿಸುತ್ತದೆ. ಆರ್ಯರು ಬೇರೆ ಬೇರೆ ದಿಕ್ಕಿಗೆ ಚದರುವ ಮುಂಚೆಯೇ ಅದು ಅವರಿಗೆ ಅಂಟಿತ್ತು.

ಕವಡೆ ಅಥವಾ ದಾಳದಿಂದ ಆಡದ ಬೇರೊಂದು ಬಗೆಯ ಜೂಜು ಈಗ ಸಾರ್ವತ್ರಿಕವಾಗಿರುವ **ಲಾಟರಿ**. ಲಾಟರಿ ಇಟಾಲಿಯನ್ ಭಾಷೆಯಿಂದ ಬಂದದ್ದಾದರೂ ಜರ್ಮನ್ ಮೂಲದ್ದು. ಅದೇ ಮೂಲದ ಇಂಗ್ಲೀಷಿನ **ಲಾಟ್** ಶಬ್ದಕ್ಕೆ ಕಡ್ಡಿ ಅಥವಾ ಹುಲ್ಲಿನ ತುಣುಕನ್ನು ಒಂದು ಕಟ್ಟಿನಿಂದ ಅಥವಾ ರಾಶಿಯಿಂದ ಹೊರಗೆಳೆಯುವ ಅಥವಾ ಚೆಲ್ಲುವ ಮೂಲಕ ಯಾವುದೊಂದು ಸಂದೇಹಗ್ರಸ್ತ ವಿಷಯವನ್ನು ನಿರ್ಧರಿಸುವುದು ಎಂದರ್ಥ. ಈಗ ಕಾಗದದ ತುಣುಕುಗಳಲ್ಲೊಂದನ್ನು ಎತ್ತುವ ಮೂಲಕ ಹೀಗೆ ಮಾಡುವುದರಿಂದ ನಾವು ಲಾಟರಿ **ಎತ್ತುವುದು** ಎನ್ನುತ್ತೇವೆ. ಅವರು **ಒಗೆಯುವುದು** ಎಂಬರ್ಥದ cast ಶಬ್ದ ಬಳಸುತ್ತಾರೆ. ಲಾಟರಿ ಪದ್ಧತಿ ನಮ್ಮಲ್ಲಿಯೂ ಇತ್ತು ಎಂಬುದಕ್ಕೆ **ಗುಟಿಕಾ ಪಾತ** ಎಂಬ ಸಂಸ್ಕೃತ ಶಬ್ದ ಸಾಕ್ಷಿ ಕೊಡುತ್ತದೆ. ನಮ್ಮಲ್ಲಿ ಸಂದಿಗ್ಧ ವಿಷಯಗಳನ್ನು ನಿರ್ಣಯಿಸಲು **ಗುಟಿಕೆ**ಗಳನ್ನು (ಗುಳಿಕೆ) ಕವಡೆಗಳಂತೆ ಒಗೆಯುವ ಪದ್ಧತಿ ಇದ್ದಿರಬೇಕು. ಗುಳಿಗೆ ಒಗೆಯುವುದರಿಂದ ಆಗುವ ತೀರ್ಮಾನ ಯಾವಾಗಲೂ ಅನಿಶ್ಚಿತವಾಗುವುದರಿಂದ **ಗುಳಿಗೆ** ಒಗೆಯುವುದು ಎಂಬ ಪದಪುಂಜಕ್ಕೆ ಕನ್ನಡದಲ್ಲಿ ಇನ್ನೊಂದು ಅರ್ಥ ಕವಲೊಡೆದಿದೆ. ಅದೆಂದರೆ ಅಂದಾಜಿನಿಂದ ಏನಾದರೊಂದು ಹೇಳುವುದು – ಸರಿಯಾದರೆ ಆಯಿತು ಇಲ್ಲದಿದ್ದರೆ ಇಲ್ಲ. **ಗುಳಿಗೆ ಒಗೆದು ನೋಡಿವ** ಅಂದರೆ ಅಂದಾಜಿನಿಂದ ಕಲ್ಲು ಬೀರಿದ. ಹೀಗೆ ನಿಶ್ಚಯವಾಗಿ ವಿಷಯ ಗೊತ್ತಿಲ್ಲದೆ ಬರೇ ಊಹಾತ್ಮಕವಾಗಿ ಆಡುವ ಮಾತಿಗೆ

**ಗುಳಿಗೆ** (= ಸುಳ್ಳು) ಎಂಬರ್ಥ ಬಂತು.

ಲಾಟರಿಗೆ ಕರಾವಳಿಯಲ್ಲಿ ಗೋವಾ ಲಾಟರಿ ಕಾಲದಲ್ಲಿ (ಸ್ವಾತಂತ್ರ್ಯ ಪೂರ್ವದಲ್ಲಿ) **ಸೋಡ್ತಿ** ಎಂಬ ಹೆಸರಿತ್ತು. ಅದು ಪೋರ್ತುಗೀಸ್ ಭಾಷೆಯಿಂದ ಬಂದದ್ದು. (ಗೋವೆಯಲ್ಲಿ ಪೋರ್ತುಗೀಸರಲ್ಲವೇ ಲಾಟರಿ ನಡೆಸುತ್ತಿದ್ದದ್ದು ?) ಪೋರ್ತುಗೀಸಿನ sortie ಲ್ಯಾಟಿನ್ನಿನಿಂದ ಬಂದ ಪದ. ಅರ್ಥ ಲಾಟರಿ ಎಂದೇ.

೮೮

ಹಿಂದುಗಳು ಸಕಲ ಕಾರ್ಯಗಳನ್ನು **ಶ್ರೀ**ಕಾರದಿಂದ ಆರಂಭಿಸುತ್ತಾರೆ. ಶ್ರೀರಾಮ ಶ್ರೀಕೃಷ್ಣ ಇತ್ಯಾದಿಯಾಗಿ ಭಕ್ತಿ ಗೌರವ ಸೂಚಿಸುವುದರೊಡನೆ **ಶುಭ** ಸೂಚಕವಾಗಿಯೂ ಶ್ರೀಕಾರ ಪ್ರಯೋಗ ನಿತ್ಯಜೀವನದಲ್ಲಿ ಆಗುತ್ತದೆ. ಶ್ರೀ ಪದ ಋಗ್ವೇದದಷ್ಟು ಹಳೆಯದು. ಗ್ರೀಕ್, ಲ್ಯಾಟಿನ್, ಲಿಥುವೇನಿಯನ್, ಜರ್ಮನ್ ಮೊದಲಾದ ಭಾಷೆಗಳಲ್ಲಿ ಇದಕ್ಕೆ ಸಂವಾದಿ ಪದಗಳಿವೆ. ಮೂಲತಃ ಆನು, ಆನಿಸು, ಅವಲಂಬಿಸು, ಹೊದ್ದು, ಹೊಂದು, ಆಶ್ರಯವಾಗು ಇತ್ಯಾದಿ ಅರ್ಥಗಳು ಶ್ರೀ ಧಾತುವಿಗೆ ಇದ್ದು ಪ್ರಕಾಶಿಸು, ಬೆಳಗು ಎಂಬರ್ಥವನ್ನೂ ಅದು ಪಡೆಯಿತು. ವೇದಗಳಲ್ಲಿ ಶ್ರೀ–ರ, ಅವೆಸ್ತನ್ (ಪಾರಸಿಗಳ ವೇದ) ಭಾಷೆಯಲ್ಲಿ ಸ್ರೀ–ರ ಎಂಬ ಪದ **ಸಂಪತ್ತುಳ್ಳ** ಎಂಬರ್ಥದಲ್ಲಿ ಪ್ರಯೋಗವಾಗಿದ್ದು ಕಾಣುತ್ತದೆ. ಋಗ್ವೇದದಲ್ಲಿ ಒಳ್ಳೆ ಲಕ್ಷಣವುಳ್ಳ ಆಡುಗಳಿಗೆ ''ಶ್ರೀಯಃಪುತ್ರಾಃ'' ಎಂಬ ಪ್ರೀತಿಯ ವರ್ಣನೆ ಸಿಗುತ್ತದೆ.

ಆಶ್ರಯ ಕೊಡತಕ್ಕದ್ದು ಸಂಪನ್ನವಿರಬೇಕು. ಸಂಪನ್ನವಿರುವುದು ಸುಂದರವಿರಬೇಕು, ಪ್ರಕಾಶಮಾನವಿರಬೇಕು. ಪ್ರಕಾಶಮಾನವಾದದ್ದು ಶುಭಕರವಿರಬೇಕು (ಶುಭವೆಂದರೂ ಬೆಳಗತಕ್ಕದ್ದೇ). ಹೀಗೆ ಈ ಶಬ್ದ ಒಳ್ಳೇ ಅರ್ಥಗಳನ್ನು ಹೇಗೆ ಬೆಳೆಸುತ್ತ ಹೋಯಿತೆಂದರೆ ವೈದಿಕ ಆಶೀರ್ವಾದ ಮಂತ್ರಗಳು ''ಶ್ರೀಯೇಜಾತಃಶ್ರಿಯ ಆನಿರಿಯಾಯ ಶ್ರೀಯಂ ವಯೋ....'' ಎಂದಿತ್ಯಾದಿಯಾಗಿ ಶ್ರೀಕಾರಮಯವಾಗಿವೆ. ಕೊನೆಗೆ ಶ್ರೀಯೇ ಒಬ್ಬ ದೇವತೆಯಾಗಿ ವಿಷ್ಣು ಪತ್ನಿಯೂ ಆದಳು. ಋಗ್ವೇದದ ಖಿಲಭಾಗದಲ್ಲಿ ಶ್ರೀಸೂಕ್ತ ಎಂಬ ಒಂದು ದೀರ್ಘ ಸೂಕ್ತವೇ ಇದೆ. ಅದರಲ್ಲಿ ''ಶ್ರಿಯಂ ದೇವೀ ಮುಪಹ್ವಯೇ'' ಎಂದು ಶ್ರೀದೇವಿಯನ್ನು ಹತ್ತಿರ ಕರೆಯುವುದು ಕಾಣಿಸುತ್ತದೆ. ಈ ದೇವತೆಯನ್ನು ಕಾಮದೇವನ ತಾಯಿಯೆಂದು ಭಾವಿಸಿದ್ದಾಯಿತು. ಕಾಮ ಎಂದರೆ ಬಯಕೆ. ಕಾಮನಿಗೆ ತಾಯಿಯಾದವಳು ನಮ್ಮ ಬಯಕೆಗಳನ್ನು ಪೂರೈಸದೆ ಇದ್ದಾಳೋ? ನಾವು ಹಿರಣ್ಯವನ್ನೂ (ಚಿನ್ನ) ಗೋವುಗಳನ್ನೂ ಅಶ್ವಗಳನ್ನೂ ಪುರುಷರನ್ನೂ (ದಾಸ) ಅವಳಲ್ಲಿ ಹೊಂದುತ್ತೇವೆ ಎಂದು ಆ ಮಂತ್ರ ಹೇಳುತ್ತದೆ.

ಶುಭಪ್ರದಳಾದ ಅವಳ ಹೆಸರು ಬರೆದೇ ನಾವು ವಿದ್ಯಾರಂಭಮಾಡುತ್ತೇವೆ ; ಮನೆಯ ಮುಂದೆ ಅವಳ ಹೆಸರು ಬರೆಯುತ್ತೇವೆ ; ದೇವತೆಗಳ ಹೆಸರುಗಳ ಮುಂಚೆ ಶ್ರೀಕಾರ ಸೇರಿಸುತ್ತೇವೆ ; ಗೌರವಾರ್ಹ ವ್ಯಕ್ತಿಗಳಿಗೆ ಶ್ರೀಮಾನ್, ಶ್ರೀಮತಿ ಎನ್ನುತ್ತೇವೆ ; ಬಂಗಾಲಿಗಳಂತೂ ತಾವೇ ತಮ್ಮ ಹೆಸರು ಬರೆಯುವಾಗ ''ಶ್ರೀ ರವೀಂದ್ರನಾಥ'' ಇತ್ಯಾದಿಯಾಗಿ ಬರೆದುಕೊಳ್ಳುತ್ತಾರೆ.

ಸೌಂದರ್ಯಕ್ಕಿಂತಲೂ ಮಿಗಿಲಾದ ಶೋಭೆ ಇರುವಲ್ಲೆಲ್ಲ ಶ್ರೀಯನ್ನು ನಾವು ಗುರುತಿಸುತ್ತೇವೆ. **ಮುಖಶ್ರೀ** (ಮೊಗಸಿರಿ), **ಕಾವ್ಯಶ್ರೀ, ವನಶ್ರೀ,** ಹೃದಯ **ಶ್ರೀಮಂತಿಕೆ** ಇತ್ಯಾದಿ.

ಮುಖಶ್ರೀ ಆಯಿತು; ಪಾದಕ್ಕೂ ಶ್ರೀ ತಗಲುತ್ತದೆ. ಸ್ವಾಮಿ ಸನ್ಯಾಸಿಗಳನ್ನು **ಶ್ರೀಪಾದಂಗಳು** ಎನ್ನುತ್ತೇವೆ. ಸಂಕ್ಷೇಪದಲ್ಲಿ ಸ್ವಾಮಿಗಳು ಶ್ರೀಗಳಾಗುತ್ತಾರೆ. ಲಕ್ಷ್ಮಿಯನ್ನು ಎದೆಯಲ್ಲೇ ತಳೆದ ವಿಷ್ಣು ಶ್ರೀನಿವಾಸನಾಗುತ್ತಾನೆ. ಶಿವನು ಲಕ್ಷ್ಮೀ ವಲ್ಲಭನಲ್ಲದಿದ್ದರೂ ಶ್ರೀಕಂಠ. ಗಂಧದ ಮರ ಶ್ರೀಖಂಡ. ಬಿಲ್ವ ಶ್ರೀಫಲ. ಅರಸರು ಕಳಿಸುವ ಆಜ್ಞಾಪತ್ರ **ಶ್ರೀಮುಖ**. ಸ್ವಾಮಿಗಳ ರಾಯಸವೂ ಶ್ರೀಮುಖವೇ – ಏಕೆಂದರೆ ಅದು ಮೇಲೆ ಅಥವಾ ಪ್ರಾರಂಭದಲ್ಲಿ ಶ್ರೀ ಎಂಬಕ್ಷರವನ್ನು ಹೊತ್ತಿರುತ್ತದೆ. ಅದು ಹೋಗಲಿ, ಅಪರಾಧಿಗೆ ತಲೆದಂಡ ವಿಧಿಸಿದಾಗ ಉಪಯೋಗಿಸುವ ಖಡ್ಗ ಕೂಡ **ಶ್ರೀಗರ್ಭ** ಎಂದು ಮಹಾಭಾರತ ಹೇಳುತ್ತದೆ. ಶ್ರೀಗರ್ಭ ಎಂದರೆ ಮಂಗಲವನ್ನು ಆಂತರ್ಯದಲ್ಲಿ ಹೊಂದಿದ್ದು. ಅಮಂಗಲವನ್ನು ಮಂಗಲವೆಂದು ಕರೆದು ಅದರ ದುಷ್ಟ ಪ್ರಭಾವವನ್ನು ಕಳೆಯಬಹುದೆಂಬ ಪ್ರಾಚೀನ ನಂಬಿಕೆಗೆ ಇದು ಒಂದು ಉದಾಹರಣೆ.

ದ್ರಾವಿಡ ಭಾಷೆಗಳನ್ನು ಪ್ರವೇಶಿಸುವಾಗ **ಶ್ರೀ ತಿರು** ಎಂದು ರೂಪಾಂತರ ಹೊಂದಿತು. (ಶ, ಚ, ತ – ಗಳು ಒಂದಕ್ಕೊಂದು ಸಮೀಪದ ಧ್ವನಿಗಳು.) ಹೀಗೆ **ತಿರುವೆಂಕಟ, ತಿರುನಾರಾಯಣ, ತಿರುಪತಿ, ತಿರುನೀಲಕಂಠ** ಮಾತ್ರವಲ್ಲ; **ತಿರುನಾಳ್** (ಶುಭದಿನ), **ತಿರುವಾಯ್ ಮೊಳಿ** (ಶುಭ ಮುಖದ ನುಡಿ) ಇತ್ಯಾದಿಗಳು. ನಾವು ಶ್ರೀ ಎಂದು ವ್ಯಕ್ತಿಗಳ ಹೆಸರುಗಳ ಹಿಂದೆ ಸೇರಿಸುವಂತೆ ತಮಿಳರು "ತಿರು" ವನ್ನು ಸೇರಿಸಿ ತಿರು ರಾಮಚಂದ್ರನ್ ಎನ್ನುತ್ತಾರೆ. ಬಹುಶಃ ಶ್ರೀಕಾರದಷ್ಟು ವ್ಯಾಪ್ತಿಯುಳ್ಳ ಒಂದು ಬೇರೆ ಶಬ್ದ ಇಲ್ಲವೇನೋ – ಹಿಂದೂ ಅಂತರಂಗದಲ್ಲಿ ಇಷ್ಟುಮಟ್ಟಿಗೆ ನಟ್ಟದ್ದು.

ಶ್ರೀ ಎಂದರೂ **ಲಕ್ಷ್ಮಿ** ಎಂದರೂ ಅವಳೇ ಎಂದು ಭಾವಿಸುತ್ತಿದ್ದೇವೆ. ಭಾಷೆಯಲ್ಲಿ ಲಕ್ಷ್ಮಿಗೆ ಶ್ರೀಯಂಥ ವೈವಿಧ್ಯವಿಲ್ಲವಾದರೂ ಅವಳ ಇತಿಹಾಸ ಕಡಿಮೆ ಕುತೂಹಲಕರವಲ್ಲ. **ಲಕ್ಷ್ಮೀ** ಶಬ್ದಕ್ಕೆ ಮೂಲ **ಲಕ್ಷ್** ಧಾತು. **ಲಕ್ಷ್** ಧಾತುವೂ ಲಕ್ಷ್ಮಿಯೂ ಋಗ್ವೇದದಷ್ಟು ಪುರಾತನ. "ಲಕ್ಷ್" ಎಂದರೆ ಗುರುತಿಸು, ಕಾಣು, ಗುರಿಯಿಡು. "ಲಕ್ಷ್" ಎಂದರೆ ತಗಲಿದ್ದು, ಗುರುತು, ಕುರುಹು, ಗುರಿ; **ಲಕ್ಷಣ** ಎಂದರೆ ಯಾವುದರಿಂದ ಗುರುತು ಹಿಡಿಯಬಹುದೋ ಅದು. ಈ ಗುರುತನ್ನು ನೋಡಿ ಇದು ನಮಗೆ ಹಿತ ತರುವ ಪದಾರ್ಥವೋ ಅಹಿತಕರವೋ ಎಂದು ತಿಳಿದುಕೊಳ್ಳಬಹುದು. ಆದ್ದರಿಂದ ಲಕ್ಷಣವೆಂದರೆ ಒಳ್ಳೇ ಕುರುಹೂ ಹೌದು. ಒಳ್ಳೇ ಕುರುಹುಳ್ಳದ್ದು ಸುಂದರ. ಆದ್ದರಿಂದ ಲಕ್ಷಣವಾದ ಹುಡುಗಿ ಲಕ್ಷ್ಮಿ. ಹಾಗಿದ್ದದ್ದು **ಲಕ್ಷಣ**. "ಸರ್ವ ಲಕ್ಷಣ ಲಕ್ಷಣ್ಯೇ ಶಿವೇ" ಎಂದು ಗೌರೀದೇವಿಗೆ ಪ್ರಾರ್ಥನೆ. ಶುಭಲಕ್ಷಣವುಳ್ಳವನು ಲಕ್ಷ್ಮಣ. ಶುಭಲಕ್ಷಣಗಳುಳ್ಳವಳು ಲಕ್ಷ್ಮಿ. ವೇದಗಳಲ್ಲಿ ಶುಭವನ್ನು, ಸೌಭಾಗ್ಯವನ್ನು, ಸಂಪತ್ತನ್ನು ತರುವ **ಲಕ್ಷ್ಮಿ** ಇರುವಂತೆ ಅಶುಭ ಕಾರಿಣಿ **ಲಕ್ಷ್ಮಿಯೂ** ಒಬ್ಬಳಿದ್ದಾಳೆ. ಅವಳು **ಪುಣ್ಯಲಕ್ಷ್ಮಿ**. ಇವಳು **ಪಾಪಲಕ್ಷ್ಮಿ**. ನಿಜ ಕೇಳಿದರೆ ಪಾಪಲಕ್ಷ್ಮಿಯೇ ಹಿರಿಯಳು. **ಜ್ಯೇಷ್ಠಾ**ಲಕ್ಷ್ಮಿಯೆಂದು ಈಗಲೂ ಅವಳು ನಮಗೆ ಪರಿಚಿತಳು. **ಜ್ಯೇಷ್ಠಾ** ಎಂದರೂ ಸಾಕು. "ಅಲಕ್ಷ್ಮೀರ್ಮೇ ನಶ್ಯತಾಂ" (ಅಲಕ್ಷ್ಮಿ ನಾಶವಾಗಲಿ) ಎಂದು ತಂಗಿ ಲಕ್ಷ್ಮಿಯನ್ನು **ಶ್ರೀ ಸೂಕ್ತ** ಪ್ರಾರ್ಥಿಸುತ್ತದೆ. ದೇವಾಸುರರು ಸಮುದ್ರವನ್ನು ಕಡೆದಾಗ

ಅಮೃತ ಕುಂಭದೊಡನೆ ಎದ್ದು ಬಂದ ಲಕ್ಷ್ಮಿ ವಿಷ್ಣುವನ್ನು ವರಿಸಿದಳು. ಸಮುದ್ರದಿಂದ ಹುಟ್ಟಿದವಳು ಲಕ್ಷ್ಮಿ; ಆದ್ದರಿಂದ ಸಮುದ್ರದಲ್ಲಿ ಹುಟ್ಟಿದ ಮುತ್ತು ಲಕ್ಷ್ಮೀದ್ರವ್ಯ.

ಬಹುಶಃ ಬಾಣ ಹೊಡೆಯುವ ಸಾಧನೆಗಾಗಿ ಹಾಕಿಕೊಂಡ ಗುರುತು ಅಥವಾ ಚುಕ್ಕಿಯಾಗಿದ್ದದ್ದು ಲಕ್ಷ ಅಥವಾ ಲಕ್ಷ್ಮ. ಈ ಮೂಲದಿಂದ ಹೊರಟ ಶಬ್ದವೊಂದು ದೇವತಾ ಪಟ್ಟಕ್ಕೆ ಏರಿತು. ಒಂದು ಕುರುಹು, ಚುಕ್ಕಿ ಶುಭಾಶುಭಕರವಾಗಿರಬಹುದೆಂಬ ನಮ್ಮ ಪೂರ್ವಜರ ವಿಶ್ವಾಸ ವಿಶ್ವರೂಪತಾಳಿದ ಉದಾಹರಣೆ ಲಕ್ಷ್ಮಿ.

೪೯

ಭಾಷೆಯನ್ನು ನಾವು ಮಾತೃಮೂಲವಾಗಿ ಭಾವಿಸಿದರೂ ಅದರ ಕಲ್ಪನಾ ಸಾಹಿತ್ಯ ಬಹುತರವಾಗಿ ಪುರುಷಕೃತವಾಗಿರುವುದರಿಂದ ಗಂಡಿನ ಬಗ್ಗೆ ಹೆಣ್ಣಿನ ಭಾವವಿಲಾಸಕ್ಕಿಂತ ಹೆಣ್ಣಿನ ಬಗ್ಗೆ ಗಂಡಿನ ಭಾವವೈಚಿತ್ರ್ಯವನ್ನೇ ಭಾಷೆಗಳು ಪ್ರತಿಬಿಂಬಿಸುತ್ತವೆ. ನಮ್ಮ ಕೋಶಗಳು ಸ್ತ್ರೀ ಸಾಮಾನ್ಯಕ್ಕೆ ಕೊಡುವಂಥ ಪರ್ಯಾಯ ಪದಗಳ ಮಾಲೆಯನ್ನೇ ನೋಡಿ. ಮಂಗರಾಜ ನಿಘಂಟು ತನ್ನ "ಗೋತ್ರ ವರ್ಗ"ದಲ್ಲಿ ಹೆಣ್ಣನ್ನು ನಿರ್ದೇಶಿಸಲು ಕೊಡುವ ಶಬ್ದಗಳು ಇವು: "ಭಾಮಿನಿ, ನಿತಂಬಿನಿ, ಪ್ರಮದೆ, ಸುಂದರಿ, ಲಲನೆ, ಕಾಮಿನಿ, ಪುರಂಧ್ರಿ, ವಧು, ಯುವತಿ, ಅಂಗನೆ, ರಮಣಿ, ವಾಮೆ, ಸೀಮಂತಿನಿ, ಸ್ತ್ರೀ, ವನಿತೆ, ನಾರಿ, ಯೋಷಿತ್, ಕಾಂತೆ, ಮಹಿಳೆ, ಅಬಲೆ, ರಾಮೆ, ವರವರ್ಣಿನಿ – ಎನಲ್ಕೆ ಹೆಂಗೂಸೆನಿಕ್ಕು".

ಇವನ್ನೆಲ್ಲ ಕೋಶಗಳು ಸಮಾನಾರ್ಥ ಪದಗಳೆಂದು ಎಣಿಕೆ ಮಾಡಿದ್ದರೂ ಮತ್ತು ನಮ್ಮ ಕವಿಗಳು ಕಂಡಾಬಟ್ಟೆಯಾಗಿ ಎಲ್ಲ ಸ್ತ್ರೀಯರಿಗೂ ಅವುಗಳನ್ನು ಪ್ರಯೋಗಿಸಿದ್ದರೂ ಅವು ನಿಜಕ್ಕೂ ಹೆಣ್ಣಿನಲ್ಲಿ ಭಾರತೀಯ ಗಂಡು ಕಂಡ ಅಥವಾ ಕಾಣಬಯಸಿದ ಗುಣ ಲಕ್ಷಣಗಳ ಒಂದು ರಾಶಿಯನ್ನೇ ವ್ಯಂಜಿಸುತ್ತವೆ.

ಕೆಲವನ್ನು ಇಲ್ಲಿ ವಿಶ್ಲೇಷಿಸುವಾ.

ಮೊದಲು ಸ್ತ್ರೀ. ಇದು ಹೆಣ್ಣಿನ ಪ್ರಧಾನ ಕರ್ಮಕ್ಕೆ ಸಂಬಂಧಿಸಿ, ರೊಮ್ಯಾಂಟಿಕ್ ಕಲ್ಪನೆಗಳಿಂದ ಲಿಪ್ತವಾಗದ ಶಬ್ದ. ಬಹುಶಃ ಇದರ ಮೂಲ ರೂಪ **ಸೂತ್ರಿ** ಅಥವಾ **ಸೋತ್ರಿ** – ಅಂದರೆ (ಮಕ್ಕಳನ್ನು) ಹಡೆಯುವವಳು ಎಂದಿರಬೇಕು. ಅದೇ ವರ್ಗಕ್ಕೆ ಸೇರಿದವು **ಜಾಯಾ, ಜಾನಿ** ಮತ್ತು **ಪುರಂಧ್ರಿ**. ಜಾಯಾ, ಜಾನಿ ಎಂದರೆ ಜನನ ಕೊಡುವವಳು; ಪುರಂಧ್ರಿ ಎಂದರೆ ತುಂಬಾ ಫಲವೀಯುವವಳು – **ಜನನಿ** ಎಂದ ಹಾಗೆ. **ಸತಿ** ಎಂಬುದು **'ಸತ್'** – ಒಳ್ಳೆಯದು. (ಗಂಡನಿಗೆ) ಸತ್ಯವಾಗಿರುವವಳು – ಪತಿವ್ರತೆ. ಶಿವನ ಮೊದಲ ಪತ್ನಿಗೂ ವಿಶ್ವಾಮಿತ್ರನ ಒಬ್ಬ ಹೆಂಡತಿಗೂ ಇದೇ ಹೆಸರಿತ್ತು. ಶಿವನ ಪತ್ನಿ ತನ್ನ ತಂದೆಯ ಯಜ್ಞದಲ್ಲಿ ಗಂಡನಿಗಾದ ಅವಮಾನವನ್ನು **ತಾಳಲಾರದೆ** ಅಗ್ನಿಪ್ರವೇಶ ಮಾಡಿದ್ದರಿಂದ, ಸತ್ತ ಗಂಡನ ಸಂಗಡ ಚಿತೆಯೇರುವ ಹೆಣ್ಣುಗಳಿಗೂ ಸತಿಯೆಂಬ ಹೆಸರು ಬಿತ್ತು. ಆದರೆ ನಮ್ಮ (ಕನ್ನಡ) ಕವಿಗಳು ಈ ವಿಶಿಷ್ಟಾರ್ಥಕ ಪದವನ್ನು ಎಲ್ಲ ಹೆಂಗಸರಿಗೆ ಲಘುವಾಗಿ ಬಳಸಿದ್ದಾರೆ. **ವಧು** ಎಂಬುದನ್ನೂ ಕವಿಗಳು ದುರ್ಲಕ್ಷ್ಯದಿಂದ ಹೆಂಗಸರಿಗೆಲ್ಲ ಅನ್ವಯಿಸಿದ್ದಾರೆ. ಅದರ ಅರ್ಥ ಬಹುಶಃ **ವಹ್** ಕರೆದುಕೊಂಡು ಅಥವಾ ಹೊತ್ತುಕೊಂಡು ಬಂದವಳು ಅಂದರೆ ಮದುವೆ ಮಾಡಿಕೊಂಡು ಬಂದವಳು ಎಂದು. ಇದರಲ್ಲಿ ಬಲಾತ್ಕಾರದಿಂದ ಅಪಹರಿಸಿ (ವಹ್) ತಂದ

ಹೆಂಡತಿಯೂ ಇರಬಹುದಾಗಿತ್ತು – ಅನ್ನಿ. ಲಗ್ನವಾಗಿ ಬಂದವಳು ಎಂಬುದರಿಂದಲೇ "ವಧು" ಶಬ್ದ **ಮದುವಣಗಿತ್ತಿ, ಸೊಸೆ** (ಹಿಂದೀ-**ಬಹೂ**) ಎಂಬರ್ಥಗಳನ್ನೂ ಸಂಚಯಿಸಿಕೊಂಡಿದೆ.

ಹೆಣ್ಣಿನಲ್ಲಿ – ಸ್ವತಃ ಅವಳೂ ಸೇರಿದಂತೆ – ನಾವು ಅಪೇಕ್ಷಿಸುವ ಗುಣ ಅವಳು ಚಂದವಾಗಿರಬೇಕು ಎಂಬುದಲ್ಲವೇ? ಆದ್ದರಿಂದ **ಸುಂದರಿ**ಯೆಂಬುದು ಕೂಡ ಸ್ತ್ರೀ ಸಾಮಾನ್ಯಕ್ಕೆ ತಗಲಿದ ಹೆಸರಾಗಿಬಿಟ್ಟಿತು. ಸುಂದರಿ ಎಂಬುದಕ್ಕೆ **ಸು-ನರಿ** ಒಳ್ಳೆ ಹೆಣ್ಣು ಎಂಬುದು ಮೂಲವಿರಬೇಕೆಂದು ಮೋನಿಯರ್ ವಿಲಿಮ್ಸ್ ತರ್ಕಿಸುತ್ತಾನೆ. ಕನ್ನಡದಲ್ಲಿ **ಚೆನ್ನೆ** ಎಂದಂತೆ. ನರೀ = **ನಾರಿ**; ನರ ಶಬ್ದದ ಸ್ತ್ರೀಲಿಂಗ ರೂಪ; ಮನುಷ್ಯೆ. ಯೌವನೆಯಾದ ಹೆಣ್ಣು ತಾನೆ ಸುಂದರಿಯೂ ಅಪೇಕ್ಷಣೀಯಳೂ ಆಗಿರುವುದು? ಆದ್ದರಿಂದ ಅವಳು **ಯೋಷಾ** ಅಥವಾ **ಯೋಷಿತ್** – ಜವ್ವನಗಿತ್ತಿ.

ಸೌಂದರ್ಯದ ಸಾಮಾನ್ಯ ಇಚ್ಛೆಯನ್ನು ವಾಚಿಸಿದ ಮೇಲೆ ವಿಶೇಷಗಳನ್ನು ಹೇಳುವ ಪದಗಳನ್ನು ನೋಡಬಹುದು. ಅವಳು **ಅಂಗನೆ**. ಮಾಟವಾದ ಅಂಗಗಳುಳ್ಳವಳು. ಎಲ್ಲ ಆರ್ಯ ಜನಗಳಂತೆ ಭಾರತದವರೂ ದಪ್ಪನ್ನ ಹೆಣ್ಣುಗಳನ್ನು ಇಷ್ಟಪಡುತ್ತಿರಲಿಲ್ಲ. ಆದ್ದರಿಂದ ಹೆಂಗಸು **ತನ್ವಂಗಿ, ಕೃಶಾಂಗಿ** (ತನು=ತೆಳ್ಳಗೆ, ಕೃಶ = ಸೊರಗಿದ. ಕನ್ನಡ ಕವಿಗಳು **ಅಸಿಯಳ್** ಎನ್ನುತ್ತಿದ್ದರು. ಅಸಿಯ = ತೆಳ್ಳನ್ನ) ಆದರೆ ದ್ರಾವಿಡ ಮೂರ್ತಿ ಶಿಲ್ಪಗಳನ್ನು ನೋಡಿದರೆ ದ್ರಾವಿಡರಿಗೆ ಕೃಶಾಂಗಿಯರಿಗಿಂತ ಪುಷ್ಟಾಂಗಿಯರೇ ಇಷ್ಟವಾಗಿದ್ದರೇನೋ ಅನಿಸುತ್ತದೆ! ಅದು ಬೇರೆ ಸಂಗತಿ. ಮೈಕೈ ತೆಳ್ಳಗಿರಬೇಕು ಸೈ. ಆದರೆ **ಲತಾಂಗಿ** (ಬಳ್ಳಿಯಂಥವಳು) ಯಾದರೂ ಹೆಣ್ಣು ನಿತಂಬಿನಿಯಾಗಿರಬೇಕು. ನಿತಂಬ ಎಂದರೆ ಕುಂಡೆ, ಮಧ್ಯ ಶರೀರದ ಈ ಪ್ರದೇಶ ಒಳ್ಳೆ ದಪ್ಪವಾದವಳು ನಿತಂಬಿನಿ. ಆದ್ದರಿಂದ ಹೆಣ್ಣನ್ನು ನಿತಂಬಿನಿಯೆಂದೇ ಕರೆಯುವುದು ಕವಿಗಳಿಗೆ ವಾಡಿಕೆ. ಹೆಂಗಸರು ಬೈತಲೆ ತೆಗೆಯುವುದು ಆರ್ಯರಿಗೆ ಸೌಂದರ್ಯಕ್ಕಲ್ಲದೆ ಧಾರ್ಮಿಕವಾಗಿಯೂ ಆಗತ್ಯವಾಗಿತ್ತು. ಆದ್ದರಿಂದ ಹೆಣ್ಣು **ಸೀಮಂತಿನಿ** (ಸೀಮಂತ=ನೇರವಾದ ಬೈತಲೆ). (ಧಾರ್ಮಿಕವಾಗಿ ಬಸಿರಿಯರಿಗೆ ಸೀಮಂತ ಸಮಾರಂಭ ವೈದಿಕ ಕರ್ಮ). ಅವಳ ಮೈಬಣ್ಣ ಚೆನ್ನಾಗಿರಬೇಕು. ಆದ್ದರಿಂದ ಅವಳು **ವರವರ್ಣಿನಿ**. (ವರವರ್ಣ=ಉತ್ತಮ ಬಣ್ಣ).

ಅವಳು 'ಸತಿ'ಯಾಗಿರಬೇಕು ಎಂದೆನಲ್ಲ. ಆದರೆ ಬರೀ ಸತಿಯಾದರೆ ಭಾರತೀಯ ಗಂಡಸಿಗೆ ಸಾಲುತ್ತಿರಲಿಲ್ಲ. ಅವಳು **ವನಿತೆ**ಯಾಗಿರಬೇಕು. ವನ್ ಅಂದರೆ ಆಶೆಪಡು, ಗೆಲ್ಲು. ಅಂದರೆ ಅವಳನ್ನು ಗೆದ್ದುಕೊಳ್ಳಬೇಕೆಂದು ಗಂಡನಿಗೆ ಹಂಬಲವಾಗುವಷ್ಟು ಉದ್ವೇಗ ಹುಟ್ಟಿಸುವಂತಿರಬೇಕು. (ರೋಮನ್ನರ ಪ್ರೇಮದೇವತೆಯಾದ "ವೀನಸ್" ಹೆಸರು ಕೂಡ ಇದೇ ಶಬ್ದಕ್ಕೆ ಸಂಬಂಧಿಸಿದ venia ಎಂಬ ಲ್ಯಾಟಿನ್ ಧಾತುವಿನಿಂದ ಹುಟ್ಟಿದ್ದು). ಅಲ್ಲದೆ ಅವಳು **ಮಹಿಳಾ** ಕೂಡ ಆಗಿರಬೇಕು; ಮಹ್ ಎಂದರೆ ಉತ್ತೇಜನಗೊಳಿಸುವುದು. ಅವಳು **ರಾಮಾ, ರಮಣಿ** ಕೂಡ ಹೌದು. ಅರ್ಥಾತ್ ಅವಳಲ್ಲೇ '**ರಮ್**' ಅಂದರೆ ಸದಾ ರಮಿಸುವಂತೆ, ಆಸಕ್ತನಾಗುವಂತೆ ಗಂಡನ್ನು ಪ್ರೇರಿಸುವ ಶಕ್ತಿ ಇರಬೇಕು. ಅವಳು ಲಲ್ಲೆಗರೆಯುವವಳಾದರೆ ಮಾತ್ರ ಗಂಡನ್ನು ನಿರಂತರವಾಗಿ ಹುಚ್ಚೆಬ್ಬಿಸಬಲ್ಲಳು. ಆದ್ದರಿಂದ ಅವಳು **ಲಲನಾ**. ಗಂಡಸರೇ ಕಾಮುಕರು ಎನ್ನುವುದರಲ್ಲಿ ನಮ್ಮವರಿಗೆ ನಂಬಿಕೆ ಇದ್ದಿಲ್ಲ. ಹೆಂಗಸರಿಗೆ ಎಂಟು ಮಡಿ ಕಾಮ ಎಂದವರು ನಾವು. ಹೆಂಗಸರು **ಕಾಮಿನಿ**ಯರು; ಸ್ವತಃ

ಕಾಮೋನ್ಮಾದವುಳ್ಳವರೂ ಅರ್ಥಾತ್ **ಪ್ರಮದೆ**ಯರೂ ಆಗಿದ್ದರೆ ಸ್ವಾರಸ್ಯ.

ಇಷ್ಟೆಲ್ಲ ಇದ್ದರೂ ಹೆಣ್ಣನ್ನು ಯಾವಾಗಲೂ ಸೊಗಸಲು ಸಾಲದೆಂದು ನಮ್ಮ ರಸಿಕರು ಬಲ್ಲರು. ಅವಳು ಯಾವಾಗಲೂ **ವಶಾ** (ಅಂಕೆಯಲ್ಲಿರುವವಳು) ಮಾತ್ರ ಆಗಿದ್ದರೆ ಸ್ವಾರಸ್ಯವಿಲ್ಲ. ಅವಳು **ಮಾನಿನೀ** ಸ್ವಲ್ಪ ಹಮ್ಮುಳ್ಳವಳಾಗಿದ್ದರೆ ಗಂಡಿಗೆ ಮಜಾ ಎನಿಸುತ್ತದೆ. **ಮಾನ** ಎಂದರೆ ಆತ್ಮಗೌರವ, ಅಹಂಕಾರ, ಕೆರಳು, ವೈಪರೀತ್ಯ. ಹಾಗೆಯೆ ಅವಳು **ಭಾಮಾ, ಭಾಮಿನಿ** = ಕೋಪ ಮಾಡಿಕೊಳ್ಳುವವಳು, ಉತ್ತೇಜಿತಳಾಗಬಲ್ಲವಳು, ಛಲವುಳ್ಳವಳು ಇರಬೇಕು. ಈ ಕೋಪತಾಪ ಊಟಕ್ಕೆ ಉಪ್ಪಿನ ಕಾಯಿಯಂತೆ. ಇಷ್ಟೆಲ್ಲ ಗಡುಸು ಇದ್ದೂ ಅವಳು **ಅಬಲಾ** ಆಗಿರಬೇಕು. ಅಂದರೆ ಮಾತ್ರ ಅವಳನ್ನು ಕಾಯುವ ಹೆಮ್ಮೆಯನ್ನು ಗಂಡು ಅನುಭವಿಸಬಲ್ಲ.

ಇಂಥ ಎಲ್ಲ ಪರಸ್ಪರ ವಿರೋಧವಾದ ಗುಣ ಲಕ್ಷಣಗಳನ್ನು ಭಾರತೀಯ ರೊಮ್ಯಾಂಟಿಕ್ ಗಂಡಸು ಹೆಣ್ಣಿನಲ್ಲಿ ನಿರೀಕ್ಷಿಸಿದ್ದಾನೆ. ಇದು ಈ ಶಬ್ದಗಳು ಕೊಡುವ ಮಾಹಿತಿ.

## ೯೦

ಶಬ್ದಗಳನ್ನು ನಾವು, ಅಭಿಪ್ರೇತವಾದ ಅರ್ಥವನ್ನು ನಮ್ಮೆದುರಲ್ಲಿರುವವನ ಪ್ರತೀತಿಗೆ ತರಲು ಬಳಸುತ್ತೇವೆ. ಅದು ಸಾಧಿಸಿದ ಮೇಲೆ ಅದರ ಬಗ್ಗೆ ಹೆಚ್ಚೇನನ್ನೂ ಹಚ್ಚಿಕೊಳ್ಳುವುದಿಲ್ಲ. ಆದರೆ ಆಲೋಚಿಸುವವರಿಗೆ ಶಬ್ದಗಳು ಬರೇ ತಾತ್ಕಾಲಿಕ ಅರ್ಥವ್ಯಂಜನೆಯನ್ನು ಮೀರಿದ ಸಂಗತಿಗಳನ್ನು ಉದ್ಬೋಧಿಸಬಲ್ಲವು. ಅತಿ ಸಾಮಾನ್ಯ ಶಬ್ದಗಳು ಕೂಡ ನಮ್ಮ ಚರಿತ್ರೆಯ ಬಗ್ಗೆ, ಸಂಸ್ಕೃತಿಯ ಬಗ್ಗೆ ನಮಗೇ ಆಶ್ಚರ್ಯವೆನಿಸುವಂಥ ತಥ್ಯಗಳನ್ನು ತೆರೆದಿರಿಸುತ್ತವೆ.

ಶರೀರದ ಅಂಗಾಂಗಗಳ ಹೆಸರುಗಳು ಯಾವುದೊಂದು ಭಾಷೆಯ ಅತ್ಯಂತ ಪುರಾತನ ಪದಗಳು. ಅವುಗಳಲ್ಲಿ ಯಾವುದೊಂದನ್ನು ತೆಗೆದುಕೊಂಡರೂ ನಾವು ಗಮನಿಸದಿದ್ದ ಅನೇಕ ಅಂಶಗಳನ್ನು ಹೊರತೆಗೆಯಲು ಸಾಧ್ಯವಿದೆ.

ಉದಾಹರಣೆಗೆ, ಮನುಷ್ಯ ಶರೀರದ ಅತಿ ಕೆಳಗಿರುವ **ಪಾದ**ಗಳು. ಇದಕ್ಕೆ ಸಂಸ್ಕೃತದಲ್ಲಿ **ಪದ, ಚರಣ, ಅಂಘ್ರಿ, ಕ್ರಮ** ಇತ್ಯಾದಿ ಶಬ್ದಗಳೂ ದ್ರಾವಿಡದಲ್ಲಿ **ಅಡಿ** ಎಂಬ ಪದವೂ ಸಮಾನಾರ್ಥವಾಗಿವೆ. ಇದು ಶರೀರದ ಅತ್ಯಂತ ಉಪಯುಕ್ತ ಅಂಗ. ಅದರ ಬಲದಿಂದಲೇ ನಾವು ನಡೆಯುವುದು, ನಿಲ್ಲುವುದು. ಯಾವುದೇ ಭಾಷೆಯಲ್ಲಿ ಪಾದದ ಕೆಲಸವಾದ ನಡೆಯುವಿಕೆಯಿಂದ ಅಸಂಖ್ಯ ಶಬ್ದಗಳು ಹುಟ್ಟಿರುತ್ತವೆ. ಸೂರ್ಯನ ಕಿರಣಗಳನ್ನು ಅವನ ಪಾದಗಳೆಂದು ವೈದಿಕ ಋಷಿಗಳು ಕಲ್ಪಿಸಿದ್ದಾರೆ. (ತ್ರೇಧಾ ನಿದಧೇ **ಪದಂ**; **ತ್ರಿಪಾದೂರ್ಧ್ವ** ಉದೈತ್ – ಇತ್ಯಾದಿ).

ಆದರೆ ಮಾನವನನ್ನು ಹೊತ್ತು ತಿರುಗುವ ಈ ಅಂಗದ ಬಗ್ಗೆ ಮಾನವನ ಅಭಿಪ್ರಾಯ ಯಾವಾಗಲೂ ತುಚ್ಛೀಕಾರದ್ದೇ ಆಗಿದೆ. ''ಪದ್ಭ್ಯಾಂ ಶೂದ್ರೋ ಅಜಾಯತ'' (ಶೂದ್ರನು ಪುರುಷನ ಪಾದಗಳಿಂದ ಹುಟ್ಟಿದನು) ಎಂದು ಋಗ್ವೇದ ಹೇಳುತ್ತದೆ. ಪಾದಕ್ಕೆ ಸಂಸ್ಕೃತದಲ್ಲಿ **ಅಧಮಾಂಗ** ಎಂಬ ಪರ್ಯಾಯ ಪದವಿದೆ. ತದ್ವಿರುದ್ಧವಾಗಿ ತಲೆಗೆ

**ಉತ್ತಮಾಂಗ** ಎಂಬ ಹೆಸರಿದೆ. ಕೆಳಗಿರುವುದರಿಂದ ಮಾತ್ರ ಅದಕ್ಕೆ ಅಧಮಾಂಗ (ಅಧಃ = ಕೆಳಗೆ) ಎಂಬ ಹೆಸರು ಎಂದು ಸಾಧಿಸಬೇಡಿ. ಬೆಳಿಗ್ಗೆ ಎದ್ದು ಭೂದೇವಿಗೆ ''ಪಾದಸ್ಪರ್ಶಂ ಕ್ಷಮಸ್ವ ಮೇ'' (ನನ್ನ ಪಾದಗಳ ಸ್ಪರ್ಶವನ್ನು ಕ್ಷಮಿಸು) ಎಂದು ಬೇಡಿಕೊಂಡೇ ಕಾಲನ್ನು ನೆಲಕ್ಕೂರಬೇಕು – ಎನ್ನುವಾಗ ಪಾದಕ್ಕಿರುವ ಸ್ಥಾನ ಸ್ಪಷ್ಟವಾಗುತ್ತದೆ. ತಲೆಯಿಂದ ನೆಲವನ್ನು ಅಥವಾ ಎದುರಿಗಿರುವವನ ಪಾದವನ್ನು ಮುಟ್ಟಿದರೆ ಮಹಾಗೌರವ.

ಈ **ಪಾದ ಮುಟ್ಟುವುದಕ್ಕೆ** ಸಂಬಂಧಿಸಿದ ಕೆಲ ನುಡಿಕಟ್ಟುಗಳನ್ನು ಹೋಲಿಸಿದರೆ ಜನಾಂಗಗಳ ಸ್ವಭಾವಗಳ ಬಗ್ಗೆ ಕೂಡ ಕೆಲ ತಥ್ಯಗಳನ್ನು ಕಂಡುಹಿಡಿಯಬಹುದು. **ಪಾದಕ್ಕೆ ಬೀಳುವುದು** ಬಹುಶಃ ಎಲ್ಲ ಜನಾಂಗಗಳಲ್ಲಿ ವಿನಯದ ಸೂಚಕವಾಗಿದೆ. ಇಂಗ್ಲೀಷಿನಲ್ಲಿ to fall at one's feet, to learn at one's feet (ಪಾದಕ್ಕೆ ಬೀಳುವುದು, ಗುರುವಿನ ಪಾದಮೂಲದಲ್ಲಿ ಅಧ್ಯಯನ ಮಾಡುವುದು) ಇತ್ಯಾದಿಗಳುಂಟು. ದೇವತಾ ಪ್ರತಿಮೆಗಳ **ಪಾದ ಚುಂಬಿಸುವುದೂ** ಪಾಶ್ಚಾತ್ಯ ದೇಶಗಳಲ್ಲಿ ಇದೆ. (ಯಾತ್ರಿಕರು ಹೀಗೆ ಚುಂಬಿಸಿ ಚುಂಬಿಸಿ ಇಟೆಲಿಯ ಒಂದು ಪ್ರಸಿದ್ಧ ಚರ್ಚಿನಲ್ಲಿ ಒಂದು ಕ್ರಿಸ್ತ ಮಾತಾ ಪ್ರತಿಮೆಯ ಪಾದಗಳು ಪೂರ್ತಿ ಸವೆದು ಹೋಗಿವೆಯಂತೆ!). ಇರಾಣ ದೇಶದಲ್ಲಿ ಹಿರಿಯರ ಪಾದ ಚುಂಬಿಸುವ ಸಂಪ್ರದಾಯವಿದೆಯೆಂದು **ಪಾ-ಬೋಸ್, ಪಾ-ಬೋಸೀ** ಎಂಬ ಶಬ್ದಗಳು ಸೂಚಿಸುತ್ತವೆ. (ಪಾ=ಪಾದ+ಬೋಸ್=ಚುಂಬನ) ರವೀಂದ್ರರು ಪ್ರೇಯಸಿಯ ಪಾದದ ಧೂಳಿಕಣವನ್ನು ಮುತ್ತಿಟ್ಟು ಒರಸುವ ಮಾತನ್ನು ಒಂದು ಕವಿತೆಯಲ್ಲಿ ಆಡುತ್ತಾರೆ.

ಆದರೆ ಒಟ್ಟಿನಲ್ಲಿ ಪಾಶ್ಚಾತ್ಯ ಮನುಷ್ಯ ದೊಡ್ಡವರ ಪಾದಸ್ಪರ್ಶವನ್ನು ತಿರಸ್ಕಾರದಿಂದಲೇ ಕಂಡಿದ್ದಾನೆ. Foot-licker (ಪಾದ ನೆಕ್ಕುವವನು) ಎಂಬುದು ಆತ್ಮಾಭಿಮಾನವನ್ನು ಪೂರಾ ತೊರೆದು, ಅಪಮಾನ ಸಹಿಸಿ, ಪರರನ್ನು ಆಶ್ರಯಿಸುವವನಿಗೆ ಇಂಗ್ಲೀಷಿನಲ್ಲಿ ಕೊಡುವ ತುಚ್ಛೀಕಾರದ ಬಿರುದು. ಏಶಿಯದಲ್ಲಿ ಈ ಆಶ್ರಯ ಭಾವ ಅತಿಯಾಗಿರುವಂತೆ ಶಬ್ದಗಳು ಸಾಕ್ಷ್ಯ ನುಡಿಯುತ್ತವೆ. ಇಂಗ್ಲೀಷಿನಲ್ಲಿ ಸೇವಕರಿದ್ದಾರೆ, ಆದರೆ **ಪಾದಸೇವಕರಿಗೆ** ಸಮಾನ ಶಬ್ದ ಇಂಗ್ಲೀಷಿನಲ್ಲಿ ಸಿಗುವುದಿಲ್ಲ. ನಮ್ಮ **ಅಡಿಯಾಳು, ಅಡಿನೆಳಲು** (ಯಜಮಾನನನ್ನು ನೆಳಲಿನಂತೆ ಅನುಸರಿಸುವುದು ಸಾಲದೆ ಅವನ **ಪಾದದ ನೆಳಲಿನಂತೆ** ಅನುಸರಿಸುತ್ತೇನೆಂಬ ಸೇವಕಭಾವದ ಅತಿರೇಕ), **ಅಡಿಯೂಳಿಗ, ಪಾದ ಧೂಳಿಯನ್ನು** ತಲೆಯಲ್ಲಿ ಧರಿಸುವುದು ಎಂಬುದಕ್ಕೆ ಸಮಾನವಾದ ಶಬ್ದಗಳನ್ನು ನಮ್ಮಂತೆ ಸಲೀಸಾಗಿ ಬಳಸುವುದಕ್ಕೆ ಇಂಗ್ಲೀಷ್ ಕೋಶದಲ್ಲಿ ಪ್ರಮಾಣ ಕಾಣದು.

ನಾವು ದೊಡ್ಡವರನ್ನು ಎಷ್ಟು ಆಶ್ರಯಿಸುತ್ತೇವೆಂದರೆ, ಅವರ ಪಾದಗಳನ್ನು ತಾವರೆಗೆ ಹೋಲಿಸಿ (**ಪಾದ-ಪದ್ಮ, ಅಡಿ-ತಾವರೆ**) ನಾವು ಆ ಅಡಿದಾವರೆಯ ರಸದಿಂದ ಬದುಕುತ್ತೇವೆ (**ಪಾದಕಮಲ ಭೃಂಗ**). **ಅಡಿಯ, ಅಡಿಗ** ಎಂದರೆ ಸೇವಕ. ಹೀಗೆ ದೇವರ ಪೂಜಾರಿಗಳು ಅಡಿಗ ಎಂಬ ಹೆಸರು ಧರಿಸುತ್ತಾರೆ. ಅದು ಗೌರವದ ಹೆಸರು ಸರಿ. ಎಷ್ಟಾದರೂ ದೇವರ ಸೇವಕರು ಭಕ್ತರಿಗೆ ಗೌರವಾಸ್ಪದರಲ್ಲವೇ ?

ಗುರುಗಳು ನಮಗೆ **ತಮ್ಮಡಿಗಳು**. ಸ್ವಾಮಿ ಸಂನ್ಯಾಸಿಗಳು **ಶ್ರೀಪಾದರು** ಅಥವಾ **ತೀರ್ಥಪಾದರು** (ತೀರ್ಥ=ಪವಿತ್ರ). ಅವರ **ಪಾದೋದಕ** ಪವಿತ್ರ. ಅದನ್ನು ತಲೆಗೆ ಪ್ರೋಕ್ಷಿಸಿಕೊಳ್ಳಬೇಕಲ್ಲದೆ ಪ್ರಾಶನವನ್ನೂ ಮಾಡಬಹುದು. ಅವರಿಗೂ ಅರಸರಿಗೂ **ಪಾದಕಾಣಿಕೆ** ಇಡಬೇಕು. ತಂದೆಯವರು ನಮಗೆ **ತಾತಪಾದರು**, ಹೆಂಡಿರು ನಮ್ಮ

ಚರಣದಾಸಿಯರು. ನಮ್ಮಲ್ಲಿ ಕಾಲೀಚರಣರಿದ್ದಾರೆ; ಚರಣಸಿಂಗರೂ ಕಾಣಸುತ್ತಾರೆ. ಇಂಥ ಉದಾಹರಣೆಗಳು ಎಷ್ಟೂ ದೊರೆಯಬಲ್ಲವು. ''ದಯವಿಟ್ಟು ತಾವು ನಮ್ಮಲ್ಲಿಗೆ ಪಾದ ಬೆಳಸಬೇಕು''. ಎಂಬ ನಾಗರಿಕ ವಿನಯದ ಮಾತು, ''ನಿಮ್ಮ ಪಾದ !'' ಎಂಬುದಾಗಿ ಒಡೆಯರನ್ನು, ಅಧಿಕಾರಿಗಳನ್ನು ಬಡಪಾಯಿಗಳು ಸಂಬೋಧಿಸುವ ವಿಧಾನ – ಈ ''ಪಾದ'' ಎಷ್ಟು ದೂರ ಮತ್ತು ಆಳಕ್ಕೆ ಇಳಿದಿದೆಯೆಂದು ತೋರಿಸುತ್ತದೆ.

ಏಶಿಯನ್ನರು, ಅದರಲ್ಲಿಯೂ ಭಾರತೀಯರು ಸಾಮಾನ್ಯ ಪರಿಸ್ಥಿತಿಯಲ್ಲಿಯೂ ಅತಿಶಯೋಕ್ತಿ ಪೂರ್ಣವಾದ ಆಲಂಕಾರಿಕ ಭಾಷೆಯನ್ನು ಬಳಸುವುದು ಈ ತರದ ನುಡಿಕಟ್ಟುಗಳಿಗೆ ಕಾರಣವೆಂದು ವಿವರಿಸಲೂಬರಬಹುದು. ಆದರೂ ಇಂಥ ಮಾತುಗಳು ಒಂದು ನಾಗರಿಕತೆ ಬೆಳಸಿದ ಮನೋವೃತ್ತಿಯನ್ನು ಪ್ರತಿಬಿಂಬಿಸುತ್ತವೆಯೆಂದು ಗ್ರಹಿಸಿದರೆ ತಪ್ಪಾಗದು. ಅಧಿಕಾರಕ್ಕೆ ಮರುಮಾತಿಲ್ಲದೆ ತಲೆಬಾಗುವ ಪ್ರವೃತ್ತಿಯ ಬೆಳವಣಿಗೆಯನ್ನು ಪಾದ ಶಬ್ದದ ಅರ್ಥವಿಸ್ತರಣೆಯ ಗತಿಯೊಡನೆ ತಳಕು ಹಾಕಲು ಸಾಧ್ಯವಿದೆ. ವೇದಗಳಲ್ಲಿ ಇಂಥ ಪ್ರಯೋಗಗಳ ಕೊರತೆಯಿದೆ; ಆ ನಂತರದ ಸಾಹಿತ್ಯದಲ್ಲಿ ಸಾವಕಾಶವಾಗಿ ಅದು ಹೆಚ್ಚುತ್ತದೆ. ಪಾಶ್ಚಾತ್ಯರಲ್ಲಿ ರಾಯಭಾರಿಗಳೂ ಸಾಮಂತರೂ ಚಕ್ರವರ್ತಿಗಳ ಮುಂದೆ ಮಂಡಿಯೂರಿ ಗೌರವ ಸಲ್ಲಿಸುತ್ತಿದ್ದರೆ ನಮ್ಮಲ್ಲಿ ಪಂಚಮಹಾಶಬ್ದಗಳಿಗೆ ಹಕ್ಕುದಾರರಾದ ಜಂಬದ ಸಾಮಂತರು ಕೂಡ ತಮ್ಮ ಚಕ್ರವರ್ತಿಗಳ ''ಪಾದಗಳಿಗೆ ತಮ್ಮ ಕಿರೀಟಗಳ ರತ್ನಪ್ರಭೆಯಿಂದ ಆರತಿ ಮಾಡು''ವಂತೆ ಹೇಳಿಕೊಳ್ಳಲು ಹಿಂಜರಿಯುವುದಿಲ್ಲ.

## ೯೧

ವರದಿಗಳು ನಮ್ಮ ಇಂದಿನ ಬದುಕಿನಲ್ಲಿ ಎಷ್ಟು ಸಾಮಾನ್ಯವಾಗಿಬಿಟ್ಟಿವೆಯೆಂದರೆ ಅದು ನಮ್ಮದೇ ಪದ ಎಂಬುದಾಗಿ ಅನಿಸುವ ಸಂಭವ ಇದೆ. ವಾಸ್ತವವಾಗಿ ಕೆಲವರಿಂದ ಅದನ್ನು ಕನ್ನಡದ ಒರೆ(=ವಿವರಿಸು, ಹೇಳು)+ತಿ ಎಂದು ನಿರ್ವಚಿಸುವ ಪ್ರಯತ್ನಗಳು ಆಗಿವೆ; ಕಿಟ್ಟೆಲ್ ಅದನ್ನು ಸಂಸ್ಕೃತದ ವಾರ್ತಾ(=ಸುದ್ದಿ)ದ ತದ್ಭವವೆಂದು ಹೇಳಿದ್ದಾನೆ. ಆದರೆ ಈ ವ್ಯುತ್ಪತ್ತಿಗೆ ನಿಜವಾದ ಪ್ರಾಚೀನ ಪ್ರಯೋಗಗಳ ಆಧಾರವಿಲ್ಲ. ಅದು ನಮ್ಮ ಮೇಲಿನ ಮುಸ್ಲಿಂ ಆಳಿಕೆಯ ವರವಾಗಿದೆ. ಪಾರಸೀಕ ಭಾಷೆಯ **ರುಏದಾದ್, ರೂದಾದ್** ಪದದ ಕನ್ನಡೀಕರಣ (ಮಲೆಯಾಳಿಯಲ್ಲಿಯೂ ಅದು **ವರುದಿ** ಎಂಬ ರೂಪದಲ್ಲಿದೆ). ''ರೂದಾದ್'' ಎಂದರೆ ಟಿಪ್ಪಣಿ-ರಿಪೋರ್ಟ್; ಉರ್ದುವಿನಲ್ಲಿ ಸಮಾಚಾರ, ವೃತ್ತಾಂತ, ಪರಿಸ್ಥಿತಿ, ವಿವರಣೆ, ನ್ಯಾಯಾಲಯದ ಪ್ರಕ್ರಿಯೆ ಎಂಬರ್ಥಗಳು ಅದಕ್ಕೆ ಬಂದಿವೆ. **ರೂ** ಎಂದರೆ ಕಾರಣ, ಸಬೂಬು; **ದಾದ್** ಎಂದರೆ ದಾನ, ದತ್ತ, ನ್ಯಾಯ. ಕಾರಣ ಕೊಡುವುದು ಇಲ್ಲವೆ ಕೇಳುವುದು **ರೂಏದಾದ್**.

ಒಂದೇ ಸಮನೆ ವರಾತ ಹಚ್ಚಿದ ಎನ್ನುತ್ತೇವೆ. ಎರಡು ವರಾತಗಳು ಇವೆ. ಒಂದು ಹಿಂದಿಯ **ಬರಾತ್, ಬಾರಾತ್**. ಇದು ಸಂಸ್ಕೃತದ **ವರಯಾತ್ರಾ** (ಮದುಮಗನ ಯಾತ್ರೆ)ದ ಅಪಭ್ರಂಶ – ಅಂದರೆ ದಿಬ್ಬಣ. ಆದರೆ ವರಾತ ಹಚ್ಚುವುದರ ವರಾತ ಬೇರೆ. ಅದಕ್ಕೆ **ತಗಾದೆ** ಎಂದರ್ಥ. ಅರಬೀ ಭಾಷೆಯಲ್ಲಿ **ವರಾತ್** ಎಂದರೆ ಹಣ ವಸೂಲಿಗಾಗಿ ಹೊರಡಿಸಿದ ಹುಂಡಿ, ಚೆಕ್ ಅಥವಾ ಕಂದಾಯ ವಸೂಲಿಯ ಆಜ್ಞೆ. ಇಂಥ ಆಜ್ಞೆಯನ್ನು ಜಾರಿಗೆ ತರಲು

ಬೆಂಬಿಡದೆ ಕ್ರಮ ತೆಗೆದುಕೊಳ್ಳುವುದರಿಂದ ಎಲ್ಲ ತರದ ತಗಾದೆಯೂ ವರಾತ ಎನಿಸಿದೆ – ಕನ್ನಡಕ್ಕೆ ಬರುವಾಗ. ಈ **ತಗಾದಾ** ಎಂಬುದೂ **ತಕಾಜಃ** ಎಂಬ ಅರಬೀ ಶಬ್ದದ ಹಿಂದೀರೂಪವೇ. ತಕಾಜಃ ಎಂದರೆ ತನಗೆ ಬರಬೇಕಾದ ಅಥವಾ ಹಕ್ಕು ಇರುವ ಇಲ್ಲವೆ ವಚನಕೊಡಲಾದ ವಸ್ತುಗಳನ್ನು ಕೊಡೆಂದು ಕೇಳುವುದು.

**ಕಚಡಾ** ಅಥವಾ **ಖಚಡಾ** ಮನುಷ್ಯ, ಕೆಲಸ, ಪದಾರ್ಥ ಎಂಬುದಾಗಿ ತಿರಸ್ಕಾರದಿಂದ ಹೇಳುತ್ತೇವೆ. ಈ ಶಬ್ದ ಇತರ ದ್ರಾವಿಡ ಭಾಷೆಗಳಲ್ಲಿ ಸ್ವಲ್ಪ ಉಚ್ಚಾರಭೇದದೊಡನೆ ಕಾಣಸಿಕೊಳ್ಳುತ್ತದೆ. ಹೊಲಸುತನವಿರುವಂಥಾದ್ದೆಂದು ಅದರ ತಾತ್ಪರ್ಯ. ಮರಾಠಿಯಲ್ಲಿ **ಕಚರಾ** ಇದೆ. ಹಿಂದಿಯಲ್ಲಿ **ಖಚರಾ** ಎಂದರೆ ವರ್ಣಸಂಕರ. ಬಂಗಾಲಿಯಲ್ಲಿ **ಖಚ್ಚರ** ಎಂದರೆ ಹೇಸರಗತ್ತೆ. ಇವುಗಳ ಬಗ್ಗೆ ''ಕಃಪದಾರ್ಥ'', ''ಕುತ್ಸಿತ'', ''ಕದರ್ಥ'' ಇತ್ಯಾದಿಗಳ ಮಾದರಿಯಲ್ಲಿ ವ್ಯುತ್ಪತ್ತಿ ಹೇಳುವುದು ಕಷ್ಟವಲ್ಲದಿದ್ದರೂ ಅದು ನಿಜಕ್ಕೂ ಪಾರಸೀಕ ಅರಬ್ಬೀ ಮೂಲದ್ದೇ ಶಬ್ದವೆಂದು ಸುನೀತಿಕುಮಾರ ಚಟರ್ಜಿಯವರ ಅಭಿಪ್ರಾಯ. ಅರಬ್ಬಿಯಲ್ಲಿ **ಖಸ್** ಎಂದರೆ ಕೀಳು, ಕೆಲಸಕ್ಕೆ ಬಾರದ್ದು, ಆಸೆಬುರುಕ ಇತ್ಯಾದಿ ಅರ್ಥಗಳಿವೆ. ಸಂಗಡಲೆ ''ಬೆರಕೆ'', ಜಾರತನದಿಂದ ಹುಟ್ಟಿದ್ದು ಇತ್ಯಾದಿ ತುಚ್ಛ ಅರ್ಥಗಳೂ ಅದಕ್ಕೆ ಇವೆ. ಆದ್ದರಿಂದಲೇ **ಖಚ್ಚರ** ಎಂದರೆ ಹೇಸರಗತ್ತೆ (ಅದು ಕತ್ತೆ ಕುದುರೆಗಳ ಬೆರಕೆಯಿಂದಾದ ಪ್ರಾಣಿಯಲ್ಲವೇ ?). ಖಸ್‌ಗೆ ತಿರಸ್ಕಾರ ಸೂಚಕ ಹಿಂದೀ ''ಡಾ'' ಪ್ರತ್ಯಯ ಸೇರಿ ಖಚಡಾ ಆಯಿತು ಎಂದು ಚಟರ್ಜಿ ಹೇಳಿಕೆ. ಆದರೂ ಕನ್ನಡ ಮತ್ತು ಇತರ ದ್ರಾವಿಡ ಭಾಷೆಗಳಲ್ಲಿ ಜ್ಞಾತಿಪದಗಳುಳ್ಳ **ಕಸ, ಕಸವು, ಗಸಿ, ಗಷ್ಟು, ಕಜೆ** (ತುಳು=ಕಗ್ಗ ಗುಣದ ಧಾನ್ಯ) ಇತ್ಯಾದಿ ಪದಗಳನ್ನು ನೋಡಿದರೆ ಕಚಡಾದ ಮೂಲಕ್ಕೆ ದೇಶಾಂತರ ಹೋಗಬೇಕೆ ? ಎಂಬ ಸಂಶಯ ಬಾರದೆ ಇಲ್ಲ.

**ಹವ್ಯಾಸ** ಶಬ್ದ ಸಂಸ್ಕೃತದಂತೆ ಕಾಣಿಸುತ್ತಿದ್ದರೂ ಅದು ಈಚೆಗೆ ತಾನೆ ಕನ್ನಡದಲ್ಲಿ ತಲೆದೋರಿ ಬೇಗನೆ ಅರ್ಥವಿಸ್ತರಣೆ ಹೊಂದಿದ ಪದ. ಯಾವುದಾದರೊಂದು ಚಟ, **ಹಂಬಲ** ಎಂಬರ್ಥದಲ್ಲಿ ಮೊದಲು ಪ್ರವೇಶಿಸಿ ಮುಂದೆ amateur (ಅಮೆಚೂರ್) ಎಂಬರ್ಥದಲ್ಲಿ (ಉದಾ:ಹವ್ಯಾಸಿ ನಾಟಕ ಮಂಡಲಿ) ಈಗ ಬಹಳ ಪ್ರಚಲಿತವಾದ ಈ ಪದಕ್ಕೆ ಅರಬ್ಬಿ ಪಾರಸೀಕ **ಹವಸ್** ಶಬ್ದವೇ ಮೂಲ. **ಹವಸ್** ಎಂದರೆ ಉತ್ಕಂಠೆ, ಆಸಕ್ತಿ, ಶೋಕಿ, ಹಂಬಲ, ಮರುಳು, ಕಾಮನೆ ಎಂದಿತ್ಯಾದಿ ಅರ್ಥಗಳು. ಕನ್ನಡದ **ಹವ್ಯಾಸ, ಹವ್ಯಾಸಿ** ಸ್ವಲ್ಪ ಉಚ್ಚಾರಭೇದ ಮಾಡಿಕೊಂಡಿದ್ದರೂ ಅರ್ಥವ್ಯಾಪ್ತಿ ಮೂಲದ್ದೇ ಇದೆ.

**ವರಾಂಡಾ** ಇಲ್ಲದ ಮನೆಗಳೇ ಈಗ ಇಲ್ಲ ಎಂಬಷ್ಟು ಸಾಮಾನ್ಯವಾದ ಈ ಶಬ್ದದ ಕತೆ ಸ್ವಲ್ಪ ಸುತ್ತು ಬಳಸಿನದೇ ಆಗಿದೆ. ಪ್ರಸ್ತುತ ರೂಪದಲ್ಲಿ ಇದು ಇಂಗ್ಲೀಷಿನಿಂದಲೇ ನಮಗೆ ಬಂದದ್ದು. ಆದರೆ ಇದು ಹಿಂದಿಯಿಂದಲೇ ಇಂಗ್ಲೀಷಿಗೆ ಹೋಯಿತು. ಸಂಸ್ಕೃತದ **ವೃಂದ, ವೃಂದಾವನದ** ಒಂದು ರೂಪವಾಗಿ **ವರಂಡಕ, ವರಂಡ** ರೂಪಿತವಾಗಿದೆಯೆಂದೂ (=ಅಂಬಾರಿ, ಗೋಡೆ) ಆದರಿಂದಲೇ ವರಾಂಡಾ ಹುಟ್ಟಿ ಹಿಂದಿಯಲ್ಲಿ ಹೊಕ್ಕಿತೆಂದೂ ಹೇಳಲಾಗುತ್ತಿದ್ದರೂ ಇದು ಪಾರಸೀಕ **ಬರಾಮದ್**‌ನ ಅಪಭ್ರಂಶವೇ ಎಂದೂ ಸಕಾರಣವಾಗಿ ನಿರ್ಣಯಿಸಲಾಗಿದೆ. **ಬರ್-ಆಮದ್** ಅಂದರೆ ಮುಂದೆ **ಚಾಚಿದ್ದು** ಎಂದರ್ಥ. ಆದರೆ ಇದು ಕೂಡ ಪೋರ್ಚುಗೀಸ್ ಭಾಷೆಯಿಂದ ಪಾರಸೀಕ ಭಾಷೆಗೆ ಬಂದಿರಬೇಕೆಂದು ಭಾವಿಸಲಾಗುತ್ತಿದೆ. ಪೋರ್ಚುಗೀಸಿನಲ್ಲಿ **ವರಂಡಾ** ಅಂದರೆ **ಬಾಲ್ಕನಿ**; ಅಂದರೆ ಕಟ

ಕಟೆಯಿಂದ ಆವೃತವಾದ ಚಾಚು ಭಾಗ. ಸ್ಪಾನಿಶ್, ಪೋರ್ಚುಗೀಸ್ ಭಾಷೆಗಳಲ್ಲಿ ವರ (Vara) ಎಂದರೆ ಸರಳು. ಅಂದಾ (anda) ಎಂಬುದು ವಿಶೇಷಣ ಪ್ರತ್ಯಯ. ಈ ವ್ಯುತ್ಪತ್ತಿ ಗಟ್ಟ ಸುತ್ತಿ ಮೈಲಾರಕ್ಕೆ ಬಂದಂತೆ ಎನಿಸಿದರೂ ಶಬ್ದವ್ಯಾಪಾರದಲ್ಲಿ ಇಂಥ ಸಂಗತಿಗಳು ಅಶ್ರುತಪೂರ್ವವಲ್ಲ.

ಉತ್ತರ ಕರ್ನಾಟಕ ಭಾಗದಲ್ಲಿ **ಮೇಜವಾನಿ** ಎಂಬ ಶಬ್ದ **ಅವುತಣ** ಎಂಬರ್ಥದಲ್ಲಿ ಬಳಕೆಯಲ್ಲಿದೆ. ಇಂಗ್ಲೀಷಿನ **ಟೇಬಲ್ಲಿಗೆ** ಪಾರಸೀಕ ಭಾಷೆಯಲ್ಲಿ ಮೇಜ್ ಎಂಬ ಹೆಸರಿರುವುದರಿಂದಲೂ ಪಾಶ್ಚಾತ್ಯರಲ್ಲಿ ಟೇಬಲ್ಲಿಗೂ ಊಟಕ್ಕೂ ಅವುತಣಕ್ಕೂ ಸಾಂಸ್ಕೃತಿಕ ಸಂಬಂಧವಿರುವುದರಿಂದಲೂ **ಮೇಜ್‌ವಾನ್** ಎಂದರೆ ಊಟದ ಟೇಬಲ್ಲಿನಲ್ಲಿ ಉದಾರನಾದವನೆಂಬ ಭ್ರಮೆ ಹುಟ್ಟುತ್ತದೆ. ಆದರೆ ಪಾರಸೀಕ ಭಾಷೆಯಲ್ಲಿ **ಮೇಜ್** ಎಂದರೆ **ಭೋಜನಸಾಮಗ್ರಿ**; ಅದು ಧಾರಾಳವಾಗಿ ಉಳ್ಳವನೇ **ಮೇಜವಾನ್**; ಅವನು ನೀಡುವ ಆತಿಥ್ಯ **ಮೇಜವಾನಿ**. ಟೇಬಲ್ ಎಂಬರ್ಥದ **ಮೇಜ್** ಪಾರಸೀಕ ಭಾಷೆಗೆ ಪೋರ್ಚುಗೀಸಿನಿಂದ ಬಂದದ್ದು. ಅದು ಲ್ಯಾಟಿನ್ **ಮೆನ್ಸಾದ** (ಮೇಜು, ಹಲಗೆ) ಅಪಭ್ರಂಶ. ಇನ್ನು ನಮ್ಮ ಅವುತಣವೋ ಅದು ಪ್ರಾಕೃತದ **ಔದಣ, ಓದಣ** (ಸಂಸ್ಕೃತ-**ಓದನ, ಔದನ**) ದ ಒಂದು ರೂಪ. **ಓದನ** ಎಂದರೆ **ಅನ್ನ**.

**ಬಹಿರಂಗ ಮಾರಾಟಕ್ಕೆ ಹರಾಜು** ಹಾಕುವುದು ಎನ್ನುವುದುಂಟು. ಈ **ಹರಾಜ್** ಅರಬೀ ಪದ. ಆದರೆ ಅದೇ ಅರ್ಥದ ಏಲಂ, **ಲಿಲಾವು** ಮಾತ್ರ ಪೋರ್ಚುಗೀಸ್ ಶಬ್ದ. ಹಿಂದಿಯಲ್ಲಿ ಅದೇ ನ-ಲ ವ್ಯತ್ಯಾಸದಿಂದ ನೀಲಾಂ ಆಗಿದೆ. ಅದರ ಅರ್ಥ **ಮಾರಾಟ** ಎಂದು. ಅದರ ಪೋರ್ಚುಗೀಸ್ ರೂಪ **ಲೇ ಇಲಾವ್**. ಇದೇ ಅರ್ಥದ ಇಂಗ್ಲೀಷ್ ಪದ **ಆಕ್ಷನ್** (auction). ಅದರ ಅರ್ಥ (ಬೆಲೆಯನ್ನು) ಏರಿಸುತ್ತ **ಹೋಗುವುದು**.

**ಮೋಚಿ** ಎಂದರೆ ಪಾದರಕ್ಷೆ ಹೊಲಿಯುವವ. ಇದು ಸಾಕಷ್ಟು ಪ್ರಾಚೀನ ಕಾಲದಿಂದ, ಇಸ್ಲಾಮಿ ಆಕ್ರಮಣದ ಮುಂಚೆಯೇ, ಭಾರತದಲ್ಲಿ ನೆಲೆಯೂರಿದ್ದು. ಮಧ್ಯಪಾರಸೀಕದ **ಮೋಚಕ** ಎಂದರೆ **ಬೂಟು** – ಬೂಟು ಹೊಲಿಯುವವ. ಸಂಸ್ಕೃತದಲ್ಲಿ **ಮೋಚಿಕ, ಸಮಗಾರ**. ಆಧುನಿಕ ಪಾರಸೀಕ ಭಾಷೆಯಲ್ಲಿ ಇವನು **ಮೋಜಾ** ಆಗಿದ್ದಾನೆ. ಹಿಂದಿನ ಕಾಲದಲ್ಲಿ ಒಂದು ವಿಶಿಷ್ಟ ತರದ ಕಾಲ್ಮರಿಗೆ **ಪಾಪಾಸು** ಎಂಬ ಹೆಸರಿತ್ತು. ಇದು ಆಧುನಿಕ ಪಾರಸೀಕ ಪದ **ಪಾಪೋಶ್**–ಪಾದವನ್ನು ಮುಚ್ಚುವಂಥಾದ್ದು, ರಕ್ಷಿಸುವಂಥಾದ್ದು-ಪಾದ+ರಕ್ಷೆ.

೯೨

ನಮ್ಮ ದೇಶದಲ್ಲಿ ವ್ಯಾಪಾರಿ ವರ್ಗ ಅಥವಾ ವೈಶ್ಯ ಜನರ ಪ್ರತಿಷ್ಠೆ ಹೆಚ್ಚಿನ ಮಟ್ಟಕ್ಕೆ ಏರಿದ್ದಕ್ಕೆ ಸಾಕ್ಷಿಯಾದ ಶಬ್ದಗಳ ಸಂಖ್ಯೆಯನ್ನು ನೋಡಿದರೆ ಆಶ್ಚರ್ಯವಾಗುತ್ತದೆ. **ಶ್ರೇಷ್ಠಿ** ಶಬ್ದವನ್ನು ಈ ಲೇಖನಮಾಲೆಯ ಪ್ರಾರಂಭದಲ್ಲೇ ಚರ್ಚಿಸಿದೆ. ಮೊದಮೊದಲು ಯಾವೊಂದು ಜನ ಗುಂಪಿನ ಹಿರಿಯನಿಗೆ ಸಲ್ಲುತ್ತಿದ್ದ ಈ ಶಬ್ದ ಬರಬರುತ್ತ ವ್ಯಾಪಾರ ಸಂಘದ ನಾಯಕನಿಗೆ, ಆಮೇಲೆ ಎಲ್ಲ ವ್ಯಾಪಾರಿಗಳಿಗೆ ಅನ್ವಯಿಸಿ ಪ್ರಾಕೃತ ಅಪಭ್ರಂಶ ಭಾಷೆಗಳಲ್ಲಿ **ಸೇಠಿ, ಸೇಠ್, ಸೆಟ್ಟಿ** ಆದದ್ದೂ ಕಡೆಗೆ ಕನ್ನಡದಲ್ಲಿ **ಸೆಟ್ಟಿ** ಶಬ್ದ ತಿರಸ್ಕಾರಕ್ಕೆ ಪಾತ್ರವಾದದ್ದೂ ನಮಗೆ ಗೊತ್ತು. (ಪದಾರ್ಥ-೧)

ಬುದ್ಧನ ಕಾಲಕ್ಕೆ ಆಗಲೇ ದೇಶಾಂತರ ವ್ಯಾಪಾರದಿಂದ ಅಪಾರ ಸಂಪತ್ತನ್ನು ಕಲೆಹಾಕಿದ್ದ ಈ ವರ್ಗ ನವೀನ ಮತ್ತು ಸುಧಾರಣಾವಾದಿ ಪಂಥಗಳಿಗೆ ಧನಧಾರೆ ಎರೆಯುತ್ತಿದ್ದರೆಂಬುದಕ್ಕೆ ಬೌದ್ಧ ಮತ್ತು ಜೈನ ಆಲೇಖ್ಯಗಳಲ್ಲಿ ಪ್ರಮಾಣ ಸಿಗುತ್ತದೆ. ಈ ಕೊಡುಗೈ ದೊರೆತನದಿಂದಾಗಿ ಅವರು, ಸಾಮಾಜಿಕ ಅಂತಸ್ತಿನಲ್ಲಿ ಮುಂಚೆ ಶೂದ್ರರಿಗೆ ಹತ್ತಿರವಾಗಿದ್ದವರು ಮೆಲ್ಲನೆ ಕ್ಷತ್ರಿಯರಿಗೆ ಮಿಗಿಲಾಗದಿದ್ದರೂ ಹತ್ತಿರವಾಗುತ್ತಿದ್ದರೆಂಬುದಕ್ಕೆ ಜೈನ ಕಥೆಗಳು ಪ್ರಮಾಣವಾಗಿವೆ. (ಇಂದಿಗೂ ಅತ್ಯಂತ ಶ್ರೀಮಂತವಾದ ಕೆಲ ವ್ಯಾಪಾರಿ ಗುಂಪುಗಳು ಜೈನ ಧರ್ಮದ ಅನುಯಾಯಿಗಳಾಗಿವೆ). ಕ್ರಿಸ್ತಶಕದ ಆದಿಮ ಶತಕಗಳಲ್ಲಿ ಅಂತಿಮ ರೂಪತಳೆದ ಬ್ರಾಹ್ಮಣರ ಹರಿವಂಶ ಪುರಾಣದಲ್ಲಿಯೂ ಆಗಲೇ ಶ್ರೇಷ್ಠಿಗಳು ಕಾಣಿಸಿಕೊಂಡಿದ್ದಾರೆ.

ಇನ್ನು ಶ್ರೇಷ್ಠಿಗಳಲ್ಲದೆ **ಸಾಹುಕಾರ**ರಿದ್ದಾರೆ. ದೊಡ್ಡ ವ್ಯಾಪಾರಿಗಳು, ಹಣದ ಲೇವಾದೇವಿಯನ್ನು ದೊಡ್ಡ ಪ್ರಮಾಣದಲ್ಲಿ ನಡೆಸುವವರು ಸಾಹುಕಾರರು ಎಂದು ಹಿಂದೀ ಕೋಶ ಹೇಳುತ್ತದೆ. ಈ ಶಬ್ದ **ಸಾಧು** ಶಬ್ದದ ಮರಿ. ಸಂಸ್ಕೃತದಲ್ಲಿ ಮೂಲತಃ ನೇರ ದಾರಿಯಲ್ಲಿ ನಡೆಯುವವನು, ಸಂಭಾವಿತನು ಸಾಧು. ಮತ್ತೆ ವೈರಾಗ್ಯವನ್ನು ತಾಳಿ ಪ್ರಪಂಚ ವ್ಯವಹಾರಗಳನ್ನು ಬಿಟ್ಟ ಜೈನ ಮತ್ತು ಇತರ ಮುನಿಗಳು ಸಾಧುಗಳಾದರು. **ಸಾಧು-ಸಂತ** ಎಂಬ, **ಸಾಧು-ಸಜ್ಜನ** ಎಂಬ ಏಕಾರ್ಥಕ ಅವಳಿ ಪದಗಳು ಇಂದಿಗೂ ಕೇಳಿಸುತ್ತವೆ. ಆದರೆ ''ಹಿತೋಪದೇಶ'' ಗ್ರಂಥದ ಕಾಲಕ್ಕಾಗುವಾಗ (ಕ್ರಿ.ಶ.ಸು. ೯೦೦) ಬಂಗಾರದ ಆಭರಣ ಮಾಡುವ, ಮಾರುವ **ಸರಾಫ**ರನ್ನು **ಸಾಧು**ಗಳೆಂದು ಕರೆಯುವುದಾಯಿತು. ಮುಂದಿನ ಶಬ್ದಕೋಶಗಳಲ್ಲಿ ಕೆಲವು, ಸಾಧು ಶಬ್ದಕ್ಕೆ **ವರ್ತಕ, ಹಣಕಾಸಿನ ಲೇವಾದೇವಿಗಾರ** ಎಂಬರ್ಥಗಳನ್ನು ಕೊಟ್ಟದ್ದು ಕಾಣಿಸುತ್ತದೆ. ಧರ್ಮಶಾಸ್ತ್ರಗಳು ಬಂಗಾರದ ಆಭರಣಗಳನ್ನು ಮಾಡುವ-ಮಾರುವವರನ್ನು ಕೀಳು ಜಾತಿಯೆಂದು ಹೇಳುತ್ತಿರುವಾಗ (ಅವರು ಪಂಚ ಮಹಾ ಪಾತಕಗಳಲ್ಲಿ ಒಂದಾದ ಸ್ವರ್ಣಸ್ತೇಯ=ಬಂಗಾರ ಕಳವು ಮಾಡುವ ಒಲವಿನವರಾಗಿರುತ್ತಾರಲ್ಲ!) ಸಂಸ್ಕೃತ ಭಾಷೆ ಅವರಿಗೆ ಸಾಧು ಪಟ್ಟ ಕಟ್ಟಿ ಆಗಿತ್ತು.

ಈ ಸಾಧು ಪದ ಹಿಂದಿ, ಮರಾಠಿ, ಬಂಗಾಲಿ ಭಾಷೆಗಳಲ್ಲಿ ಸಾಹು ಆಗಿ ಸಜ್ಜನ ಮತ್ತು **ಸೇಠ್** ಎಂಬ ಎರಡೂ ಅರ್ಥಗಳಿಗೆ ಭಾಗಿಯಾಯಿತು. ಅದಕ್ಕೆ ಕೈ ಹುಟ್ಟಿ **ಸಾಹು-ಕಾರ** ಆಯಿತು. ಸಾಹು ಮಹಾರಾಜ=ಸಾಧು ಮಹಾರಾಜ, ಅಂದರೆ ಸಜ್ಜನ.

ಇದೇ ತರಹ ವೈಶ್ಯರ ಪ್ರತಿಷ್ಠೆಗೆ ಕಪ್ಪ ಕೊಟ್ಟ ಇನ್ನೊಂದು ಶಬ್ದ **ಮಹಾಜನ**. ಮಹಾಜನ ಎಂದರೆ ದೊಡ್ಡ ಮನುಷ್ಯ, ಜನಸ್ತೋಮ ಇತ್ಯಾದಿಗಳು ಪ್ರಾಥಮಿಕ ಅರ್ಥಗಳು. ಮಹಾಭಾರತದಲ್ಲಿ ಮಹಾಜನ ಇದೇ ಅರ್ಥದಲ್ಲಿದೆ. ಬಳಿಕ, ಯಾವುದಾದರೊಂದು ಪಂಗಡದ ಸಂಘ ಮತ್ತು ಅಂಥ ಸಂಘಟನೆಗಳ ಹಿರಿಯರು ಎಂಬರ್ಥದಲ್ಲಿ ನಮ್ಮ ಕನ್ನಡ ಶಾಸನಗಳಲ್ಲಿಯೂ ಈ ಶಬ್ದ ಬರುತ್ತದೆ. ಆಮೇಲೆ ಶ್ರೇಷ್ಠಿಯಂತೆ ಮಹಾಜನ ಕೂಡ **ವ್ಯಾಪಾರಿ ಸಂಘದ ಹಿರಿಯ**ನಿಗೆ ಸಲ್ಲುವುದಾಯಿತು. ವ್ಯಾಪಾರಿ ಸಮುದಾಯದ ಪ್ರತಿಷ್ಠೆ, ಪತ್ತು ಎಷ್ಟಿತ್ತೆಂಬುದಕ್ಕೆ ದೇವಸ್ಥಾನಗಳ ಮತ್ತು ಸಾರ್ವಜನಿಕ ದತ್ತಿಗಳ ನಿರ್ವಹಣೆಗಾಗಿ ಅವರ ಸಂಘಗಳ ವಶದಲ್ಲಿ ದಾನಿಗಳು ಹಣ ಬಿಡುತ್ತಿದ್ದ ವಿಷಯದ ಕನ್ನಡ ಶಾಸನಗಳೂ ದ್ಯೋತಕವಾಗಿವೆ. ಈ ಸಂಘಗಳು ಹಣದ ಲೇವಾದೇವಿ ಮಾಡುತ್ತಿದ್ದವೆಂಬಲ್ಲಿ ಸಂಶಯವಿಲ್ಲ. ಇಂದು ಉತ್ತರ ಭಾರತದಲ್ಲಿ **ಮಹಾಜನ** ಎಂಬುದು ಹಣದ ಲೇವಾದೇವಿ

ಮಾಡುವ ಸಾಹುಕಾರನಿಗೆ ಹೆಸರು. ''ಪಂಚತಂತ್ರದ'' ಕಾಲದಲ್ಲಿ (ಕ್ರಿ.ಶ.೪ನೇ ಶತಮಾನ) ಆಗಲೇ ವ್ಯಾಪಾರಿ ಸಂಘದ ಹಿರಿಯನು ಮಹಾಜನ ಆಗಿಬಿಟ್ಟಿದ್ದ. ಈ ಜನರೇ ಭಾರತೀಯ ಬ್ಯಾಂಕಿಂಗಿನ ಪ್ರವರ್ತಕರು. ಭಗವದ್ಗೀತೆ ಸ್ತ್ರೀ ಶೂದ್ರರೊಡನೆ ವೈಶ್ಯರನ್ನೂ ''ಪಾಪಯೋನಿ''ಗಳಲ್ಲಿ ಸೇರಿಸಿತ್ತು. (ಗೀತಾ, ೯, ३೨) ಕೆಲವೇ ಶತಮಾನಗಳಲ್ಲಿ ಅವರು ಎಷ್ಟು ಮೇಲೇರಿಬಿಟ್ಟರು! ''ವಡ್ಡಾರಾಧನೆ''ಯ ಪ್ರಕಾರ ವೈಶ್ಯ ಧನಿಕರು ರಾಜರ ಅರಮನೆಗಳಿಗಿಂತ ಭವ್ಯವಾದ ಭವನಗಳಲ್ಲಿ ವಾಸಿಸುತ್ತಿದ್ದರು. ವಾಣಿಜ್ಯ ವ್ಯವಸಾಯದ ಪ್ರತಿಷ್ಠೆ ಹೆಚ್ಚಿದ್ದಕ್ಕೆ ಬೇರೆ ಪ್ರಮಾಣ ಬೇಕಿದ್ದರೆ, ಚಾರುದತ್ತ ಬ್ರಾಹ್ಮಣನೂ ವ್ಯಾಪಾರ ಮಾಡಿ ಧನಿಕನಾದದ್ದನ್ನೂ ಆತ ''ಮೃಚ್ಛಕಟಿಕ'' ನಾಟಕದ ನಾಯಕನಾದದ್ದನ್ನೂ ಸ್ಮರಿಸಿಕೊಳ್ಳಿ. ಇದಕ್ಕೆ ಸಂವಾದಿಯಾಗಿ ಯುರೋಪಿನಲ್ಲಿ ಮಹಾ ವಣಿಕ್ ಅಭ್ಯುದಯ ವರ್ತಕರನ್ನು ರಾಜಪುತ್ರರ ಅಂತಸ್ತಿಗೇರಿಸಿದ್ದು ೧೩ನೇ ಶತಮಾನದ ನಂತರ ಕಾಣಿಸುತ್ತದೆ. ಅವರನ್ನು ಏರಿಸುವ Merchant of Venice ನಾಟಕದ ಕಥೆ ಸೃಷ್ಟಿಯಾಗುತ್ತದೆ. ಅದರ ನಾಯಕ ಅಂತೋನಿಯೋ ಒಂದು ತರಹದಲ್ಲಿ ನಮ್ಮ ದರಿದ್ರ ಚಾರುದತ್ತನೇ ಸೈ.

೯३

ಮದುವೆ ಮಾಡಿಕೊಂಡವಳನ್ನು ಹೆಂಡತಿಯೆಂದು – ಭಾವನಾತ್ಮಕವಾಗಿ **ಮಡದಿ**ಯೆಂದು, ಕಾವ್ಯ ಭಾಷೆಯಲ್ಲಿ – ಕರೆಯುತ್ತೇವೆ. ನವ ತರುಣಿಯರನ್ನು ಒಟ್ಟಾಗಿಯೆ ಮಡದಿಯರೆನ್ನುವುದೂ ಉಂಟು: ಈ ದ್ರಾವಿಡ ಭಾಷಾ ಶಬ್ದ ತೆಲುಗಿನಲ್ಲಿ ''ಮಡತಿ'' ''ಮಡಂತಿ'' ಎಂದೂ ತಮಿಳಿನಲ್ಲಿ ''ಮಡಂದೈ'' ಎಂದೂ ತುಳುವಿನಲ್ಲಿ ''ಬೊಡೆದಿ'' ಎಂದೂ ಪ್ರಚಾರದಲ್ಲಿದೆ. ಈ ಶಬ್ದದ ಮೂಲಾರ್ಥವನ್ನು ಕೇಳಿದರೆ ಆಮೇಲೆ ನಮ್ಮ ಮಡದಿಯರು ತಮ್ಮ ಪ್ರಿಯಕರರಿಂದ ಆ ಪದದಿಂದ ಕರೆಯಿಸಿಕೊಳ್ಳಲು ಇಷ್ಟಪಟ್ಟಾರೋ ಎಂಬುದು ಸಂದೇಹಕರ. ಯಾಕೆಂದರೆ, ಅದು ದಡ್ಡತನ, ಪೆದ್ದು ಎಂಬರ್ಥ ಸೂಚಿಸುವ ದ್ರಾವಿಡ **ಮಡಂ** ಎಂಬುದರ ಮಗುವೋ ತಂಗಿಯೋ ಆಗಿದೆ. **ಮಡೆಯ, ಮಡ್ಡಿ** ಏಲೆಯವ ಎಂದು ಹೆಡ್ಡರನ್ನು ಕರೆಯುತ್ತೇವಲ್ಲ. ಹೆಚ್ಚು ಕಡಿಮೆ ಎಲ್ಲ ದ್ರಾವಿಡ ಭಾಷೆಗಳಲ್ಲಿಯೂ ಮಡದಿ ಮತ್ತು ಜ್ಞಾತಿ ಪದಗಳಿಗೆ ಹೆಂಡತಿ ಮತ್ತು ಹೆಡ್ಡಿ ಎಂಬೆರಡೂ ಅರ್ಥಗಳು ನಡೆಯುತ್ತವೆ.

ಇದು ಹೇಗೆ ಸಾಧ್ಯವಾಯಿತು ? ಇದು ಸ್ತ್ರೀ ಸೌಂದರ್ಯ ಮತ್ತು ಹೆಣ್ಣಿನ ಸದ್ಗುಣಗಳ ಬಗ್ಗೆ ಭಾರತೀಯರ ಆದರ್ಶದ ಕಲ್ಪನೆಗೆ ಸಾಕ್ಷಿಯಾದ ಪದ. ಸಂಸ್ಕೃತದಲ್ಲಿ **ಮುಗ್ಧಾಂಗನೆ**ಯೆಂದು ಪ್ರಶಂಸಾತ್ಮಕವಾಗಿ ಹೇಳುವುದಿಲ್ಲವೆ? ವಂಚನೆ ಅರಿಯದವಳು, ಹೇಳಿದ್ದನ್ನು ನಂಬಿಬಿಡುವವಳು, ಸ್ವಂತ ಆಲೋಚನೆ ಇಲ್ಲದವಳು, ಆದರೆ ಮೃದುವಾಗಿ, ಚೆಲುವಾಗಿರುವವಳು – ಇಂಥ ಹೆಣ್ಣನ್ನು ನಮ್ಮ ಪುರುಷವೃಂದ ಮೆಚ್ಚುತ್ತದೆ. ಮುಗ್ಧತನ ಗಂಡಿನಲ್ಲಿ ಅವಗುಣ, ಹೆಣ್ಣಿನಲ್ಲಿ (ಮತ್ತು ಪ್ರಜೆಗಳಲ್ಲಿ ಅಥವಾ ಮತದಾರರಲ್ಲಿ!) ಸದ್ಗುಣ. ಸಂಸ್ಕೃತ ಕವಿಗಳ ನಾಯಕರಿಗೆ ತಮ್ಮ ನೂತನ ಪ್ರೇಯಸಿಯರನ್ನು ''ಮುಗ್ಧೇ, ಮುಗ್ಧೇ'' ಎಂದು ಕರೆದಷ್ಟೂ ತೃಪ್ತಿ ಇಲ್ಲ. ಕನ್ನಡ ಕವಿಗಳೂ ''ಮುಗುದೆ''ಯರನ್ನು ಮೆಚ್ಚಿದ್ದಾರೆ. ಹೆಚ್ಚಿನ ಕಥಾನಾಯಕರು ತಮ್ಮ ಪ್ರೇಯಸಿಯರ ಮುಗುದೆತನ ಹರಿದು ಜಾಣತನ ಬೆಳಗುವಷ್ಟರಲ್ಲಿ ಬೇರೆ ಮುಗುದೆಯರತ್ತ ಹೊರಳಿರುತ್ತಾರೆ!

ಆದರೆ ಪ್ರೀತಿಗೂ ಹೆಡ್ಡತನಕ್ಕೂ ಇರುವ ಸಂಬಂಧ ನಮ್ಮ ದೇಶಕ್ಕೇ ಮಿತವಾಗಿರುವಂತೆ ಕಾಣದು. ಇಂಗ್ಲೀಷಿನಲ್ಲಿ fond ಶಬ್ದ ನೋಡಿ. ಇದರ ಇಂದಿನ ಅರ್ಥ ಇಷ್ಟಪಡುವ, ಮೆಚ್ಚುವ ಎಂದು. I am fond of poetry (ನನಗೆ ಕಾವ್ಯವೆಂದರೆ ಪ್ರೀತಿ); He is fond of her (ಅವನಿಗೆ ಅವಳೆಂದರೆ ಮೆಚ್ಚು). ಈ ಶಬ್ದಕ್ಕೆ ಮಧ್ಯಕಾಲದ ಇಂಗ್ಲೀಷಿನ fon ಎಂಬುದು ಮೂಲ. Fon ಎಂದರೆ ಪೆದ್ದು (fool). ಹೀಗೆ ಪ್ರೀತಿ ತೋರಿಸುವುದೆಂದರೆ ಪೆದ್ದುಪೆದ್ದಾಗಿ ವರ್ತಿಸುವುದು. ಅರ್ಥಾತ್ **ಮುದ್ದು** = **ಮೊದ್ದು**. ಆದರೂ ಒಂದು ಭೇದ ಇದೆಯೇನೋ – ಅಲ್ಲಿ ಮೆಚ್ಚಿಕೊಂಡವರು ಮೊದ್ದು; ಇಲ್ಲಿ ಮೆಚ್ಚಿಕೆಗೆ ಪಾತ್ರರಾದವರು ಪೆದ್ದು !

* * *

ಹೊಸ ಹಿಂದೂ ವಿವಾಹ ಕಾನೂನಿನಿಂದಾಗಿ ಈಗ **ಸವತಿ**ಯರ ಸಂಖ್ಯೆ ಇಳಿಯುತ್ತಿದೆ. ಆದರೆ ಜನರ ಬಾಯಿಯಿಂದ ಸವತಿ ಅಸ್ತಂಗತಳಾಗಲಿಲ್ಲ. ''ಸವತೀಹಾಂಗ ಕಾಡತೀ'' ಎಂದು ಒಬ್ಬ ತಾಯಿ ತನ್ನ ಮಗಳನ್ನೇ ಬಯ್ಯುವುದನ್ನು ನಾನು ಕೇಳಿದ್ದೇನೆ. ಸವತಿ ಎಂದರೆ ಗಂಡನ ಇನ್ನೊಬ್ಬ ಹೆಂಡತಿ. ಸಂಸ್ಕೃತದಲ್ಲಿ **ಸಪತ್ನಿ**. ಸಪತ್ನಿಯ ಮಕ್ಕಳು **ಸಾಪತ್ನರು** ಅಥವಾ **ಸಪತ್ನರು**. ಈ ಶಬ್ದಕ್ಕೆ ಸವತಿಯ ಮಕ್ಕಳೆಂಬ ಅರ್ಥದ ಸಂಗಡ ಪ್ರತಿಸ್ಪರ್ಧಿಗಳು ಮತ್ತು **ಶತ್ರು**ಗಳು ಎಂಬರ್ಥವೂ ಋಗ್ವೇದಕಾಲದಿಂದಲೇ ಕಾಣಸುತ್ತದೆ. ಅರಸರು ರಾಜ್ಯವನ್ನು **ಅಸಪತ್ನ**ವಾಗಿ (ಶತ್ರುಗಳಿಲ್ಲದಂತೆ) ಮಾಡಲು ಹಂಬಲಿಸುತ್ತಾರೆ. ಅಥರ್ವದಲ್ಲಿ ಸಪತ್ನಿಯರ ನಾಶಕ್ಕಾಗಿ ಮಂತ್ರಗಳೇ ಇವೆ ! **ಸಪತ್ನಕ್ಷಯಣ** ಅಂದರೆ ಅಥರ್ವದಲ್ಲಿ ಸವತಿಯರ ನಾಶ.

ಋಗ್ವೇದದ ೧೦ನೇ ಮಂಡಲದಲ್ಲಿಯೂ ಅನೇಕ ಮಂತ್ರಗಳು ಸವತಿಯರ ಮತ್ತು ಅವಳ ಮಕ್ಕಳ ನಾಶಕ್ಕೆ ಸಂಬಂಧಿಸಿವೆ (ಮಂತ್ರ ೧೪೫, ೧೫೯, ೧೬೫ ಇತ್ಯಾದಿ). ಆ ಕಾಲದಲ್ಲಿಯೂ ಸವತಿಯರಿದ್ದರು; ಅವರೊಳಗೂ ಅವರ ಮಕ್ಕಳೊಳಗೂ ಪರಮದ್ವೇಷವೂ ಇತ್ತು. ಆ ಶತ್ರುತ್ವ ಎಷ್ಟು ತೀವ್ರವಾಗಿತ್ತೆಂದರೆ ನಿಜವಾದ ಸವತಿಯ ಮಕ್ಕಳಲ್ಲದ ಎಲ್ಲ ಹಗೆವರಿಗೂ **ಸಪತ್ನ**, **ಸಾಪತ್ನ**ರೆಂಬ ಶಬ್ದ ಸಲ್ಲುತ್ತಿತ್ತು. ಪೌರಾಣಿಕ ಕಥೆಗಳೂ ಇದನ್ನು ಸಮರ್ಥಿಸುತ್ತವೆ. ದೇವದಾನವರು ಸಾಪತ್ನರು; ಕಶ್ಯಪ ಋಷಿಗೆ ಬೇರೆ ಬೇರೆ ಹೆಂಡಂದಿರಿಂದಾದ ಮಕ್ಕಳು.

* * *

**ಅಳಿಯ** ಎಂದರೆ ದಕ್ಷಿಣ ದ್ರಾವಿಡ ಭಾಷೆಗಳಲ್ಲೆಲ್ಲ ಮಗಳ ಗಂಡ. (ಕೆಲವಲ್ಲಿ ಅಕ್ಕ ಅಥವಾ ತಂಗಿಯ ಗಂಡ, ಅಥವಾ ಮಗ ಕೂಡ ಅಳಿಯ) ಸಂಸ್ಕೃತದಲ್ಲಿ ಅವನು **ಜಾಮಾತೃ**. ಉರ್ದು ಭಾಷೆಯಲ್ಲಿ **ದಾಮಾದ್**. ಇದು ಜಾಮಾತದ ಪಾರಸೀಕ ಭಾಷೆಯ ರೂಪ. ತಮಿಳಿನಲ್ಲಿ **ಅಳಿ** ಧಾತುವಿಗೆ ಇಷ್ಟ, ಪ್ರಿಯ, ಉದಾರ ಇತ್ಯಾದ್ಯರ್ಥಗಳು. **ಅಳಿಯ** ಎಂದರೆ ಪ್ರಿಯ. ಜಾ-ಮಾತೃವಿಗೆ ನಿರುಕ್ತಕಾರರು (ಮಗಳಲ್ಲಿ) ಸಂತಾನ (ಜಾ) ಉತ್ಪತ್ತಿ ಮಾಡುವವ (ಮಾತೃ) ಎಂದು ನಿರುಕ್ತಿ ಹೇಳುತ್ತಾರೆ. ''ಒಂದು ಭತ್ತಕ್ಕೆ ಒಂದು ಅಕ್ಕಿ'' ಎಂಬಂತೆ ಯಥಾವತ್ ಅರ್ಥ. ಹಾಗೆಯೇ ಇಂಗ್ಲೀಷಿನ Son-in-law (ಅಳಿಯ) ಕೂಡ (ವಿವಾಹ ಸಂಬಂಧದಿಂದ) ಮಗನಾದವನು. ಸುಮಾರಾಗಿ ಇದೇ ಭಾವವನ್ನು ಒಳಗೊಂಡ ತಮಿಳು, ಮಲೆಯಾಳಿ, ತುಳು **ಮರುಮಗನ್**, **ಮರ್ಮಾಯೆ** (ಅಳಿಯಾರ್ಥಕ) ಪದಗಳು ಹೇಳುತ್ತವೆ. ಮರು (= ಮತ್ತೆ ) ಮಗನಾದವನು ಅಳಿಯ.

ಅಳಿಯನಿಗೆ ಸಂಬಂಧಿಸಿದ ಬೇರೆ ಕೆಲ ಪದಗಳಿಂದ, ಪಾಶ್ಚಾತ್ಯ ಸಂಸ್ಕೃತಿಗೂ

ಪೌರಸ್ತ್ಯಕ್ಕೂ ಇರುವ ಅಂತರ ವ್ಯಕ್ತವಾಗುತ್ತದೆ. ಪಾಶ್ಚಾತ್ಯ ಅಳಿಯ Son-in-law ಹೆಂಡತಿಯ ತೌರಿನಲ್ಲಿ ಗಣ್ಯ ವ್ಯಕ್ತಿಯಲ್ಲ. (ಅವನ ಮನೆಯಲ್ಲೇ ಬಂದು ಅತ್ತೆ ಜರ್ಬು ನಡೆಸುತ್ತಾಳಂತೆ!) ನಮ್ಮಲ್ಲೋ ಅವನು ವರ (= ಶ್ರೇಷ್ಠನೆಂದು ಮಗಳಿಂದ ಆರಿಸಲ್ಪಟ್ಟವ)ನಾಗಿ ಬರುತ್ತಾನೆ. ಅವನಿಗೆ **ವರೋಪಚಾರ** ನಡೆಯುತ್ತದೆ (ಕೊಟ್ಟಷ್ಟೂ ಸಾಲದೆನ್ನುತ್ತಾನೆ). ವಿಶೇಷವೆಂದರೆ ಅಳಿಯನ ಅಂತಸ್ತು ಪಾರಸೀಕ ಭಾಷೆಯ ಶಬ್ದಗಳಲ್ಲಿ ಕೂಡ ಎದ್ದು ಕಾಣಿಸುತ್ತದೆ. ನಮ್ಮ ಅಳಿಯ ವರನಾದರೆ ಅವರಲ್ಲಿ ಅಳಿಯ **ಶಹ, ಶಾಹ** (ಶ್ರೇಷ್ಠನೂ ಹೌದು,ರಾಜನೂ ಹೌದು). ಕೆಲವೊಮ್ಮೆ ಅವನು **ಶಹಂಶಾಹ** (ರಾಜಾಧಿರಾಜ) ಕೂಡ ಆಗುತ್ತಾನೆ. ಅವನ ಉಡುಪು **ಶಾಹನಾ** (ರಾಜ ವೇಷ). ಪೌರಸ್ತ್ಯ ಸಮಾಜದಲ್ಲಿ ಪುರುಷ ಪ್ರಭುತ್ವದ ಅಗ್ಗಳಿಕೆಗೆ ಈ ಪದಗಳು ಸಾಕ್ಷಿಯಾಗಿವೆ.

೯೪

ಹುಡುಗನಿಗೆ ಈ ವರ್ಷವೂ **ಬಾಸಿಂಗ** ಬಲ ಕೂಡಿಬರಲಿಲ್ಲ – ಎನ್ನುತ್ತಾರೆ. ಇದರ ಅರ್ಥ ಮದುವೆಯ ಯೋಗ ಬರಲಿಲ್ಲ ಎಂದು. **ಬಾಸಿಂಗ** ಶಬ್ದದ ಅರ್ಥ ಎಲ್ಲರಿಗೆ ಗೊತ್ತು. ಮದುವೆಯ ಸಮಯ, ಅಲಂಕಾರಕ್ಕಾಗಿ ಮದುಮಕ್ಕಳ ಹಣೆಗೆ ಕಟ್ಟುವ ಮುತ್ತಿನ ಅಥವಾ ಬೇಗಡೆಯ ಮಾಲೆ, ಅಥವಾ ಕೆಲ ಪ್ರದೇಶಗಳಲ್ಲಿ ಬೆಂಡು ಬೇಗಡೆಗಳಿಂದ ನಿರ್ಮಿಸಿದ ಕಿರೀಟದಂಥ ಅಲಂಕಾರ. ಮದುವೆ ಮುಗಿಯುತ್ತಲೇ ಇದನ್ನು ವಿಸರ್ಜಿಸುತ್ತಾರೆ. ಈ ಅಲಂಕಾರ ಮದುಮಕ್ಕಳಿಗೆ ಸಾರ್ವತ್ರಿಕವಲ್ಲವಾದರೂ ಸಾಕಷ್ಟು ಪ್ರಚಾರದಲ್ಲಿದೆ. ಮರಾಠಿಯಲ್ಲಿ **ಬಾಶಿಂಗ** ಎಂಬ ರೂಪದಲ್ಲಿ ಈ ಶಬ್ದ ಕಾಣಿಸುತ್ತದೆ.

ಆದರೆ ''ಬಾಸಿಂಗ'' ಎಂದರೇನೆಂಬ ಗಂಟು ಸುಲಭವಾಗಿ ಬಿಡಿಸುವಂಥದ್ದಲ್ಲ. ಮರಾಠಿ ಕೋಶಕಾರ ಮೋಲ್ಸ್‌ವರ್ತನ ಪ್ರಕಾರ ಅದು **ಭಾಲಶೃಂಗ** (= ಹಣೆಯ ಕೋಡು). ಶೃಂಗ ಎಂಬುದಕ್ಕೆ ಬರೇ ಪ್ರಾಣಿ ಅಥವಾ ಪರ್ವತಗಳ ಕೋಡು ಎಂದಲ್ಲದೆ **ಅಲಂಕಾರ** (ಶೃಂಗಾರ ಶಬ್ದ ಗಮನಿಸಿರಿ) ಎಂಬರ್ಥವೂ ಇರುವುದರಿಂದಲೂ ಶೃಂಗದಂತೆ ಈ ಅಲಂಕಾರವನ್ನು ನಿರ್ಮಿಸುವುದರಿಂದಲೂ ಈ ವ್ಯುತ್ಪತ್ತಿ ನ್ಯಾಯವಾಗಿ ತೋರುತ್ತದೆ. ಆದರೆ ಮೋಲ್ಸ್‌ವರ್ತನ ನಂತರ ಮರಾಠಿ ವ್ಯುತ್ಪತ್ತಿಕೋಶವನ್ನು ಸಂಗ್ರಹಿಸಿದ ಪ್ರೊ. ಕುಲಕರ್ಣಿಯವರು **ಭಾಲಶೃಂಗ** ಎಂದು ವ್ಯುತ್ಪತ್ತಿ ಹೇಳಿ ಆ ಮೇಲೆ ಇವರಿಗೆ ಇದರಿಂದ ಸಮಾಧಾನವಿಲ್ಲ ಎಂದು ತೋರಿಸಲು (?) ಪ್ರಶ್ನಾರ್ಥಕ ಚಿಹ್ನೆ ಹಾಕಿದ್ದಾರೆ.

ವಾಸ್ತವಿಕವಾಗಿ ಬಾಸಿಂಗದ ಮೂಲ ರೂಪ ಕನ್ನಡದ **ಬಾಸಿಗ**. ಉಚ್ಚಾರ ಬಲಕ್ಕಾಗಿ ಮಧ್ಯದಲ್ಲಿ ಬಿಂದು ಸೇರಿದೆ. (ಇಂಥ ಬಿಂದು ಆಗಮವಾಗುವುದು ಅಪರೂಪವಲ್ಲ. ಉದಾಹರಣೆಗೆ ಪಗಡೆಯ ಆಟದ ಪಟಕ್ಕೆ **ಪಾಸುಗೆ, ಪಾಸಂಗಿ = ಹಾಸಂಗಿ** ಎಂಬ ಹೆಸರಿದೆ) **ಬಾಸಿಗ** ಶಬ್ದ ಪಂಪನಿಗಿಂತಲೂ ಹಿಂದೆ ಕನ್ನಡದಲ್ಲಿತ್ತು, ''ಬಾಸಿಗದೊಂದು ಕಂಪಿನೊಳ್'' ಎಂದು ಪಂಪನ ಪ್ರಯೋಗ. ಪಂಪನಿಗಿಂತ ಒಂದು ನೂರು ವರ್ಷ ಹಿಂದಿನ ತಮಿಳು ಆಳ್ವಾರರಾದ ನಮ್ಮಾಳ್ವಾರ್ (ಶಠಕೋಪರು) ಅವರ ''ತಿರುವಿರುದಂ'' ಪ್ರಬಂಧದಲ್ಲಿ **ವಾಶಿಗೈ** ಎಂಬ ರೂಪದಲ್ಲಿ ಅದು ತೋರುತ್ತದೆ. ತೆಲುಗಿನಲ್ಲಿಯೂ **ಬಾಸಿಕ** ಇದೆ. ಈ ಭಾಷೆಗಳಲ್ಲಿನ ಯಾವ ಪ್ರಯೋಗದಲ್ಲಿಯೂ **ಬಾಸಿಗಕ್ಕೆ** ಮದುವೆಯೊಡನೆ ವಿಶೇಷ

ಸಂಬಂಧವಿಲ್ಲ. ಅದು ತಲೆಗೆ ಸುತ್ತುವ ಹೂಮಾಲೆ ಎಂಬುದು ಪಂಪನ ಪ್ರಯೋಗದಿಂದ ಖಚಿತಪಡುತ್ತದೆ. ತಮಿಳಿನಲ್ಲಿಯೂ ಇದರ ಅರ್ಥ ಹೀಗೆಯೇ. ಬಹುಶಃ ಅದು ತಲೆಯನ್ನು ಪೂರ್ತಿ ಮುಚ್ಚುವ (ಕವಿದು) ಹೂಮಾಲೆಯ ಟೊಪ್ಪಿ (ಜಲ್ಲಿ ಎಂದು ನಮ್ಮ ಕರಾವಳಿಯಲ್ಲಿ ಕರೆಯುತ್ತಾರೆ) ಇದ್ದೀತು.

ವಿವಾಹವಿಧಿಯನ್ನು ಬಲ್ಲ ಪುರೋಹಿತರನ್ನು ಕೇಳಿದರೆ ಅಲ್ಲಿ ಬೆಂಡಿನ ಅಥವಾ ಚಿನ್ನ ಬೆಳ್ಳಿಯ ಕಿರೀಟದಂಥ ಆಭರಣವನ್ನು ಹೇಳಿಯೇ ಇಲ್ಲ. ಅಲ್ಲಿ 'ಸ್ರಜಂ ಚ ಮೂರ್ಧ್ನಿ ಬಧ್ನೀಯಾತ್' ಎಂಬ ವಿಧಾಯಕ ಇದೆ. (ಮಾಲೆಯನ್ನು ತಲೆಗೆ ಕಟ್ಟಬೇಕು – ಆದರೆ ಅದನ್ನು ಮಾಲೆಯೆಂದು ಕರೆಯುವುದು ತಪ್ಪು. ಸ್ರಜ್ ಎನ್ನಬೇಕು – ಎಂದು ಸ್ಪಷ್ಟವಾಗಿ ಉಕ್ತವಾಗಿದೆ).

ಹೀಗೆ **ಬಾಸಿಗ, ಬಾಸಿಂಗ** ಮೂಲದಲ್ಲಿ ಹೂವಿನ ಒಂದು ತರದ ಮಾಲೆ ಅಥವಾ ತುರಾಯಿಯಾಗಿತ್ತಲ್ಲದೆ ಮತ್ತಾವ ಕೃತಕ ಕಿರೀಟ ಅಥವಾ ಆಭರಣವಾಗಿದ್ದಿಲ್ಲ. ಬಹುಶಃ ಅದು ವಿಶಿಷ್ಟವಾಗಿ ನೇಯ್ದ ಹೂಮಾಲೆ ಅಥವಾ ಹೂ ಮತ್ತು ಎಲೆ ಬೆರೆಸಿ ನಿರ್ಮಿಸಿದ ದಂಡೆ ಇದ್ದಿರಬೇಕು. ಇದಕ್ಕೆ ಸಂಸ್ಕೃತದಲ್ಲಿ ''ಸ್ರಜ್'' ಎಂಬ ಅಭಿಧಾನವಿರಬೇಕು. **ವನಮಾಲೆ** ಎನ್ನುತ್ತಾರಲ್ಲ.

ಆದರೆ **ಬಾಸಿಗ** ಶಬ್ದ ಹೇಗೆ ಹುಟ್ಟಿತೆಂಬುದಕ್ಕೆ ಇದು ಉತ್ತರವಾಗಲಿಲ್ಲ. ಮರಾಠಿಯವರ ಊಹನೆಯಲ್ಲಿ ತಿದ್ದುಪಡಿ ಮಾಡಿ **ಭಾಲಸ್ರಕ್** (ಜ್) ಅಥವಾ **ಭಾಲಸ್ರಂಕ** ಮಾಡಿದರೆ ಹೇಗೆ? **ಸ್ರಜ್, ಸ್ರಂಕ** ಎಂದರೆ ಒಂದು ಬಗೆಯ ಮಾಲೆ. ''ಭಾಲದ'' ಬದಲು ''ಬಾಲ'' ಇಟ್ಟುಕೊಳ್ಳಲೂಬಹುದು. **ಬಾಲ** ಎಂದರೆ **ಕೂದಲು.** ಆದರೆ ಬಾಲ ಅಥವಾ ಭಾಲದ ''ಲ'' ಕಾರ ಬಿದ್ದು ಹೋಯಿತೆಂದು ಸಾಧಿಸುವುದು ಕಷ್ಟ. ಆದ್ದರಿಂದ ಸಂಸ್ಕೃತ **ಪಾಶ್ಯಾ** ಅಥವಾ **ಪಾಶಿಕದಿಂದ ಬಾಸಿಗ** ಹುಟ್ಟಿತೆಂಬುದು ಹೆಚ್ಚು ಯುಕ್ತವಾಗಿದೆ. **ಪಾಸೀ** ಎಂದರೆ ಪ್ರಾಕೃತದಲ್ಲಿ **ಚೂಡಾ** ಅಥವಾ ತಲೆಗೂದಲ ಗಂಟು, ಸೂಡು. **ಪಾಶ್ಯಾ, ಪಾಶಿಕ** ಎಂದರೆ (ಹೂವಿನ) ಸರ, ಹಣೆಯ ಆಭರಣ (ಕೇಶವನ ''ಕಲ್ಪದ್ರುಮ''). ಮಾಲೆಯನ್ನು ತಮಿಳಿನಲ್ಲಿ 'ಕಣ್ಣಿ'' (= ಪಾಶ = ಉರುಲು) ಎನ್ನುವುದುಂಟು. ಆದ್ದರಿಂದ **ಪಾಶ್ಯಾ = ಪಾಸಿಯ = ಬಾಸಿಗ.** ಕೂದಲಿಗೆ ಸುತ್ತುವ ಮಾಲೆ.

* * *

**ಹುಡುಗ, ಹುಡುಗಿ** ನಮಗೆಷ್ಟು ಪರಿಚಿತರೆಂದರೆ ಈ ಶಬ್ದ ಎಲ್ಲಿಂದ ಬಂತು ಎಂದು ಕೇಳುವುದೇ ಹೆಡ್ಡತನವಾದೀತು. ಆದರೆ ಇದು ಕನ್ನಡದಲ್ಲಿ ಬಹಳ ಈಚೆಗಿನ ಶಬ್ದವೆಂಬುದು ಆಶ್ಚರ್ಯಕರವಾಗಿದೆ. ಬಹುಶಃ ದಾಸಸಾಹಿತ್ಯಕ್ಕಿಂತ ಹಿಂದೆ ಇದರ ಪ್ರಯೋಗವಿಲ್ಲ. ಸಾಹಿತ್ಯ ಪರಿಷತ್ತಿನ ನಿಘಂಟು ಕೂಡ ಇದರ ನಿರುಕ್ತಿಯ ಬಗ್ಗೆ ನಿಶ್ಚಿತ ತೀರ್ಮಾನ ಮಾಡಿಲ್ಲವೆಂದು ತಿಳಿಯುತ್ತದೆ. ಕಿಟ್ಟೆಲ್ಲರು ತೆಲುಗಿನಲ್ಲಿರುವ **ಬುಡುಲಂತೆ** (= ಚಿಕ್ಕಮಗು)ಯನ್ನು ಜ್ಞಾತಿ ಪದವಾಗಿ ಕೊಟ್ಟಿದ್ದಾರೆ. ಇರಬಹುದು. ಬುಡುತೆ ಕನ್ನಡದ ''ಪುಟ್ಟ'' (= ಚಿಕ್ಕ)ಕ್ಕೆ ಜ್ಞಾತಿ ಇರಬಹುದೆಂದೂ ಅವರ ತರ್ಕ.

ನನ್ನದೇ ಶೋಧನೆಯಲ್ಲಿ ಕೆಲ ಕುತೂಹಲಕರ ಅಂಶಗಳು ಹೊರಬಂದವು. ಪ್ರಾಕೃತದಲ್ಲಿ **ಹುಡೋ** ಎಂದರೆ ಟಗರು; ಬೃಹತ್ಸಂಹಿತೆಯಲ್ಲಿ **ಹುಂಡ** ಎಂದರೆ ಟಗರು. ಗುಜರಾತಿಯಲ್ಲಿ **ಹುಡುಯುದ್ಧ** ಎಂದರೆ ಟಗರು ಕಾಳಗ. ಪ್ರಾಯದ ಹುರುಡಿನ

ಟಗರುಗಳಲ್ಲವೇ ಕಾದುವುದು? ಇದಕ್ಕೂ ಹಿಂದೆ ಹೋದರೆ ಸಂಸ್ಕೃತದಲ್ಲಿ **ಪೃಥುಕ** ಎಂಬುದು (ಅವಲಕ್ಕಿಯಲ್ಲದೆ) ಹರಿವಂಶ ಪುರಾಣ ಮತ್ತು ಮಾಘಕಾವ್ಯದಲ್ಲಿ ಗಂಡುಮಗು ಅಥವಾ ಯಾವುದೇ ಹೊಸ ಪ್ರಾಯದ ಪ್ರಾಣಿ ಎಂಬರ್ಥದಲ್ಲಿ ಪ್ರಯೋಗವಾಗಿದೆಯೆಂದು ಮೋನಿಯರ್ ವಿಲಿಯಮ್ಸ್ ಹೇಳಿದ್ದಾನೆ. **ಪೃಥು-ಗ** ಅಂದರೆ ಚುರುಕು ನಡೆಯುಳ್ಳವನೆಂದು ವಾಜಸನೇಯಿ ಪ್ರಾತಿಶಾಖ್ಯೆ ಹೇಳುತ್ತದೆ. **ಪೃಥು-ಕ-ಗ** ಪ್ರಾಕೃತದಲ್ಲಿ **ಹುಡು-ಅ** ಆಗಿ ಅಲ್ಲಿಂದ ಕನ್ನಡಕ್ಕೆ ಬಂದಿರಬೇಕು. ಪ್ರಾಣಿಗಳ ಮರಿಗಳಿಗೂ ಮಕ್ಕಳಿಗೂ ಒಂದೇ ಹೆಸರಿರುವುದು ಅಪರೂಪವಲ್ಲ. **ವತ್ಸ** ಎಂದರೆ ಕರು ಎಂದರ್ಥವಲ್ಲವೆ?

೯೫

**ಜಾದೂ, ಜಾದೂಗಾರ** ಸುಪರಿಚಿತ ಶಬ್ದಗಳು. ಜಾದೂ ಪಾರಸೀಕ ಭಾಷೆಯಿಂದ ಈಚೆಗೆ ತಾನೆ ಬಂದು ಸೇರಿದ ಶಬ್ದ. ಕೈಚಳಕ, ಬಾಯ್ಚಳಕಗಳಿಂದ ಪ್ರೇಕ್ಷಕರನ್ನು ಮಂಕುಮಾಡಿ ಅದ್ಭುತ, ಅಲೌಕಿಕ ಎನಿಸುವ ಕೃತ್ಯಗಳನ್ನು ಮಾಡಿತೋರಿಸುವ ವಿದ್ಯೆ ಇದು. ಹಿಂದೆ ಡೊಂಬರು ಇದರಲ್ಲಿ ಎತ್ತಿದ ಕೈಯಾಗಿದ್ದರು. ''ಚಪ್ಪಡಿ ವಿದ್ಯೆ'' ಎಂದೂ ಅದನ್ನು ಕರೆಯುತ್ತಿದ್ದುದನ್ನು ಕೇಳಿದ್ದೇನೆ. ಇದೀಗ ಮೇಲ್ವರ್ಗದ ಜನರೂ ಅದನ್ನು ಕಲಿತು ಪ್ರದರ್ಶಿಸುತ್ತಾರೆ. ವೈಜ್ಞಾನಿಕ ಅಂಶಗಳೂ ಅದರಲ್ಲಿವೆ.

ಜಾದೂ ಈಗ ಒಂದು ವಿನೋದವಿದ್ಯೆಯಾಗಿದೆ. ಶಬ್ದ ನಮ್ಮ ನೆರೆ ದೇಶದಿಂದ ಬಂದದ್ದು. ಆದರೆ ಪ್ರಾಚೀನ ಭಾರತದಲ್ಲಿ ಈ ಪದದ ಒಂದು ರೂಪ ಭಯಪ್ರದ ಶಕ್ತಿಯನ್ನು ಸೂಚಿಸುವ ಪದವಾಗಿ ವೇದಕಾಲದುದ್ದಕ್ಕೂ ಪ್ರಚಲಿತವಾಗಿತ್ತು ಎಂದರೆ ಆಶ್ಚರ್ಯವಾದೀತು. ಪ್ರಾಚೀನ ಪಾರಸೀಕ ಭಾಷೆಗೆ ಅಕ್ಕನ ಸ್ಥಾನದಲ್ಲಿದ್ದ ವೇದ ಭಾಷೆಯಲ್ಲಿ ಇದು **ಯಾತು** ಆಗಿತ್ತು, ಮಾಟ, ಮಂತ್ರವಾದ, ಭೂತ, ಪಿಶಾಚಿ, ದುರ್ದೇವತೆ, ರಾಕ್ಷಸ ಇತ್ಯಾದಿಗಳೂ ಅವುಗಳ ಉಪದ್ರವಗಳೂ ಅವುಗಳನ್ನು ಕೈವಶಮಾಡಿಕೊಳ್ಳುವುದೂ **ಯಾತುವೆನಿಸಿತ್ತು**. ಋಕ್, ಅಥರ್ವ, ಬ್ರಾಹ್ಮಣಗಳು, ಸೂತ್ರಗಳೇ ಮೊದಲಾದ ಸಾಹಿತ್ಯದ ತುಂಬೆಲ್ಲ **ಯಾತುಗಳಿದ್ದಾರೆ**, ಇವೆ. **ಯಾತುಧಾನ** ಎಂದರೆ ಒಂದು ಪಿಶಾಚಿ, **ಯಾತುಜೂ** ಎಂದರೆ ಯಾತುಗಳಿಂದ ಪ್ರೇರಿತವಾದ ಪೀಡೆ, ಪಿಡುಗುಗಳು; **ಯಾತುಕೃತ್** ಎಂದರೆ ಮಾಟ ಮಾಡುವವನು.

ಈ ಅಲೌಕಿಕ ಯಾತುಗಳ ಭಯ ಎಷ್ಟಿತ್ತೆಂದರೆ ಅವುಗಳ ಪರಿಹಾರ, ನಾಶ, ಪ್ರತೀಕಾರಕ್ಕಾಗಿ ಮಂತ್ರತಂತ್ರಗಳನ್ನು ಋಕ್, ಅಥರ್ವಾದಿಗಳಲ್ಲಿ ಕಾಣುತ್ತೇವೆ. **ಯಾತುಚಾತನ, ಯಾತುಭಂಜನ, ಯಾತುಕ್ಷಯಣ** ಮೊದಲಾದವು ಈ ಪ್ರತೀಕಾರೋಪಾಯ ಸೂಚಕಗಳಾಗಿದ್ದವು. ಅವುಗಳಲ್ಲಿ ಕೆಲವು ಮಂತ್ರಗಳು ಇಂದಿಗೂ ವೈದಿಕರ ನಿತ್ಯ ಪಠನೆಯಲ್ಲಿ ಉಳಿದುಕೊಂಡಿವೆ. ವಸಿಷ್ಠ ಋಷಿ ಮತ್ತು ಅವನ ವಂಶಸ್ಥರು ಈ ಯಾತುಚಾತನ (ಭೂತೋಚ್ಚಾಟನೆ ಎನ್ನಿ ಬೇಕಾದರೆ)ದಲ್ಲಿ ತಜ್ಞರಾಗಿದ್ದರು. ವಸಿಷ್ಠನ ಒಂದು ಮಂತ್ರವನ್ನು (''ಪ್ರತಿಚಕ್ಷ್ವ ವಿಚಕ್ಷ್ವೇಂದ್ರಸ್ಯ ಸೋಮೋ ಜಾಗೃತಂ'' ಇತ್ಯಾದಿ) ನಿತ್ಯ ಸಂಧ್ಯಾವಂದನೆಯಲ್ಲಿ ಪಠಿಸಿ ಯಾತುಗಳನ್ನು ಸಿಡಿಲಿನಿಂದ ನಾಶ ಮಾಡೆಂದು ಇಂದ್ರಾ ಸೋಮರನ್ನು ಪ್ರಾರ್ಥಿಸಲಾಗುತ್ತದೆ (ಋಗ್ವೇದ ೭ನೇ ಮಂಡಲ). ಅವನದೇ (ಋಕ್ ೭, ೧೦೪, ೨೨)

ಇನ್ನೊಂದು ಮಂತ್ರವನ್ನು ರಾತ್ರಿಯಲ್ಲಿ ಮಲಗುವ ಮುಂಚೆ ಪಠಿಸುತ್ತಾರೆ. ಆ ಮಂತ್ರದಿಂದ ಯಾತುಗಳು ರಾತ್ರಿಯಲ್ಲಿ ಗೂಗೆ, ಹದ್ದು, ನಾಯಿ ಮೊದಲಾದ ರೂಪಗಳಲ್ಲಿ ಕಾಣಿಸಿಕೊಳ್ಳಬಹುದೆಂದು ಅರ್ಥವಾಗುತ್ತದೆ. ಪುರಾತನ ಭಾರತ ಇರಾಣ ಎರಡೂ ದೇಶಗಳಲ್ಲಿ ಒಂದೇ ಶಬ್ದ ಲೋಕೋತ್ತರ ಅನಿಷ್ಟ ಶಕ್ತಿಗಳನ್ನು ಸೂಚಿಸುತ್ತಿದ್ದುದು ಗಮನಾರ್ಹವಾಗಿದೆ.

ವೇದೋತ್ತರ ಕಾಲದಲ್ಲಿ ಈ ಶಬ್ದ ಯಾವ ಕಾರಣದಿಂದಲೋ ಮಾಯವಾಗಿ ಅದು ಪ್ರತಿನಿಧಿಸುವ ಅರ್ಥಗಳನ್ನು ರಾಕ್ಷಸ, ಭೂತ, ಪ್ರೇತ, ಪಿಶಾಚಿಗಳು ಸೂಚಿಸತೊಡಗಿದವು. ಅವುಗಳ ವಶೀಕರಣ ಮತ್ತು ಆ ಬಲದಿಂದ ಮಾಟ ಮಾಡುವುದಕ್ಕೆ **ಅಭಿಚಾರ** ಎಂದು ಹೆಸರು ಬಿತ್ತು. ''ಅಭಿಚಾರ'' ಅಥರ್ವವೇದದಲ್ಲೇ ಬಳಕೆಗೆ ಬಂದಿದೆ. ಅಥರ್ವವನ್ನು ಆಧರಿಸಿದ ''ಅಭಿಚಾರಕಲ್ಪ'' ಎಂಬ ಮಾಟದ ಗ್ರಂಥವೇ ಇದೆ.

* * *

**ಜಾದೂ**ವಿನಂತೆಯೇ ಅದೇ ಅರ್ಥದಲ್ಲಿ **ಮ್ಯಾಜಿಕ್** ಎಂಬ ಇಂಗ್ಲೀಷ್ ಪದವೂ ಜನಪ್ರಿಯವಾಗಿದೆ. ಮ್ಯಾಜಿಕ್ (Magic) ಕೂಡ ಇಂದು ಒಂದು ವಿನೋದ ವಿದ್ಯೆಯೇ ಆಗಿದೆ. ಹಿಂದೆ ಪಾಶ್ಚಾತ್ಯ ದೇಶಗಳಲ್ಲಿ ಅದು ನಮ್ಮ ಅಭಿಚಾರದಂತೆ ಅಲೌಕಿಕ ಶಕ್ತಿಯಿಂದ ಮಾಟ ಮಾಡುವುದಕ್ಕೇ ಸಲ್ಲುತ್ತಿತ್ತು. ಈ ತಂತ್ರಗಳನ್ನು ದುಷ್ಟ ಉದ್ದೇಶಗಳಿಗೆ ಬಳಸುವುದು black magic - ಕಪ್ಪು ಅಭಿಚಾರ, ಒಳ್ಳೆಯದಕ್ಕೆ ಉಪಯೋಗಿಸುವುದು white magic - ಬಿಳಿಯ ಅಭಿಚಾರ.

ಈ ಶಬ್ದ ಕೂಡ ತನ್ನದೇ ಇತಿಹಾಸ ಹೊಂದಿದೆ. ಅದು ಪ್ರಾಚೀನ ಪಾರಸೀಕ ಭಾಷೆಯ ಪದವಾದ **ಮಗಸ್**‌ನಿಂದ ಗ್ರೀಕ್, ಲ್ಯಾಟಿನ್ ಮೂಲಕ ೧೪ನೇ ಶತಮಾನದಲ್ಲಿ ಇಂಗ್ಲೀಷಿನಲ್ಲಿ ಸೇರಿತು. ಪ್ರಾಚೀನ ಇರಾಣದಲ್ಲಿ (ನಮ್ಮವರು ಪಶ್ಚಿಮ ಇರಾಣವನ್ನು ಶಕದ್ವೀಪ ಎನ್ನುತ್ತಿದ್ದರು) ಮಗ ಎನ್ನುವ ಪುರೋಹಿತ ವರ್ಗವಿತ್ತು. ಸೂರ್ಯಾರಾಧಕರಾದ ಅವರು ಮಂತ್ರವಿದ್ಯೆ, ಭವಿಷ್ಯವಿದ್ಯೆಗಳಲ್ಲಿ ಪ್ರವೀಣರೆಂದು ಪ್ರಸಿದ್ಧಿ ಇತ್ತು. ಈ ಮಗ ಪುರೋಹಿತರೇ ತಮ್ಮ ದಿವ್ಯ ದೃಷ್ಟಿಯಿಂದ ಕ್ರಿಸ್ತಾವತಾರದ ಭವಿಷ್ಯ ಹೇಳಿದ್ದರೆಂದು ಬೈಬಲ್ಲಿನ ಹೊಸ ಒಡಂಬಡಿಕೆ ಉಲ್ಲೇಖಿಸುತ್ತದೆ. ಅವರನ್ನು ''ಪೂರ್ವ ದೇಶದ ಜ್ಞಾನಿಗಳು'' ಎಂದು ಕರೆಯಲಾಗಿದೆ. ಮಗರ ವಿದ್ಯೆಯೇ ಮ್ಯಾಜಿಕ್. ಮ್ಯಾಜಿಕ್ಕಿನಲ್ಲಿ ಜ್ಯೋತಿಷ್ಯದ ಭಾಗ ಮರೆಯಾಗಿ ಅಭಿಚಾರ ವಿದ್ಯೆಯಷ್ಟೇ ಉಳಿಯಿತು.

ಈ **ಮಗ** ಬ್ರಾಹ್ಮಣರು ಭಾರತಕ್ಕೂ ಬಂದಿದ್ದರು. ಶಕದ್ವೀಪ ಬ್ರಾಹ್ಮಣರೆಂದು ಅವರನ್ನು ವರ್ಣಿಸಿದೆ. ಕ್ರಿ.ಶ. ೬ನೇ ಶತಮಾನದ ಮಹಾ ಗಣಿತ ಶಾಸ್ತ್ರಿ-ಜ್ಯೋತಿಷಿ ವರಾಹಮಿಹಿರನು ಅವರ ಪ್ರಸ್ತಾಪ ಮಾಡಿದ್ದಾನೆ. ಭವಿಷ್ಯ ಪುರಾಣವೂ ಅವರ ಸುದ್ದಿ ಹೇಳುತ್ತದೆ. ನಮ್ಮಲ್ಲಿಯೂ ಮಗ ಶಬ್ದಕ್ಕೆ ಜಾದೂ-ಮಂತ್ರ ತಂತ್ರ ಮಾಡುವವನು ಎಂಬ ಅರ್ಥವಿದೆ. ಇವರೇ ಭಾರತಕ್ಕೆ ಬಬಿಲೋನಿಯನ್-ಗ್ರೀಕ್ ಖಗೋಲ ಶಾಸ್ತ್ರವನ್ನೂ, ಜ್ಯೋತಿಷ್ಯವನ್ನೂ ತಂದವರೆಂದು ಸುನೀತಿ ಚಟರ್ಜಿ ಹೇಳುತ್ತಾರೆ. ಬಹುಶಃ ವರಾಹಮಿಹಿರ ಮಗ ಬ್ರಾಹ್ಮಣನೇ. ಮಿಹಿರ=ಜರತುಷ್ಟ್ರ (ಪ್ರಾಚೀನ ಪಾರಸೀಕ) ಧರ್ಮದ ದೇವತೆ **ಮಿಥ್ರ**. ನಮ್ಮ ವೈದಿಕ ದೇವತೆ ಮಿತ್ರ=ಸೂರ್ಯ. ವರಾಹಮಿಹಿರನೂ ಸೂರ್ಯಾರಾಧಕ. ಭಾರತದಲ್ಲಿ ಕ್ರಿಸ್ತಪೂರ್ವದಿಂದ ಸೂರ್ಯಾರಾಧನೆ ತಲೆಯೆತ್ತಿತ್ತು. ಸೂರ್ಯಾರಾಧನೆ

ಜನಪ್ರಿಯವಾಗಲು ಮಗ ಬ್ರಾಹ್ಮಣರು ಕಾರಣವಾಗಿರಬಹುದು. ಸೂರ್ಯನ ಪೌರೋಹಿತ್ಯ ಅವರಿಗೆ ಮೀಸಲಿತ್ತು. ಕ್ರಿಸ್ತಶಕಾರಂಭದ ಉತ್ತರ ಭಾರತೀಯ ಸೂರ್ಯ ಮೂರ್ತಿಗಳಲ್ಲಿ ಬೇರೆ ಯಾವ ಭಾರತೀಯ ದೇವತಾ ಮೂರ್ತಿಗಳಲ್ಲಿಯೂ ಇಲ್ಲದ ವಿಶೇಷವೊಂದಿದೆ. ಅದೆಂದರೆ ಪಾದಕ್ಕೆ ಪಾಪಾಸುಗಳು. (ನಮ್ಮ ದೇವತೆಗಳೆಲ್ಲ ಬರಿಗಾಲು ಬಂಟರು!) ಇದು ಸೂರ್ಯದೇವ ವಿದೇಶಗಳಿಂದ ಆಗಮಿಸಿದವನಿರಬೇಕೆಂಬ ಅನುಮಾನಕ್ಕೆ ಆಸ್ಪದ ಕೊಟ್ಟಿದೆ. ಅನಂತರ ಕಾಲದಲ್ಲಿ ಈ ಮಗ ಬ್ರಾಹ್ಮಣರು ದೇಶಿ ಬ್ರಾಹ್ಮಣರಲ್ಲಿ ಬೆರೆತುಹೋದರು. ಉತ್ತರ ಮಧ್ಯ ಭಾರತದ ವಿದ್ವತ್ (ಈಗ ರಾಜಕಾರಣದಲ್ಲಿಯೂ ಪ್ರತಿಷ್ಠಿತರು) ಬ್ರಾಹ್ಮಣ ಕುಲದವರಾದ ಮಿಶ್ರರು ಮಗ ಕುಲೀನರಿದ್ದರೂ ಇರಬಹುದು. ಕೃಷ್ಣದಾಸ ಮಿಶ್ರನೆಂಬುವನು ಮಗ ಬ್ರಾಹ್ಮಣರ ಕುಲ ಚರಿತ್ರೆ ಬರೆದಿದ್ದಾನೆ.

೯೬

**ಗುರ್ಜರ, ಘೂರ್ಜರ, ಗುಜರಾತ್** ಎಂಬವು ಭಾರತದಲ್ಲಿ ದೇಶವಾಚಕಗಳಾಗಿ, ಸಂಸ್ಕೃತದಲ್ಲಿಯೂ ದೇಶಭಾಷೆಗಳಲ್ಲಿಯೂ ಎಷ್ಟು ಕಾಲದಿಂದ ಪ್ರಚುರವಾಗಿವೆಯೆಂದರೆ ಈ ಹೆಸರು ದೇಶ್ಯವಾಗಿರಲಿಕ್ಕಿಲ್ಲವೆಂಬ ಸಂಶಯ ಕೂಡ ನಮಗೆ ಬರಲಾರದು. ಆದರೆ ಇತಿಹಾಸಕಾರರೂ ಭಾಷಾಶಾಸ್ತ್ರಿಗಳೂ ಹಾಗೆ ಹೇಳುತ್ತಾರೆ. ಕ್ರಿಸ್ತಶಕ ಆರನೇ ಶತಮಾನದಲ್ಲಿ ಮಧ್ಯ ಏಶಿಯದಿಂದ ಭಾರತದೊಳಗೆ ನುಗ್ಗಿ ಬಂದ ಹೂಣ ಜನಾಂಗದ ಕುಲಗಳು ಕಾಶ್ಮೀರ, ಪಂಜಾಬ ಮತ್ತು ಈಗ ಗುಜರಾತ್ ಎನಿಸುವ ಪ್ರಾಂತದವರೆಗೂ ತಮ್ಮ ವಿಜಯದುಂದುಭಿ ಬಾರಿಸಿದವು. ಈ ಹೂಣರಲ್ಲಿ ಒಂದು ಕುಲದ ಹೆಸರು **ಖಜರ್** ಎಂದಿತ್ತು. ಅವು ನೆಲೆಯೂರಿದಲ್ಲಿ ತಮ್ಮ ಹೆಸರಿನ ಅಚ್ಚೊತ್ತಿದವು. ಈ ''ಖಜರ್'' ಏ ಭಾರತದಲ್ಲಿ ಗುಜರ್ ಎಂದು ರೂಪಾಂತರ ಹೊಂದಿದೆ. ಹೀಗೆ ಕಾಶ್ಮೀರದಲ್ಲಿ, ಪಂಜಾಬದಲ್ಲಿ ಕೂಡ ಗುಜರಾತ್ ಎಂಬ ಸ್ಥಳ ಮತ್ತು ಗುಜ್ಜರ್ ಜನಾಂಗಗಳಿವೆ. ಗುಜರಾತ್ ಎಂಬ ಇಡಿ ಪ್ರದೇಶವೇ ಅವರ ಆಳ್ವಿಕೆಯ ಚಿಹ್ನೆಯಾದ ಹೆಸರನ್ನು ಹೊಂದಿತು. ಈ ಗುಜ್ಜರ ಅನೇಕ ಶಾಸನಗಳೂ ಗುಜರಾತ್ ಪ್ರದೇಶದಲ್ಲಿ ದೊರಕಿವೆ. ಗುಜ್ಜರು ಪ್ರಾರಂಭದಲ್ಲಿ ತಮ್ಮ ತುರ್ಕಿ ಬುಡಕಟ್ಟಿನ ಭಾಷೆಯನ್ನೂ ವ್ಯಕ್ತಿನಾಮಗಳನ್ನೂ (ಉದಾ: ನಹಪಾನ, ಕ್ಷಹರಾತ, ದಾಮಜಾದ ಇತ್ಯಾದಿ) ಉಳಿಸಿಕೊಂಡರೂ ಸ್ವಲ್ಪಕಾಲದಲ್ಲೇ ಭಾರತೀಯ ಭಾಷೆ, ವ್ಯಕ್ತಿನಾಮಗಳನ್ನು ಸ್ವೀಕರಿಸಿ ಇಲ್ಲಿಯ ಜನರಾಜಿಯಲ್ಲಿ ಲೀನವಾಗಿ ಹೋದರು.

* * *

**ಕಾಯಸ್ಥ** ಎಂಬ ಜಾತಿಯೊಂದು ಉತ್ತರ ಭಾರತದಲ್ಲಿ ಪ್ರಬಲವಾಗಿದೆ. ಮಹಾರಾಷ್ಟ್ರದಲ್ಲಿ **ಕಾಯಸ್ಥ** ಪ್ರಭು ಎಂಬ ಜಾತಿಯುಂಟು. ಬಾಬು ರಾಜೇಂದ್ರ ಪ್ರಸಾದರಂಥ ನಾಯಕರನ್ನು ನೀಡಿದ ಈ ಜಾತಿಯ ಹೆಸರು ಯಾಜ್ಞವಲ್ಕ್ಯ ಸ್ಮೃತಿಯಷ್ಟು ಪ್ರಾಚೀನ. ಸರಕಾರಿ **ಗುಮಾಸ್ತೆ, ಕರಣಿಕ** ಮತ್ತು ಒಟ್ಟು ದಸ್ತಾವೇಜು, ಲೆಕ್ಕ **ಬರವಣಿಗೆ** ಪ್ರಧಾನ ಉದ್ಯೋಗವಾದ ಈ ಜಾತಿ ಕ್ಷತ್ರಿಯನಿಂದ ಶೂದ್ರ ಸ್ತ್ರೀಯಲ್ಲಿ ಹುಟ್ಟಿದ್ದೆಂದು ಸ್ಮೃತಿಗಳ ಹೇಳಿಕೆಯಿದ್ದರೂ, ಇದೊಂದು ಗೌರವಾರ್ಹ ಮತ್ತು ಆಸ್ತಿ ಪಾಸ್ತಿಯುಳ್ಳ ವರ್ಗವಾಗಿ ಮುಸ್ಲಿಂ ಆಳಿಕೆಯಲ್ಲಿ ಕೂಡ ಕರಣಿಕ ವೃತ್ತಿಯನ್ನು ಮುಂದುವರಿಸಿತ್ತು. ಇಂಥ

ಜಾತಿಯ ಹೆಸರು ಮೂಲತಃ ವಿದೇಶಿ ಎನ್ನುವುದಕ್ಕೆ ಸಂಸ್ಕೃತದಲ್ಲಿ ಇದಕ್ಕೆ ಸಮರ್ಪಕ ವ್ಯುತ್ಪತ್ತಿ ಸಿಗದಿರುವುದು ಒಂದು ಕಾರಣ. ಹಳೇ ಪರ್ಶಿಯನ್ ಭಾಷೆಯಲ್ಲಿ **ಕ್ಸಾಯದಿಯ** ಎಂದರೆ ರಾಜ. ಈ ಪದ ಉತ್ತರದಿಂದ ಭಾರತದೊಳಗೆ ನುಸುಳಿ ಗೌರವಾರ್ಥಕ ಪದವಾಗಿ ಪ್ರಾಕೃತ ಭಾಷೆಯಲ್ಲಿ ತೇಲುತ್ತಿತ್ತು. ಪ್ರಾಕೃತದಲ್ಲಿ ಅದು **ಕಾಯತ್ಥ** ಆಗಿತ್ತು. ಸರಕಾರಿ ಲೆಕ್ಕ ಪತ್ರಾಧಿಕಾರಿಗಳು ಅತ್ಯುನ್ನತ ಹುದ್ದೆಯವರಲ್ಲದಿದ್ದರೂ ಇಂದು ಕೂಡ ಜನಸಾಮಾನ್ಯರ ಮಟ್ಟಿಗೆ ಪ್ರಬಲರೇ ಆಗಿರುವಂತೆ ಆಗಲೂ ಇದ್ದರು. ಅವರನ್ನು ಮೆಚ್ಚಿಸಿಕೊಳ್ಳಲು ಜನಸಾಮಾನ್ಯರು ರಾಜ ಎಂಬ ಮೂಲಾರ್ಥದ ಈ **ಕಾಯತ್ಥ** ಪದದಿಂದ ಸಂಬೋಧಿಸುತ್ತಿದ್ದಿರಬೇಕು. ಈಗ ''ಸಾಹೇಬರೇ'' ಅನ್ನುವಂತೆ. ಕೊನೆಗೆ ಅದು ಒಂದು ಜಾತಿಗೇ ತಗಲಿಕೊಂಡಿತೆಂದು ಸುನೀತಿ ಕುಮಾರ ಚಟರ್ಜಿ ಹೇಳುತ್ತಾರೆ. ಬಾಯಲ್ಲಿ ರಾಜರು ಎಂದು ಏರಿಸಿದರೂ ಜನರು ಒಳಗೊಳಗೆ ಈ ವರ್ಗವನ್ನು ದ್ವೇಷಿಸುತ್ತಿದ್ದರು (ಈಗ್ಗೆಯೂ ಅದು ಮುಂದುವರಿದಿದೆಯಲ್ಲ!), ಎಂಬುದಕ್ಕೆ ಸಾಹಿತ್ಯದಲ್ಲಿ ಸಾಕಷ್ಟು ಪುರಾವೆ ಸಿಗುತ್ತದೆ. ಕಾಶ್ಮೀರದ ಕ್ಷೇಮೇಂದ್ರ ಕವಿ ಇವರ ಲಂಚಗುಳಿತನ, ಕೊರಳುಕೊಯ್ಯತನ ಮೊದಲಾದವನ್ನು ಉದ್ಘಾಟಿಸಲು ಒಂದು ಚಿಕ್ಕ ಕಾವ್ಯವನ್ನೇ ಬರೆದಿದ್ದಾನೆ! ಅದು ಬೇರೆ ಮಾತು!

* * *

**ಅನ್ನ** ಎಂಬುದು ಸಂಸ್ಕೃತ ಶಬ್ದ. ಋಗ್ವೇದದಲ್ಲೇ ಸಿಗುತ್ತದೆ. ''ಅತ್ತುಂ ಯೋಗ್ಯಂ ಅನ್ನಂ'' – ಉಣ್ಣಲು ತಕ್ಕದ್ದು ಅನ್ನ ಎಂದು ನಿಷ್ಪತ್ತಿ. ಇದರ ಬೇರಾದ **ಅದ್** ಧಾತು ಭಾರೋಪ್ಯ ಭಾಷೆಗಳಲ್ಲಿ ಜ್ಞಾತಿ ಪದಗಳನ್ನು ಹೊಂದಿದೆ (ಇಂಗ್ಲೀಷಿನ eat ಅನ್ನು ಉದಾಹರಿಸಬಹುದು). ಆದರೂ ಅನ್ನ ಎಂದೊಡನೆ ನಮಗೆ ಹೊಳೆಯುವುದು **ಅಕ್ಕಿಯನ್ನು ಬೇಯಿಸಿದ್ದು** ಎಂದು – ಹೊರತು ಬೇರೆ ಖಾದ್ಯ ಧಾನ್ಯಗಳ ತಯಾರಿಕೆಗಳಲ್ಲ. ಕನ್ನಡಕ್ಕಂತೂ ಇದು ಸಾರ್ವತ್ರಿಕವಾಗಿ ಅನ್ವಯಿಸುತ್ತದೆ. ಬಂಗಾಲಿಯಲ್ಲಿ ಅನ್ನವೆಂದರೆ ಪ್ರಧಾನವಾಗಿ ಅಕ್ಕಿಯದೇ. ಸಂಸ್ಕೃತದಲ್ಲಿ ಕೂಡ ಅನ್ನವೆಂದರೆ ಮುಖ್ಯವಾಗಿ ಅಕ್ಕಿಯ ಅನ್ನವೇ. ಬಂಗಾಲಿಗಳಿಗೆ ಅಕ್ಕಿಯೇ ಮುಖ್ಯ ಆಹಾರವಾದ್ದರಿಂದ ಅವರು ಅದನ್ನೇ ಅನ್ನವೆನ್ನುವುದು ಅರ್ಥವಾಗತಕ್ಕ ಮಾತು. ಜೋಳ ಪ್ರಧಾನವಾಗಿರುವ ಕರ್ನಾಟಕದಲ್ಲಿ ಹೀಗೇಕೆ? ಇದು ಉತ್ತರವಿಲ್ಲದ ಪ್ರಶ್ನೆ. ಸಾಮಾನ್ಯವನ್ನು ವಿಶೇಷಕ್ಕೂ, ವಿಶೇಷವನ್ನು ಸಾಮಾನ್ಯಕ್ಕೂ ಅನ್ವಯಿಸುವ ಪ್ರಕ್ರಿಯೆ ಭಾಷೆಗಳಲ್ಲಿ ಸಾರ್ವತ್ರಿಕವೆಂದೇ ತೋರುತ್ತದೆ.

**ಓಗರ** ಎಂಬುದು ಅಕ್ಕಿಯ ಅನ್ನವೆಂಬ ಅರ್ಥ ಕೊಡುವ ಇನ್ನೊಂದು ಶಬ್ದ. ತಮಿಳು, ತೆಲುಗುಗಳಲ್ಲಿಯೂ ಜ್ಞಾತಿ ಪದಗಳುಳ್ಳ ಈ ಶಬ್ದ ಕನ್ನಡದಲ್ಲಿ ಈಗ ಸ್ವತಂತ್ರವಾಗಿ ಬಳಕೆಯಲ್ಲಿ ಇಲ್ಲದಿದ್ದರೂ **ಮೇಲೋಗರ** (ಓಗರದ ಮೇಲೆ ಬಡಿಸಿಕೊಳ್ಳುವಂಥಾದ್ದು – ಹುಳಿ, ಪಲ್ಯ ಇತ್ಯಾದಿ) **ಪುಳಿಯೋಗರ** (ಒಂದು ಬಗೆಯ ಕಲಸನ್ನ) ಮೊದಲಾದವುಗಳಲ್ಲಿ ಜೀವಂತವಾಗಿದೆ. ಆರ್ಯಭಾಷೆಯಾದ ಮೈಥಿಲಿಯಲ್ಲಿ ಇದು ಕಾಣಿಸುತ್ತಿದ್ದರೂ ಮೂಲತಃ ಇದು ದ್ರಾವಿಡ ಶಬ್ದವೆಂದು ಭಾವಿಸಲಾಗಿದೆ. ಓಗರ ಶಬ್ದದ ಒಂದು ವಿಶೇಷವೆಂದರೆ ಇದು ಅನೇಕ ಭಾಷೆಗಳಲ್ಲಿ **ಕಿಚಡಿ** (ಅಕ್ಕಿ ತರಕಾರಿ ಸೇರಿ ಬೇಯಿಸಿದ ಮಿಶ್ರಖಾದ್ಯ) ಎಂಬರ್ಥದಲ್ಲಿ ಬಳಕೆಯಲ್ಲಿರುವುದು. ಬಂಗಾಲಿಯಲ್ಲಿ ಓಗರ ಎಂದರೆ ಅಕ್ಕಿ- ಬೇಳೆ ಸೇರಿಸಿ ಬೇಯಿಸಿದ್ದು, **ಓಗರ ಭಾತ್** ಎಂದರೆ ಅಕ್ಕಿ ತರಕಾರಿ ಸೇರಿಸಿ ಬೇಯಿಸಿದ್ದು. ಓಗರ ಶಬ್ದದ ಬೇರೆ ಬೇರೆ ಪ್ರಯೋಗಗಳನ್ನು ನೋಡಿದರೆ ಅದಕ್ಕೆ **ಬೆರಕೆ** ಎಂಬರ್ಥವೇ ಪ್ರಧಾನವೆನಿಸುತ್ತದೆ.

ಉದಾಹರಣೆಗೆ ಪಂಪನು ಮಿಶ್ರಗಂಧ ಎಂಬರ್ಥದಲ್ಲಿ **ಓಗರಗಂಪು** ಎನ್ನುತ್ತಾನೆ. ಪ್ರಾಕೃತದಲ್ಲಿಯೂ ಕಿಚಡಿಗೆ **ಓಗರಭಟ್ಟಾ** ಎಂಬ ಹೆಸರಿದೆ. ಹಿಂದಿಯಲ್ಲಿ ಇದು ಕಾಣಿಸುವುದಿಲ್ಲ. ಓಗರ ದ್ರಾವಿಡವೇ ಹೌದಾದರೆ ಬಂಗಾಲಿ ಮೈಥಿಲಿ ಭಾಷೆಗಳಿಗೆ ಅದರ ಪ್ರವೇಶದ ವಿವರಣೆಗೆ ಇತಿಹಾಸದ ಆಶ್ರಯ ಪಡೆಯಬಹುದು. ಮಿಥಿಲೆ ಮತ್ತು ಬಂಗಾಲದಲ್ಲಿ ಕನ್ನಡ ಅರಸರ ಆಳಿಕೆ ಸಾಕಷ್ಟು ಕಾಲ ನಡೆದಿತ್ತು. ಸೇನರು ಕರ್ನಾಟಕದ ಸೇನರೆಂದೇ ಖ್ಯಾತರಾಗಿದ್ದರು.

* * *

**ದಡ್ಡ** ಎಂದರೆ ಮಂದಮತಿ. ಈ ಶಬ್ದಕ್ಕೆ ಪರಿಷತ್ ಕನ್ನಡ ನಿಘಂಟು ದೂರಗಾಮಿ ನಿಷ್ಪತ್ತಿಯನ್ನು ಕೊಟ್ಟಿಲ್ಲ; ತುಳು ಕೊಡವ ಭಾಷೆಗಳಲ್ಲಿಯೂ ಅದು ಇರುವುದನ್ನು ಸೂಚಿಸಿ ಕೈ ಬಿಟ್ಟಿದೆ. ಇದು ಪ್ರಾಕೃತದ **ಜಡ್ಡ**ದಿಂದ ಬಂತು. ಜಡ್ಡ ಸಂಸ್ಕೃತದ **ಜಡ**ದಿಂದಲೂ ಅದು ವೈದಿಕ ಸಂಸ್ಕೃತದ **ಜಳ್ಹು**ವಿನಿಂದಲೂ ಬಂತು. ಅದರಾಚೆಗೆ ಲ್ಯಾಟಿನ್ನಿನಲ್ಲಿ **ಗೇಲು** (gelu) ಕೂಡ ಅದೇ ಪೀಳಿಗೆಯದು. ಇಂಗ್ಲೀಷ್‌ನ **ಡಲ್** (dull) ಕೂಡ ದಡ್ಡನಿಗೇ ಸಂಬಂಧಿಸಿರಬಹುದು.

* * *

**ಕಟಕ** ಎಂದರೆ ಸಂಸ್ಕೃತದಲ್ಲಿ ಸೈನ್ಯ ಶಿಬಿರ, ಸೈನ್ಯ, ರಾಜರ ತಾತ್ಕಾಲಿಕ ನೆಲೆ, ನೆಲೆಬೀಡು. ಕಟಕ ಶಬ್ದವು ಹಗ್ಗ, ಕಡಗ ಇತ್ಯಾದಿ ಅರ್ಥಗಳಲ್ಲಿ ಸಾಕಷ್ಟು ಪ್ರಾಚೀನವಾದರೂ ಸೈನ್ಯ, ಶಿಬಿರ ಎಂಬರ್ಥದಲ್ಲಿ ಕ್ರಿಸ್ತಶಕ ಏಳೆಂಟು ಶತಮಾನಗಳಲ್ಲಿ ತಾನೇ ಬಂತು. ಓಡಿಸ್ಸಾದ ರಾಜಧಾನಿ ಕಟಕ ಕೂಡ ಶಿಬಿರ, ನೆಲೆ ಎಂಬರ್ಥದ ಶಬ್ದವೇ. ಕನ್ನಡದಲ್ಲಿಯೂ **ರಾಯಕಟಕಾಚಾರ್ಯ** ಎಂದರೆ ಸೇನಾಪತಿ ಎಂಬ ಅರ್ಥ ಇದೆ. ಈ **ಕಟಕ**ದ ಮೂಲಕ್ಕೆ ನಾವು ತುರ್ಕಿ ಭಾಷೆಯನ್ನು ಸಮೀಪಿಸಬೇಕೆಂದು ಸುನೀತಿ ಕುಮಾರ ಚಟರ್ಜಿ ಮತ. ತುರ್ಕಿ ಭಾಷೆಯಲ್ಲಿ **ಕಟಕ** ಎಂದರೆ ಸೈನ್ಯ ಶಿಬಿರ. ಮುಸ್ಲಿಂ ತುರುಕರ ಸಂಬಂಧ ನಮಗೆ ಹತ್ತನೇ ಶತಕದ ನಂತರದ್ದಾದರೂ ವ್ಯಾಪಾರಾದಿ ಸಂಬಂಧಗಳು ಕ್ರಿ.ಶ. ೫-೬ನೇ ಶತಮಾನದಿಂದಲೇ ಇದ್ದವೆಂದು ಗಮನಿಸಿದರೆ ಈ ಊಹೆ ಅಸಾಧ್ಯವೆನಿಸುವುದಿಲ್ಲ.

೯೭

**ಸಾವು** ಯಾವಾಗಲೂ ನಮ್ಮ ಸಂಗಡ ಇದೆ; ಆದರೆ ಮತ್ತೆ ಯಾವ ರೀತಿಯಲ್ಲಿ ಅಲ್ಲವಾದರೂ ಮಾತಿನಲ್ಲಿ ಅದರಿಂದ ತಪ್ಪಿಸಿಕೊಳ್ಳಲು ನಾವು ಪ್ರಯತ್ನಿಸುತ್ತಲೇ ಇರುತ್ತೇವೆಂಬುದಕ್ಕೆ ಭಾಷೆಗಳು ಕುರುಹು ಕೊಡುತ್ತವೆ. ಉದಾಹರಣೆಗೆ ಬಡಬಗ್ಗರು ಮತ್ತು ಸ್ಥಾನಮಾನಹೀನರು ಮಾತ್ರ ಕನ್ನಡದಲ್ಲಿ **ಸಾಯುತ್ತಾರೆ**. ಆಢ್ಯರು ಸ್ಥಾನವುಳ್ಳವರು ಸಂಸ್ಕೃತದಲ್ಲಿ **ನಿಧನ** ಹೊಂದುತ್ತಾರೆ; ಅಥವಾ **ಪಂಚತ್ವ** ಹೊಂದುತ್ತಾರೆ; ಇಲ್ಲವೇ **ಕಾಲವಾಗುತ್ತಾರೆ**; ಅಷ್ಟು ಎತ್ತರದ ಸ್ಥಾನವಿಲ್ಲದಿದ್ದರೆ **ಮೃತರಾದರೂ** ಆಗುತ್ತಾರೆ. ಹೆಸರು ಪಡೆದವರಾದರೆ ಅವರು **ಕೀರ್ತಿಶೇಷರಾಗಲೂ**ಬಹುದು. ಕನ್ನಡದಲ್ಲಿಯೇ ಆದರೆ ಅವರು ಸರಳವಾಗಿ **ಹೋಗಿಬಿಡು**ವುದುಂಟು. **ಮಡಿಯುವುದು** ಅಥವಾ ಹಳೆಗನ್ನಡದಲ್ಲಿ **ಪಡುವುದೂ** ಅವರಿಗೆ ಸಾಧ್ಯವಿದೆ.

ಸಾಮಾನ್ಯ ಬಳಕೆ ಮಾತಿನಲ್ಲಿ ಯಾವೊಂದು ಅನಿಷ್ಟವನ್ನು ಹೇಳುವುದು ಮರ್ಯಾದೆಯಲ್ಲ. ಎಷ್ಟೋ ಅನಿಷ್ಟ ವಿಷಯಗಳನ್ನು ಸಂಸ್ಕೃತದಲ್ಲಿ ಹೇಳಿ ಅನಿಷ್ಟಕ್ಕೊಳಗಾದವರ

ನೋವನ್ನು ಕಮ್ಮಿಮಾಡಬಹುದು. ಉದಾಹರಣೆಗೆ ಸಂಸ್ಕೃತದಲ್ಲಿ ನಿಧನರಾಗುವುದೆಂದರೆ ಮಲಗಿಸಲ್ಪಡುವುದು, ಇಡಲ್ಪಡುವುದು. (ನಿ-ಧಾ ಎಂಬ ಸಂಸ್ಕೃತ ಧಾತು ಇಡು, ಮಡಗು ಎಂಬರ್ಥದ್ದು; ನಿಧಿ, ನಿಧಾನ ಅದೇ ಧಾತುವಿನ ಮಕ್ಕಳು). ಬಹುಶಃ ಹೆಣಗಳನ್ನು ಹುಗಿಯುತ್ತಿದ್ದ ಕಾಲದ ನೆನಪನ್ನು ''ನಿಧನ'' ಹೊತ್ತುಕೊಂಡಿದೆ. ಇಂಗ್ಲೀಷಿನಲ್ಲಿ laying to rest - ವಿಶ್ರಾಂತಿಗೆ ಮಲಗಿಸುವುದು – ಎಂದು ಹೆಣ ಹುಗಿಯುವುದಕ್ಕೆ ಹೇಳುತ್ತಾರಲ್ಲ. ಗೌರವಪೂರ್ವಕವಾಗಿ – ''ನಿಧನ''ದ ತಾತ್ಪರ್ಯವೂ ಬಹುಶಃ ಅದೇ. **ಪಡು** ಎಂದು ಹಳೆಗನ್ನಡದಲ್ಲಿ ಸಾಯುವುದಕ್ಕಿರುವ ಶಬ್ದವೂ ಮಲಗುವುದು ಎಂಬರ್ಥದ್ದೇ. ಶಾಶ್ವತವಾಗಿ ಮಲಗುವುದು ಎಂದರೆ ಮರಣ. **ಪಂಚತ್ವ** ಹೊಂದುವುದು ಎಂದರೆ ಐದಾಗಿ ಹೋಗುವುದು. ಸಕಲ ಪದಾರ್ಥಗಳೂ – ಮಾನವ ಶರೀರವೂ ಸೇರಿದಂತೆ – ಪಂಚಭೂತಗಳ ಸಂಯೋಗದಿಂದ (ನೆಲ, ನೀರು, ಗಾಳಿ, ಬೆಳಕು ಮತ್ತು ಆಕಾಶ) ನಿರ್ಮಿತವಾಗುತ್ತವೆ. ಮರಣಾನಂತರ ಅವು ವಿಭಾಗವಾಗಿ ತಮ್ಮ ಮೂಲದ್ರವ್ಯಗಳಲ್ಲಿ ಲೀನವಾಗುತ್ತವೆ ಎಂಬ ತತ್ವಜ್ಞಾನಿಗಳ ವಿಚಾರವನ್ನು ''ಪಂಚತ್ವ'' ಸೂಚಿಸುತ್ತದೆ. **ಕಾಲವಾಗುವುದು** ಎಂದರೆ ಕಾಲದೇವ ವಶವಾಗುವುದು. ''ಕಾಲ'' ಎಂದರೆ ಯಮ ಮತ್ತು ''ಕಾಲ'' ಎಂದರೆ ಸಮಯ. ಯಮ ಕೊಂಡುಹೋದ ಎನ್ನಿ ಅಥವಾ ಕಾಲ ಅವನನ್ನು ದಾಟಿ ಹೋಯಿತು ಎನ್ನಿ. **ಕೀರ್ತಿಶೇಷ** ಎಂದರೆ ಅವನ **ಕೀರ್ತಿ** ಮಾತ್ರ ಉಳಿಯಿತು, ಕಾಯ ಉಳಿಯಲಿಲ್ಲ. **ಶೇಷ** ಎಂದರೆ ಉಳಿದದ್ದು (ಕೀರ್ತಿ ಎಂಥದೇ ಇರಲೊಲ್ಲದೇಕೆ!).

**ಹೋಗಿಬಿಡು**ವುದು ಸಾವಿಗೊಂದು ಮರ್ಯಾದೆಯಾದ ಕನ್ನಡ ಪದ. ತಿರುಗಿ ಬಾರದಲ್ಲಿಗೆ ಹೋದ. ಅವನು ಬಿಟ್ಟ ಮೈಗಿಂತ ಭಿನ್ನವಾದ ಅವನು ಇದ್ದಾನೆ. ಇಲ್ಲಿಂದ ಹೋಗಿದ್ದಾನೆ ಅಷ್ಟೇ. ಸಂಸ್ಕೃತದಲ್ಲಿ ಅದನ್ನೇ ಇನ್ನೂ ಗಂಭೀರವಾಗಿ **ಗತಿಸಿದನು** ಎನ್ನುತ್ತೇವೆ. (ಗಮ್-ಗತೌ-ಹೋಗುವುದು). ಸಾವಿನ ಚರಮತ್ವವನ್ನೂ ಪರಮತ್ವವನ್ನೂ ಅದರ ಕೈಯಿಂದ ಕಸಿದುಕೊಳ್ಳುವುದಕ್ಕಾಗಿ **ಹೋದನು** ಎಂಬ ಮಿದುಮಾತನ್ನು ಬಳಸಿದ ನಂತರ ಸಾವು ಸೇಡು ತೀರಿಸಿಕೊಂಡಂತೆ ಕಾಣುತ್ತದೆ. ಯಾಕೆಂದರೆ **ಹೋಗು, ಹೋಗಿಬಿಡು** ಎಂಬುದಕ್ಕೆ ಸಾವಿನ ಅಮಂಗಲದ ಸೋಂಕು ತಗಲಿಕೊಂಡಿತು. **ಸಾಯು** ಎನ್ನುವುದಕ್ಕೆ ಹೋಗು ಎಂದಮೇಲೆ **ಹೋಗು** ಎಂದರೆ ಸಾಯು ಎಂದೇ ಆಗಲಿಲ್ಲವೇ? ಆದ್ದರಿಂದ ದಕ್ಷಿಣ ಭಾರತದಲ್ಲಿ ಯಾರೂ ತನಗಾಗಲಿ ತನಗೆ ಬೇಕಾದ (ಜೀವಂತ)ವರಿಗಾಗಲಿ ಬರೇ **ಹೋಗು** ಎಂಬ ಪದವನ್ನು ಪ್ರಯೋಗಿಸಲು ಒಪ್ಪುವುದಿಲ್ಲ. ''ಹೋಗಿ ಬರುತ್ತೇನೆ'', ''ಹೋಗಿಬನ್ನಿ'' ಎಂದೇ ಹೇಳಬೇಕು. ''ಆಗ ಬಾ, ಈಗ ಬಾ, **ಹೋಗಿಬಾ**, ಎನ್ನದೆ'' ಎಂದು ಸರ್ವಜ್ಞ ಹೇಳುತ್ತಾನೆ. ಬಿಕ್ಕೆ ಬೇಡಬಂದವರಿಗೂ ಹೋಗು ಎನ್ನಬಾರದು, ಹೋಗಿ ಬಾ ಎಂದೇ ಬೀಳ್ಕೊಡಬೇಕು! ನಮಗೆ ಅವನ ಜೋಳಿಗೆ ಭರ್ತಿಮಾಡಲು ಇಷ್ಟವಿಲ್ಲದಿದ್ದರೇನು, ಬೇರೆಯವರ ಮನೆಗಳಲ್ಲಾದರೂ ತಿರುಪೆ ಎತ್ತಿ ನಾಲ್ಕೊಪ್ಪತ್ತು ಬದುಕಿರಲಿ ಪಾಪ! ರಾಜೀವ ಗಾಂಧಿಯವರಿಗೆ ನಮ್ಮೀ ಹೋಗಿ ಬರುವ ಸೌಜನ್ಯದ ಮಾತು ಬಲು ಮೆಚ್ಚಿಕೆಯಾಯಿತಂತೆ. ನಮ್ಮಂತೆ ತಮಿಳರೂ ''ಪೋಯಿಟ್ಟ್ ವಾ'' ಎಂದೇ ಹೇಳಿಯಾರು; ಬರೇ ''ಪೋ'' ಎಂದು ನುಡಿಯರು. ಇಂಗ್ಲೀಷನ್ನೇ ಬಳಸುವಾಗಲೂ ಅವರು go ಎನ್ನರು. ಒಬ್ಬ ವಿದೇಶೀಯನ ಹತ್ತಿರ ಕೆಲಸವಿದ್ದ ತಮಿಳನೊಬ್ಬ ಕೆಲಸ ಮುಗಿಸಿ ಬೀಳ್ಕೊಡುವಾಗ "I will go and come" ಎಂದನಂತೆ. ಆ ವಿದೇಶೀ ಮನುಷ್ಯ ಮಿಕಿಮಿಕಿ

ನೋಡುತ್ತ, ಇವನ ಕೆಲಸ ಆಗಿದೆ, ಮತ್ತೇಕಿಲ್ಲಿ ಪುನಃ ಬಂದು ಹೊತ್ತು ಹಾಳು ಮಾಡುತ್ತಾನೆ ಎಂದು ತಲೆ ಕೆರೆದುಕೊಂಡನಂತೆ! ಇಂಗ್ಲೀಷಿನಲ್ಲೇ ಏಕೆ? ಉತ್ತರ ಭಾರತದ ಭಾಷೆಗಳಲ್ಲಿ ಕೂಡ ಸಾವು ಇಷ್ಟು ದೂರದಿಂದ ಅಶುಭವನ್ನು ಮಾಡಲಾರದು. ''ಮರಣವೇ ಮಹಾನವಮಿ'' ಎಂದ ದಕ್ಷಿಣದಲ್ಲಿ ಸಾವು ಇಷ್ಟು ಭಯಂಕರವಾಗಿರುವುದು ಸೋಜಿಗವಲ್ಲವೇ?

ಆದರಿದು ಕೇವಲ ದ್ರಾವಿಡಕ್ಕೇ ಮೀಸಲಾದ ಭಾವನೆಯಲ್ಲ. ಸಂಸ್ಕೃತದಲ್ಲಿ ಕೂಡ ಹೋಮ ಮುಗಿಸಿ ಅಗ್ನಿಯನ್ನು ಬೀಳ್ಕೊಡುವಾಗ, ''ಗಚ್ಛ ಗಚ್ಛ ಸುರಶ್ರೇಷ್ಠ ಪುನರಾಗಮನಾಯ ಚ'' (ಹೋಗು ಹೋಗು ದೇವೋತ್ತಮನೇ, ಮತ್ತೆ (ಕರೆದಾಗ) ಬರುವುದಕ್ಕಾಗಿ) ಎಂದು ಪುರೋಹಿತರು ಹೇಳುತ್ತಾರೆ. ಬರೇ ಹೋಗು ಎಂದು ಹೇಳಿದರೆ ಅಗ್ನಿ ಬೇಜಾರು ಮಾಡಿಕೊಂಡು ತಿರುಗಿ ಬಾರದೇನೇ ಇದ್ದರೆ?

ಸಾವು ಅಮಂಗಲ ಮತ್ತು ಅನಾಗರಿಕವಾಗಿರುವುದು ನಮ್ಮಲ್ಲಿ ಮಾತ್ರವಲ್ಲ. ಉತ್ತರ ಭಾರತದಲ್ಲಿಯೂ **ಮರ್‌ಗಯಾ** (ಸತ್ತುಹೋದ) ಅನ್ನುವುದು ಮರ್ಯಾದೆಯಲ್ಲ. ಅವರು **ಗುಜರ್ ಬಸೇ** (ಪಾರಸೀಕ ಭಾಷೆಯಲ್ಲಿ ಗುಜರ್‌ನಾ = ತೀರುವುದು, ತಲಪುವುದು, ದಾಟುವುದು, ಹಾಜರಾಗುವುದು) ಎಂದಾರು. ಅಥವಾ ಶುದ್ಧ ಹಿಂದಿಯಲ್ಲಿ **ಸಿಧಾರೇ** (= ಹೋದರು, ಸಾಗಿದರು) ಎಂದಾರು. ಇಂಗ್ಲೀಷಿನವರು he passed away - ಅವನು **ದಾಟ ಹೋದ** (ಇಲ್ಲಿಂದ) ಎನ್ನುತ್ತಾರೆ; ಅಥವಾ expired (= ಉಸಿರು ಬಿಟ್ಟ) ಎಂದರೂ ಸೈ. ಆದರೂ die (= ಸಾಯಿ) ಎನ್ನುವ ಪದಕ್ಕೆ ನಾವು ಅಂಜುವಷ್ಟು ಅವರು ಅಂಜುವುದಿಲ್ಲ. ಅಲ್ಲಿ ಸಾವು ಅನಿಷ್ಟವಾದರೂ ಅಷ್ಟು ಮೈಲಿಗೆಯಲ್ಲ!

ಇಷ್ಟರಾದವರಿಗೆ ಗೌರವಪೂರ್ವಕ ಸಾಯುವುದಕ್ಕೆ ಶಬ್ದಗಳಿದ್ದಂತೆ ಸಲ್ಲದವರಿಗೆ ತಿರಸ್ಕಾರಪೂರ್ವಕ ಸಾಯುವ ಪದಗಳೂ ಭಾಷೆಗಳಲ್ಲಿವೆ. ಕನ್ನಡದಲ್ಲಿ **ಗೊಟಕ್ಕೆನ್ನುವುದು, ನೆಗೆದು ಬೀಳುವುದು** ಇದೆ. **ಗೊಟಕ್ಕೆನ್ನುವುದು** ಕೊನೆಯ ಉಸಿರು ಬಿಡುವಾಗಿನ ಸಪ್ಪಳಕ್ಕೆ ಅನ್ವಯಿಸುತ್ತಿದ್ದರೆ ನೆಗೆದು ಬೀಳುವುದರ ಮೂಲ ಬೆದಕುವುದು ಕಷ್ಟ. ಉತ್ತರ ಕರ್ನಾಟಕದಲ್ಲಿ ಇದಕ್ಕೆ **ಜಿಗಿದ** ಎನ್ನುತ್ತಾರೆ. ಸಾಯುವುದಕ್ಕೂ ನೆಗೆಯುವುದಕ್ಕೂ ಸಂಬಂಧ ಹಳೆಯದು. ಗೋವಿನ ಕಥೆಯ ಹುಲಿರಾಯ ''**ಹಾರಿ ನೆಗೆದು** ತನ್ನ ಪ್ರಾಣವ ಬಿಟ್ಟನು'', ಎಂದು ಆ ಪದ್ಯದ ಒಂದು ಪಾಠವಿದೆ. ಉತ್ತರ ಕರ್ನಾಟಕದಲ್ಲಿ **ಸೆಟೆದ** ಎನ್ನುವ ಇನ್ನೊಂದು ತುಚ್ಛೀಕಾರದ ಪದವಿದೆ. ಇದು ಸತ್ತವನ ಮೈ ಕೊರಡಾಗುವುದನ್ನು ಆಧರಿಸಿದೆ.

೯೮

''**ಸಂಕ ಪಾಷಾಣ** ತಕೊಂಡು ಸಾಯುವಾ ಅಂದರೆ ಅದಕ್ಕೂ ಕೈಲಿ ಮೂರು ಕಾಸಿಲ್ಲ'' ಅನ್ನುವ ಮಾತೊಂದಿದೆ. ''ಪಾಷಾಣ'' ಎಂದರೆ ಕಲ್ಲು; ವಿಶೇಷವಾಗಿ ಕಲ್ಲಿನ ಸಣ್ಣ ಹರಳು. **ಸಂಕ ಪಾಷಾಣ**, ಅಥವಾ **ಶಂಖ ಪಾಷಾಣ**, ಅಥವಾ **ಶಂಕು ಪಾಷಾಣ** ಅಂದರೆ ಒಂದು ವಿಷ ಪದಾರ್ಥ – ಇಂಗ್ಲೀಷಿನ arsenic. **ಆರ್ಸೆನಿಕ್** ಎಂಬುದೊಂದು ರಾಸಾಯನಿಕ ಮೂಲಧಾತು; ಈಗ ಜನರು ಸಾಮಾನ್ಯವಾಗಿ ಆರ್ಸೆನಿಕ್ ಎನ್ನುವುದು ಆ ಧಾತುವಿನ ಒಂದು ಸಂಯುಕ್ತಕ್ಕೆ. ಆತ್ಮಹತ್ಯೆಗೂ ವಿಷ ಪ್ರಯೋಗಕ್ಕೂ ಕೆಲ ಘನ ರೋಗಗಳಿಗೆ ಔಷಧಕ್ಕೂ

ಉಪಯೋಗಿಸುವ ಈ ದ್ರವ್ಯ ನಮ್ಮ ದೇಶಕ್ಕೆ ಹೊಸದೇನೂ ಅಲ್ಲ. ಕೆಂಪು ಆರ್ಸೆನಿಕ್ **ಮನಃಶಿಲಾ** ಎಂಬ ಹೆಸರಿಂದ ಮಹಾಭಾರತದಲ್ಲಿ ಹಾಗೂ ಕಾವ್ಯಗಳಲ್ಲಿ ಕಾಣಿಸುತ್ತದೆ. **ಫೇನಶಿಲಾ** ಎಂಬ ಹೆಸರೂ ಇದೆಯೆಂದು ಆಪಟೆ ಕೋಶ (ಇಂಗ್ಲೀಷ್-ಸಂಸ್ಕೃತ) ಹೇಳುತ್ತದೆ.

ಆದರೆ ಆ ಹೆಸರುಗಳು ಹಿಂದೆ ಬಿದ್ದು ಮುಂದೆ **ಶಂಖ ಪಾಷಾಣ** ಎಂಬ ಹೆಸರು ಪ್ರಚಾರಕ್ಕೆ ಬಂತು. ಬಂಗಾಲಿಯಲ್ಲಿ **ಸೇಂಕೋ**, ಹಿಂದಿಯಲ್ಲಿ ಸಂಸ್ಕೃತದಲ್ಲಿ **ಶಂಕು** (ಪಾಷಾಣ ಶಬ್ದ ರಹಿತ) ಎಂಬ ಹೆಸರುಗಳಿಂದ ಈ ಪದಾರ್ಥ ಈಗ ಜ್ಞಾತವಾಗಿದೆ. ಈ ಹೊಸ ಹೆಸರು ಪೋರ್ಚುಗೀಸ್ ಭಾಷೆಯಿಂದ ಬಂದದ್ದೆಂದು ಸುನೀತಿಕುಮಾರ ಚಟರ್ಜಿ ಹೇಳುತ್ತಾರೆ. ಪೋರ್ಚುಗೀಸಿನಲ್ಲಿ ಅದಕ್ಕೆ **ಅಸ್ಸೆಂಕೋ** (assenco) ಎಂದು ಹೆಸರು. ಅದು ಲ್ಯಾಟಿನ್ arsenico ಪದದ ಮತ್ತು ಅದು ಗ್ರೀಕ್ arsenikon ಪದದ ಅಪಭ್ರಂಶ. ಭಾರತೀಯ ಭಾಷೆಗಳಿಗೆ ಬರುವಾಗ ಅದರ ಪ್ರಥಮ ವರ್ಣ as ಬಿದ್ದುಹೋಗಿ ಭಾರತೀಯ ಬಾಯಿಗೆ ಸರಿಯಾಗಿ ಶಂಖ, ಶಂಕು, ಸೆಂಕೋ ಆಗಿ ಬದಲಾಯಿತು. ಈ ಶಬ್ದಗಳಿಗೆ ಸಂಸ್ಕೃತ ಅಥವಾ ಇತರ ಭಾರತೀಯ ಭಾಷೆಗಳಲ್ಲಿ ಪ್ರಾಚೀನ ಪ್ರಯೋಗಗಳು ಇಲ್ಲ, ಸರಿಯಾದ ನಿರುಕ್ತಿಯೂ ಇಲ್ಲ.

ಭಾರತದಲ್ಲಿ ಪೋರ್ಚುಗೀಸರು ವ್ಯಾಪಾರ ಮತ್ತು ರಾಜ್ಯಸ್ಥಾಪನೆಯ ದಾರಿಯಲ್ಲಿ ಅನೇಕ ಶಬ್ದಗಳನ್ನು ಬಿತ್ತಿ ಹೋಗಿದ್ದಾರೆ. **ಕಾಫಿ** ಗಿಡ ಅರೇಬಿಯದ್ದಾದರೂ **ಕಾಫಿ** ಶಬ್ದವನ್ನು ನಮಗೆ ಕೊಟ್ಟವರು ಪೋರ್ಚುಗೀಸರು. ಪೋರ್ಚುಗೀಸ್ cafeಗೆ ತುರ್ಕಿ **ಕಹ್‌ವೇ** ಮೂಲ; ಅದಕ್ಕೆ ಅರಬ್ಬಿ **ಗಹ್‌ವೇ** ಮೂಲ. ಅದೇ ಶಬ್ದ ಇಂಗ್ಲೀಷ್, ಫ್ರೆಂಚ್ ಮೊದಲಾದ ಭಾಷೆಗಳಿಗೂ ಹೋಗಿದೆ. ಕುತೂಹಲದ ಒಂದು ಸಂಗತಿಯೆಂದರೆ ಅರಬ್ಬೀ ಮೂಲದಲ್ಲಿ ಅದಕ್ಕೆ **ದ್ರಾಕ್ಷಾ ಮದ್ಯ** ಎಂಬರ್ಥ; ಕಾಫಿ ಬೀಜಗಳನ್ನು ಮೇಯ್ದ ಕುರಿಗಳು ಹೆಂಡ ಕುಡಿದವರಂತೆ ಕುಣಿಯುವುದನ್ನು ನೋಡಿಯೇ ಅರಬರಿಗೆ ಕಾಫಿಯ ಗುಣ ತಿಳಿಯಿತೆಂದು ಹೇಳುತ್ತಾರಲ್ಲವೇ ?

ಇಂಗ್ಲೀಷಿನಲ್ಲಿ bottle ಇದ್ದರೂ ನಮ್ಮ **ಬಾಟಲಿ, ಬಾಟ್ಲ** ಆ ಭಾಷೆಯಿಂದ ಬಂದದ್ದಲ್ಲ; ಪೋರ್ಚುಗೀಸ್ botelhaದಿಂದ ಸ್ವೀಕರಿಸಿದ್ದು; ಅದು ಫ್ರೆಂಚ್ bouteille ನಿಂದ ಎರವಲು; ಈ ಪದ botleನ ಅಲ್ಪಾರ್ಥಕ (diminutive) ರೂಪ. ಉತ್ತರ ಕಾಲದ ಲ್ಯಾಟಿನ್ನಿನಲ್ಲಿ butis ಎಂದರೆ ದ್ರವಗಳನ್ನು ಹಾಕಿಡುವ ಪಾತ್ರೆ. ಅದೇ ಪ್ರಕಾರ ನಮ್ಮ **ಬಾಲ್‌ದಿ**, ಹಿಂದೀ **ಬಾಲ್‌ಟ**, ಬಂಗಾಲಿ **ಬಾಲ್‌ತಿ** (= ನೀರು ತುಂಬುವ ಬಕೆಟ್) ಪೋರ್ಚುಗೀಸ್ baldeಯಿಂದ ತೆಗೆದುಕೊಂಡದ್ದು.

**ಪಿಸ್ತೂಲ್** ಎಂಬುದೂ ಪೋರ್ಚುಗೀಸಿನ ದಾಯವೇ. ಪೋರ್ಚುಗೀಸ್ pistola, ಇಂಗ್ಲೀಷ್ pistol ಇವು ಜೆಕ್ ಭಾಷೆಯಿಂದ ಫ್ರೆಂಚ್ ಮತ್ತು ಜರ್ಮನ್ ಮೂಲಕ ಬಂದವು. **ಬಂದೂಕು** ಮಾತ್ರ ಅರಬೀ ಭಾಷೆಯ ಪದ. ನೌಕಾಪಡೆ ಮತ್ತು ಸೇನಾಪಡೆಯ ಅಧಿಕಾರಿಯೆಂಬರ್ಥದಲ್ಲಿ **ಕಪ್ತಾನ್** ಪದ ಬಳಕೆಗೆ ಬಂದಿರುವುದೂ ಪೋರ್ಚುಗೀಸ್‌ನಿಂದ. ಅಲ್ಲಿ capitao ಎಂದಿರುವ ಪದವೇ ಇಂಗ್ಲೀಷಿನಲ್ಲಿ captain. ಎರಡಕ್ಕೂ ಲ್ಯಾಟಿನ್ caput (= ತಲೆ, ಮುಖ್ಯ) ಮೂಲ. ಅರ್ಥಾತ್ ''ತಲೆಯಾಳು'', ''ಸರ್‌ದಾರ್'' (ಪಾರಸೀಕ ಸರ್ = ತಲೆ).

**ಇಸ್ತ್ರಿ** (ಬಟ್ಟೆಯನ್ನು ಒಗೆದ ಮೇಲೆ ಸುಕ್ಕುಗಳನ್ನು ನಯ ಮಾಡುವುದು)

ಪೋರ್ಚುಗೀಸ್ estirarನ ರೂಪಾಂತರ. ಇಂಗ್ಲೀಷಿನಲ್ಲಿ ಇದನ್ನೇ Ironing ಅನ್ನುತ್ತಾರೆ.

ಅಮೆರಿಕವನ್ನು ಕಂಡುಹಿಡಿದ ಮೇಲೆ ಇಲ್ಲಿಗೆ ಅಲ್ಲಿಂದ ಅನೇಕ ಸಸ್ಯಗಳನ್ನು ತಂದು ನಟ್ಟವರು ಪೋರ್ಚುಗೀಸರು. ಇವುಗಳಲ್ಲಿ ಹೆಚ್ಚಿನವುಗಳು ಅಮೆರಿಕದ ಮೂಲ ನಿವಾಸಿ ಭಾಷೆಗಳಲ್ಲಿನ ಹೆಸರುಗಳಾದರೂ ನಮಗೆ ಪೋರ್ಚುಗೀಸಿನಿಂದ ದತ್ತಕವಾದವು. **ಪಪಾಯಿ** ಯಾವುದೋ ಕರೀಬಿಯನ್ (ದಕ್ಷಿಣ ಅಮೆರಿಕದ ಸಮೀಪಸ್ಥ ಅಟ್ಲಾಂಟಿಕ ಸಾಗರ ದ್ವೀಪಗಳು) ಭಾಷೆಯಿಂದ ಸ್ಪಾನಿಶ್‌ಗೆ ಹೋಗುವಾಗ papaya ಆಗಿ, ಪೋರ್ಚುಗೀಸಿನಲ್ಲಿ Papaia ಎನಿಸಿ, ನಮ್ಮಲ್ಲಿ ''ಪಪಾಯಿ'' ಆಯಿತು. ಸ್ಪಾನಿಶ್ ಭಾಷೆಯಲ್ಲಿ ಆ ಮರಕ್ಕೆ papayo ಎಂದೂ ಹಣ್ಣಿಗೆ papaya ಎಂದೂ ಹೆಸರಂತೆ. **ಅನಾನಾಸ್** ಕೂಡ ಅಮೆರಿಕನ್ ಇಂಡಿಯನ್ ಭಾಷೆಯೊಂದರಿಂದ ಪೋರ್ಚುಗೀಸಿನಲ್ಲಿ ananas ಆಗಿ ನಮ್ಮಲ್ಲಿಗೆ ಬಂದು ಸೇರಿದ್ದು.

**ಚಿಕ್ಕು** ಹಣ್ಣಿಗೆ **ಸಪೋಟಾ** ಎಂಬ ಹೆಸರು ಕೂಡಾ ಪೋರ್ಚುಗೀಸಿನಿಂದ ಎರವಲು ಪಡೆದದ್ದು. ಪೋರ್ಚುಗೀಸಿನ Zapota ಮತ್ತು ಸ್ಪಾನಿಶ್ Zapote ಎಂಬುದು ದಕ್ಷಿಣ ಅಮೆರಿಕದ ನಹುವಾತ್ಲ್ ಭಾಷೆಯ ತ್ಸಪೋತ್ಲ್ (tzapotl) ಎಂಬ ಶಬ್ದದ ಅಪಭ್ರಂಶ.

**ಕೋಸು**ಗಡ್ಡೆಯ cabbage ಹೆಸರು ಈ ರೂಪದಲ್ಲಿ ಪೋರ್ಚುಗೀಸಿನಿಂದಲೇ ಬಂತೆಂಬ ಅಭಿಪ್ರಾಯವಿದೆ. ಯುರೋಪಿನಲ್ಲಿ ಸಾಧಾರಣವಾಗಿರುವ ಈ ಗಡ್ಡೆಗೆ ತಲೆಯನ್ನು ಹೋಲುವ ಅದರ ಆಕಾರದಿಂದಾಗಿ ಫ್ರೆಂಚಿನಲ್ಲಿ caboche (= ತಲೆ; ಇಟಾಲಿಯನ್ Capo; ಲ್ಯಾಟಿನ್ caput) ಎಂದು ಹೆಸರು. ಈ ಶಬ್ದವನ್ನು ಪೋರ್ಚುಗೀಸರು couve ಮಾಡಿದರೆಂದೂ ಅದರಿಂದಲೇ ನಮ್ಮ ''ಕೋಸು'' ರೂಪುಗೊಂಡಿತೆಂದೂ ಹೇಳಲಾಗಿದೆ. ಇದು ಸಂಸ್ಕೃತ ಕಪಾಲಕ್ಕೆ ಸಂಬಂಧಿ.

**ಬಿಸ್ಕಿಟ್** (biscuit) ಎಂಬುದು ಇಂಗ್ಲೀಷಿನಿಂದ ಸ್ವೀಕರಿಸಿದ ಪದ; ಆದರೆ ಕರಾವಳಿಯಲ್ಲಿ ಅದನ್ನು **ಬಿಸ್ಕೂಟ್** ಎಂದೇ ಉಚ್ಚರಿಸುತ್ತಾರೆ; ಹಿಂದೀ ಬಂಗಾಲಿಗಳಲ್ಲಿಯೂ ಅದೇ ರೂಪ ಪ್ರಚಲಿತವಾಗಿದೆ. ಈ ರೂಪ ಪೋರ್ಚುಗೀಸಿನದ್ದು – biscoito. ಬಿಸ್ಕೂಟ್ ತಯಾರಿಸುವಾಗ ಬೇಯಿಸುವಿಕೆ ಎರಡು ಸಲ ನಡೆಯುತ್ತದೆ ಎಂಬುದರಿಂದ bis (= ಎರಡು ಸಲ,) Coquecoctum (= ಬೇಯಿಸು, ಅಡು) ಎಂಬ ಹೆಸರು ಕೊಡಲಾಗಿದೆಯೆಂಬುದು ಸ್ವಾರಸ್ಯ.

ಈಗಿನ ಇಂಗ್ಲೀಷ್ ಕಲಿತ ಜನ ಸ್ನಾನದ ಪಂಜೆಯನ್ನು **ಟವೆಲ್** ಎಂದು ಕರೆಯುತ್ತಾರೆ; ಹಳೇ ಮಂದಿ **ಟುವಾಲ್** ಎಂದು ಕರೆಯುತ್ತಿದ್ದರು. ಟುವಾಲಿನ ಅರ್ಥ ಕರವಸ್ತ್ರ ಎಂದಿತ್ತು; (ಇಂಗ್ಲೀಷಿನಲ್ಲಿಯೂ towel ಗೆ ಒರಸುವ ವಸ್ತ್ರ, ಕೈವಸ್ತ್ರ ಎಂಬ ಅರ್ಥ ಇದೆ). **ಟುವಾಲ್** ಎಂಬುದು ಪೋರ್ಚುಗೀಸಿನ tovalha ಶಬ್ದದಿಂದ ಬಂದದ್ದು. ಎರಡೂ ರೂಪಗಳಿಗೆ ಹಳೇ ಜರ್ಮನ್ ಭಾಷೆಯ dwahila-dwahaw-twahan ಹಳೇ ಇಂಗ್ಲೀಷಿನ twehan ಮೂಲ. ಆ ಶಬ್ದದ ಅರ್ಥ ''ಒಗೆದದ್ದು'' ಎಂದು. ಅರ್ಥಾತ್ ಸ್ವಚ್ಛ ವಸ್ತ್ರ.

## ೯೯

''ಕನ್ನಡಿಯಂದದಿ ಪೊಳೆವ ಕಪೋಲ'' ಎಂದು ವಿಜಯ ದಾಸರು ಮೋಹಿನೀ

ವರ್ಣನೆಯ ತಮ್ಮ ಲಾವಣಿಯನ್ನು ಪ್ರಾರಂಭಿಸಿದ್ದಾರೆ. ಭಾರತೀಯರ ಲೌಕಿಕ ಜೀವನದಲ್ಲಿ ಮಾತ್ರವಲ್ಲ, ಧಾರ್ಮಿಕ ಜೀವನದಲ್ಲಿ ಕೂಡ ಕನ್ನಡಿ ಬಿಡಿಸಲಾರದಂತೆ ಸೇರಿಕೊಂಡಿದೆ. ಮೂರ್ತಿಶಿಲ್ಪಗಳುಳ್ಳ ಯಾವ ಪ್ರಸಿದ್ಧ ದೇವಸ್ಥಾನದಲ್ಲಿಯೂ ಕನ್ನಡಿ ಹಿಡಿದುಕೊಂಡು ತನ್ನ ಸೌಂದರ್ಯವನ್ನು ಮೆಚ್ಚಿಕೊಳ್ಳುತ್ತಿರುವ ಒಂದಾದರೂ ಹೆಣ್ಣು ಮೂರ್ತಿ ಇದ್ದೇ ಇರುತ್ತದೆ. ಧಾರ್ಮಿಕವಾಗಿ ಕಲಶದೊಡನೆ ಕನ್ನಡಿಯೂ ಮಂಗಲದ ಕುರುಹಾಗಿದೆ.

**ಕನ್ನಡಿ** ಶಬ್ದ ಅನೇಕ ದ್ರಾವಿಡ ಭಾಷೆಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸದೊಡನೆ ಕಾಣಿಸುತ್ತದೆ. ಮುಖ ನೋಡಿಕೊಳ್ಳುವ ಕನ್ನಡಿಗಲ್ಲದೆ ಗಾಜಿನ ಫಲಕಕ್ಕೂ ಆ ಹೆಸರು ಸಲ್ಲುತ್ತದೆ. ಇದು **ಕಣ್; ಕಾಣ್** ಶಬ್ದಗಳ ಸಂಬಂಧಿಯೆಂದು ನಿರುಕ್ತಕಾರರ ಅಭಿಮತ. ತಮಿಳಲ್ಲಿ, ತುಳುವಿನಲ್ಲಿ **ಕಣ್ಣಾಟ** ಎಂಬ ರೂಪವಿದೆ. ಕಣ್ + ಆಟಿ = ಹರಳು ಎಂದು ಅದರ ನಿಷ್ಪತ್ತಿ. ತನ್ನನ್ನು ತಾನು **ಕಂಡು**ಕೊಳ್ಳಲು ನೆರವಾಗುವ ಸಾಧನ ಕನ್ನಡಿ. ತೆಲುಗಿನಲ್ಲಿರುವ **ಅದ್ದಮು** ಎಂಬ ಇನ್ನೊಂದು ಶಬ್ದ ಕೂಡ ಕನ್ನಡಿಗೂ, ಗಾಜಿನ ಫಲಕಕ್ಕೂ ನಡೆಯುತ್ತದೆ. ಆದರೆ ಇದು ಮೂಲತಃ ದ್ರಾವಿಡವಾಗಿರಲಿಕ್ಕಿಲ್ಲ. ಪ್ರಾಕೃತದಲ್ಲಿ **ಅದ್ದಾಅ** ಎಂದರೆ ಕನ್ನಡಿ. ಅದು ಸಂಸ್ಕೃತದ **ಆದರ್ಶ** ಶಬ್ದದ ತದ್ಭವವಾಗಿರಬೇಕು. ಹಿಂದಿಯ **ಆರಸಿ** (= ಕನ್ನಡಿ) ಕೂಡ **ಆದರ್ಶ**ದ್ದೆ ತದ್ಭವ.

ಸಂಸ್ಕೃತದಲ್ಲಿ ಕನ್ನಡಿಗೆ **ಆದರ್ಶ, ದರ್ಪಣ** ಮತ್ತು **ಮುಕುರ** ಎಂಬ ಶಬ್ದಗಳು ಇವೆ. ದ್ರಾವಿಡದ **ಕನ್ನಡಿ**ಯ ನಿರುಕ್ತ ಹೇಗೋ ಹಾಗೆ ಸಂಸ್ಕೃತದ **ಆದರ್ಶ**. ಮತ್ತು ನನ್ನ ಅಭಿಪ್ರಾಯದಲ್ಲಿ **ದರ್ಪಣ** ಶಬ್ದ ಕೂಡ **ನೋಡುವುದು, ನೋಡಿಕೊಳ್ಳುವುದು** ಎಂಬ ಕ್ರಿಯೆಯನ್ನಾಧರಿಸಿಯೇ ಹುಟ್ಟಿಕೊಂಡಿದೆ. ಆದರ್ಶ ಶಬ್ದದ ವ್ಯುತ್ಪತ್ತಿಯಂತೂ ಸ್ಪಷ್ಟವೇ ಇದೆ. **ದೃಶ್** ಅಂದರೆ ನೋಡುವುದು; ಆದರ್ಶ ಅಂದರೆ ಹತ್ತಿರ ನೋಡಿಕೊಳ್ಳುವುದು. ಋಗ್ವೇದದಲ್ಲಿ **ಆದೃಶ್** ಅಂದರೆ ಕಾಣಿಸಿಕೊಳ್ಳುವಿಕೆ, ತೋರುವಿಕೆ; **ಆದರ್ಶ** ಅಂದರೆ **ಕಣ್ಣಿನಿಂದ ಗ್ರಹಿಸುವುದು**. ಆದರೆ ಬ್ರಾಹ್ಮಣ ಮತ್ತು ಉಪನಿಷತ್ತುಗಳ ಕಾಲದಲ್ಲಿ **ಆದರ್ಶ** ಶಬ್ದಕ್ಕೆ ಕನ್ನಡಿಯೆಂಬ ಅರ್ಥ ಬಂತಷ್ಟೇ.

**ದರ್ಪಣ** ಶಬ್ದಕ್ಕೆ ನಮ್ಮ ನಿರುಕ್ತಕಾರರು **ಸೊಕ್ಕನ್ನುಂಟುಮಾಡುವಂಥಾದ್ದು** ಎಂದು ಅರ್ಥ ಹೇಳುತ್ತಾರೆ. **ದೃಪ್** ಧಾತುವಿಗೆ ಸೊಕ್ಕೇರುವುದು ಎಂದು ಅರ್ಥ. **ದೃಪ್ತ** ಎಂದರೆ ಸೊಕ್ಕು ಬಂದವ. ತನ್ನನ್ನು ತಾನು ಕನ್ನಡಿಯಲ್ಲಿ ನೋಡಿಕೊಂಡರೆ (ಮತ್ತು ರೂಪವಂತ ಅಥವಾ ರೂಪವತಿಯಾಗಿದ್ದರೆ) ಹಮ್ಮು ಬರುವುದು ಸ್ವಾಭಾವಿಕ. ಇದಕ್ಕೆ ಬೆಂಬಲವಾಗಿ ಇಂಗ್ಲೀಷಿನ Mirror ಶಬ್ದದ ಮೂಲವನ್ನು ನಿರ್ದೇಶಿಸಬಹುದು. Mirror ಅಂದರೆ (ನೋಡಿಕೊಳ್ಳುವ) ಕನ್ನಡಿ. ಅದು ಹುಟ್ಟಿದ್ದು Mirare ಎಂಬ ಲ್ಯಾಟಿನ್ ಧಾತುವಿನಿಂದ. Mirare ಎಂದರೆ ಮೆಚ್ಚು, ಚೋದ್ಯಪಡು. ಇದು ಸೊಕ್ಕಿಗೇರು ಎನ್ನುವುದಕ್ಕೆ ಅರ್ಥದಲ್ಲಿ ತುಂಬ ಹತ್ತಿರದ್ದೆಂದು ಒಪ್ಪಲೇಬೇಕು. ಹೀಗೆ ಕನ್ನಡಿಗೆ ಜಂಬವನ್ನು ತಗಲಿಸುವುದಕ್ಕೆ ಆಧಾರವಿಲ್ಲದೆ ಇಲ್ಲ. ಆದರೂ **ದೃಪ್** ಧಾತುವನ್ನು ಹೋಲುವ ಗ್ರೀಕ್ dropo, dropaso ಪದಗಳಿಗೆ ನೋಡು ಎಂಬ ಅರ್ಥವೇ ಇರುವುದನ್ನು ಗಣನೆಗೆ ತೆಗೆದುಕೊಳ್ಳಬೇಕಾಗಿದೆ.

ಅದೂ ಅಲ್ಲದೆ ಇತರ ಭಾರೋಪ್ಯ ಭಾಷೆಗಳಲ್ಲಿ ಕನ್ನಡಿಗಿರುವ ಶಬ್ದಗಳು ನೋಡುವ, ಕಾಣಿಸುವ ಕ್ರಿಯೆಗೆ ಸಲ್ಲುವ ಪದಗಳಿಂದಲೇ ಹುಟ್ಟಿಕೊಂಡಿದೆ. ನಮ್ಮ ನೆರೆಯ ಪಾರಸೀಕ ಭಾಷೆಯಲ್ಲಿ ಕನ್ನಡಿಗೆ **ಆಯಿನಾ** ಎಂದು ಹೆಸರು. ಇದು ಪುರಾತನ ಇರಾಣದ ದಿ = ನೋಡು

ಎಂಬ ಧಾತುವಿನ ಸಂತತಿಯದೆಂದು ಶಬ್ದ ಶಾಸ್ತ್ರಜ್ಞರು ತೀರ್ಮಾನಿಸಿದ್ದಾರೆ. ಪಾಕಿಸ್ತಾನದ ಬಲೂಚಿ ಭಾಷೆಯಲ್ಲಿ ಕೂಡ ಕನ್ನಡಿಗೆ **ಆ-ದೇಂಕ್** (= ನೋಡಿಕೊ) ಎಂಬ ಹೆಸರಿದೆ. ಹಳೇ ಜರ್ಮನ್ ಭಾಷೆಯಲ್ಲಿ ಕನ್ನಡಿಗೆ Speagal ಎಂದೂ, ಆಧುನಿಕ ಜರ್ಮನ್ ಭಾಷೆಯಲ್ಲಿ Speigal ಎಂದೂ, ಸ್ಲಾವಿಕ್ ಭಾಷೆಗಳಲ್ಲಿ Zruealo ಎಂದೂ ಹೆಸರುಗಳು. ಇವೆಲ್ಲ ಲ್ಯಾಟಿನ್ Speculum (= ನೋಡುವುದು) ಶಬ್ದದಿಂದ ಹೊರಟವು.

ಸಂಸ್ಕೃತ **ಮುಕುರ** ಶಬ್ದದ ಬೇರು ಯಾವುದೆಂದು ಖಚಿತವಾಗಿಲ್ಲ. ಅದು ಸಂಸ್ಕೃತದಲ್ಲಿ ಕಾಣಿಸಿಕೊಳ್ಳುವುದೂ ತಡವಾಗಿ. ಕನ್ನಡಿಗೆ ಕನ್ನಡದಲ್ಲಿ ಇನ್ನೊಂದು ಹೆಸರು **ಕೈಪಿಡಿ**. ಬಹುಶಃ ಅನೇಕ ಶಿಲ್ಪಗಳಲ್ಲಿ ತೋರಿಸಿರುವಂತೆ ಕೈಯಲ್ಲಿ ಹಿಡಿದುಕೊಂಡು ಮುಖ ನೋಡಿಕೊಳ್ಳುವ ಚಿಕ್ಕ ಕನ್ನಡಿ ಇದು. ಈಗಿನವರು ವ್ಯಾನಿಟಿ ಬ್ಯಾಗುಗಳಲ್ಲಿ ತಮ್ಮ ಸಂಗಡ ಸರ್ವತ್ರ ಒಯ್ಯುವ ಮಾದರಿಯದು. ಒಂದು ಸೋಜಿಗವೆಂದರೆ ಸಂಸ್ಕೃತದ **ಮುಕುರ** ಮತ್ತು ಕನ್ನಡದ **ಕೈಪಿಡಿ** ಇವೆರಡಕ್ಕೂ ಹಿಡಿಕೆಯೆಂಬ ಇನ್ನೊಂದು ಅರ್ಥ ಇರುವುದು.

ಕನ್ನಡಿಗಿರುವ ಸಂಸ್ಕೃತ ಶಬ್ದಗಳು ಋಗ್ವೇದದಷ್ಟು ಹಿಂದೆ ಹೋಗುವುದಿಲ್ಲ. ''ಆದರ್ಶ'' ಶತಪಥ ಬ್ರಾಹ್ಮಣ, ಬೃಹದಾರಣ್ಯಕ ಉಪನಿಷತ್ತುಗಳಲ್ಲಿ; ''ದರ್ಪಣ'' ಅದಕ್ಕಿಂತ ತುಂಬಾ ಇತ್ತಲಾಗಿನ ಹರಿವಂಶಪುರಾಣದಲ್ಲಿ, ''ಮುಕುರ'' ಅದಕ್ಕೂ ಈಚೆಗಿನ ಕಾವ್ಯಗಳಲ್ಲಿ ಸಿಗುತ್ತವಷ್ಟೇ. ಗ್ರೀಸಿನಲ್ಲಿ ಹೋಮರ್ ಮಹಾಕವಿ ಕನ್ನಡಿಯ ಸುದ್ದಿ ಹೇಳುವುದಿಲ್ಲವಂತೆ. ಗ್ರೀಕ್ ಪುರಾಣದಲ್ಲಿ ನಾರ್ಸಿಸಿಸ್ ಎಂಬವನೊಬ್ಬ ತನ್ನ ಮುಖವನ್ನು ನೀರಿನಲ್ಲಿ ನೋಡಿ ಅದಕ್ಕೆ ಮೋಹಿತನಾಗಿ ಅದನ್ನೆ ಹಂಬಲಿಸುತ್ತ ಕೊರಗಿ ಸೊರಗಿ, ಸಾಯುವ ಕಥೆ ಇದೆ. ಋಗ್ವೇದದಲ್ಲಿ ''ರೂಪಂ ರೂಪಂ ಪ್ರತಿರೂಪೋ ಬಭೂವ'' ಎಂದು ಆರಂಭವಾಗುವ ಮಂತ್ರವಿದೆ. ಈ ಮಂತ್ರ ಹೇಳುತ್ತ ನೀರಲ್ಲಿ ಮುಖ ನೋಡಿಕೊಳ್ಳುವ ವಿಧಿ ಕರ್ಮಕಾಂಡದಲ್ಲಿದೆ. ನೀರೇ ಭಾರೋಪ್ಯ ಜನಾಂಗಗಳಿಗೆ ಮೊದಲ ಕನ್ನಡಿಯಾಗಿತ್ತೆ ?

ಮೊಟ್ಟಮೊದಲ ಕನ್ನಡಿಗಳು ಸಿಗುವುದು ಇಜಿಪ್ತಿನಲ್ಲಿ. ಅವು ಕಂಚಿನವು. ಗ್ರೀಕರಿಗೂ ಏಟ್ರುಸ್ಕನ್ನರಿಗೂ, ಭಾರತೀಯರಿಗೂ ಪ್ರಾಚೀನ ಕಾಲದಲ್ಲಿ ಗೊತ್ತಿದ್ದದ್ದು ಕಂಚಿನ ಕನ್ನಡಿ. ಪೂಜೆಯಲ್ಲಿ ಉಪಯೋಗಿಸುವುದು ಇಂದಿಗೂ ಕಂಚಿನ ಕನ್ನಡಿಯೇ. ಕಾವ್ಯಗಳಲ್ಲಿ ಪಂಪನ ಕಾಲದಲ್ಲೇ **ಕಂಚು ಕನ್ನಡಿ**ಯ ವಿಷಯ ಬರುತ್ತದೆ.

ಕನ್ನಡಿ ಮತ್ತು ತತ್ಸಮಾನ ಸಂಸ್ಕೃತ ಪದಗಳು ಒಂದು ವಿಶೇಷವಾದ ಅರ್ಥವಿಸ್ತರಣೆ ಹೊಂದಿ ತತ್ವಗಳನ್ನು, ಗ್ರಂಥಗಳನ್ನು ಅರ್ಥಮಾಡಿಕೊಳ್ಳಲು ನೆರವಾಗುವ ವಿವರಣೆಗಳಿಗೂ ಹೆಸರಾಗಿವೆ. ಉದಾಹರಣೆಗೆ ''ಪಂಪ ಭಾರತದ ಕೈಗನ್ನಡಿ'', ''ಕಾವ್ಯಾದರ್ಶ'', ''ಸಾಹಿತ್ಯ ದರ್ಪಣ'' ಇತ್ಯಾದಿ. ಇದೇ ತರಹದ ವಿಸ್ತರಣೆಯಿಂದ ''ಅಂಗೈ ನೆಲ್ಲಿಗೆ ಕನ್ನಡಿ ಬೇಕೇ ?'' ಎಂಬ ಗಾದೆ ಹುಟ್ಟಿದೆ. ನಮ್ಮ ಮುಖ ನಮಗೆ ಕಾಣಬೇಕಾದರೆ ಕನ್ನಡಿ ಬೇಕು; ಅದಿಲ್ಲದೆ ನಮ್ಮನ್ನು ತಿಳಿದುಕೊಳ್ಳಲು ಬೇರೆ ದಾರಿ ಇಲ್ಲ. ಹಾಗೆಯೆ ಕಠಿನ ವಿಷಯಗಳನ್ನು ಅರಿತುಕೊಳ್ಳಲು ಈ ''ದರ್ಪಣ''ಗಳು ಬೇಕು.

ನಮ್ಮ ಮುಖಗಳನ್ನು ನಾವೇ ನೋಡಿಕೊಳ್ಳಲು ಸಾಧ್ಯವಾಗಿ ಮಾಡುವ ಈ ಕಂಚುಗನ್ನಡಿ ಅಥವಾ ಹರಳುಗನ್ನಡಿಗಳು ಪ್ರಾಚೀನರಿಗೆ ಲೋಕೋತ್ತರ ವಸ್ತುಗಳಾಗಿ ಕಂಡಿರಬೇಕು. ಕನ್ನಡಿ ನೋಡಿಕೊಳ್ಳುವುದಕ್ಕೂ ಒಂದು ಮಾಂತ್ರಿಕ ಶಕ್ತಿಯನ್ನವರು

ಕಲ್ಪಿಸಿದರು. ಆದ್ದರಿಂದ ಯುಗಾದಿಯ ದಿನ ಮುಂಜಾನೆಯೆದ್ದು ದೇವರೆದುರಿಟ್ಟ ಕೈಗನ್ನಡಿಯಲ್ಲಿ ಮುಖ ನೋಡುಕೊಳ್ಳುವ ಸಂಪ್ರದಾಯವಿದೆ. ಅದು ಶುಭಂಕರ. ಕರ್ನಾಟಕದ ಕೆಲವೆಡೆ ಇದಕ್ಕೆ ''ಕನಿ ನೋಡುವುದು'' ಎನ್ನುತ್ತಾರೆ. ಅದು ವಿಲಾಸದ ಸಾಮಗ್ರಿಯೂ ಹೌದು. ಆದ್ದರಿಂದ ಬ್ರಹ್ಮಚಾರಿಗಳೂ, ವಿಧವೆಯರೂ ಕನ್ನಡಿ ನೋಡಬಾರದು. ಮುಖ ನೋಡಿಕೊಳ್ಳುವ ಕ್ರಿಯೆಗೇ ಒಂದು ಅಲೌಕಿಕ ಮಹತ್ವವಿತ್ತೆನ್ನಿ. ನೀರಲ್ಲಿ ಮುಖ ನೋಡಿಕೊಳ್ಳುವುದನ್ನು ಮೇಲೆ ಪ್ರಸ್ತಾಪಿಸಿದೆ; ಎಳ್ಳೆಣ್ಣೆಯಲ್ಲಿ ಮುಖ ನೋಡಿಕೊಳ್ಳುವುದು ದುಷ್ಟಗ್ರಹಬಾಧೆಯ ನಿವಾರಣೆಗೆ ಒಂದು ಉಪಾಯವೆಂದು ಗ್ರಹಿಸಲ್ಪಟ್ಟಿದೆ.

## ೧೦೦

ನಮ್ಮ ಪ್ರಾಚೀನರು ಅಂಗರಚನಾಶಾಸ್ತ್ರದಲ್ಲಿ ಸಾಕಷ್ಟು ಪರಿಣತರಾಗಿದ್ದರೆಂಬುದಕ್ಕೆ ವೇದಗಳಿಂದಾರಂಭಿಸಿ ಚರಕ ಸುಶ್ರುತಾದಿ ಪ್ರಾಚೀನ ವೈದ್ಯ ಗ್ರಂಥಗಳು ಸಾಕ್ಷ್ಯ ಹೇಳುತ್ತವೆ. ಯಜ್ಞಗಳಲ್ಲಿ ಪಶುವಧೆ ಮತ್ತು ಅವುಗಳ ಅಂಗಚ್ಛೇದ ಅವಶ್ಯವಾಗಿದ್ದುದರಿಂದ ಬೇರೆ ಬೇರೆ ಅವಯವಗಳ ಕಾರ್ಯಗಳೂ ಅವರಿಗೆ ಪರಿಚಿತವಾಗಿದ್ದವು. ಹೀಗೆ **ಹೃದಯ** ಎಂಬ ಗುಂಡಿಗೆ ರಕ್ತಾಭಿಸರಣದ ಕೇಂದ್ರವೆಂಬುದು ಖಂಡಿತವಾಗಿಯೂ ಮತ್ತು ತಲೆ ಹಾಗೂ ಅದರೊಳಗಿನ ಮಿದುಳು ಆಲೋಚನೆಗಳ ಕೇಂದ್ರವೆಂಬುದು ಊಹಾತ್ಮಕವಾಗಿಯೂ ಅವರಿಗೆ ತಿಳಿದಿತ್ತು. ಆದರೆ ಸಾಮಾನ್ಯ ಭಾಷೆಯಲ್ಲಿ ಮನಸ್ಸಿನ ಅಧಿಷ್ಠಾನ ಮಿದುಳಿನಲ್ಲಿಯೋ ಎದೆಗುಂಡಿಗೆಯಲ್ಲಿಯೋ ಎಂಬಲ್ಲಿ ಸಾಕಷ್ಟು ಗೊಂದಲವೇ ಇತ್ತು.

ಉದಾಹರಣೆಗೆ **ಚಿತ್ತ** ಎಂಬುದು ಮನಸ್ಸಿನ ವ್ಯಾಪಾರ ಎಂಬುದು ಸ್ವೀಕೃತವಾಗಿದ್ದರೂ ಅದು ಮಿದುಳಿನಲ್ಲಿ (**ಮಸ್ತಿಷ್ಕ**) ಇದೆಯೋ ಎದೆಯಲ್ಲೋ ಎಂಬುದು ಸಂದಿಗ್ಧವಾಗಿತ್ತು. ಕೆಲ ಕವಿಗಳು **ಚಿತ್ತ**ವನ್ನೂ **ಹೃದಯ**ವನ್ನೂ ಒಂದೇ ಆಗಿ ಭಾವಿಸಿದ್ದರೆಂಬುದು ನಿಶ್ಚಿತ. **ಚಿತ್ತ**ವನ್ನು **ಹೃದಯ** ಎಂಬ ಅರ್ಥದಲ್ಲಿ ತೈತ್ತಿರೀಯ ಸಂಹಿತೆ, ಶ್ವೇತಾಶ್ವತರ ಉಪನಿಷತ್ತು ಮೊದಲಾದ ವೈದಿಕ ಸಾಹಿತ್ಯದಲ್ಲಿ ಪ್ರಯೋಗ ಮಾಡಿದ್ದು ಕಾಣಸುತ್ತದೆ. ಚಿತ್ತವೆಂಬುದು ಬುದ್ಧಿಶಕ್ತಿಯ ಸ್ಥಾನವೆಂದು ಹೇಳಿದ್ದು ಇದೆಯಾದರೂ **ಹೃದಯ**ವನ್ನು ಕೂಡ ಎದೆಯೆಂಬರ್ಥದಲ್ಲಿ ಮಾತ್ರವಲ್ಲದೆ **ಭಾವನೆ**ಗಳ ಮತ್ತು **ಮನಸ್ಸಿನ** ಅಧಿಷ್ಠಾನವಾಗಿಯೂ ಭಾವಿಸಲಾಗಿತ್ತು. ''ನಾರೀ ಹೃದಯಚೋರ'' ಎಂದ ಹಾಗೆಯೇ ''ನಾರೀ ಮನಶ್ಚೋರ''ನಾಗಿಯೂ ಕೃಷ್ಣನನ್ನು ವರ್ಣಿಸಿದ್ದು ಇದೆ. **ಮಸ್ತಿಷ್ಕ** ಎಂದರೆ ವೇದ ಕಾಲದಲ್ಲೇ ಮಿದುಳು ಎಂಬರ್ಥವಿತ್ತು; ಅದೇ ಶಬ್ದವನ್ನು ಮಿದುಳಿನ ಮೇಲೆ ಪ್ರಭಾವ ಮಾಡುವ **ಔಷಧ**ಕ್ಕೂ ಉಪಯೋಗಿಸುತ್ತಿದ್ದುದರಿಂದ ಮಿದುಳಿನ ಕ್ರಿಯೆಯ ಅರಿವು ಪ್ರಾಚೀನರಿಗೆ ಇತ್ತೆಂಬಲ್ಲಿ ಸಂಶಯವಿಲ್ಲ. ಕನ್ನಡದಲ್ಲಿ **ಮದ ತಲೆಗೇರು**, **ತಲೆಗೆಡು** ಮುಂತಾದ ಪ್ರಾಚೀನ ನುಡಿಕಟ್ಟುಗಳು ಕೂಡ ಬುದ್ಧಿಭ್ರಮಣೆಯಾಗುವುದು ತಲೆಯೊಳಗಿನ ಅಸ್ವಸ್ಥತೆಯೆಂಬ ಅರಿವು ಇದ್ದುದನ್ನು ತೋರಿಸುತ್ತವೆ. ಆದರೆ ಭಾವನೆಗಳ ಅಧಿಷ್ಠಾನ ಎದೆಯೊಳಗಿನ ಹೃದಯವೆಂಬ ಗುಂಡಿಗೆಯೆಂಬುದು ಸಾರ್ವತ್ರಿಕ ತಿಳಿವಳಿಕೆಯಾಗಿತ್ತು. ಧೈರ್ಯ ಕೂಡ ಹೃದಯದ ವ್ಯಾಪಾರವೆಂಬ ನಂಬಿಕೆಗೆ **ಎದೆಗೆಡು**, **ಎದೆಗುಂದು**, **ಗುಂಡಿಗೆ ಒಡೆ** ಮೊದಲಾದ

ನುಡಿಕಟ್ಟುಗಳು ಸಾಕ್ಷಿಗಳಾಗಿವೆ. ಈ ಗೊಂದಲ ಭಾರತದ ಭಾಷೆಗಳಿಗೆ ಮಾತ್ರ ವಿಶೇಷವಾದವುಗಳಲ್ಲ. ಇಂಗ್ಲೀಷಿನಲ್ಲಿ ಕೂಡ **ಹಾರ್ಟ್** (= ಸಂಸ್ಕೃತ ''ಹೃದಯ'') ಭಾವನೆಗಳ ಅಧಿಷ್ಠಾನವೆಂದೇ ಭಾವಿಸಲ್ಪಟ್ಟದ್ದು ಗೋಚರವಾಗುತ್ತದೆ. Hearty greetings (**ಹೃತ್ಪೂರ್ವಕ** ಅಭಿನಂದನೆಗಳು), heartless man (**ಹೃದಯಹೀನ, ಕಲ್ಲೆದೆಯ ಮನುಷ್ಯ**) ಇತ್ಯಾದಿ ನುಡಿಕಟ್ಟುಗಳನ್ನು ಉದಾಹರಿಸಬಹುದು.

ಈ ಗೊಂದಲದ ಕಾರಣ ಹುಡುಕಲು ದೂರ ಹೋಗಬೇಕಾಗಿಲ್ಲ. ನಮ್ಮ ಭಾವನೆಗಳ ಏರು ಪೇರುಗಳು ನಮ್ಮ ಎದೆ ಬಡಿತದ ವೇಗದ ಅಂತರದಲ್ಲಿ ಪ್ರತಿಬಿಂಬಿಸುತ್ತವೆ. **ಉದ್ವೇಗ, ಆವೇಗ,** ಇತ್ಯಾದಿ ಪ್ರಯೋಗಗಳನ್ನು ಗಮನಿಸಿರಿ. ಇದಕ್ಕೆಲ್ಲ ಮಿದುಳು ನರಗಳ ಮೂಲಕ ಕೊಡುವ ವಿದ್ಯುದ್ರಾಸಾಯನಿಕ ಪ್ರಚೋದನೆಗಳು ಕಾರಣವೆಂದು ಖಚಿತಪಟ್ಟದ್ದು ಆಧುನಿಕ ವಿಜ್ಞಾನದ ಈಚೆಗಿನ ಸಂಶೋಧನೆಗಳಿಂದ ಅಲ್ಲವೆ ?

* * *

**ಚೆರೂಟ್** (Cheroot) ಎಂಬ ಎರಡೂ ತುದಿಗಳಲ್ಲಿ ಚೂಪಾದ ಹೊಗೆ ಬತ್ತಿಯನ್ನು ಆಢ್ಯರು ಸೇದುವುದು ಅನೇಕರಿಗೆ ಗೊತ್ತು. ಇಂಗ್ಲೀಷಿಗೆ ಇದರ ಹೆಸರು ಫ್ರೆಂಚಿನಿಂದ ಬಂತು (Cheroute); ಅಲ್ಲಿಗೆ ಅದು ಬಂದದ್ದು ಮಾತ್ರ – ತಮಿಳಿನಿಂದ **ಶ್ರುಟ್ಟು** (ಸುರುಟು) ಅಂದರೆ (ತಂಬಾಕಿನೆಲೆಗಳನ್ನು) ಸುರುಳಿ ಸುತ್ತಿದ್ದು – ಅದೇ **ಚುರುಟ್ಟು** – ಫ್ರೆಂಚ್ ಹೆಸರಿಗೆ ಮೂಲ. ಅದೇ ಕನ್ನಡದಲ್ಲಿ **ಚುಟ್ಟ** ಆಗಿದೆ. ಕರ್ನಾಟಕದ ಕೆಲ ಭಾಗಗಳಲ್ಲಿ ಇಂಗ್ಲೀಷ್ **ಸಿಗಾರ್** ಎಂಬುದು ಹೊಗೆಬತ್ತಿಗೇ ಹೆಸರು; ಉತ್ತರ ಕರ್ನಾಟಕದಲ್ಲಿ **ಬೀಡಿಯನ್ನೇ ಚುಟ್ಟ** ಎನ್ನುತ್ತಾರೆ. **ಸಿಗಾರ್** ಎಂಬುದು ಮೂಲತಃ ಸ್ಪಾನಿಶ್ ಶಬ್ದ (Cigarro). ಇದರ ಒಂದು ರೂಪವೇ **ಸಿಗರೇಟ್** (Cigarette) - ಅಂದರೆ ಫ್ರೆಂಚಿನಲ್ಲಿ **ಸಣ್ಣ ಸಿಗಾರ್.**

**ಸೇವಿಗೆ, ಶಾವಿಗೆ, ಶಾಮಿಗೆ,** ಎಂಬ ನಮ್ಮ ಆ ನೂಲಿನ ಲಡಿಯಂಥ ಭಕ್ಷ್ಯವಿದೆಯಲ್ಲ, ಅದರ ಅಂತರಾಷ್ಟ್ರೀಯ ವ್ಯಾಪ್ತಿ ಗೊತ್ತಿದ್ದ ಮಾತು. ಇಟಾಲಿಯನ್ನರಿಗೆ ಅದು ರಾಷ್ಟ್ರೀಯ ಭಕ್ಷ್ಯ-ಸ್ಪಗೇತಿ (spaghetti); ಇಂಗ್ಲೀಷಿನಲ್ಲಿ ನೂಡ್ಲ್ (noodle). ಆದರೆ ''**ಸೇವಿಗೆ**'', ''**ಶಾವಿಗೆ**'' ಎಂಬುದೂ ಅಂತಃಪ್ರಾಂತೀಯ, ಅಂತಾರಾಷ್ಟ್ರೀಯ ಹೆಸರೇ ಆಗಿದೆ. ಸಂಸ್ಕೃತದಲ್ಲಿ ಅದು **ಸಮಿದಾ, ಸಮಿತಾ** – ನಯವಾದ ಗೋದಿ ಅಥವಾ ಮೈದಾ ಹಿಟ್ಟು; ಅದರಿಂದಲ್ಲವೇ ಮೂಲತಃ ಸೇವಿಗೆ ತಯಾರಾಗುತ್ತಿದ್ದದ್ದು ? ಪ್ರಾಕೃತದಲ್ಲಿ ಅದು **ಶಮಿದ.** ಹಿಂದಿಯಲ್ಲಿ ಅದೇ **ಸೇವ್, ಸೇಊ** – ಮತ್ತು ಇದೀಗ ವಿಶೇಷ – ಗ್ರೀಕಿನಲ್ಲಿ **ಸೆಮಿದಲಿಸ್** (semidalis).

ಹರಿಯುವ ನೀರು ಜೀವನ ಸ್ವರೂಪವಾದ ನೈಸರ್ಗಿಕ ಭೌಗೋಲಿಕ ಲಕ್ಷಣ. ಎಲ್ಲೆಲ್ಲಿ ಸಣ್ಣ ದೊಡ್ಡ ಹರಿಯುವ ನೀರಿದೆಯೋ ಅಲ್ಲೆಲ್ಲ ಅದಕ್ಕೆ ಹೆಸರಿದೆ. ನಮ್ಮ ಪವಿತ್ರತಮ ನದಿಯಾದ **ಗಂಗಾ** ನದಿಯನ್ನು ತೆಗೆದುಕೊಳ್ಳಿ. ಋಗ್ವೇದದಲ್ಲೇ ಇದರ ಹೆಸರು ಇತರ ನದಿಗಳ ಹೆಸರುಗಳೊಡನೆ ಬಂದಿದೆ. ಇದರ ಹೆಸರು ಮೂಲತಃ ಇಂಡೋ-ಆರ್ಯನ್ ಅಥವಾ ಇಂಡೋ-ಯುರೋಪಿಯನ್ ಇರಲಿಕ್ಕಿಲ್ಲವೆಂದು ಭಾಷಾಶಾಸ್ತ್ರಿಗಳು ಹೇಳುತ್ತಾರೆ. ಅದು ಭಾರತಕ್ಕೆ ದ್ರಾವಿಡರಾಗಲಿ ಆರ್ಯರಾಗಲಿ ಬರುವ ಮುಂಚೆ ಇಲ್ಲಿ ಮತ್ತು ಏಶಿಯ ಖಂಡದ ಇತರ ಪ್ರದೇಶಗಳಲ್ಲಿ ಹಬ್ಬಿದ್ದ ಆಸ್ಟ್ರಿಕ್ ಜನರ ಭಾಷೆ ಬಿಟ್ಟುಹೋದ ಹೆಸರಾಗಿರಬೇಕು. **ಗಂಗ್** ಎಂಬುದು ಹೊಳೆ – ಹಳ್ಳಗಳಿಗೆ ಆ ಭಾಷೆಯಲ್ಲಿ ಅಭಿಧಾನ.

ಅದೇ ಸಂಸ್ಕೃತದಲ್ಲಿ **ಗಂಗಾ**. ಬಂಗಾಲಿಯಲ್ಲಿ **ಗಾಂಗ್** ಎಂದರೆ ಒಟ್ಟಿಗೇ **ಹೊಳೆ, ಕಾಲುವೆ**ಗಳಿಗೆ ಈಗಲೂ ಹೆಸರಾಗಿದೆ. ಇಂಡೋಚೀನದ ಮಹಾ ಜೀವದಾತ್ರಿ ನದಿಯಾದ **ಮೆ-ಖೊಂಗ್** (Me-khong)ನಲ್ಲಿನ khong **ಗಂಗ್**ನದೇ ಒಂದು ರೂಪ; ಗಂಗ್-ಕಂಗ್-**ಕಿಯಂಗ್** ಆಗಿ ಚೀನದಲ್ಲಿ ನದೀ ಸೂಚಕವಾಗಿ ಉಳಿದಿದೆ. **ಯಂಗ್**-ತ್ಸೆ-ಕಿಯಂಗ್ ಎಂಬ ಚೀನೀ ನದೀ ನಾಮದಲ್ಲಿ **ಕಿಯಂಗ್** ಗಂಗೆಯದೇ ರೂಪ.

ನಮ್ಮ **ಯಮುನಾ** ನದಿ ಕೂಡ ವೇದಪ್ರಸಿದ್ಧವಾದದ್ದೇ. ಪುರಾಣ ಕಥೆಗಳಲ್ಲಿ ಅದನ್ನು **ಯಮನ** ಅವಳಿ ತಂಗಿ **ಯಮಿ**ಗೆ ತಳಕು ಹಾಕಿದ್ದಾರೆ. ಆದರೆ ಅದು ಇಂಡೋ-ಇರಾಣಿಯನ್ ಭಾಷಾ ಶಾಖೆಯಲ್ಲಿ ಬಹುಶಃ ನದೀಮಾತ್ರ ಸೂಚಕವಾಗಿದೆ. ಇಂದು ಕೂಡ ಪಾರಸೀಕ ಭಾಷೆಯಲ್ಲಿ **ಯಮ್** ಎಂದರೆ ನದಿ. ಪಾರಸೀಕ ಭಾಷೆ ಸಂಸ್ಕೃತದ ಸೋದರಿ.

ನಮ್ಮ ಕರಾವಳಿ ಕರ್ನಾಟಕದ ದೊಡ್ಡ ನದಿಗಳಲ್ಲಿ ಒಂದಾದ **ನೇತ್ರಾವತಿಯ** ಹೆಸರೂ ಹಾಗೆಯೇ. **ನೇತ್ರ** ಎಂದರೆ **ಕೊಳವೆ, ನಳಿಗೆ, ನಾಲೆ**. ಸುಶ್ರುತನು ಇಂಜಕ್ಶನ್ ಟ್ಯೂಬಿಗೆ ನೇತ್ರ ಎಂದು ಕರೆದಿದ್ದಾನೆ. **ನೇತ್ರೀ** ಎಂದರೆ ನದಿ, ಹಳ್ಳ ಎಂದು ಕೋಶಗಳು ಹೇಳುತ್ತವೆ. **ನೇತ್ರಾವತಿ** ಅದರದೇ ಒಂದು ಅವತಾರ. **ಗೋದಾವರಿ** ಕೂಡ ಹಾಗೆಯೇ. **ಗೋದಾ** ಎಂದರೆ ಸ್ಥಳೀಯ ಗುಡ್ಡಗಾಡು ಜನರ ಭಾಷೆಯಲ್ಲಿ ಹೊಳೆಯೆಂದಷ್ಟೇ ಅರ್ಥ.

೧೦೧

ದೊಡ್ಡ **ಪುಕಾರು** ಎದ್ದಿತು ಎನ್ನುತ್ತೇವೆ. ''ಆ ಮೇಲೆ ಪುಕಾರು ಬೇಡ'' ಎನ್ನುತ್ತೇವೆ. ಇದಕ್ಕೆ ದೂರು ಎಂದು ತಾತ್ಪರ್ಯ; ಆಕ್ಷೇಪ ಎಂದರೂ ಸೈ. ''ಪುಕಾರ್'' ಎಂಬುದು ಹಿಂದೀ ಶಬ್ದ. **ಪುಕಾರನಾ** ಅಂದರೆ ಹೆಸರು ಹಿಡಿದು ಕರೆಯುವುದು, ಕೂಗುವುದು, ದೊಡ್ಡ ದನಿಯಲ್ಲಿ ದೂರುವುದು, ಅಧಿಕಾರಿಗಳಿಗೆ ದೂರು ಕೊಡುವುದು ಇತ್ಯಾದಿ ಉಪಾರ್ಥಗಳು ಹಿಂದಿಯಲ್ಲೇ ಈ ಪದಕ್ಕೆ ಇವೆ.

**ದಾದಿಲ್ಲ, ಪುಕಾರಿಲ್ಲ** ಎಂಬ ಮಾತು ಉತ್ತರ ಕರ್ನಾಟಕದಲ್ಲಿ ಕೇಳಿಸುತ್ತದೆ. ಹೆಚ್ಚು ಕಡಿಮೆ ಒಂದೇ ಅರ್ಥದ ಈ ಜೋಡಿಪದಗಳಲ್ಲಿ ಮೊದಲನೆಯದು ಪಾರಸೀಕ ಪದ. **ದಾದ್** ಪದ ಮೂಲದಲ್ಲಿ ನಮ್ಮ (ಸಂಸ್ಕೃತ) ''ದತ್ತ'', ''ದಾತೃ'' ಶಬ್ದಕ್ಕೆ ಸಂವಾದಿಯಾದದ್ದು. ದೀನರಿಗೆ ದಾನವೀಯುವವರಿಲ್ಲ; ಅರ್ಥಾತ್ ರಕ್ಷಕರಿಲ್ಲ, ಅರ್ಥಾತ್ ನ್ಯಾಯ ಕೊಡುವವರಿಲ್ಲ – ಹೀಗೆ ದಾದ್ ಎಂಬುದು **ನ್ಯಾಯ** ಎಂಬರ್ಥಕ್ಕೆ ತಿರುಗಿದೆ. **ದಾತ್ರ, ದಾತಾರ** ಶಬ್ದ ನಮ್ಮಲ್ಲಿಯೂ ಒಡೆಯ, ಕೇಳುವವ, ಕಾಯುವವ ಎಂಬರ್ಥಕ್ಕೆ ತಿರುಗಿದ ಉದಾಹರಣೆಗಳಿವೆ. **ದಾದ್-ಫಿರ್ಯಾದ್** ಎಂಬ ಇನ್ನೊಂದು ಸಮಾನ **ಜೋಡಿ** ಪದವೂ ಇದೇ ಅರ್ಥದ್ದು. ಇವೆರಡೂ ಪಾರಸೀಕ ಶಬ್ದಗಳೇ. ಪಾರಸೀಕ **ಫರಿಯಾದ್** ಕಷ್ಟದಿಂದ ಪಾರು ಮಾಡಲು ಕೂಗಿಕೊಳ್ಳುವುದು, ದೂರು, ಪ್ರಾರ್ಥನೆ. ಅಚ್ಚಗನ್ನಡ **ಮೊರೆ** ಇದೇ ಅರ್ಥದ್ದು. ''ಮೊರೆ'' ಎಂದರೂ ಕೂಗುವುದು, ಪುಕಾರು ಮಾಡುವುದು. ಈ ''ಫಿರ್ಯಾದ್'' ಶಬ್ದ ಕೂಡ (ನ್ಯಾಯಸ್ಥಾನದಲ್ಲಿ, ಪೋಲೀಸರಲ್ಲಿ) ಮುಖ್ಯವಾಗಿ ಅನ್ಯಾಯ, ದಬ್ಬಾಳಿಕೆಯ ವಿರುದ್ಧ ದೂರು ಕೊಡುವುದು ಎಂಬರ್ಥದಲ್ಲಿ ತುಂಬಾ ಬಳಕೆಗೆ ಬಂದಿದೆ. ''ಮೊರೆ'', ''ಪುಕಾರ್'' ಮೊದಲಾದ ಶಬ್ದಗಳು ನ್ಯಾಯಕ್ಕಾಗಿ ಹಿಂದಿನ ಕಾಲದಲ್ಲಿ

ಊರಿಗೆಲ್ಲ ಕೇಳುವಂತೆ ಬೊಬ್ಬೆ ಹೊಡೆಯುತ್ತಿದ್ದರೆಂಬ ಅಂಶವನ್ನು ಬೆಳಕಿಗೆ ತರುತ್ತವೆ. ಕನ್ನಡದಲ್ಲಿ **ಪುಯ್ಯಲ್** (ಹೊಯ್ಲು) ಎಂಬ ಇನ್ನೊಂದು ಶಬ್ದ ಪ್ರಾಚೀನದಿಂದ ಪ್ರಯೋಗದಲ್ಲಿದೆ. ''ಪುಯ್ಯಲಿಡು'' ಪದ ಪಂಪ ಭಾರತದಲ್ಲೇ ಕಾಣಿಸುತ್ತದೆ. ಪುಯ್ಯಲು ರಾಜಾಸ್ಥಾನದಲ್ಲಿ ಇರಬಹುದು, ದೇವಸ್ಥಾನದಲ್ಲಿರಬಹುದು. ಧರ್ಮಸ್ಥಳಕ್ಕೆ **ಹೊಯ್ಲು ಕೊಡುವುದು** ಇಂದಿಗೂ ಇದೆ. ಸಾರ್ವಜನಿಕ ಅಭಿಪ್ರಾಯವೇ ಆಗಲೂ ನ್ಯಾಯದ ಗ್ಯಾರಂಟಿ ಆಗಿತ್ತು.

ಎಲೆ – ಅಡಿಕೆಯೊಡನೆ ತಂಬಾಕು ತಿನ್ನುವ ಚಟವುಳ್ಳವರಿಗೆ **ಜರದಾದ** ಪರಿಚಯ ಇದೆ. ಅದು ವಿಶಿಷ್ಟ ತಂಬಾಕಿನ ಪುಡಿ. ಇದೂ ಪಾರಸೀಕ ಪದ. **ಜರ್ದ್** ಎಂದರೆ ಹಳದಿ ಬಣ್ಣ (ಜರ್=ಚಿನ್ನ). ಈ ಜರ್ದಾ ತಂಬಾಕಿನ ಬಣ್ಣವೂ ಹಳದಿ.

**ಸುರಂಗ** ಮಾರ್ಗದ ಸಮಾಚಾರ ನಮ್ಮ ಅನೇಕ ಐತಿಹಾಸಿಕ ಕಾದಂಬರಿಗಳಲ್ಲಿ ಬರುತ್ತದೆ. ನೆಲದಡಿಯಲ್ಲಿ ಕೊರೆವ ಗುಪ್ತ ಮಾರ್ಗ ಸುರಂಗ ಎನಿಸುತ್ತದೆ. ಸುರಂಗ ಹೊಡೆಯುವುದು, ಕೊರೆಯುವುದು ಕಳವಿಗಾಗಿ ಕನ್ನ ಹೊಡೆಯುವುದಕ್ಕೂ ಸಲ್ಲುತ್ತದೆ. ಸಂಸ್ಕೃತದಲ್ಲಿ **ಸುರಂಗಾಹಿ, ಸುರುಂಗಾಹಿ** ಎಂದರೆ ಬಿಲದೊಳಗಿನ ಹಾವು (**ಸುರುಂಗ** ಎಂಬ ರೂಪವೂ ಇದೆ). ಇದು ಸಂಸ್ಕೃತದ ಪ್ರಸಿದ್ಧ ರಾಜಕೀಯ ನಾಟಕವಾದ ''ಮುದ್ರಾರಾಕ್ಷಸ''ದಲ್ಲಿ, ''ಕಥಾಸರಿತ್ಸಾಗರ''ದಲ್ಲಿ, ''ದಿವ್ಯಾವದಾನ''ದಲ್ಲಿ ಕಾಣಿಸಿ ಕೊಳ್ಳುತ್ತದೆ. ಇವುಗಳಲ್ಲಿ ಅತಿ ಹಳೆಯದಾದ ''ಮುದ್ರಾರಾಕ್ಷಸ'' ಸುಮಾರು ೫ನೇ ಶತಮಾನದ್ದು. ಅದಕ್ಕಿಂತ ಹಳೇ ಪ್ರಯೋಗಗಳಿಲ್ಲ. ಆದ್ದರಿಂದ ಇದರ ಮೂಲವನ್ನು ಹೊರಗೆ ಅರಸಿದರೆ ತಪ್ಪಾಗದು. ಇಂಗ್ಲೀಷಿನ Syrinx, Surinx ಎಂಬುದು ಯಾವುದೇ ನಳಿಗೆ, ಭೂಗತ ಮಾರ್ಗ ಎಂದರ್ಥ ಕೊಡುತ್ತದೆ. ಅದಕ್ಕೆ ಗ್ರೀಕ್ Syrinx, Syringos ಮೂಲವೆಂದು ಇಂಗ್ಲೀಷ್ ಕೋಶಗಳು ಹೇಳುತ್ತವೆ. ಭಾರತ ಗ್ರೀಕರಿಂದಲೇ ಸುರಂಗವನ್ನು ಪಡೆದಂತೆ ಕಾಣುತ್ತದೆ. ಅಂದ ಹಾಗೆ ಇಂಜಕ್ಷನ್ ಚುಚ್ಚುವ **ಸಿರಿಂಜ್** (ಇಂಗ್ಲೀಷ್) ಕೂಡ ಈ ಗ್ರೀಕ್ ಪದದ ದಾನವೇ.

ಈ ಶಬ್ದದಿಂದಲೇ ಸಂಸ್ಕೃತಕ್ಕೆ ಬಂದ ಹಾಗೆ ಕಾಣುವ ಇನ್ನೊಂದು ಪದ **ಶೃಂಗಕ.** ''ಶೃಂಗಕ'' ಎಂದರೆ ಜೀಕುಳಿ, ಪಿಚಕಾರಿ. ಹೋಳೀ ಹಬ್ಬದಲ್ಲಿ ಓಕುಳಿ ನೀರು ಎರಚುವುದಕ್ಕೆ ಶೃಂಗಕಗಳನ್ನು ಬಳಸುವ ಸುದ್ದಿ ಹರ್ಷನ ''ರತ್ನಾವಳಿ'' ನಾಟಕದಲ್ಲಿ ಬರುತ್ತದೆ. ಸಂಗೀತರತ್ನಾಕರದಲ್ಲಿ ಒಂದು ಬಗೆಯ ಕೊಳಲಿಗೂ ಈ ಹೆಸರನ್ನು ಕೊಟ್ಟಿದೆ. **ಶೃಂಗ** ಎಂದರೆ ಕೊಂಬು, ಕೋಡು. ಅದರ ಒಳಭಾಗ ಟೊಳ್ಳಾಗಿದ್ದು, ಜೀಕಳಿ ಕೂಡ ಒಳಗೆ ಟೊಳ್ಳಾದ ಕೋಡನ್ನೇ ಹೋಲುವುದರಿಂದ ''ಶೃಂಗಕ''ವನ್ನು ''ಶೃಂಗ''ಕ್ಕೆ ತಗಲಿಸಲು ಸಾಧ್ಯವಿಲ್ಲದಿಲ್ಲ. ಆದರೆ ಸಾಹಿತ್ಯದಲ್ಲಿ ಇದರ ಪ್ರಯೋಗ ಈ ಅರ್ಥದಲ್ಲಿ ತಡವಾಗಿ (ಕ್ರಿಸ್ತಶಕ ೭ನೇ ಶತಮಾನ) ಬರುವುದರಿಂದ ಅದರ ಮೂಲ ಸಂದಿಗ್ಧವಾಗುತ್ತದೆ. ಈ ತರ್ಕಕ್ಕೆ ಎದುರಾಗಿ, **ಶೃಂಗಕೋಶವನ್ನು** ದ್ರವಪದಾರ್ಥಗಳನ್ನು ತುಂಬಿಡಲು ಉಪಯೋಗಿಸು ತ್ತಿದ್ದರೆಂಬ ಸಂಗತಿ ಸಾಮವೇದ ಬ್ರಾಹ್ಮಣದಲ್ಲಿ ಕಾಣಬಹುದೆಂಬ ಅಂಶವನ್ನು ಒಡ್ಡಲು ಸಾಧ್ಯವಿದೆ (ಮೋನಿಯರ್ ವಿಲಿಯಂಸ್ ಕೋಶ).

ಅದು ಹೇಗೇ ಇರಲಿ, ಶೃಂಗದ ಸುದ್ದಿ ಮಾತಾಡುವಾಗ ಒಂದು ಕುತೂಹಲಕರ ವಿಷಯವನ್ನು ನಿರ್ದೇಶಿಸಬೇಕೆನಿಸುತ್ತದೆ. ಇಂಗ್ಲೀಷಿನ ಪರಿಚಯ ಸಾಧಾರಣವಾಗಿ

ಇರುವವರೂ taking by the horns (ಕೋಡುಗಳಿಂದ – ಒಂದು ಪ್ರಾಣಿಯನ್ನು – ಹಿಡಿದುಕೊಳ್ಳುವುದು) ಎಂಬ ಅಲಂಕಾರಾತ್ಮಕ ನುಡಿಕಟ್ಟು ಕೇಳಿರಬೇಕು. ಯಾವುದೊಂದು ಸಮಸ್ಯೆ ಅಥವಾ ವಾದವನ್ನು ನೇರವಾಗಿ ಎದುರಿಸಿ ಹಿಡಿತಕ್ಕೆ ತರುವುದು ಎಂಬರ್ಥದಲ್ಲಿ ಈ ನುಡಿಕಟ್ಟನ್ನು ಉಪಯೋಗಿಸುತ್ತಾರೆ. ಇದು ಬಹುಶಃ ಹೋರಿಕಾಳಗ (bull fighting) ದಿಂದ ಉದ್ಭವಿಸಿದ ಮಾತು; ಅದರಲ್ಲಿ ಹೋರಿಯೊಡನೆ ಹೋರಾಡುವವನು ಅದನ್ನು ಬಗ್ಗಿಸಲು ಅದರ ಕೋಡುಗಳನ್ನು ಹಿಡಿದುಕೊಳ್ಳುವ ಸಾಹಸ ಮಾಡುತ್ತಾನೆ. ಇಂಗ್ಲೀಷಿನ ಈ ನುಡಿಕಟ್ಟನ್ನೇ ಅಪ್ಪಟ ಹೋಲುವ **ಶೃಂಗಗ್ರಾಹಿಕಾ** (ಕೋಡುಗಳನ್ನು ಹಿಡಿದುಕೊಳ್ಳುವ) ಎಂಬ ನುಡಿಕಟ್ಟು ಸಂಸ್ಕೃತದಲ್ಲಿರುವುದು ಆಶ್ಚರ್ಯ. ತರ್ಕಶಾಸ್ತ್ರ ಪರಿಭಾಷೆಯಲ್ಲಿ ಇದು ಒಂದು ಪ್ರಶ್ನೆಯ ಎಲ್ಲ ಅಂಶಗಳನ್ನು ನೇರವಾಗಿ ಎದುರಿಸುವುದನ್ನು ಸೂಚಿಸುತ್ತದೆ. ನೂರಾರು ವರ್ಷಗಳ ಮತ್ತು ಸಾವಿರಾರು ಗಾವುದಗಳ ಅವಧಿಯ ಆಚೀಚೆಗಿನ ಮನುಷ್ಯನು ಒಂದೇ ತರಹದಲ್ಲಿ ಆಲೋಚಿಸುವುದು, ಭಾವವನ್ನು ಪ್ರಕಟಿಸುವುದು ಮಾನವ ಕುಲದ ಮಿದುಳಿನ ಏಕರೂಪ ರಚನೆಯ ದ್ಯೋತಕವಲ್ಲವೆ ?

ಪರಭಾಷೆಯ ಪದಗಳನ್ನು ಸ್ವೀಕರಿಸುವಾಗ ಕೆಲವೊಮ್ಮೆ ನಮ್ಮ ನಾಲಗೆಗೆ ಸರಿಯಾಗಿ ಅವುಗಳನ್ನು ಬದಲಿಸಿಕೊಳ್ಳುವುದುಂಟು. ಮುಸ್ಲಿಂ ಕಾಲದಲ್ಲಿ ನಮ್ಮ ಕವಿಗಳು ಮುಸ್ಲಿಂ ದೊರೆಗಳಿಗೆ **ಸುರತ್ರಾಣ** ಎಂಬ ಅಭಿಧಾನವಿತ್ತರು. ಉದಾಹರಣೆಗೆ ಕನಕದಾಸನ ''ಮೋಹನ ತರಂಗಿಣಿ''ಯಲ್ಲಿ ಈ ಶಬ್ದ ಬರುತ್ತವೆ. ಹಳೇ ನಿಘಂಟುಗಳ ಪ್ರಕಾರ ''ಸುರತ್ರಾಣ'' ಎಂದರೆ ದೇವತೆಗಳನ್ನು ಕಾಪಾಡುವವ – ವಿಷ್ಣು. ಆದರೆ ಈ ಸುರತ್ರಾಣರು ಸಂಸ್ಕೃತೀಕೃತ **ಸುಲ್ತಾನ**ರೆಂದು ತಿಳಿದು ಕಚಕುಳಿ ಇಟ್ಟಂತಾಗುತ್ತದೆ.

## ೧೦೨

**ಬೀಡಾ** ಮತ್ತು **ಬೀಡಿ** ಈಗಿನ ಕಾಲದಲ್ಲಿ ಒಂದೇ ಅಂಗಡಿಯಲ್ಲಿ ಮಾರುವುದರಿಂದ ಅವು ಎಲ್ಲರಿಗೂ ಗೊತ್ತು. ಮೊದಲನೆಯದು ಪ್ರಾಚೀನ. ಹದಿನಾರನೇ ಶತಮಾನದ ಕೊನೆಯಲ್ಲಿ ಅಕಬರನ ಆಸ್ಥಾನ ಕವಿ ಅಬುಲ್ ಫಜಲ್ ''ಬೇಡಾ'' ಎಂದು ಅದನ್ನು ಉಲ್ಲೇಖಿಸುತ್ತಾನೆ. ಅದರ ಅರ್ಥ **ವೀಳ್ಯದೆಲೆ**ಯನ್ನು ಅಡಿಕೆ, ಸುಣ್ಣ ಮೊದಲಾದ ಸಂಭಾರದೊಡನೆ **ಸುತ್ತಿ ಕಟ್ಟಿ** ತಿನ್ನಲು ಅಣಿ ಮಾಡಿಟ್ಟದ್ದು. ಸಂಸ್ಕೃತದ **ವೀಟಿ**, ಕನ್ನಡದ **ವೀಳ್ಯ**, ಬಂಗಾಲಿ **ಬಿಡಾ** (ಬಿರಾ ಎಂದು ಉಚ್ಚಾರ), ಹಿಂದೀ ಬೀಡಾ ಇವೆಲ್ಲ ಒಂದೇ. ಸಾಂಸ್ಕೃತಿಕವಾಗಿ **ಬೀಡಾ, ವೀಳ್ಯ** ಭಾರತದಲ್ಲಿ ಅಸಾಧಾರಣ ಮಹತ್ವ ಹೊಂದಿದೆ. ಬೀಡಾ ಅದಲು-ಬದಲು ಮಾಡಿಕೊಳ್ಳುವುದು ಸ್ನೇಹವನ್ನು ಸ್ಥಿರಪಡಿಸಿಕೊಳ್ಳುವ ಸಂಕೇತ; **ವೀಳ್ಯ ತೆಗೆದುಕೊಳ್ಳುವುದು** ಅಥವಾ (ಹಿಂದಿಯಲ್ಲಿ) **ಬೀಡಾ ಎತ್ತು**ವುದು (ಬೀಡಾ ಉಠಾನಾ) ಯಾವುದಾದರೊಂದು ಕಷ್ಟಕರ ಕೆಲಸವನ್ನು ಸಾಧಿಸಿಕೊಡುವುದಾಗಿ ಆಶ್ರಿತನು ಆಶ್ರಯ ಕೊಟ್ಟವನ ಮುಂದೆ ಪಣತೊಡುವುದು. ಸಕಲ ಮಂಗಲ ಕಾರ್ಯಗಳಲ್ಲಿ ವೀಳ್ಯ ಅನಿವಾರ್ಯ. ಇಡೀ ದಕ್ಷಿಣ, ಆಗ್ನೇಯ ಏಶಿಯಾದಲ್ಲಿ ಅದರ ವ್ಯಾಪ್ತಿ ಇದೆ.

ಬೀಡಿ ಎಂದರೆ ತಂಬಾಕಿನ ಪುಡಿಯನ್ನು ಒಳಗಿಟ್ಟು ಎಲೆಯಲ್ಲಿ **ಸುತ್ತಿ ಕಟ್ಟಿದ** ಚಿಕ್ಕ

**ಹೊಗೆಬತ್ತಿ**. ಭಾರತದ ಬೀಡಿಗಳು ಅರ್ಧ ಭೂಮಂಡಲದಲ್ಲಿ ಪ್ರಭುತ್ವ ಸ್ಥಾಪಿಸಿವೆ. ಅದರದು ಇಂದು ಕೋಟಿಗಳಲ್ಲಿ ವ್ಯವಹಾರ.

ಆದರೆ ಈ ಶಬ್ದಗಳು ಎಲ್ಲಿಂದ ಬಂದವು? **ಬೀಡಾ** ಸಂಸ್ಕೃತದ **ವೀಟ**ಯಿಂದ ಬಂದದ್ದೆಂದು ವ್ಯುತ್ಪತ್ತಿ ಹೇಳಲಾಗುತ್ತದೆ. **ವೀಳೆಯ** ಎಂಬುದೂ ಬೀಡಾದ್ದೇ ರೂಪ ಎಂಬಲ್ಲಿ ಸಂಶಯವಿಲ್ಲ. ಆದರೆ ಶಬ್ದದ ಮೂಲ ಅರ್ಥವೇನು? ವೀಳ್ಯದೆಲೆಗೇ ಅದು ಇನ್ನೊಂದು ಹೆಸರಾಗಿರಲಿಕ್ಕಿಲ್ಲ. ಸಂಸ್ಕೃತದ ''ವೀಟ'' ಶಬ್ದಕ್ಕೆ ತೃಪ್ತಿಕರ ನಿಷ್ಪತ್ತಿ ಸಂಸ್ಕೃತದಲ್ಲಿ ಇಲ್ಲ. ಇಲ್ಲಿ ನಮಗೆ ಬಂಗಾಲಿ ಕೋಶಗಳು ನೆರವಿಗೆ ಬರುತ್ತವೆ. ಅಲ್ಲಿ **ಬಿಡಾ** ಶಬ್ದಕ್ಕೆ ತಲೆ ಹೊರೆ ನೆತ್ತಿಗೆ ಅಣೆಯದಂತೆ ಹುಲ್ಲು ಅಥವಾ ಬಟ್ಟೆಯನ್ನು **ಸುತ್ತಿ** ತಲೆಗಿಟ್ಟುಕೊಳ್ಳುವ **ಸಿಂಬಿ** ಎಂದೂ, **ವೀಳ್ಯದ** ಪಟ್ಟಿಯೆಂದೂ ಎರಡು ಅರ್ಥಗಳಿವೆ. ಹೀಗೆ ''ಬೀಡಾ'' ಎಂದರೆ ಎಲೆಯಲ್ಲಿ ಸುರುಳಿ ಸುತ್ತಿದ್ದು ಎಂದೇ ಪ್ರಾಥಮಿಕಾರ್ಥವಿರಬೇಕು. ಬೀಡಾ ಎಂದರೆ ಅದೇ ಅಲ್ಲವೆ? ಬೀಡಿ ಶಬ್ದ ಈ ತರ್ಕಕ್ಕೆ ಬೆಂಬಲವೀಯುತ್ತದೆ. ''ಬೀಡಿ'' ಎಂದರೆ ಕೂಡ ಸುರುಳಿ ಸುತ್ತಿದ ಎಲೆಯೇ. ಮಲೆಯಾಳದಲ್ಲಿ ಹೊಗೆಬತ್ತಿ **ಚುರುಟ್** ಎನಿಸುತ್ತದೆ. ಶಬ್ದದ ಅರ್ಥ ಕೂಡ **ಸುರುಳಿ** ಎಂದೇ. **ಬೀಡಾ** ಶಬ್ದಕ್ಕೆ ಇದಲ್ಲದೆ ೪ × ೨೦ ಅಥವಾ ೨೪ ಅಥವಾ ೩೬ ಎಲೆಗಳ ಸೂಡು ಎಂಬರ್ಥವಿತ್ತೆಂದು ಕೂಡ ವೀಳ್ಯಕ್ಕೆ ಸಂಬಂಧಿಸಿದ ಲೇಖನಗಳಲ್ಲಿ (Ocean of Story VIII, 272) ಕಾಣಿಸುತ್ತದೆ.

ಇದು ಯಾವ ಭಾಷೆಯ ಶಬ್ದ ಎಂಬುದಕ್ಕೆ ನನಗಿನ್ನೂ ಉತ್ತರ ಸಿಕ್ಕಿಲ್ಲ. ಭಾರತದ ಅನೇಕ ಖಾದ್ಯ ಸಸ್ಯಗಳಂತೆ ವೀಳ್ಯದೆಲೆ ಕೂಡ ಆಸ್ಟ್ರೋ-ಏಶಿಯನ್ ಭಾಷಾ ಪ್ರದೇಶದ್ದೆಂದು ಸಸ್ಯಶಾಸ್ತ್ರಜ್ಞರ ಮತ. ಆದ್ದರಿಂದ **ಬೀಡಾ**, **ಬೀಡಿ** ಕೂಡ ಮೂಲದಲ್ಲಿ ಅದೇ ಭಾಷೆಯದಾಗಿರಬಹುದು.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ, ಯಾವುದೇ ಚರ್ಚೆಯಲ್ಲಿ ನೀವು ''ಅಲ್ಲ'' ಎಂಬ ನಿರಾಕರಣೆಯ ಮಾತು ಆಡಿದರೆ ಎದುರುವಾದಿ ''ಅಲ್ಲಾ ಪಳ್ಳಿಯಲ್ಲಿದ್ದಾನೆ'' ಎಂಬ ಲೇವಡಿ ನುಡಿಯಿಂದ ನಿಮ್ಮ ಬಾಯಿ ಮುಚ್ಚಿಸಲು ಯತ್ನಿಸಬಹುದು. **ಪಳ್ಳಿ** ಎಂದರೆ ಆ ಪ್ರದೇಶದಲ್ಲಿ **ಮಸೀದಿ**. ಮಲೆಯಾಳಿಯಲ್ಲಿ ಕೂಡ **ಪಳ್ಳಿ** ಎಂದರೆ ಮುಸಲ್ಮಾನರ **ಮಸೀದಿ** ಅಥವಾ **ವಿದೇಶಿ ಧರ್ಮಗಳ ದೇವಾಲಯ**. ಹೆಚ್ಚು ಕಡಿಮೆ ಭಾರತದಲ್ಲೆಲ್ಲ **ಪಲ್ಲಿ** ಅಥವಾ **ಪಳ್ಳಿ**, **ಹಳ್ಳಿ** (ಕನ್ನಡ) ಎಂದರೆ **ಕುಗ್ರಾಮ**, **ಕೀಳು ಜಾತಿಯವರ ಬೀಡು** ಇತ್ಯಾದಿ ಅರ್ಥಗಳಿವೆ. ತಮಿಳು ಆದಿಯಾಗಿ ದ್ರಾವಿಡ ಭಾಷೆಗಳಲ್ಲಿ ಕೂಡ ''ಪಳ್ಳಿ'' ಶಬ್ದಕ್ಕೆ ಆ ಅರ್ಥ ಇದೆ. ಹಾಗಾದರೆ ಮಲೆಯಾಳಿ, ತುಳು ಮತ್ತು ದಕ್ಷಿಣ ಕನ್ನಡದ ಪ್ರಾದೇಶಿಕ ಕನ್ನಡದಲ್ಲಿ ಮುಸಲ್ಮಾನರ ಪರಮಾತ್ಮನಾದ ಅಲ್ಲಾನ ಪ್ರಾರ್ಥನಾಲಯ ಹೇಗೆ ಪಳ್ಳಿ ಆಯಿತು?

ಹುಡುಕುತ್ತ ಹಿಂದೆ ಹೋಗಿ ಪ್ರಾಚೀನ ತಮಿಳು ಸಾಹಿತ್ಯಕ್ಕೆ ತಲಪಿದರೆ, ನಮಗೆ ಬೆಳಕು ಕಾಣಿಸುತ್ತದೆ. ಆ ಸಾಹಿತ್ಯ ಮತ್ತು ತಮಿಳು ನಾಡಿನ ಪ್ರಾಚೀನ ಬ್ರಾಹ್ಮೀಲಿಪಿಯ ಶಾಸನಗಳಲ್ಲಿ **ಪಾಳಿ** ಶಬ್ದವನ್ನು ಜೈನ ಮುನಿಗಳ ವಿಶ್ರಾಂತಿಗಾಗಿ ಕಟೆದ ಗುಹೆ, ಅಥವಾ (ಕಲ್ಲಿನ) **ಮಂಚ** ಎಂಬರ್ಥದಲ್ಲಿ ಮೊದಲು ಬಳಸಿದ್ದಾಗಿ ಕಾಣುತ್ತದೆ. ಅನಂತರ ಜೈನ ಮತ್ತು ಬಹುಶಃ ಬೌದ್ಧ ಭಿಕ್ಷುಗಳು ಸೇರುವ ಕಟ್ಟಡ (ಮುನಿವರ್ ವಾಸಂ) ಅರ್ಥಾತ್ ಮಠ ಎಂದು ಆ ಪದ ಅರ್ಥ ವಿಸ್ತರಣೆ ಕಂಡಿತು. ಕಡೆಗೆ ಈ ಮತಗಳ ದೇವಾಲಯಗಳೂ ''**ಪಳ್ಳಿ**'' ಗಳೆನಿಸಿದವು. ಕ್ರಿ.ಶ.ಸು. ಏಳನೇ ಶತಮಾನದಲ್ಲಿ ತಿರುಜ್ಞಾನ ಸಂಬಂಧರ್ ಎಂಬ ಶೈವ ಮುನಿಗಳು ಮಧುರೆಯಲ್ಲಿ

ಜೈನ ಮುನಿಗಳನ್ನು ವಾದದಲ್ಲಿ ಸೋಲಿಸಿದ ನಂತರ ಮುನಿಗಳ ಪಾಳಿ (ಮಠ)ಗಳನ್ನೂ, ಅವರ ಅರ್ಹಂತರ ಪಳ್ಳಿ (ಬಸ್ತಿ-ದೇವಾಲಯ)ಗಳನ್ನೂ ನಾಶ ಮಾಡಿ ಅವರನ್ನು ಉಚ್ಚಾಟಿಸಲಾಯಿತು ಎಂದು ತಮಿಳು "ಪೆರಿಯ ಪುರಾಣ" (ಮಹಾಪುರಾಣ)ದಲ್ಲಿ ದಾಖಲೆ ಇದೆ. ಇದರೊಡನೆ ತಮಿಳು ದೇಶದಲ್ಲಿ ಜೈನ-ಬೌದ್ಧರ (ಅವರು ತಮಿಳು ಸಾಹಿತ್ಯಕ್ಕೂ ಮೂಲಪುರುಷರಾಗಿದ್ದರು) ನಿಷ್ಕಾಸನವಾಗಿ, ಶೈವ ಮತ್ತು ವೈಷ್ಣವ ಧರ್ಮಗಳು ಪ್ರತಿಷ್ಠಾಪನೆ ಹೊಂದಿದವು. ಆ ನಂತರ ಕೂಡ ಹಿಂದೂ ಸಂಪ್ರದಾಯಕ್ಕೆ ವ್ಯತಿರಿಕ್ತರಾದ ಅವರ ಮಠ-ದೇವಾಲಯಗಳಿಗೆ ಆ ಹಳೇ ಹೆಸರುಗಳೇ ನಿಂತವು. ಕೆಲ ಶತಮಾನಗಳ ನಂತರ ಪಶ್ಚಿಮ ಕರಾವಳಿಯಲ್ಲಿ ಅರಬ ವ್ಯಾಪಾರಿಗಳ ಆಗಮನ ಮತ್ತು ಅವರ ಧರ್ಮಪ್ರಚಾರ ಆಗಿ ಅವರು ಮಸೀದಿಗಳನ್ನು ಸ್ಥಾಪಿಸಿಕೊಂಡಾಗ ಅವರ ಪ್ರಾರ್ಥನಾಲಯಗಳಿಗೆ ವಿಧರ್ಮಿಗಳಾದ ಜೈನ ಬೌದ್ಧರ ದೇವಾಲಯಗಳಿಗಿದ್ದ ಹೆಸರನ್ನೇ ಅನ್ವಯಿಸಲಾಯಿತು. ಇದು ಅಲ್ಲಾನು ಪಳ್ಳಿಯಲ್ಲಿರುವ ಮಾತಿನ ಮೂಲ.

**ಪಳ್ಳಿ, ಪಾಳಿ** ದ್ರಾವಿಡ ಶಬ್ದಗಳಾಗಿರಲಿಕ್ಕಿಲ್ಲ; ಉತ್ತರ ಭಾರತದ **ಪಾಲಿ, ಪಲ್ಲಿ** ಎಂಬ ಪ್ರಾಕೃತ ಶಬ್ದಗಳಿಂದ ಎರವಲು ತಂದವುಗಳಿರಬೇಕು. ಪಾಲಿ ಭಾಷೆ ಬೌದ್ಧ ಧಾರ್ಮಿಕ ಸಾಹಿತ್ಯದ (ಪ್ರಾಕೃತ) ಭಾಷೆ ಎಂಬುದನ್ನು ಇಲ್ಲಿ ನೆನೆಯಬಹುದು. "ಪಾಲಿ" ಸಾಹಿತ್ಯದ ಸಂಬಂಧದಿಂದ ಬೌದ್ಧರ ಮತ್ತು ಅನಂತರ ಜೈನರ ನಿವಾಸಕ್ಕೆ **ಪಾಳಿ** ಎಂಬ ಹೆಸರು ತಗಲಿರಬಹುದು. ಸಾಂಪ್ರದಾಯಿಕ ಹಿಂದೂ ಸಾಹಿತ್ಯದಲ್ಲಿ ಬೌದ್ಧ-ಜೈನರ ಬಗ್ಗೆ ತುಂಬಾ ಗೊಂದಲ ಇದೆ. ಉದಾಹರಣೆಗೆ "ಬತ್ತಲೆ ನಿಂತಿದ್ದ ಬುದ್ಧನಿಗೆ" ಎಂಬ ದಾಸರ ಮಂಗಲ ಪದ. ಬುದ್ಧ ಬತ್ತಲೆ ನಿಂತಿರಲಿಲ್ಲ; ಅದು ಜೈನರ ಸಂಪ್ರದಾಯ ಎಂದು ಆಗ ಹಿಂದೂಗಳಿಗೆ ಸರಿಯಾಗಿ ತಿಳಿದಿರಲಿಲ್ಲ.

### ೧೦೩

ಈಚೆಗೇನೋ ಗ್ರಾಮೀಣ ಕಲೆಗಳ ಬಗ್ಗೆ ಸುಸಂಸ್ಕೃತರಲ್ಲಿ ಹೊಸದೊಂದು ಉತ್ಸಾಹ ಕಾಣಿಸತೊಡಗಿದ್ದರೂ ಇತಿಹಾಸದುದ್ದಕ್ಕೂ ನಗರವಾಸಿಗಳಲ್ಲಿ ಗ್ರಾಮಗಳ ಬಗ್ಗೆ ಇದ್ದದ್ದು ಒಂದು ತುಚ್ಛೀಕಾರವೇ. ಇದು ನಮ್ಮ ದೇಶಕ್ಕೆ ಸೀಮಿತವಾದದ್ದಲ್ಲ; "ವಿಶ್ವವ್ಯಾಪಿ" ಎನ್ನಿಸುವ ಮನೋಭಾವ. ಸಂಸ್ಕೃತಕ್ಕೆ ಹೋದರೆ ಅಲ್ಲಿ ನಿಮಗೆ **ಗ್ರಾಮ್ಯ** (ಗ್ರಾಮ ಅಥವಾ ಹಳ್ಳಿಯದು) ಎದುರಾಗುತ್ತದೆ. ಸಂಸ್ಕಾರವಿಲ್ಲದ, ಒರಟು ಮಾತು, ಅಶ್ಲೀಲ ಭಾಷೆ ಗ್ರಾಮ್ಯವೆನಿಸುತ್ತದೆ. ಗ್ರಾಮವಾಸಿ ಮತ್ತು ಮಂದ ಬುದ್ಧಿಯವ **ಗಾವಿಲ** (= ಗ್ರಾಮಿಲ)ನೆಂದು ಹೆಸರಿಸಲ್ಪಡುತ್ತಾನೆ. ಸಂಸ್ಕೃತ ಹನುಮನ್ನಾಟಕಕರ್ತನು ಸ್ವರ್ಗವನ್ನು ತುಚ್ಛವೆಂದು ಬಗೆಯುವ ವಿಶ್ವವಿಜಯಿ ರಾವಣನ ಬಾಯಲ್ಲಿ ಅದನ್ನು "**ಸ್ವರ್ಗಗ್ರಾಮಟಿಕಾ**" ಎಂದು ಕರೆಸಿದ್ದಾನೆ. ಈ "ಗ್ರಾಮಟಿ"ಯೇ **ಗಾಂವಠಿ**ಯಾಗಿ ದಿನ ಬಳಕೆಯ ಮಾತಿನಲ್ಲಿ "ಗಾಂವಠಿ ಸಾಮಾನು" ಇತ್ಯಾದಿಯಾಗಿ ನಾಜೂಕಿಲ್ಲದ ಪದಾರ್ಥಗಳಿಗೆ ಅನ್ವಯಿಸಲ್ಪಟ್ಟಿದೆ. ಹಳೆಗಾಲದಲ್ಲಿ ಗಾವಿಲನಾಗಿದ್ದವನು ಈಗ **ಗಮಾರ** (ಪ್ರಾಕೃತ-ಗಾಮಾರ) ನಾಗಿ ಹಿಂದಿಯ ಮೂಲಕ ಮತ್ತೆ ಬಂದಿದ್ದಾನೆ.

ಹಿಮಾಲಯ ದಾಟಿ ಇರಾಣಕ್ಕೆ ಹೋದರೆ ನಮಗೆ **ದೇಹಾತೀ** ಸಿಗುತ್ತಾನೆ. ಆಧುನಿಕ

ಪಾರಸೀಕ ಭಾಷೆಯಲ್ಲಿ **ದಿಹ್** ಎಂದರೆ ಹಳ್ಳಿ, **ದೇಹಾತ್** ಎಂದರೆ ಹಳ್ಳಿಗ. ಅಲ್ಲಿಯೂ ಅವನು ಹೆಡ್ಡನೇ. ಈ ಶಬ್ದ ಹಿಂದಿಗೂ ಬಂದಿದೆ.

ಇಂಗ್ಲೀಷಿಗೆ ಹೋದರೆ ನಮ್ಮ **ಕಂತ್ರಿಯ** ಜನಕ **ಕಂಟ್ರಿ** (Country) ಸಿಗುತ್ತದೆ. ಅಲ್ಲಿ ಕಂಟ್ರಿ ಎಂದರೆ **ದೇಶ, ನಾಡು.** ಕಂಟ್ರಿ ಎಂಬುದಕ್ಕೆ ಅಲ್ಲಿ ನಮ್ಮ ದೇಶಕ್ಕಿರುವಂತೆ ಮರ್ಯಾದೆ ಇದ್ದರೂ ಅದು ಗುಣವಾಚಕವಾಗಿ ಬಂದಾಗ ''ಗಾಂವಠಿ''ಯ ಅರ್ಥವನ್ನೇ ಕೊಡುತ್ತದೆ. ಅಂದರೆ ನಾಜೂಕಿಲ್ಲದ್ದು, ಅಭಿಜಾತವಲ್ಲದ್ದು. ನಮ್ಮ ಕಂತ್ರಿ ಈ ಅರ್ಥದ ಕಂಟ್ರಿಯಿಂದ ಹುಟ್ಟಿದ್ದು. ಆದ್ದರಿಂದ ನಮ್ಮ **ಕಂತ್ರಿ ನಾಯಿ, ಕಂತ್ರಿ ಸಾಮಾನು** ಇತ್ಯಾದಿಗಳು ಉತ್ತಮ ಜಾತಿಯದಲ್ಲದ್ದು, ಒರಟು, ನಯವಲ್ಲದ್ದು ಎಂಬರ್ಥಗಳನ್ನು ಸೂಸುತ್ತಿದ್ದರೆ, ಅದಕ್ಕೂ ಒಂದು ಹೆಜ್ಜೆ ಮುಂದೆ ಹೋಗಿ **ಕಂತ್ರಿ ಮನುಷ್ಯನಲ್ಲಿ** ಅಪ್ರಮಾಣಿಕ, ಕಪಟಿ, ನಂಬಲನರ್ಹ ಇತ್ಯಾದಿ ಅರ್ಥಗಳಿಗೂ ಅವಕಾಶ ಕೊಟ್ಟಿದೆ. ಇಂಗ್ಲೀಷಿನಲ್ಲಿ **ರಸ್ಟಿಕ್** (Rustic) ಎಂಬ ಇನ್ನೊಂದು ಇದೇ ಅರ್ಥದ ಶಬ್ದ ಇದೆ. ಲ್ಯಾಟಿನ್ rus ಎಂಬುದು ಗ್ರಾಮಾಂತರ, ಹಳ್ಳಿಗಾಡು ಎಂಬರ್ಥದ ಪದ. ನಮ್ಮ **ದೇಶೀ** ಎಂಬುದು ಕೂಡ ಸರಕುಗಳ ವಿಷಯದಲ್ಲಿ **ವಿಲಾಯತಿಗೆ** (ಈಗ ಫಾರಿನ್ – Foreign) ಯೋಗ್ಯತೆಯಲ್ಲಿ ಸರಿದೂಗುವಂಥದಲ್ಲ ಎಂಬ ಧ್ವನಿಯನ್ನು ಹೊರಡಿಸುತ್ತದೆ. ದೇಶೀ ಔಷಧ, ದೇಶಿ ವೈದ್ಯ ಗೌರವಕ್ಕೆ ಪಾತ್ರವಲ್ಲ. ದೇಶಿಗೆ ಗೌರವ ಬರಲೇಬೇಕಾದರೆ **ಸ್ವ-ದೇಶಿ** ಆಗಬೇಕು. ವಿಲಾಯತಿಯ ವಿರುದ್ಧ ಸ್ವದೇಶಿಗೆ ಮರ್ಯಾದೆ ದೊರಕಿಸಿಕೊಟ್ಟಿದ್ದಕ್ಕೆ ನಾವು ಬಂಗಾಲ ವಿಭಜನಾ ವಿರೋಧಿ ಚಳವಳಿಗೆ ಋಣಿಗಳಾಗಿಬೇಕು.

ಅಂದ ಹಾಗೆ **ವಿಲಾಯತಿ** ಎಂಬುದು ನಮ್ಮಲ್ಲಿ ಹೆಚ್ಚು ಮಟ್ಟಿಗೆ ಇಂಗ್ಲೆಂಡಿಗೆ ಅನ್ವಯಿಸುವುದಾದರೂ ಅರಬ್ಬಿಯಲ್ಲಿ **ವಿಲಾಯತ್** ಅಂದರೆ **ಪರದೇಶ, ದೂರದೇಶ** ಎಂದೇ ಅರ್ಥ. Foreign ಎಂದರೂ ಅದೇ. ಮೂಲ ಲ್ಯಾಟಿನ್ನಿನಲ್ಲಿ ಹೊರಗಿನದು, ಬಾಗಿಲಿನಾಚೆಗಿನದು – ಎಂದು ಅದರ ನಿಷ್ಪತ್ತಿ.

**ಪೇಶವೆಗಳ** ಸಮಾಚಾರ ಭಾರತದ ಇತಿಹಾಸ ಓದಿದವರಿಗೆಲ್ಲ ಗೊತ್ತು. ಮೊದಲು ಮರಾಠಾ ರಾಜರ ಪ್ರಧಾನ ಮಂತ್ರಿಗಳಾಗಿ ಮತ್ತು ಅನಂತರ ಸ್ವತಂತ್ರ ಪ್ರಭುಗಳಾಗಿ ರಾಜ್ಯವಾಳಿದವರು ಅವರು. ಹಿಂದೂ ಸಾಮ್ರಾಜ್ಯ ಸ್ಥಾಪಕರಲ್ಲದಿದ್ದರೂ ಮುಂದೆ ಅದರ ಉತ್ತರಾಧಿಕಾರಿಗಳಾದ ಇವರು ಕುಲೀನರಾದ ಚಿತ್ಪಾವನ ಬ್ರಾಹ್ಮಣರು. ಆದರೆ ಅವರ ಈ ಬಿರುದು, ಇಸ್ಲಾಂ ಧರ್ಮದೊಡನೆ ಆಡಳಿತ ಭಾಷೆಯಾಗಿ ಭಾರತದಲ್ಲಿ ಶತಮಾನಗಳವರೆಗೆ ನೆಲೆಯೂರಿದ ಪಾರಸೀಕ ಭಾಷೆಯದು. **ಪೇಶ್** ಎಂದರೆ **ಮುಂಭಾಗ;** ಹೀಗೆ **ಪೇಶ್‌ವಾ** ಎಂದರೆ ಮುಂಭಾಗದಲ್ಲಿರುವವನು, ಅಗ್ರಣಿ, ಮುಂದಾಳು. ಹಿಂದುಗಳ ರಕ್ಷಣೆಗಾಗಿ ರಾಜ್ಯ ಸ್ಥಾಪಿಸಿದ ಮರಾಠಾ ಅಧಿಪತಿಗಳು ಆಡಳಿತ ಮತ್ತು ತತ್ಸಂಬಂಧಿ ವಿಷಯಗಳಲ್ಲಿ ಮೊಗಲ ಆಡಳಿತದಲ್ಲಿ ಚಲಾವಣೆಗೆ ಬಂದ ವಿದೇಶಿ ಶಬ್ದಗಳನ್ನು ಯಾವ ಮಡಿವಂತಿಕೆ ಇಲ್ಲದೆ ಸ್ವೀಕರಿಸಿದ್ದಕ್ಕೆ ಇದು ಸಾಕ್ಷಿ.

ಉತ್ತರ ಭಾರತ ಮತ್ತು ತುತ್ತತುದಿಯ ದಕ್ಷಿಣ ಭಾರತದಲ್ಲಿ ಬ್ರಾಹ್ಮಣರು ಈ ಪರಧರ್ಮೀಯರ ಸರಕಾರಗಳ ಸೇವೆಯನ್ನು ಬಹಳ ಮಟ್ಟಿಗೆ ವರ್ಜಿಸಿದ್ದರೂ ದಕ್ಖನ್ ಪೀಠಭೂಮಿಯ ಬಹು ಭಾಗದಲ್ಲಿ ಅವುಗಳಿಂದ ದೂರ ಉಳಿಯಲಿಲ್ಲೆಂಬುದು ಅವರ ಅನೇಕ ಕುಲನಾಮಗಳಿಂದ ಸಿದ್ಧವಾಗುತ್ತದೆ. ಉತ್ತರ ಕರ್ನಾಟಕದಲ್ಲೇ ಇಂಥ ಹಲವು

ಹೆಸರುಗಳನ್ನು ಗುರುತಿಸಬಹುದು. ಈ ಶತಮಾನದ ಪ್ರಾರಂಭದಲ್ಲಿ ಪುರಂದರದಾಸರೇ ಮೊದಲಾದ ವೈಷ್ಣವದಾಸರ ದೇವರ ನಾಮಗಳನ್ನು ಸಂಗ್ರಹಿಸಿಕೊಟ್ಟವರು **ಕಲಮದಾನಿ** ನಾರಾಯಣರಾಯರು. **ಕಲಮ್** ಅಂದರೆ ಅರಬ್ಬಿಯಲ್ಲಿ **ಲೇಖನಿ; ದಾನ್** ಅಂದರೆ ಪಾರಸೀಕ ಭಾಷೆಯಲ್ಲಿ **ಧಾನಿ** (ಪೆಟ್ಟಿಗೆ ಅಥವಾ ಡಬ್ಬಿ). ಈ ಮಹನೀಯರ ಪೂರ್ವಜರು ದರ್ಬಾರಿನಲ್ಲಿ ಲೇಖನ ಸಾಮಗ್ರಿಗಳ ರಕ್ಷಕರಾಗಿದ್ದವರು. **ಕದೀಮ ದಿವಾನ್** ಎಂಬ ಇನ್ನೊಂದು ಕುಲದವರು ಯಾವುದೋ (ಬಹುಶಃ ಸವಣೂರು ನವಾಬರ) ಸಂಸ್ಥಾನದಲ್ಲಿ **ಕದೀಮ** (ಹಳೆಯ=ಹಿರಿಯ) **ದಿವಾನ** (ಕಾರ್ಯದರ್ಶಿ, ಮಂತ್ರಿ)ರಾಗಿದ್ದರು. **ಡಬೀರ** ಎಂಬ ಇನ್ನೊಂದು ಬ್ರಾಹ್ಮಣ ಕುಲದವರು **ದಬೀರ** (ಪಾರಸೀಕ-ಲೇಖಕ-ಸಂಸ್ಕೃತ ದಿವಿರ=ಲಿಪಿವರ) ರಾಗಿದ್ದವರು. ಕರ್ನಾಟಕ ವಿಧಾನ ಪರಿಷತ್ತಿನ ಅಧ್ಯಕ್ಷರಾಗಿದ್ದು ಈಗ ಮಂತ್ರಿಗಳಾಗಿರುವ ರಾಮಭಾವು **ಪೋತದಾರರ** ಕುಲನಾಮ ಅವರ ಪೂರ್ವಜರು **ಪೋತಃದಾರ** (ಪಾರಸೀಕ-ಕೋಶಾಧಿಕಾರಿ-ಖಜಾನೆ ಅಧಿಕಾರಿ) ರಾಗಿದ್ದರೆಂದು ತೋರಿಸುತ್ತದೆ. ಇದರದೇ ಇನ್ನೊಂದು ರೂಪ **ಪೋದ್ದಾರ**. ಆ ಹೆಸರಿನ ಒಂದು ಕನ್ನಡ ಬ್ರಾಹ್ಮಣ ಕುಲವೂ ಇದೆ. **ಚಿಟ್ನಿಸ್** ಎಂಬ ಕುಲನಾಮ **ಚಿಟ್-ನವೀಸ್**‌ನ ಸಂಕ್ಷೇಪ. ಇದರಲ್ಲಿ **ಚಿಟ್** ಹಿಂದಿ (ಪತ್ರ) ಯಾದರೂ **ನವೀಸ್** (ಲೇಖಕ) ಪಾರಸೀಕ ಪದ. **ನವೀಸ್** ಹಳೇ ಪಾರಸೀಕ ಭಾಷೆಯ ನಿಪಿಸ್ತದ ತದ್ಭವ. ನಿಪಿಸ್ತ್ – ಅಂದರೆ ಕೊರೆದ ಬರಹ. ಈ **ನವೀಸ್** ಉತ್ತರಪದವಾದ ಅನೇಕ ಅಡ್ಡ ಹೆಸರುಗಳು ಉತ್ತರ ಭಾರತದಲ್ಲಿ ಪ್ರಚಲಿತವಾಗಿವೆ. ಪ್ರಸಿದ್ಧ ಅರ್ಥ-ಶಾಸ್ತ್ರ, ಸಂಖ್ಯಾಶಾಸ್ತ್ರಿ **ಮಹಾಲನೊಬೀಸ್** ಅವರ ಕುಲನಾಮದ ಅರ್ಥ (ಅರಬ್ಬಿ-ಮಹಾಲ್ = ಚಿಕ್ಕಪಟ್ಟಣ – ನವೀಸ್ = ಕರಣಿಕ). **ಹಜಾರ್ ನವೀಸ್** (ಬಹುಶಃ ಸಾವಿರ ಸೈನಿಕರ ತುಕಡಿಯ ಕರಣಿಕ) ಮೊದಲಾದ ಹೆಸರುಗಳು, ಮುಖ್ಯವಾಗಿ ಪೂರ್ವ ಭಾರತದಲ್ಲಿ ಮುಸ್ಲಿಂ ಆಳಿಕೆಯಲ್ಲಿ ಹಿಂದುಗಳ ಸಹಕಾರದ ಕುರುಹುಗಳಾಗಿ ಉಳಿದಿವೆ.

೧೦೪

**ಬಳುವಳಿ**ಯಾಗಿ ಬಂದ ಒಡವೆ ಎನ್ನುವುದರ ಅರ್ಥವೇನೆಂದು ನಮಗೆ ಗೊತ್ತು – ಹಿಂದಿನವರಿಂದ ಮುಂದಿನವರಿಗೆ ಪಾರಂಪರ್ಯದಿಂದ ಬಂದ ಸೊತ್ತು ಬಳುವಳಿ. ಈ ಶಬ್ದದ ಪ್ರಾಚೀನ ರೂಪ <u>ಬೞಿವೞಿ</u>. <u>ಬೞಿ</u> ಎಂದರೆ ಮೂಲತಃ ದಾರಿ, ಮೂಲದ ಅರ್ಥವಿಸ್ತಾರದಿಂದ ಹಿಂದಿನವರ ದಾರಿಯಿಂದ ಮುಂದಿನವರ ಬರವು; ಆದ್ದರಿಂದ ವಂಶ. <u>ಬೞಿಕ</u> (ಆಮೇಲೆ) ಎಂಬ ಪ್ರಚಲಿತ ಶಬ್ದ ಕೂಡ <u>ಬೞಿ</u>ಯದೇ ವಿಕಲ್ಪ. ಒಂದರ ಹಿಂದೆ ಇನ್ನೊಂದು ಬರುವಂಥ ಕಾಲದ ಘಟನೆ. ದಕ್ಷಿಣ ದ್ರಾವಿಡ ಭಾಷೆಗಳಲ್ಲೆಲ್ಲ ಇರುವ ಈ ಪದದ ತಮಿಳು ರೂಪವಾದ <u>ವೞಿ</u>ಗೆ ಅನೇಕ ಅರ್ಥಗಳಿವೆ. ವರ, ದಾನ ಇತ್ಯಾದಿಗಳೂ ಹೆಜ್ಜೆ, ನಡೆ, ಸಂಪ್ರದಾಯ ಇತ್ಯಾದಿ ಅರ್ಥಗಳೂ ತಮಿಳಿನಲ್ಲಿ ಕಾಣಿಸುತ್ತವೆ. ಹೀಗೆ ಬೞಿವೞಿಯೆಂದರೆ ಬೞಿ (ವಂಶ)ಯ ಮೂಲಕ ಬಂದ ಬೞಿ (ದಾಯ, ದಾನ). ಕ್ರಮಾಗತವಾಗಿ ಬಂದ ಧನ. ತವರು ಮನೆಯವರು ಮದುಮಗಳಿಗೆ ಕೊಟ್ಟು ಕಳಿಸುವ ವಸ್ತುಗಳೂ ಬೞಿವೞಿ.

**ಉಂಬಳಿ** ಎಂಬ ಇನ್ನೊಂದು ಶಬ್ದವಿದೆ. ದೇವಸ್ಥಾನದ ಸೇವೆಗಾಗಿ ಬಿಟ್ಟ ಉಂಬಳಿಗಳ

ಸುದ್ದಿ ಕಾಣಿಸುತ್ತದೆ. ಹೆಚ್ಚಾಗಿ ಇಂಥವು ಗದ್ದೆ ಹೊಲ ಮೊದಲಾದ ರೂಪದ ಶಾಶ್ವತವಾಗಿ ಬಿಟ್ಟ ಅರ್ಥಮೂಲವಾಗಿರುತ್ತಿದ್ದವು. ಇದು ಹಳೇ ರೂಪದಲ್ಲಿ **ಉಣ್**+ಬಟಿ. ಉಣ್ಣಲು ಬಿಟ್ಟ ಬಟಿ (ದಾನ ದತ್ತಿ). ವಂಶ ಪಾರಂಪರ್ಯವಾಗಿ ಬಂದ ಸೇವಾವೃತ್ತಿಗೆ ವಂಶಪಾರಂಪರ್ಯವಾಗಿ ಭೋಗಿಸಲು ಬಿಟ್ಟದ್ದು.

ಮಾಸ್ತಿಯವರು ಬಳುವಳಿಯ ಮೂಲವನ್ನು ತಮಿಳು **ವರುಂಬಡಿ** (ಬರುವ ಪಡಿ, ಆದಾಯ) ಎಂದು ಸೂಚಿಸಿದ್ದು ಪ್ರಶ್ನಾರ್ಹವಾಗಿದೆ. ಹಾಗೆಯೆ ಉಂಬಳಿಯನ್ನು ಅವರು ಉಣ್ + ಪಡಿಯೆಂದೇ ವಿಂಗಡಿಸಿದ್ದಾರೆ. **ಬರುವ** ಎನ್ನುವುದನ್ನು ಒಪ್ಪುವುದಕ್ಕೆ ಬಟಿಯ ಟಿಕಾರ ಅಡ್ಡಬರುತ್ತದೆ. **ಪಡಿ**ಯೆಂದರೆ ಅಳೆದು ಕೊಡುವ ದೈನಿಕ ಭತ್ಯ (ದಾನರೂಪದ್ದು). ಪರಂಪರಾಗತ ಅನುಭೋಗದ ಕಲ್ಪನೆ **ಪಡಿ**ಯಲ್ಲಿ ಇಲ್ಲ. **ಪಡಿ** ಎಂದರೆ ಧಾನ್ಯದ ಒಂದು ಅಳತೆ. ತಮಿಳು, ಕನ್ನಡ, ತುಳು, ತೆಲುಗು, ತೊದವ ಮೊದಲಾದ ಭಾಷೆಗಳಲ್ಲೆಲ್ಲ ಈ ಶಬ್ದ ಈ ಅರ್ಥದಲ್ಲಿ ಇದೆ. ಪಡಿಗೆ ತುಳುವಿನಲ್ಲಿ ದೈನಂದಿನ ಧಾನ್ಯ ಭತ್ಯವೆಂದಲ್ಲದೆ ಭಿಕ್ಷೆಯೆಂದೂ ಅರ್ಥವಿದೆ.

**ಸಂಬಳ** ಈಗ ನಿಶ್ಚಿತ ಅವಧಿಗಾಗಿ (ತಿಂಗಳು, ವಾರ) ಕೆಲಸಕ್ಕೆ ಕೊಡುವ ಪ್ರತಿಫಲವೆಂಬ ಗಟ್ಟಿ ಅರ್ಥ ಪಡೆದಿದೆ. ಸಂಸ್ಕೃತದಲ್ಲಿ ಇದನ್ನು ಬಹುತರವಾಗಿ **ಶಂಬಲ** ಎಂದೂ ಒಮ್ಮೊಮ್ಮೆ **ಸಂಬಲ**ವೆಂದೂ ಬರೆಯುವುದುಂಟು. ಅದರ ಅರ್ಥ ಪ್ರಯಾಣ ಕಾಲದಲ್ಲಿ ಉಪಯೋಗಕ್ಕೆ ಬೇಕಾದ ಸರಕುಗಳು, ಸಾಮಗ್ರಿಗಳು, ಸರಂಜಾಮು, ಬುತ್ತಿ. ಈ ಶಬ್ದದ ಮೂಲ ಕೋಶಗಳಲ್ಲಿ ಖಚಿತವಾಗಿಲ್ಲ. ಭೃ (ಭರಿಸು, ಹೊರು, ಹೊರೆ, ಸಾಕು)ವಿನಿಂದ ಹುಟ್ಟಿದ **ಭರ, ಭರಣ** (**ಉದರಂ – ಭರಣ** ವಿಚಾರಿಸಿ)ಕ್ಕೆ ಸಂ ಉಪಸರ್ಗ ತಗಲಿಸಿ, 'ರ' ವನ್ನು 'ಲ' ಕ್ಕೆ ತಿರುಗಿಸಿದರೆ **ಸಂಭಲ** ಸಂಬಳದ ಅರ್ಥಕ್ಕೆ ಸಮೀಪವಾಗುತ್ತದೆ. **ಸಂಭಾಳಿಸು ಸಂಬಾಳಿಸು** ಅಂದರೆ ನಿರ್ವಹಿಸು; ಹಿಂದಿ **ಸಮ್ಹಾಲನಾ**. ಹಾಗೆಯೇ **ಸಂಬಳ** ಕೂಡ ನಿರ್ವಾಹದ ವೆಚ್ಚ ತಾನೆ? ಪ್ರಯಾಣ ಕಾಲದ ಸಾಮಗ್ರಿ ಎಂಬುದರಿಂದ ಅವಧಿಬದ್ಧವಾಗಿ ಕೊಡುವ ಸೇವಾ ಪ್ರತಿಫಲ ಎಂಬರ್ಥಕ್ಕೆ ಸಂಬಲ, ಶಂಬಲ ತಿರುಗಿತು. ಇಂಥ ಅರ್ಥಾಂತರ ಅಸಾಮಾನ್ಯವಲ್ಲ. ಇಂಗ್ಲೀಷಿನ Salary (= ಸಂಬಳ) ತೆಗೆದುಕೊಳ್ಳಿ. ಇದು ಲ್ಯಾಟಿನ್ Salನಿಂದ ಹುಟ್ಟಿದ ಶಬ್ದ. ಅದರ ಅರ್ಥ ಉಪ್ಪು. (ಇಂಗ್ಲೀಷಿನಲ್ಲಿ Salt). Salarium ಅಂದರೆ **ಉಪ್ಪಿನ ಖರ್ಚು**. ಉಪ್ಪಿನ ಖರ್ಚಿಗೆ ಕೊಡುವ ಹಣವೇ **ಸ್ಯಾಲರಿ**. ಆಗ ಉಪ್ಪು ಬಹಳ ಬೆಲೆ ಬಾಳುವ ಪದಾರ್ಥ. ದೂರದಿಂದ ಆಮದಾಗತಕ್ಕದ್ದು. ನಗದು ಹಣ ಕೊಟ್ಟೇ ಕೊಳ್ಳಬೇಕಾದ್ದು. ಹಾಗೆ ಉಪ್ಪಿನ ಖರ್ಚೇ ಸಂಬಳ ಎನಿಸಿತು.

ಸಂಬಳದ ಕಥೆ ಹೀಗಾದರೆ ''ಗಿಂಬಳ'' ಎಂದು ಹೇಳುವ **ಲಂಚದ** ಕಥೆ ಬೇರೆ. ಈ ಶಬ್ದ ಹೇಗೆ ಹುಟ್ಟಿತೆಂದು ಖಚಿತವಾಗಿ ಗೊತ್ತಿಲ್ಲ. ಹಿಂದಿಯಲ್ಲಿಯೂ ಈ ಪದ (ಲಾಂಚ್) ಇದೆ. ಸಂಸ್ಕೃತದಲ್ಲಿ **ಲಂಚಾ** ಎಂದಿದೆ. ಆದರೆ ಸಂಸ್ಕೃತದಲ್ಲಿ ಇದು ತಡವಾಗಿ (೧೬ನೇ ಶತಮಾನ?) ಪ್ರವೇಶಿಸಿದಂತೆ ಕಾಣುತ್ತದೆ. ಅದಕ್ಕಿಂತ ಹಿಂದೆಯೇ ಕನ್ನಡದಲ್ಲಿ ಇತ್ತೆಂದು ಮಂಗರಸನ ''ಅಭಿನವಾಭಿಧಾನ''ದಿಂದ ತಿಳಿಯುತ್ತದೆ. ಲಂಚಕ್ಕೆ ಪ್ರಾಚೀನ ಸಂಸ್ಕೃತ ಪದ **ಉತ್ಕೋಚ**. ಅದು ಮನು, ಯಾಜ್ಞವಲ್ಕ್ಯರ ಧರ್ಮಶಾಸ್ತ್ರಗಳಲ್ಲೇ ಇದೆ. ಚಾಣಕ್ಯನಂತೂ ಅದರ ಬಗ್ಗೆ ಸಾಕಷ್ಟು ಹೇಳಿದ್ದಾನೆ. ಈ ಶಬ್ದದ ಅರ್ಥ **ಬಿಚ್ಚುವುದು** ಎಂದು. ಸರಕಾರಿ ಅಧಿಕಾರಿಯ ಬಿಗುಮಾನವನ್ನು ಬಿಚ್ಚಲು ಇದು ಸಲ್ಲಬೇಕೆಂದರ್ಥವೋ ಏನೋ.

ಇಂಗ್ಲೀಷಿನಲ್ಲಿ ಲಂಚಕ್ಕೆ Bribe (ಬ್ರೈಬ್) ಎನ್ನುತ್ತಾರೆ. ಆ ಶಬ್ದ ಮೂಲತಃ ಎಲ್ಲಿದ್ದೆಂದು ಗೊತ್ತಿಲ್ಲ. ಆದರೆ ಹಳೇ ಫ್ರೆಂಚಿನಲ್ಲಿ ಆ ಶಬ್ದಕ್ಕೆ **ರೊಟ್ಟಿ ತುಣುಕು** ಎಂದರ್ಥವಿತ್ತು. ''ರೊಟ್ಟೀ ಚೂರು ಒಗೆದು ಯಾರನ್ನಾದರೂ ಒಳಗು ಮಾಡಿಕೊಳ್ಳುವುದು'' – ಲಂಚದ ಬಗ್ಗೆ ಆ ಜನರ ತುಚ್ಛೀಕಾರವನ್ನು ತೋರಿಸುತ್ತದೆ. ವಿಚಿತ್ರವೆಂದರೆ ಸಂಸ್ಕೃತದಲ್ಲಿ ಲಂಚಕ್ಕೆ **ಆಮಿಷ** ಎಂಬ ಇನ್ನೊಂದು ಪದವಿದೆ. ಆಮಿಷ ಎಂದರೆ ಮಾಂಸ, ಮಾಂಸದ ಚೂರು, ಮೀನು ಹಿಡಿಯಲು ಗಾಳದ ಕೊಕ್ಕಿಗೆ ತಗಲಿಸುವ ಮಾಂಸದ ತುಣುಕು. ರೊಟ್ಟಿಯ ಚೂರಿಗೂ ಆಮಿಷಕ್ಕೂ ತಾತ್ಪರ್ಯದಲ್ಲಿ ಸಾಮ್ಯವಿದೆಯಲ್ಲವೆ?

ವ್ಯಾಪಾರದಲ್ಲಿ, ಹಣಕಾಸಿನ ವ್ಯವಹಾರದಲ್ಲಿ ಈಗ **ಕಮಿಷನ್** ಎಂದು ಪ್ರಸಿದ್ಧವಾದ ಅಂಶಕ್ಕೆ ನಮ್ಮಲ್ಲಿ **ವಟ್ಟ** ಎಂಬ ಪದ ಬಳಕೆಯಲ್ಲಿತ್ತು. ನೂರಕ್ಕೆ ಇಂತಿಷ್ಟು ವಟ್ಟಕೊಡಬೇಕು ಇತ್ಯಾದಿ. ಮಂಡಿ ವರ್ತಕರು **ವಟ್ಟ** ತೆಗೆದುಕೊಂಡು ರೈತರ ಉತ್ಪಾದನೆಯನ್ನು ಮಾರಿಸುತ್ತಾರೆ. ಈ ಶಬ್ದ ತಮಿಳಿನಿಂದ ಬಂತೆಂದು ಹೇಳಿ ಮಾಸ್ತಿಯವರು ಕೊಡುವ ವಿವರಣೆ ಸ್ವಾರಸ್ಯವಾಗಿದೆ. **ವಟ್ಟ** ಎಂದರೆ ಸಂಸ್ಕೃತದ **ವೃತ್ತ**ದ ತದ್ಭವ. ವರ್ತಕರು ತಮ್ಮ ಅಂಶವನ್ನು ನಾಣ್ಯದ ಸುತ್ತಲೂ ವೃತ್ತಾಕಾರವಾಗಿ ಕತ್ತರಿಸಿ ತೆಗೆದುಕೊಳ್ಳುತ್ತಿದ್ದರೆಂದು ಅದಕ್ಕೆ ವಟ್ಟವೆಂಬ ಹೆಸರಂತೆ. ಇದು ಎಷ್ಟು ವಾಸ್ತವವೋ ಗೊತ್ತಿಲ್ಲ. ಬಹುಶಃ **ವರ್ತಕ**ನ ಅಂಶವಾದ್ದರಿಂದ ಅದು **ವರ್ತ, ವಟ್ಟ** ಆಗಿರಬಹುದು. **ವರ್ತ** ಶಬ್ದಕ್ಕೆ ಇತರ ಅರ್ಥಗಳೊಡನೆ ಜೀವನೋಪಾಯ, ಆದಾಯ, ಸಂಬಳ ಇತ್ಯಾದಿ ಅರ್ಥಗಳು ''ಕಥಾಸರಿತ್ಸಾಗರ''ದಂಥ ಪ್ರಾಚೀನ ಗ್ರಂಥಗಳಲ್ಲೇ ಇವೆ.

## ೧೦೫

''ಅನ್ಯೋ ಗಂಡಃ ಗಂಡಾಂತರಮ್'' (= ಬೇರೆ ಗಂಡನೇ ಗಂಡಾಂತರ) ಎಂದು ದಿವಂಗತ ಶ್ರೀರಂಗರು ತಮಾಷೆಯಾಗಿ ಹೇಳುತ್ತಿದ್ದರು. **ಗಂಡಾಂತರ** ಶಬ್ದಕ್ಕೆ ವಿಗ್ರಹವಾಕ್ಯ ಹೇಳಲೇಬೇಕಾದರೆ ಸಂಸ್ಕೃತದ ರೀತಿಯಲ್ಲಿ ಶ್ರೀರಂಗರದೇ ಸರಿಯೆಂದೊಪ್ಪಬೇಕಾದೀತು! ಆದರೆ **ಗಂಡಾಂತರ**ದ ಅರ್ಥ ಹಾಗಲ್ಲವೆಂದು ನಮಗೆ ಗೊತ್ತು. ''ದೊಡ್ಡ ವಿಪತ್ತು, ಹೆಚ್ಚಿನ ಅಪಾಯ'' ಎಂದು ಪರಿಷತ್ತಿನ ಸಂಕ್ಷಿಪ್ತ ನಿಘಂಟು ಹೇಳುತ್ತದೆ. ಪರಿಷತ್ತಿನ ದೊಡ್ಡ ನಿಘಂಟು ಈ ಶಬ್ದ ಸಂಸ್ಕೃತದಿಂದ ಬಂತೆಂದು ಹೇಳುತ್ತದೆ. ಆದರೆ ನಾನು ನೋಡಿದ ಸಂಸ್ಕೃತ ಕೋಶಗಳಲ್ಲಿ ''ಗಂಡಾಂತರ'' ಇಲ್ಲ. ಮಾತ್ರವಲ್ಲ, ಹಿಂದಿ, ಬಂಗಾಲಿ ಕೋಶಗಳಲ್ಲಿ ಕೂಡ ಅದು ಸಿಕ್ಕುವುದಿಲ್ಲ. ಆರ್ಯಭೂಷಣ ಮರಾಠಿ ಶಾಲಾ ನಿಘಂಟಿನಲ್ಲಿ **ಗಂಡಾಂತ, ಗಂಡಾಂತರ** ಎಂಬೆರಡೂ ಶಬ್ದಗಳನ್ನು ಒಂದೇ ದಾಖಲೆಯಲ್ಲಿ ಕೊಟ್ಟು ತೀವ್ರ ಕಾಯಿಲೆ, ಮಹಾ ವಿಪತ್ತು, ಘೋರ ಘಟನೆ ಎಂದು ಅರ್ಥ ಹೇಳಿದ್ದಾರೆ. ಶಬ್ದವನ್ನು ವಿಂಗಡಿಸುವಾಗ ಇದನ್ನು ''ಗಂಡ + ಅಂತ (+ ರ)'' ಎಂದು ಒಡೆಯಬೇಕು. ಆದರೆ **ಗಂಡ** ಶಬ್ದಕ್ಕಿರುವ ಸಂಸ್ಕೃತದ ಹತ್ತಾರು ಅರ್ಥಗಳಲ್ಲಿ ಅಪಾಯ ಎಂಬುದು ಸೇರಿಲ್ಲ. **ಮೊಡವೆ, ಹುಗುಳು, ಗುಳ್ಳೆ, ಕೊರಳಿನಲ್ಲೇಳುವ ಗಂಟು** ಎಂಬೀ ಕಾಯಿಲೆಗೆ ಸಂಬಂಧಿಸಿದ ಅರ್ಥಗಳು ಗಂಡಾಂತರವನ್ನು ವಿವರಿಸಲು ಸಾಲವು.

ಹಾಗಾದರೆ ಇದು ಹೇಗೆ, ಎಲ್ಲಿಂದ ಬಂತು? ನನ್ನ ಅಭಿಪ್ರಾಯದಲ್ಲಿ

ಜ್ಯೋತಿಷ್ಯಶಾಸ್ತ್ರದಿಂದ. ಜ್ಯೋತಿಷ್ಯದಲ್ಲಿ **ಗಂಡಾಂತ** ಎಂದರೆ ಕರ್ಕ, ವೃಶ್ಚಿಕ, ಮೀನ ರಾಶಿಗಳ **ಕೊನೆಯ** ಅಂಶಗಳು (ಅಂದರೆ ಆಶ್ಲೇಷಾ, ಜ್ಯೇಷ್ಠಾ, ರೇವತಿ ನಕ್ಷತ್ರಗಳ ಕೊನೆಯ ಪಾದಗಳು). ಈ ಪಾದಗಳು ಮಹಾ ಅನಿಷ್ಟವೆಂದು ಜ್ಯೋತಿಷ್ಯಶಾಸ್ತ್ರ ಹೇಳುತ್ತದೆ. **ಗಂಡಾಂತ**ದ ಗಳಿಗೆ ಮಹಾ ಅನಿಷ್ಟವಾದ್ದರಿಂದ **ಮಹಾ ಅನಿಷ್ಟ**ವನ್ನೆಲ್ಲಾ ಗಂಡಾಂತವೆಂದು ಕರೆಯುವುದಾಯಿತು; ಅದಕ್ಕೆ ಒಂದು ''ರ'' ಕಾರ ಸೇರಿ **ಗಂಡಾಂತರ**ವಾಯಿತು; ಹೊರತು ''ಗಂಡಾಂತ (ರ)'' ಶಬ್ದದಲ್ಲಿ ಮೂಲತಃ ಅಪಾಯದ ಧ್ವನಿ ಇಲ್ಲ.

**ಗಂಡಾಂತರ** ಶಬ್ದಕ್ಕೆ ನಿಜವಾದ ಪ್ರಾಚೀನ ಉದಾಹರಣೆಗಳು ಕನ್ನಡದಲ್ಲಿ ಇಲ್ಲ. ಇರುವವುಗಳು ಕಳೆದ ಶತಮಾನದ ಅಂತ್ಯಕ್ಕಿಂತ ಹಿಂದೆ ಹೋಗುವುದಿಲ್ಲ. ಅದು ಬಹುಶಃ ಮರಾಠಿಯಿಂದ ಕನ್ನಡಕ್ಕೆ ವಲಸೆ ಬಂದದ್ದು. ಅದರ ಪ್ರಯೋಗಗಳನ್ನು ಕಿಟ್ಟೆಲ್ಲರು ಬೊಂಬಾಯಿ ಸಂಸ್ಥಾನದ ಕನ್ನಡ ಶಾಲಾ ಕ್ರಮಿಕ ಪುಸ್ತಕಗಳಿಂದ ಎತ್ತಿಕೊಂಡದ್ದು ಕಾಣಿಸುತ್ತದೆ.

ಈ **ಗಂಡಾಂತ** ಶಬ್ದ ಕೂಡ ಸುತ್ತು ದಾರಿಯಿಂದ ರೂಪುಗೊಂಡದ್ದು. ಇದನ್ನು **ಗಂಡ + ಅಂತ** ಎಂದು ವಿಂಗಡಿಸಿದರೆ ಮೊದಲನೇ **ಗಂಡ** ಶಬ್ದಕ್ಕೆ **ನಾಲ್ಕರ ಗುಂಪು** (ಕನ್ನಡ ''ವಡ್ಡಿ'') ಎಂದು ಅರ್ಥ. **ಗಂಡಕ** ಎಂದೂ ಇದಕ್ಕೆ ಹೆಸರಿದೆ. ಹಿಂದಿ, ಬಂಗಾಲಿಗಳಲ್ಲಿ ಕೂಡ **ಗಂಡಾ** (= ಸಂ. ಗಂಡಕ) ಶಬ್ದಕ್ಕೆ ಇದೇ ಅರ್ಥ. ಹನ್ನೆರಡು ರಾಶಿಗಳನ್ನು ನಾಲ್ಕು ನಾಲ್ಕರ ಮೂರು ಗುಂಪಾಗಿ ಮಾಡಿದರೆ ಪ್ರತಿ ಗುಂಪಿನ ಕೊನೆಯ ಅಂಶಗಳು **ಗಂಡಾಂತ** ಅಂಶಗಳಾಗುತ್ತವೆ.

ನಾಲ್ಕರ ಅಂಕಿಗೆ ಯಾವುದೋ ಒಂದು ಅನಿಷ್ಟ ಗುಣ ಇದೆಯೆಂಬ ಕಲ್ಪನೆ ಹಿಂದಿನ ಕಾಲದಲ್ಲಿ ಇದ್ದಂತೆ ಕಾಣುತ್ತದೆ. ಆದ್ದರಿಂದಲೇ ನಾಲ್ಕರ ಗುಂಪಿಗೆ ಕನ್ನಡದಲ್ಲಿ **ವಡ್ಡಿ** (= ಸಂ. ವೃದ್ಧಿ) ಎಂಬ ಶಬ್ದವನ್ನು ಅನಿಷ್ಟ ನಿವಾರಣೆಗಾಗಿ ಬಳಸಲಾಗುತ್ತಿತ್ತು. ಹೀಗೆಯೇ **ಗಂಡ** ಶಬ್ದಕ್ಕೆ **ದೈವೀ ಅನಿಷ್ಟ** ಎಂಬೊಂದರ್ಥ ೧೮ನೇ ಶತಮಾನಾಂತ್ಯದೊಳಗೆ ರೂಪುಗೊಂಡಿತ್ತು – ಇದು ಕನ್ನಡದಲ್ಲಿ. ಅದಲ್ಲದೆ **ಗಂಧ** ಶಬ್ದಕ್ಕೆ ಸಂಸ್ಕೃತದಲ್ಲಿ **ತೊಡಕು, ಉಪದ್ರವ** ಎಂಬರ್ಥವಿತ್ತು. ಅದರ ದ ಕಾರವೇ ಡ ಕಾರವಾಗಿ ಮಾರ್ಪಟ್ಟು ಗಂಡವಾಗಿರಲೂಬಹುದು.

ಹೇಗಿದ್ದರೂ ಗಂಡ, ಗಂಡಾಂತರ ಶಬ್ದಗಳಿಗೆ ನೈಸರ್ಗಿಕಕ್ಕಿಂತಲೂ ಅಲೌಕಿಕ, ಗ್ರಹ, ದೇವತೆಗಳ ಆಗ್ರಹದಿಂದ ಬಂದ ಅನಿಷ್ಟವೆಂಬುದೇ ಪ್ರಧಾನ ಅರ್ಥವಾಗಿರಬೇಕು.

ಜ್ಯೋತಿಷ್ಯ, ಶಕುನ ಶಾಸ್ತ್ರಗಳು ಭಾಷೆಯನ್ನು ಪ್ರಭಾವಿಸುವ ರೀತಿಗೆ ಅನೇಕ ಉದಾಹರಣೆಗಳು ಸಿಗುತ್ತವೆ. **ಮೀನ-ಮೇಷ** ಎಣಿಸುವುದು ಎಂಬೊಂದು ನುಡಿಕಟ್ಟು ಇದೆಯಲ್ಲ. ಅದು ಜ್ಯೋತಿಷಿ ಫಲ ಹೇಳುವಾಗ ಮುಹೂರ್ತ ಅಥವಾ ಜನ್ಮ ಲಗ್ನದ ವಿಷಯದಲ್ಲಿ (ಮೀನವೋ ಮೇಷವೋ ?) ಸಂದಿಗ್ಧದಲ್ಲಿ ಬೀಳುವುದಕ್ಕೆ ಸಂಬಂಧಿಸಿದ್ದು. ಜ್ಯೋತಿಷ್ಯ ನಂಬದವರು ಕೂಡ ಈಗ ಯಾವುದೇ ಅನಿಶ್ಚಿತ ಮನಸ್ಸಿನ ಆಲೋಚನೆಗೆ ಈ ನುಡಿಕಟ್ಟನ್ನು ಬಳಸುತ್ತಾರೆ.

**ಗೂಬೆ ಕೂರಿಸುವುದು** ಎನ್ನುವಾಗ ಮನೆಯ ಮೇಲೆ ಗೂಬೆ ಕೂತರೆ ಮನೆ ಮಂದಿಗೆ ಮಹಾ ಅನಿಷ್ಟ ಎನ್ನುವ ಶಕುನ ಶಾಸ್ತ್ರದ ನಂಬಿಕೆಯನ್ನು ಏನಾದರೂ ಅಪವಾದ ಹೊರಿಸಿ ಯಾರನ್ನಾದರೂ ನಿಂದಿಸುವುದಕ್ಕೆ ಅನ್ವಯಿಸುತ್ತೇವೆ.

ದಕ್ಷಿಣ ಕನ್ನಡ ಮೊದಲಾದ ಕಡೆ **ಪೂರ್ವಾಷಾಢಾ** ಹಿಡಿದಿದೆ ಎಂದರೆ ಹೊಟ್ಟೆ ಜಾಡಿಸತೊಡಗಿದೆ, ಹೊರಕಡೆ ಹತ್ತಿದೆ ಎಂದು ವ್ಯಂಗ್ಯಾರ್ಥ. ಆಷಾಢ ಮಾಸ ಧಾರಾಕಾರ ಮಳೆ ಸುರಿಯುವ ಕಾಲ. ಆಗ ಮಳೆ ಸುರಿದು ನೆಲದಲ್ಲಿ, ಗಟಾರಗಳಲ್ಲಿ ನೀರು ಹರಿಯುವಂತೆ ಹೊರಕಡೆಯಾಗುತ್ತಿದೆ – ಎಂದು ಸಂಬಂಧ. **ಆಷಾಢ** ಮಾಸಕ್ಕೆ ಆ ಹೆಸರು ಬರಲು ಆ ತಿಂಗಳಲ್ಲಿ ಹುಣ್ಣಿಮೆ ಬಹುತರವಾಗಿ ಪೂರ್ವಾಷಾಢಾ ನಕ್ಷತ್ರದಲ್ಲಿ ಬರುವುದು ಕಾರಣ. ಹೀಗೆ ಪೂರ್ವಾಷಾಢಾ ಎಂದರೆ ರೇಚನ, ಅತಿಸಾರ.

ಅನಿಷ್ಟಗಳ ನಿವಾರಣೆಗೆ ಪ್ರಾಚೀನ ಮನುಷ್ಯನ ಒಂದುಪಾಯವೆಂದರೆ ಅನಿಷ್ಟ ವಸ್ತುವಿನ ಹೆಸರು ಹೇಳದೆ ಅದಕ್ಕೆ ಒಂದು ಮಂಗಳಕರ ಹೆಸರಿಡುವುದಾಗಿತ್ತು! ಸಂಸ್ಕೃತದಲ್ಲಿ **ದಿವಾಕೀರ್ತಿ** ಎಂಬ ಶಬ್ದವಿದೆ. ಅದರ ಶಾಬ್ದಿಕ ಅರ್ಥ **ಹಗಲಲ್ಲಿ** ಪ್ರಸಿದ್ಧ ಅಂತ. ''ದಿವಾಕೀರ್ತಿ''ಯೇನು ಮಹಾಕೀರ್ತಿಶಾಲಿಯೆಂದಲ್ಲ. ಅದರರ್ಥ **ಕ್ಷೌರಿಕ**. ಪ್ರಾಚೀನರಿಗೆ ಕ್ಷೌರ ಎಂದರೆ ಏನೋ ಭಯವಿತ್ತು. ಭಯಪ್ರದವಾದದ್ದರ ಹೆಸರನ್ನು ರಾತ್ರಿ ಹೇಳುವಂತಿಲ್ಲ. ಆದ್ದರಿಂದ ಕ್ಷೌರಿಕನ ಹೆಸರನ್ನೂ ರಾತ್ರಿ ಹೇಳಬಾರದು. ಹೇಳಲೇಬೇಕಾದರೆ ಮರೆಸಿ ಹೇಳಬೇಕು. ಏನು ಹೇಳುವುದು? ರಾತ್ರಿ ಹೆಸರು ಹೇಳಬಾರದವನು, ಇಲ್ಲವೆ ಹಗಲಲ್ಲಿ ಹೆಸರಿಸಬಹುದಾದವನು! – **ದಿವಾಕೀರ್ತಿ**. ನನ್ನ ತಾಯಿ ಎಂದೂ ರಾತ್ರಿ ಹೊತ್ತು ''ಕ್ಷೌರ'', ''ಹಜಾಮತಿ'' ಶಬ್ದಗಳನ್ನು ಉಚ್ಚರಿಸುತ್ತಿರಲಿಲ್ಲ. ಅದರ ಸುದ್ದಿ ಹೇಳಲೇಬೇಕಾದರೆ **ತಲೆಮುಟ್ಟುವುದು** ಎಂದು ಸುದ್ದಗನ್ನಡದಲ್ಲಿ ಹೇಳುತ್ತಿದ್ದರು. ಇದು ಅವರಿಗೆ ರಾತ್ರಿವ್ರತ ಮಾತ್ರವಾಗಿರಲಿಲ್ಲ. ಹಗಲಲ್ಲಾದರೂ ಮಡಿಯಲ್ಲಿದ್ದಾಗ ಕ್ಷೌರಿಕ ತಲೆಮುಟ್ಟುವವನಾಗುತ್ತಿದ್ದ; ಕತ್ತರಿಸುವವನು ಅಥವಾ ಬೋಳಿಸುವವನು ಆಗುತ್ತಿರಲಿಲ್ಲ ಮತ್ತೆ! (ಪ.ಚಿಂ. ೪೮ ನೋಡಿರಿ).

**ಪ್ರಿಯ** ಎಂದರೆ ಇಷ್ಟ, **ಇಷ್ಟವಾದವನು** ಇತ್ಯಾದಿ ಅರ್ಥಗಳು ಸರ್ವಸಾಮಾನ್ಯ; ಆದರೆ **ತುಟ್ಟಿ** ಎಂಬ ಇನ್ನೊಂದರ್ಥ ಕರ್ನಾಟಕದ ಕೆಲ ಭಾಗಗಳಲ್ಲಿ ಮತ್ತು ಸಂಸ್ಕೃತದಲ್ಲಿ ಇದೆ. **ಪ್ರಿಯಧಾನ್ಯಕ** ಎಂದರೆ ಕಾಳು ತುಟ್ಟಿಯಾಗುವುದು, ಬರಗಾಲ. ದುರ್ಲಭವಾದದ್ದು ಇಷ್ಟವಾಗುತ್ತದಲ್ಲವೆ? ಭಾರತದ ಎಲ್ಲ ಭಾಷೆಗಳಲ್ಲಿ ''ಪ್ರಿಯ''ಕ್ಕೆ ಈ ಅರ್ಥ ಪ್ರಚಲಿತವಾಗಿಲ್ಲ. ಆದರೆ ಸಾಗರ ಭೂಖಂಡಗಳಾಚೆಗೆ ಹೋದರೆ ಇಂಗ್ಲೀಷಿನಲ್ಲಿ dear ಎಂದರೆ ಇಷ್ಟವೂ ಹೌದು, ತುಟ್ಟಿಯೂ ಹೌದು.

೧೦೬

**ನಮಸ್ಕಾರ** ಎನ್ನುವಾಗ ನಮಗೆ ಪ್ರಥಮತಃ ಹೊಳೆಯುವ ಅರ್ಥವೆಂದರೆ ಯಾರನ್ನಾದರೂ ಗೌರವಿಸಲು ಉದ್ದಕ್ಕೆ ನೆಲದ ಮೇಲೆ ಮೈಚಾಚುವ ಭಂಗಿ. ಆದರೆ ನಮಸ್ಕಾರಕ್ಕೆ ತಾಯಿಯಾದ **ನಮ್** ಎಂಬ ಸಂಸ್ಕೃತ ಧಾತುವಿನ ಮೂಲಾರ್ಥ ಬಗ್ಗು, ಬಾಗು ಎಂದು ಮಾತ್ರ. ಉದ್ದಕ್ಕೆ ''ಕಾಲಿಗೆ ಬೀಳು''ವ ಆ ಸಂಪೂರ್ಣ ವಿಧೇಯತೆಯ, ನಿಸ್ಸಹಾಯಕತೆಯ ಕಲ್ಪನೆ ನಮಸ್ಕಾರದಲ್ಲಿಲ್ಲ. ಋಗ್ವೇದ ಮೊದಲಾಗಿ ಎಲ್ಲ ಪ್ರಾಚೀನ ಧಾರ್ಮಿಕ ಗ್ರಂಥಗಳಲ್ಲಿ **ನಮಃ, ನಮನ, ನಮಸ್ಕ್ರಿಯಾ, ನಮಸ್ಕಾರ, ನಮಸ್ಕೃತಿ, ಪ್ರಣಾಮ** (ಪ್ರ=ಹೆಚ್ಚಿನ+ನಾಮ=ನಮಸ್ಕಾರ), **ನತಿ** ಇತ್ಯಾದಿಯಾಗಿ ಇದೇ ಧಾತುವಿನಿಂದ ಹುಟ್ಟಿದ

ಪದಗಳು ಇದ್ದರೂ ಅವುಗಳೆಲ್ಲ ಬಗ್ಗುವಷ್ಟು ಮಟ್ಟಿನ ವಿನಯ, ವಿಧೇಯತೆಯನ್ನು ತೋರಿಸುವವಲ್ಲದೆ ಅಡ್ಡ ಬೀಳುವಷ್ಟು ಮಟ್ಟಿನದನ್ನಲ್ಲ.

**ನಮಸ್ಕಾರ, ನಮಃ (ನಮೋ)** ಎಂಬಲ್ಲಿ ಬಾಗುವ ಕ್ರಿಯೆಯಲ್ಲದೆ ''ಬಗ್ಗಿದೆವು'' ಎಂದು ಬಾಯಿಂದ ಹೇಳುವುದೂ ಸೇರುತ್ತದೆ. ''ನಮ ಉಕ್ತಿಂ ವಿಧೇಮ – ನಮೋ ಎಂಬ **ಮಾತನ್ನು** ಹೇಳುತ್ತೇವೆ'' ಎಂದು ಒಂದು ವೇದ ಮಂತ್ರ ಹೇಳುತ್ತದೆ. **ಶಿವಾಯ ನಮಃ** ಇತ್ಯಾದಿ ಮಂತ್ರಗಳು ಬರುತ್ತವೆ. ಕನ್ನಡದ **ಮಣಿ, ಬಾಗು, ಬಗ್ಗು, ಎರಗು** (= ಇಳಿ) ಇವೆಲ್ಲ ತಲೆಯನ್ನು ಮುಂದೆ ಬಗ್ಗಿಸುವ ಕ್ರಿಯೆಯನ್ನು ಸೂಚಿಸುತ್ತವೆ.

**ವಂದನ** ಎಂಬ ಇನ್ನೊಂದು ನಮಸ್ಕಾರಾರ್ಥಕ ಪದದಲ್ಲಿ **ಹೊಗಳುವುದು, ಪ್ರಶಂಸಿಸುವುದು, ಗೌರವ ತೋರಿಸುವುದು, ಪೂಜಿಸುವುದು, ಪಾದ ಮುಟ್ಟುವುದು** ಇತ್ಯಾದಿ ಭಾವನೆಗಳು ಒಳಗೊಂಡಿದ್ದರೂ ಅದರಲ್ಲಿ ಬಾಯಿಂದ ಹೇಳುವ, ಹೊಗಳುವ ಮಾತೇ ಪ್ರಧಾನವಾಗಿದೆ. ಈ ಪ್ರಶಂಸೆ, ಗೌರವಗಳು ಬೇರೆ ತರದ ಕೃತಿಗಳಿಂದಲೂ ವ್ಯಕ್ತವಾಗಬಹುದು. **ವಂದನಮಾಲಾ** ಎಂದರೆ ಗೌರವಾರ್ಹ ವ್ಯಕ್ತಿಗಳು ಬರಲಿರುವಾಗ ಬೀದಿಯ ಬಾಗಿಲಿಗೆ ಕಟ್ಟುವ **ತಳಿರುತೋರಣ. ವಂದಾರು** ಎಂದರೆ ಹೊಗಳುವವರು, ಪ್ರಶಂಸಕರು; ಇದೇ ಧಾತು **(ವಂದ್)**ವಿನಿಂದ ಹುಟ್ಟಿದ **ವಂದಿ** ಎಂಬುದು (ಉದಾ-ವಂದಿ-ಮಾಗಧರು) ಹೊಗಳು ಭಟ್ಟ, ಭಟ್ಟಂಗಿ ಎಂಬರ್ಥ ಕೊಡುತ್ತದೆ. ಬಹುಶಃ ಸಂಬಳಕ್ಕಾಗಿ, ಆಶ್ರಯಕ್ಕಾಗಿ, ಪ್ರಯೋಜನಕ್ಕಾಗಿ ದೊಡ್ಡವರನ್ನು ಹೊಗಳುವವರು **ವಂದಿಗಳು.**

**ಅಭಿವಾದನ** ಎಂಬ ಇನ್ನೊಂದು ಶಬ್ದ ಸಂಸ್ಕೃತದಿಂದ ಬಂದಿದೆ. ಇದು (**ಅಭಿ** = ಎದುರಾಗಿ ಬಂದು + **ವಾದನ** = ಮಾತಾಡಿಸುವುದು) ಎದುರೆದ್ದು ಬಂದು ಆದರದಿಂದ ಮಾತಾಡಿಸುವುದು ಎಂಬಲ್ಲಿಂದ ಹೊರಟು ನಮಸ್ಕಾರಕ್ಕೆ ಅರ್ಥ ವಿಸ್ತರಿಸಿಕೊಂಡದ್ದು. ದೇವರನ್ನು, ಹಿರಿಯರನ್ನು ನಮಸ್ಕರಿಸಬೇಕಾದರೆ ತನ್ನ ಗೋತ್ರ, ಹೆಸರುಗಳನ್ನು ಹೇಳಿಕೊಂಡು ''ಅಹಂ ಭೋ ಅಭಿವಾದಯೇ'' ಎಂದು ಕಿವಿಗಳನ್ನು ಮುಟ್ಟಿಕೊಂಡು ನೆಲಕ್ಕೆ ಕೈ ತಗಲಿಸುವುದು ವೈದಿಕ ರೂಢಿ.

**ಪೊಡಮಡು** ಎಂಬ ಶಬ್ದ ಹಿಂದಿನ ಕಾಲದಲ್ಲಿ ತುಂಬಾ ಪ್ರಚಾರದಲ್ಲಿತ್ತು. ಇದು ನಮಸ್ಕಾರಾರ್ಥಕವೇ. ಇದು ಕೂಡ ಉದ್ದಂಡ ನಮಸ್ಕಾರವನ್ನು ಸೂಚಿಸುವುದಿಲ್ಲ. **ಪೊಡ, ಪೊಡೆ** ಎಂಬುದು ಸಂಸ್ಕೃತದ **ಪುಟ** (ಪುಡಿಕೆ) ಶಬ್ದದ ತದ್ಭವ. ''**ಹೊಡೆ** ಬಿಟ್ಟ ಪೈರು'' ಎಂಬಲ್ಲಿನ ''ಪೊಡೆ'' ಇದೇ. ಹೀಗೆ ಪೊಡಮಡು ಎಂದರೆ ಎರಡೂ ಕೈಗಳನ್ನು ಪೊಡೆಮಾಡಿ ಬೊಗಸೆಯಂತೆ ಜೋಡಿಸಿ ಬಹುಶಃ ಮುಂದಲೆಯ ಮೇಲೆ ಹಿಡಿದು ಮಾಡುವ ಗೌರವ ಸೂಚನೆ. ಸೂರ್ಯನಿಗೆ ನೀರಿನಿಂದ ಅರ್ಘ್ಯ ಕೊಡುವುದು ಹೀಗೆ ಬೊಗಸೆ ಮಾಡಿಯೇ. ಮುಂದೆ ಇದು ವಿಶಾಲ ಅರ್ಥವನ್ನು ಬೆಳೆಸಿಕೊಂಡು ಕಾಲಿಗೆರಗುವ ಕ್ರಿಯೆಯನ್ನೂ ಒಳಗೊಂಡಿತು – ಅಷ್ಟೇ.

ಈಚೆಗೆ ಮಲೆಯಾಳಿಗಳ ಸಂಪರ್ಕದಿಂದ **ವಣಕ್ಕಂ** ಎಂಬ ನಮಸ್ಕಾರಾರ್ಥಕ ಶಬ್ದ ಕನ್ನಡಿಗರಿಗೂ ಪರಿಚಿತವಾಗುತ್ತಿದೆ. ಇಬ್ಬರು ಮಲೆಯಾಳಿಗಳು ಎದುರಾದಾಗ ಅವರು ''ವಣಕ್ಕಂ'' ಎನ್ನುತ್ತ ಅಭಿವಾದಿಸಿಕೊಳ್ಳುತ್ತಾರೆ. ಇದು **ವಣಕ್ಕು** ಎಂಬ ದ್ರಾವಿಡ ಧಾತುವಿನಿಂದ ಬಂದು ಪದ. ಅದರ ಅರ್ಥವೂ **ಮಣಿಯುವುದು, ಬಗ್ಗುವುದು.**

**ಪ್ರಾರ್ಥನೆ** ಎಂಬ ಸಂಸ್ಕೃತ ಪದದಲ್ಲಿ ದೇವರು ಅಥವಾ ದೊಡ್ಡ ಮನುಷ್ಯನಲ್ಲಿ **ಬೇಡಿಕೊಳ್ಳುವ** ಇಂಗಿತವಿದೆ. (ಪ್ರ = ವಿಶೇಷವಾಗಿ, ಅರ್ಥ್ = ಪ್ರಯೋಜನವನ್ನು ಅಪೇಕ್ಷಿಸು) **ಅರ್ಥ** ಎಂದರೆ ಪ್ರಯೋಜನ, ಲಾಭ; ಆದ್ದರಿಂದ ಧನ, ಸಂಪತ್ತು. ''ಇಂಥಾದ್ದನ್ನು ದಯಪಾಲಿಸು'' ಎಂಬ ಅಪೇಕ್ಷೆಯನ್ನು ವಿನಯದಿಂದ ಹೇಳಿಕೊಳ್ಳುವುದು ಪ್ರಾರ್ಥನೆ. **ನಿಷ್ಕಾಮ ವಂದನೆ** ಇರಬಲ್ಲುದಾದರೂ ನಿಷ್ಕಾಮ ಪ್ರಾರ್ಥನೆ ಎಂಬುದಿಲ್ಲ. ''ಭಕ್ತಿ ಕೊಡು ದೇವಾ'' ಎಂದಾದರೂ ಬೇಡಿಕೊಳ್ಳಲೇಬೇಕು !

ಆಶ್ರಯದಾತ ಅಥವಾ ಶಕ್ತಿವಂತನ ಎದುರು ಉದ್ದಕ್ಕೆ ಮುಖ ಕೆಳಗಾಗಿ ಮೈಚಾಚಿ, ಕೈಗಳನ್ನು ತಲೆಯ ಮೇಲ್ಗಡೆ ಜೋಡಿಸಿ ಸರ್ವಥಾ ತಾನು ಅಧೀನ ಎಂದು ತೋರಿಸುವ ಪರಂಪರೆ ಬಹಳ ಪ್ರಾಚೀನವೆಂದು ಇಜಿಪ್ಟ್, ಬಬಿಲೊನಿಯಗಳ ಪ್ರಾಚೀನ ಚಿತ್ರಗಳಿಂದ ವಿದಿತವಾಗುತ್ತದೆ. ಆದರೆ ನಮ್ಮ ಪ್ರಾಚೀನ ಸಾಹಿತ್ಯದಲ್ಲಿ ಇಂಥ ದೈನ್ಯಪೂರ್ವಕ ನಮಸ್ಕಾರಕ್ಕೆ ಶಬ್ದಗಳು ದುರ್ಲಭವಾಗಿವೆ. ನಮ್ಮ ಭಕ್ತಿ ಸಾಹಿತ್ಯದಲ್ಲಿ ಅಷ್ಟಾಂಗ ಪ್ರಣಾಮದ ಲಕ್ಷಣವನ್ನು ಹೇಳುತ್ತ ಎದೆ, ತಲೆ, ಕಣ್ಣು, ಮನಸ್ಸು, ಮಾತು, ಪಾದ, ಕೈ, ಮೊಣಕಾಲು ಇವಿಷ್ಟರಿಂದ ಮಾಡುವಂಥಾದ್ದು ಎಂದು ನಿಯಮಿಸಲಾಗಿದೆ. ಈ ಕಲ್ಪನೆಯನ್ನೇ ದೀರ್ಘ **ದಂಡ ಪ್ರಣಾಮ, ಉದ್ದಂಡ ನಮಸ್ಕಾರ, ಪ್ರಣಿಪಾತ** (ಎದುರಲ್ಲಿ ಬೀಳುವುದು) ಇತ್ಯಾದಿ ಪದಗಳಿಂದ ವ್ಯಕ್ತಪಡಿಸಲಾಗುತ್ತದೆ. ದಂಡ=ಕೋಲು. ಕನ್ನಡದಲ್ಲಿ **ಅಡ್ಡ ಬೀಳು, ಮೈಚಾಚು** (ಕುಮಾರ ವ್ಯಾಸನ ಪ್ರೀತಿಯ ಪದ), **ದಿಂಡುಗೆಡೆ** (ಮರದ ದಿಮ್ಮಿಯಂತೆ ಉರುಳು) ಇತ್ಯಾದಿ ಪದಗಳು ಇವೆ. ಆದರೆ ಸಂಸ್ಕೃತದಲ್ಲಂತೂ ಈ ಪದಗಳು ಪುರಾಣ ಕಾಲದಿಂದ ಈಚೆಗಿನವು. ಕನ್ನಡದಲ್ಲಿ ಕೂಡ ಇಂಥ ಪರಮ ದೈನ್ಯ ಸೂಚಕ ಪದಗಳು ಕೃತ-ಕ (ಬೇಕೆಂದು) ಸೃಷ್ಟಿಸಿದವು ಎನ್ನಬಹುದು. ದೇವತೆಗಳ ವಿಷಯದಲ್ಲಿ ನಮ್ಮ ಪ್ರಾಚೀನ ಪೂರ್ವಜರದು ಅನ್ಯೋನ್ಯ ಆಶ್ರಿತಭಾವ. (ಮನುಷ್ಯ ಯಜ್ಞ ಮಾಡುತ್ತಾನೆ, ದೇವತೆಗಳು ಮಳೆ ಕೊಡುತ್ತಾರೆ). ಕೆಲ ವೇಳೆ ವಿಧಿವತ್ತಾಗಿ ನಾವು ಕರ್ಮಗಳನ್ನು ಮಾಡಿದರೆ ದೇವತೆಗಳಿಗೆ ತಕ್ಕ ಫಲಗಳನ್ನು ಕೊಡದೆ ನಿರ್ವಾಹವೇ ಇರಲಿಲ್ಲ. ನಹುಷನ ಕಥೆ ಇದನ್ನೇ ಹೇಳುತ್ತದೆ. ''ಯದಂಗದಾಶುಷೇ ತ್ವಮಗ್ನೇ ಭದ್ರಂ ಕರಿಷ್ಯಸಿ'' (ಅಗ್ನಿಯೆ, ನಿನಗೆ ಬಿಡುಗೈಯಿಂದ ಕೊಡುವವನಿಗೆ ನೀನು ಒಳ್ಳೇದು ಮಾಡುತ್ತಿ) ಎಂದು ನಿಮಗೆ ವೇದದ ಮಧುಚ್ಛಂದ ಋಷಿ ಹೇಳುತ್ತಾನೆ. ''ಹಾಲೊಳಗದ್ದು, ನೀರೊಳಗದ್ದು, ನಾ ನಿನ್ನ ನಂಬಿದೆನೋ'' ಎಂಬ ಪ್ರತಿಪತ್ತಿ, ಕರಾರುರಹಿತ ದೀನ ಭಕ್ತಿ ಪ್ರಾಚೀನರ ವಿಚಾರದ ಹೊರಗಿನದಾಗಿತ್ತು. **ಸ್ವಚ್ಛಂದ** ದೇವತಾ ಕಲ್ಪನೆ, ನಿಷ್ಕಾಮ ಸಮರ್ಪಣ ಭಾವದ ಭಕ್ತಿ ಇವು ಅನಂತರದ ಬೆಳವಣಿಗೆಗಳು. ಇಂಥ ದೇವನನ್ನು ಒಲಿಸಲು ಸಂಪೂರ್ಣ ದೈನ್ಯವೇ ದಾರಿ. ಆ ದೈನ್ಯದ ಪ್ರದರ್ಶನಕ್ಕೆ **ಉದ್ದಂಡ** ನಮಸ್ಕಾರದಂಥ ಶರಣ ಭಾವದ ಉಪದೇಶ ಬಂತು. ನಮಸ್ಕಾರಕ್ಕೆ ಸಂಬಂಧಿಸಿದಂಥ ಶಬ್ದಗಳ ಬೆಳವಣಿಗೆ ಈ ಧಾರ್ಮಿಕ-ಸಾಂಸ್ಕೃತಿಕ ರೂಪಾಂತರವನ್ನೇ ಸಂಕೇತಿಸುತ್ತದೆಯೇ ? ಅದು ರಾಜಕಾರಣದಲ್ಲಿ ಸಾಮ್ರಾಜ್ಯಗಳ ಬೆಳವಣಿಗೆಯ ಫಲವಾಗಿರಬಹುದೆ ?

೧೦೭

**ನಾಟಕ** ಎಂದೊಡನೆ ನಮಗೆ ಆಧುನಿಕರಿಗೆ ಹೊಳೆಯುವುದೆಂದರೆ ಬಹುತರವಾಗಿ ಗದ್ಯದಲ್ಲಿ, ಕೆಲ ಸಲ ಹಾಡುಗಳಿಂದೊಡಗೂಡಿದ, ಸ್ವಲ್ಪ ಅತಿಶಯವಾಗಿ ಮನುಷ್ಯ

ವರ್ತನೆಗಳನ್ನು ರಂಗದ ಮೇಲೆ ಬೇರೆ ಬೇರೆ ಪಾತ್ರಗಳು ಆಡಿ ತೋರಿಸುವ ಒಂದು ಸಾಹಿತ್ಯ ಪ್ರಕಾರ. ಮಧ್ಯದಲ್ಲಿ ಹಾಡುಗಳಿಂದ ಕೂಡಿದ್ದರೆ ಅದಕ್ಕೆ **ಸಂಗೀತ ನಾಟಕ**, ತುಂಬಾ ಹಾಡುಗಳಿದ್ದರೆ **ಸಾಗ್ರ** ಅಥವಾ **ಸಮಗ್ರ** ಸಂಗೀತ ನಾಟಕ ಎಂದು ಹೆಸರುಗಳನ್ನು ಕೊಟ್ಟಿದ್ದೇವೆ. ನೃತ್ಯಗಳ ಮೂಲಕ ಪಾತ್ರಗಳು ಭಾವವನ್ನು ಪ್ರಕಟಿಸುತ್ತಿದ್ದರೆ ಅದಕ್ಕೆ **ನೃತ್ಯ ನಾಟಕ** ಎಂದೂ ಕರೆಯುತ್ತೇವೆ. ನಾಟಕಕ್ಕೆ ಇಂಗ್ಲೀಷ್ ಪದವಾದ **ಡ್ರಾಮಾ** ಶಬ್ದ ಕೂಡ ನಮ್ಮ ಶಬ್ದ ಭಂಡಾರದಲ್ಲಿ ಸೇರಿಹೋಗಿದೆ. ಹಿಂದೆ **ನಾಟಕ ಮಂಡಳಿ**ಗಳಾಗಿದ್ದವುಗಳು ಈಗ **ಡ್ರಾಮಾ ಕಂಪನಿ**ಗಳಾಗಿವೆ.

ಆದರೆ ನಾಟಕ ಶಬ್ದದ ಮೂಲವನ್ನು ಶೋಧಿಸಿದರೆ ಅದು ನಮ್ಮನ್ನು **ನೃತ್, ನರ್ತ್** ಧಾತುಗಳ ಕಡೆಗೆ ಕರೆದೊಯ್ಯುತ್ತದೆ. ರ-ಕಾರದ ಹತ್ತಿರ ಬರುವ ತ-ಕಾರ ಮತ್ತು ದ-ಕಾರ. ಟ-ಕಾರ ಮತ್ತು ಡ-ಕಾರವಾಗಿ ಮಾರ್ಪಡುವುದೂ ಮೂಲ ಶಬ್ದದಿಂದ ಸ್ವಲ್ಪ ಅರ್ಥ ವ್ಯತ್ಯಾಸವನ್ನು ತೋರಿಸಲು ಈ ಮಾರ್ಪಾಟನ್ನು ಉಪಯೋಗಿಸುವುದೂ ವೈದಿಕ ಸಂಸ್ಕೃತದ ಕಡೆಗಾಲದಲ್ಲೇ ಕಾಣಿಸುವ ಒಂದು ಒಲವು. ಪುರಾತನ ಕಾಲದಲ್ಲಿ ರಂಗ ಕಲೆಗಳು ಪ್ರಧಾನವಾಗಿ ನರ್ತನ ಕಲೆಗಳಾಗಿದ್ದವೆಂಬ ಅಂಶವನ್ನು **ನಟ, ನಟನಾ, ನಾಟಕ** ಶಬ್ದಗಳು ತೋರಿಸುತ್ತವೆ. (ನೃತ್ = ನಟ್). ವಾಸ್ತವಿಕವಾಗಿ ಸಂಗೀತ, ನೃತ್ಯ, ಅಭಿನಯ ಸಹಿತವಾದದ್ದೇ ನಾಟ್ಯ. **ನೃತ್ತ, ನೃತು, ನೃತಿ, ನೃತ್ಯ** ಎಲ್ಲದರಲ್ಲಿ ಕುಣಿಯುವುದು, ಅಭಿನಯಿಸುವುದು ಸೇರುತ್ತದೆ. ಗದ್ಯದ ಪ್ರವೇಶ ಮತ್ತು ಸಂಭಾಷಣೆಗಳಲ್ಲಿ ವಾಸ್ತವಿಕತೆಯ ಪ್ರಾಧಾನ್ಯ ಆ ಮೇಲಿನ ಬದಲಾವಣೆಗಳು. ಈಗ ನಾವು ನಾಟಕಗಳೆಂದು ಕರೆಯುವ ನಾನಾ ವಿಧಗಳಿಗೆಲ್ಲ ಒಟ್ಟಾಗಿ **ರೂಪಕ** ಎಂಬ ಹೆಸರನ್ನು ಸಂಸ್ಕೃತ ಲಾಕ್ಷಣಿಕರು ಕೊಟ್ಟರು. ಎಲ್ಲದರಲ್ಲಿಯೂ ಭವ್ಯವಾದ ವೇಷ, ಬಣ್ಣ ಮುಖ್ಯವಾಗಿದ್ದಂತೆ ಕಾಣುತ್ತದೆ.

ಅಂತೂ ''ನಾಟಕ''ವೆಂದರೇನೇ ನೃತ್ಯ ನಾಟಕವೆಂಬುದು ಪುರಾತನ ಕಲ್ಪನೆ. ಆ ಶಬ್ದದಲ್ಲೇ ಅದರ ಕಥೆ ಅಡಕವಾಗಿದೆ. ಆದ್ದರಿಂದ ನಿಜವಾಗಿ ''ನೃತ್ಯ ನಾಟಕ'' ಎಂಬ ಶಬ್ದವೇ ಅನವಶ್ಯಕ ಎಂದು ವಾದಿಸಬಹುದು. ಗ್ರೀಕ್ ನಾಟಕಗಳಲ್ಲಿಯೂ ಈ ಲಕ್ಷಣವಿತ್ತು. ಈ **ನೃತ್, ನಟ್** ಮುಂತಾದ ಮೂಲದಿಂದಲೇ ದ್ರಾವಿಡದಲ್ಲಿ **ನಟ್ಟುವನ್** (ನಟ) ಮೊದಲಾದವುಗಳು ಬಂದಿವೆ. ನೃತ್, ನರ್ತ್ ಇತ್ಯಾದಿಗಳ ಹಿಂದಿರುವ ಮೂಲ ಕಲ್ಪನೆ **ಬಿರುಸಾಗಿ ಚಲಿಸು** ಎಂಬುದಿದ್ದಂತೆ ಗೋಚರವಾಗುತ್ತದೆ. ಸಂಸ್ಕೃತದ ''ಋ'' ಧಾತು ಚಲನಾರ್ಥವಾಗಿದ್ದು ''ನೃತ್'' ಅದರಿಂದಲೇ ಕವಲೊಡೆದಿರಬಹುದು.

ಪ್ರಸಂಗತ್ವೇನ ಹೇಳುವುದಾದರೆ, ತುಳುವಿನಲ್ಲಿ ಭೂತ ವೇಷ ಹಾಕಿಕೊಂಡು ಕುಣಿಯುವ ದಂಧೆ ಮಾಡುವ ವರ್ಗಕ್ಕೆ **ನಲಿಕೆಯವರು, ನಲ್ಕೆಯವರು** ಎಂದೇ ಹೆಸರಿದೆ. **ನಲಿ** (= ತುಳು-**ನಲಿಪು**) ಎಂದರೆ (ಸಂತೋಷ ಅಥವಾ ಉತ್ಸಾಹದಿಂದ) ಕುಣಿಯೆಂದೇ ಎರಡೂ ಭಾಷೆಗಳಲ್ಲಿ ಅರ್ಥ.

''ನಾಟಕ''ದ ಶಾಬ್ದಿಕ ಅರ್ಥವನ್ನು ಕನ್ನಡದ ಯಕ್ಷಗಾನ, **ಸಣ್ಣಾಟ, ದೊಡ್ಡಾಟ** ಮೊದಲಾದವುಗಳೇ ಇಂದಿನ ಸಂಗೀತ ಅಥವಾ ಶುದ್ಧ ಗದ್ಯ ನಾಟಕಗಳಿಗಿಂತ ಹೆಚ್ಚು ಪ್ರತಿನಿಧಿಸುತ್ತವೆ. ಯಕ್ಷಗಾನಕ್ಕೂ ದಕ್ಷಿಣ ಕನ್ನಡದಲ್ಲಿ **ಬಯಲಾಟ** ಅಥವಾ ಬರೇ **ಆಟ** ಎಂದು ಹೆಸರಿದೆ. **ಆಟ** ಶಬ್ದ ಕೂಡ ಸಂಸ್ಕೃತದ ''ನೃತ್'', ''ನರ್ತ್''ಗಳಂತೆ ಮೂಲತಃ **ಚಲಿಸು, ಅತ್ತಿಂದಿತ್ತ ಓಡು, ಸ್ಪಂದಿಸು** ಎಂಬೆಲ್ಲ ಅರ್ಥಗಳುಳ್ಳ **ಆಡು**ಧಾತುವಿನಿಂದ ಹುಟ್ಟಿದೆ. ಒಂದು

ರೀತಿಯಲ್ಲಿ ಹಳೇ ಅರ್ಥದಲ್ಲಿನ ನಾಟ್ಯ, ನಾಟಕ ಶಬ್ದಗಳಿಗಿಂತ ಹೆಚ್ಚಾಗಿ **ಆಟ** ಶಬ್ದ ಈ ರಂಗ ಕಲೆಯ ಎಲ್ಲ ಅಂಗಗಳನ್ನೂ ತನ್ನಲ್ಲಿ ಒಳಗೊಂಡಿದೆ. ''ಆಡು'' ಶಬ್ದ ಕುಣಿಯುವುದರಲ್ಲಿ ಅಡಕವಾದ ದೈಹಿಕ ಚಲನೆಯನ್ನು ಮತ್ತು ಮಾತನ್ನು (ಉದಾ - ''**ಆಡದೆ** ಮಾಡುವವನು ರೂಢಿಯೊಳಗುತ್ತಮನು'') ಇವು ಎರಡನ್ನೂ ಅಲ್ಲದೆ ವಾದ್ಯಗಳ ಧ್ವನಿಯೆಂಬ ಅರ್ಥವನ್ನು ಕೂಡ ಪ್ರತಿಪಾದಿಸುವುದರಿಂದ ಅದೊಂದು ಪರಿಪೂರ್ಣ ಶಬ್ದವೇ ಸೈ. ವಿಶೇಷವೆಂದರೆ ನಮ್ಮ ಆಟಕ್ಕೆ ಹೇಗೊ ಹಾಗೆ ಇಂಗ್ಲೀಷಿನ ಪ್ಲೇ (Play)ಗೆ ಕೂಡ ಕ್ರೀಡೆಯೆಂಬರ್ಥದೊಡನೆ ಅಭಿನಯಾತ್ಮಕ ನಾಟಕ ಎಂಬರ್ಥವೂ ಇದೆ. ಉದಾಹರಣೆಗೆ Shakespear's plays. ಗ್ರೀಕ್ ಮೂಲದಿಂದ ಲ್ಯಾಟಿನ್‌ಭಾಷೆಯ ಮೂಲಕ ಬಂದ drama ಎಂಬುದು ಮೂಲತಃ **ಮಾಡು** ಎಂಬರ್ಥದ ಧಾತುವಿನ ಕವಲು. ಹೀಗೆ drama ವನ್ನು ಕ್ರಿಯಾ (action) ಪ್ರಧಾನವೆಂದು ಬೇಕಾದರೆ ತೆಗೆದುಕೊಳ್ಳಬಹುದು. ಒಟ್ಟಿನಲ್ಲಿ ಮಾನವ ಮನಸ್ಸು ಎಲ್ಲಿದ್ದರೂ ಶಬ್ದಗಳನ್ನು ಸೃಷ್ಟಿಸುವಾಗ ಒಂದು ಸಾಮಾನ್ಯ ಪಥವನ್ನೇ ಅನುಸರಿಸುತ್ತದೆಂದಲ್ಲವೇ ಈ ಪದಾರ್ಥ ಚಿಂತನೆ ತೋರಿಸಿಕೊಡುವುದು ?

ನಾಟಕವೆಂಬುದು ಗಾನ, ನರ್ತನ ಮತ್ತು ವಚನ ಎಂಬ ಮೂರುಗಳ ಸಂಯೋಜನೆ ಯೆಂದು ಹೇಳಿದೆವು. ಸಂಗೀತದ ರಾಗಗಳಲ್ಲಿ **ನಾಟ, ನಾಟೀ** ಎಂಬವುಗಳು ಕಾಣಿಸುತ್ತವಲ್ಲ. ಈ ನಾಟಕ್ಕೆ ನಾಟ್ಯದ ಸಂಬಂಧವುಂಟೆ ? ಮೊದಲ ನೋಟಕ್ಕೆ ಹಾಗೆ ತೋರಬಹುದು. ಹೆಚ್ಚಾಗಿ **ನಾಟ** ರಾಗದಲ್ಲಿ ಬಯಲಾಟದ ಮಂಗಲಾಚರಣೆ ಅಥವಾ ನಾಂದಿಯನ್ನು ಅನುಷ್ಠಿಸುತ್ತಾರೆ. ಆದರೆ ಅದು **ನಾಟಕದಲ್ಲಿರುವ** ನಾಟಕ್ಕೆ ಸಂಬಂಧಿಯಲ್ಲ. ನಮ್ಮ ರಾಗಗಳಿಗೆ ಬಹುತರವಾಗಿ ಭಾರತದ ''ದೇಶ''ಗಳ ಹೆಸರುಗಳನ್ನಿಡಲಾಗಿದೆ. ಕನ್ನಡ, ಬಂಗಾಳಾ, ಗೌಡ, ಮಾಳವ ಇತ್ಯಾದಿ. ಈ ನಾಟ, ನಾಟೀ ರಾಗ ಲಾಟ ದೇಶವನ್ನು ಕುರಿತದ್ದಾಗಿದೆ.

ಬ್ರಿಟಿಷ್ ಪ್ರಜಾಪ್ರಭುತ್ವ ಪದ್ಧತಿಯನ್ನು ಸ್ವೀಕರಿಸಿದ ನಾವು ಅವರ **ಪಾರ್ಲಿಮೆಂಟ್** ಪದಕ್ಕೆ ನಮ್ಮದೆ **ಸಂಸತ್ತು** ಎಂಬ ಶಬ್ದವನ್ನು ಮಾಡಿಕೊಂಡಿದ್ದೇವೆ. ಆದರೆ ಈ ಎರಡು ಶಬ್ದಗಳ ಅರ್ಥ ಯಥಾಪ್ರತಿ ಒಂದೇ ಅಲ್ಲ. **ಪಾರ್ಲಿಮೆಂಟ್** ಅಂದರೆ **ಮಾತಾಡುವ** ಸಭೆ. ಇದು ಇಂಗ್ಲೀಷ್ ಶಬ್ದವೂ ಅಲ್ಲ. ಇಂಗ್ಲೀಷಿಗೆ ಅಸಂಖ್ಯ ಶಬ್ದಗಳನ್ನು ಕೊಟ್ಟ ಪ್ರಾಚೀನ ಲ್ಯಾಟಿನ್ ಅಥವಾ ಗ್ರೀಕಿನ ಪದವೂ ಅಲ್ಲ. ಅದು ಫ್ರೆಂಚ್ ಭಾಷೆಯಿಂದ ತೆಗೆದುಕೊಂಡದ್ದು. ಫ್ರೆಂಚಿನಲ್ಲಿ parler ಎಂದರೆ **ಮಾತಾಡುವುದು**. ಇದರಿಂದಲೇ ಹುಟ್ಟಿದ parley ಎಂಬ ಶಬ್ದವನ್ನು ಯಾವುದಾದರೂ ಒಪ್ಪಂದಕ್ಕಾಗಿ ಮಾಡುವ **ಮಾತುಕತೆ** ಎಂಬರ್ಥದಲ್ಲಿ ಇಂಗ್ಲೀಷಿನಲ್ಲಿ ಬಳಸುತ್ತಾರೆ. ನಮ್ಮ ಸಂಸತ್ತು ವಾಸ್ತವಿಕವಾಗಿ **ಮಾತಾಡುವ** (ಕೆಲವು ಸಲ ತಲೆಬುಡವಿಲ್ಲದೆ) ಸ್ಥಳವೇ ಆಗಿದೆ. ಆದರೆ **ಸಂಸತ್** ಶಬ್ದಕ್ಕೆ **ಒಟ್ಟಾಗಿ ಕುಳಿತುಕೊಳ್ಳುವ** ಸ್ಥಳ ಅಥವಾ ಹಾಗೆ ಕೂಡ್ರುವುದು ಎಂದು ಅರ್ಥ. (ಸಂ = ಒಟ್ಟು + **ಸದ್** = ಕೂತುಕೊಳ್ಳು). ಕೂತ ಮೇಲೆ ಮಾತಾಡುವುದುಂಟೇ ಉಂಟಲ್ಲ. ಮನೆಗಳಲ್ಲಿ ಹೀಗೆ ವಿರಾಮವಾಗಿ ಕೂತು ಮಾತಾಡುವ ಕೋಣೆಗೆ ಇಂಗ್ಲೀಷಿನಲ್ಲಿ **ಪಾರ್ಲರ್** (parlour) ಎಂದಿದ್ದರೆ ನಮ್ಮಲ್ಲಿ **ಬೈಠಕ್ ಖಾನೆ** ಎಂಬ ಶಬ್ದ ಇದೆ. **ಬೈಠಕ್** ಎಂದರೆ ಕೂತುಕೊಳ್ಳುವುದು (ಬೈಠ್ = ಕೂತುಕೊ). ಈ ಪ್ರಾಕೃತ ಮೂಲದ ಶಬ್ದ ಇಂಗ್ಲೀಷಿನ ಸಿಟಿಂಗ್ (sitting)ಗೆ ಸಮ. ಹಿಂದಿನ ಕಾಲದಲ್ಲಿ ಕನ್ನಡ ವರ್ತಕ ಸಂಘಗಳು ತಮ್ಮ ಸಭೆಗಳಿಗೆ **ಬೈಸಿಗೆಗಳು**

ಎಂದು ಕರೆಯುತ್ತಿದ್ದರೆಂದು ಶಾಸನಗಳಿಂದ ತಿಳಿಯುತ್ತದೆ. ಬೈಸ್ = ಕೂತುಕೊ..

೧೦೪

ಪೃಥ್ವಿಯ ಮೇಲೆ ಮನುಷ್ಯ ಜಾತಿ ಅಸ್ತಂಗತವಾದ ಮೇಲೆ, ಯಾವುದೋ ಲೋಕದಿಂದ ಈ ನಿರ್ಜನ ಲೋಕಕ್ಕೆ ಬುದ್ಧಿಶಾಲಿ ಜೀವಿಗಳು ಬಂದಿಳಿದವೆಂದುಕೊಳ್ಳಿ. ಅವರು ಯಾವುದೋ ಉಪಾಯದಿಂದ ನಮ್ಮ ಭಾಷೆಗಳನ್ನು ಸಮೂಲವಾಗಿ ಅರ್ಥಮಾಡಿಕೊಳ್ಳಲು ಸಮರ್ಥರಾದರೆಂದುಕೊಳ್ಳಿ. ನಾವಿಂದು ಇರುಳನ್ನು ಹಗಲು ಮಾಡಬಲ್ಲ ಬೆಳಕಿನ ಮೇಲೆ ಪ್ರಭುತ್ವ ಸ್ಥಾಪಿಸಿದ್ದೆಲ್ಲ ಅವರಿಗೆ ಇದ್ದಕ್ಕಿದ್ದಂತೆ ಲಭ್ಯವಾಯಿತೆಂದುಕೊಳ್ಳಿ. ಆಗಲೂ ಒಂದು ಕಾಲದಲ್ಲಿ ನಾವು ಸಂಪೂರ್ಣವಾಗಿ ಹಗಲಿನ ಬೆಳಕನ್ನೇ ಅವಲಂಬಿಸಿ ಇತರ ಪ್ರಾಣಿಗಳ ಹಾಗೆ ಬದುಕಿದ್ದೆವೆಂಬ ಅಂಶವನ್ನು ಆ ಜೀವಿಗಳು ನಮ್ಮ ಭಾಷೆಯ ಪದಗಳಿಂದ ಅರ್ಥಮಾಡಿಕೊಂಡಾರು. ಅದು ಹೇಗೆ ನೋಡಿ :

ಅವರು ನಮ್ಮ ಲಿಖಿತಾವಶೇಷಗಳಲ್ಲಿ **ದಿನ, ದಿವಸ** ಎಂಬ ಶಬ್ದಗಳನ್ನು ಕಾಣುವರು. ದಿನ ಅಥವಾ ದಿವಸಕ್ಕೆ ೨೪ ಗಂಟೆ ಅಥವಾ ೬೦ ಗಳಿಗೆ ಎಂದೋದುವರು. ದಿನಕ್ಕೆ ಮೂರು ಪಾಳಿಗಳಲ್ಲಿ ನಮ್ಮ ಕಾರ್ಖಾನೆಗಳು ಕೆಲಸ ಮಾಡುತ್ತಿದ್ದವೆಂದು ತಿಳಿಯುವರು. ಮಧ್ಯ ರಾತ್ರಿಯಿಂದ ನಮ್ಮ ದಿನ ಪ್ರಾರಂಭವಾಗಿ ಮಧ್ಯ ರಾತ್ರಿಗೆ ಮುಗಿಯುವುದು ಎಂದೂ ಅವರು ದಾಖಲೆಗಳಿಂದ ಅರ್ಥ ಮಾಡಿಕೊಳ್ಳುವರು. ಆದರೂ ದಿನ, ದಿವಸ ಶಬ್ದಗಳ ಮೂಲದಲ್ಲಿ ಏನಿದೆಯೆಂದು ಶೋಧಿಸಿದರೆ ಅವರಿಗೆ ಹಗಲಿರುಳುಗಳನ್ನು ಒಂದು ಮಾಡಿದ್ದು ಮಾನವ ನಾಗರಿಕತೆಯ ಅಪರ ಕಾಲದಲ್ಲಿ ಎಂದು ಗೊತ್ತಾಗಿ ಹೋಗುವುದು. ಯಾಕೆಂದರೆ ದಿನ, ದಿವಸ ಎಂಬೀ ಪದಗಳು ಮೂಲತಃ ಆಕಾಶದಿಂದ ಬಂದ ಬೆಳಕನ್ನು, ಅಂದರೆ ಸೂರ್ಯ ಪ್ರಕಾಶವನ್ನು ಸೂಚಿಸುವ ಸಂಸ್ಕೃತ ಪದಗಳು. ಅದು ಇರುಳನ್ನು ಒಳಗೊಂಡಿಲ್ಲ. ದಿನ, ದಿವಸ ಪದಗಳಿಗೆ ಸಂವಾದಿಯಾದ ಲ್ಯಾಟಿನ್, ಗಾಥಿಕ್, ಸ್ಲಾವಿಕ್, ಅವೆಸ್ತನ್, ಲಿಥುವೇನಿಯನ್ ಪದಗಳನ್ನು ವಿಮರ್ಶಿಸಿದರೆ ಅವರಿಗೆ ಇದು ಇನ್ನಷ್ಟು ದೃಢಪಡುತ್ತಿತ್ತು. ಆಕಾಶಕ್ಕೂ ಬೆಳಕಿಗೂ ಒಂದೇ ಪದ ಬಳಕೆಯಲ್ಲಿದ್ದದ್ದನ್ನು ಅವರು ಗಮನಿಸುವರು.

''ದಿನಾಲೂ ಬಂದು ಪೀಡಿಸುತ್ತಾರೆ'' ಎಂಬುವುದರಲ್ಲಿ ರಾತ್ರಿ ಬಂದು ಪೀಡಿಸುವವರೂ ಸೇರಿರಬಹುದಾದರೂ ದಿನಾ ಎಂಬ ಶಬ್ದ ಮಾತ್ರ ಹಗಲನ್ನೇ ಸೂಚಿಸುತ್ತದಲ್ಲವೇ ? ಒಟ್ಟಿನಲ್ಲಿ ಅವರು ಮನುಷ್ಯ ಜಾತಿ ಆದಿಯಲ್ಲಿ ಹಗಲಿನ ಬೆಳಕನ್ನೇ ನೆಚ್ಚಿ ದುಡಿಯುತ್ತಿತ್ತೆಂದೂ ರಾತ್ರಿಯಲ್ಲಿ ಅದರ ಚಟುವಟಿಕೆ ಶೂನ್ಯಪ್ರಾಯವಾಗಿತ್ತೆಂದೂ ಆಮೇಲೆ ತನ್ನ ಬೆಳಕನ್ನು ತಾನೇ ಸೃಷ್ಟಿಸಿಕೊಂಡರೂ ಭಾಷೆಯ ಶಬ್ದಗಳು ಬದಲಾಗಲಿಲ್ಲ, ಅಂತೂ ಮನುಷ್ಯ ದಿವಾಚರ ಪ್ರಾಣಿ ಹೊರತು ರಾತ್ರಿಂಚರನಲ್ಲವೆಂದೂ ಅವರು ಸರಿಯಾಗಿ ತೀರ್ಮಾನಿಸುವುದು ಖಂಡಿತ.

ಮನುಷ್ಯನ ಬಹುತರ ಭಾಷೆಗಳಲ್ಲೆಲ್ಲ ಈ ಲಕ್ಷಣ ಗೋಚರಿಸುತ್ತದೆ. ಪಾರಸೀಕ ಭಾಷೆಯಲ್ಲಿ ದಿನಕ್ಕೆ ರೋಜ್ ಎನ್ನುವರು. ''ರೋಜ್ ಆತಾ ಹೈ'' ಎಂಬಲ್ಲಿ ಹಿಂದಿಯಲ್ಲಿ ಆ ಪದ ಸೇರಿದ್ದು ಕಾಣಿಸುತ್ತದೆ. ಆದರೆ ಈ ರೋಜ್ ಎಂಬುದು ಹಳೇ ಪರ್ಶಿಯನ್ ಭಾಷೆಯಲ್ಲಿ ರೌಚ್ = ದಿವಸ, ಹಗಲು ಎಂದಿದೆ. ಅದು ಸಂಸ್ಕೃತದ **ರೋಚಸ್**ಗೆ

ಸಂಬಂಧಿಸಿದ್ದು. ರೋಚಸ್ = ಬೆಳಕು.

ಇಂಗ್ಲೀಷಿನ Day ಕೂಡಾ ಅಷ್ಟೇ. ಅದೂ ನಮ್ಮ ''ದಿವಸ''ಕ್ಕೆ ದೂರದ ಸಂಬಂಧಿ. ಈಗ Day 24 ತಾಸಿನದು. ಮಧ್ಯರಾತ್ರಿಯಿಂದ ಗಣಿಸತಕ್ಕದ್ದು ಆಗಿದ್ದರೂ ಮೊದಲು ಅದು ಸೂರ್ಯೋದಯದಿಂದ ಸೂರ್ಯಾಸ್ತದವರೆಗಿನ ಅವಧಿಯನ್ನೇ ಸೂಚಿಸುತ್ತಿತ್ತು.

ದ್ರಾವಿಡ ಭಾಷೆಗಳಿಗೆ ಹೋದರೂ ಅಷ್ಟೆ. ಅಲ್ಲಿ ಹಗಲಿಗೆ ಅನ್ವಯಿಸುವ ಅನೇಕ ಪದಗಳು ಸೂರ್ಯನಿಗೂ ಕಾಲಕ್ಕೂ ಅನ್ವಯಿಸುತ್ತವೆ. ನಮ್ಮ **ಹೊತ್ತು** ಪದವನ್ನು ತೆಗೆದುಕೊಳ್ಳಿ. ''ಹೊತ್ತು ಮೂಡಿತು'', ''ಹೊತ್ತು ನೆತ್ತಿಗೇರಿತು'', ''ಹೊತ್ತಾರೆ'' ಇಲ್ಲಿ ಹೊತ್ತು ಮತ್ತು ಸೂರ್ಯ ಒಂದೇ. ಈ ಶಬ್ದ ತಮಿಳು, ಮಲೆಯಾಳಿ, ತುಳು ಮೊದಲಾದ ಎಲ್ಲ ದ್ರಾವಿಡ ಭಾಷೆಗಳಲ್ಲಿ (ಪೊಳ್ತು, ಪೊರ್ತು ಇತ್ಯಾದಿ ರೂಪಗಳಲ್ಲಿ)ದ್ದರೂ ಅವೆಲ್ಲ ಸೂರ್ಯನನ್ನೂ, ಕಾಲವನ್ನೂ ನಿರ್ದೇಶಿಸುತ್ತವೆ. ತಮಿಳಿನಲ್ಲಿ **ನಾಳ್** ಹಗಲೂ ಹೌದು, ಹಗಲು ರಾತ್ರಿ ಸೇರಿದ ಅವಧಿಯೂ ಹೌದು, ಬೆಳಗು ಮುಂಜಾನೆಯೂ ಹೌದು. (ನಮ್ಮ ನಾಳೆ ಇದೇ ಪದದ ಸಂಬಂಧಿ).

ಕಾಲವೊಂದು ನಿರಂತರ ಪ್ರವಾಹವಾಗಿದ್ದರೂ ನಮ್ಮ ಸೌಕರ್ಯಕ್ಕೆ ನಾವು ಅದನ್ನು ವಿಭಾಗ ಮಾಡಲು ಉಪಯೋಗಿಸುವ ಕಲ್ಪನೆಗಳು ಕೌತುಕದವಾಗಿವೆ. **ಗಳಿಗೆಯ** ಬಗ್ಗೆ ಬಹಳ ಹಿಂದೆ ಹೇಳಿದ್ದೇನೆ. (ಪದಾರ್ಥ-೩೦) ಗಂಟೆಗೆ ಅರವತ್ತು **ನಿಮಿಷ** ಅನ್ನುವಾಗ ನಾವು ಬಳಸುವ ಆಧಾರ ರೆಪ್ಪೆ ಬಡಿಯುವಷ್ಟು ಹೊತ್ತು ಎಂಬುದನ್ನು ಸಹಾ ಗಮನಿಸುವುದಿಲ್ಲ. **ಮಿಷ್** ಎಂದರೆ ಕಣ್ಮುಚ್ಚು, ಮಿಟುಕಿಸು. ಋಗ್ವೇದದಲ್ಲಿ ನಿಮಿಷ್ ಎಂದರೆ ಕಣ್ಮುಚ್ಚು ಎಂದು. ಮಹಾಭಾರತ ಕಾಲಕ್ಕಾಗಲೇ ಅದು ಕಾಲದ ಒಂದು ಸೂಕ್ಷ್ಮ ಅಳತೆಯಾಗಿತ್ತು. ಈಗ ನಾವು ''ನಿಮಿಷ'' ಎನ್ನುವುದು ಒಮ್ಮೆ ಕಣ್ಮುಚ್ಚಿ ತೆರೆಯುವುದಕ್ಕೆ ಬೇಕಾದದ್ದಕ್ಕಿಂತ ತುಂಬಾ ಜಾಸ್ತಿ ಸಮಯಕ್ಕೆ ನಿಜ. ಆದರೆ ಕಾಲದ ಸಣ್ಣ ಖಂಡವನ್ನು ಸೂಚಿಸುವುದಕ್ಕೆ ಅದು ಆಧಾರ ಕಲ್ಪನೆಯಷ್ಟೆ. ಜ್ಯೋತಿಷಿಗಳು ಗಳಿಗೆಯ ೬೦ರ ಅಂಶವನ್ನು ಸೂಚಿಸಲು ಪಲ (= ವಿಘಳಿಗೆ) ಎಂಬೊಂದು ಮಾನವನ್ನು ಬಳಸುತ್ತಾರೆ. ಈ ಶಬ್ದದ ಮೂಲ ಖಚಿತವಿಲ್ಲ. ಆದರೆ ಹಿಂದಿ ಮೊದಲಾದ ಪ್ರಾಕೃತ ಜನ್ಯ ಭಾಷೆಗಳಲ್ಲಿ **ಪಲಕ** ಎಂಬ ಶಬ್ದವೊಂದಿದೆ. ಅದರ ಅರ್ಥ ಕಣ್ಣ ರೆಪ್ಪೆ. ಸಂಸ್ಕೃತ ವಾಙ್ಮಯದಲ್ಲಿ ಸ್ವಲ್ಪ ತಡವಾಗಿ (ಗಣಿತಾಧ್ಯಾಯ) (೭-೮ನೇ ಶತಮಾನ) ಪ್ರವೇಶಿಸಿದ ಈ ಪದ ದೇಶೀಯವಿರಬಹುದೆಂದು ನನ್ನ ಅನುಮಾನ. ಹಾಗಾದರೆ ಪಲಕವೂ ನಿಮಿಷಕ್ಕೆ ಸಮಾನವಾದ ಮೂಲ ಅರ್ಥವುಳ್ಳದ್ದಾಯಿತು. ಸಾಮಾನ್ಯ ವ್ಯವಹಾರದಲ್ಲಿ ನಾವು ಕಣ್ಮುಚ್ಚಿ ತೆರೆಯುವುದರೊಳಗೆ ಬರುತ್ತೇವೆ ಎನ್ನುವುದು (ಇಂಗ್ಲೀಷಿನಲ್ಲಿ I will come in a wink; wink = ರೆಪ್ಪೆ ಬಡಿ) ಮೇಲಿನ ಊಹೆಗಳನ್ನು ಬೆಂಬಲಿಸುತ್ತದೆ.

**ಕ್ಷಣ** ಎಂಬ ಇನ್ನೊಂದು ಪದವನ್ನೂ ನಾವು ಕಾಲದ ಸೂಕ್ಷ್ಮ ಭಾಗಕ್ಕೆ ಬಳಸುತ್ತೇವೆ. ಕಾಳಿದಾಸನ ರಘುವಂಶದಲ್ಲಿ ಈ ಪದ ಇದೆ. ಗಣಿತ ಶಾಸ್ತ್ರದಲ್ಲಿ ಇದನ್ನು ನಾಲ್ಕು ಮಿನಿಟು ಎಂದು ಕೆಲವೆಡೆ, ಒಂದು ಸೆಕೆಂಡಿನ ೪/೫ ಅಂಶ ಅಥವಾ ಅದಕ್ಕೂ ಸೂಕ್ಷ್ಮವಾದ ೨೪/೩೫ ಅಂಶ ಇತ್ಯಾದಿಯಾಗಿ ಇತರತ್ರ ನಿಗದಿಪಡಿಸಿದೆ. ಆದರೆ ''ಕ್ಷಣ'' ಎಂದರೆ ಮೂಲತಃ ಏನು ? ಖಂಡಿತವಿಲ್ಲ. ಆದರೂ ಕ್ಷಿ ಎಂಬ ಸಂಸ್ಕೃತ ಧಾತು ಚಿಕ್ಕದು ಮಾಡು, ನಶಿಸುವಂತೆ ಮಾಡು ಇತ್ಯಾದಿ ಅರ್ಥ ಕೊಡುತ್ತಿದ್ದು ಅದರಿಂದ ''ಕ್ಷಣ'' ಹುಟ್ಟಿರಬೇಕೆಂದೊಂದು ಊಹೆ ಇದೆ. ಅರ್ಥಾತ್ ತುಂಡರಿಸಿದ್ದು. ಆದ್ದರಿಂದ ಚಿಕ್ಕದು. ಕ್ಷಣ ಕಾಲದ ಒಂದು ಚಿಕ್ಕ ಅಂಶ

ಎನ್ನೋಣ. ಇಂಗ್ಲೀಷಿನ Minute (ಮಿನಿಟ್) ಪದ ಕೂಡ ಹೀಗೆಯೇ ಹುಟ್ಟಿದ್ದು. ಲ್ಯಾಟಿನ್ನಿನಲ್ಲಿ Minutus ಎಂದರೆ ಕಮ್ಮಿ ಮಾಡಿದ್ದು. ಆದ್ದರಿಂದ ಚಿಕ್ಕದು ಎಂದಷ್ಟೇ ಅರ್ಥ. Minor, Minimum ಇತ್ಯಾದಿ ಪದಗಳೂ ಅಲ್ಲಿಂದಲೇ ಜನಿಸಿದವುಗಳು. ಹೀಗೆ ಕ್ಷಣ ಮತ್ತು ಮಿನಿಟು ಅರ್ಥಬಂಧುಗಳು. ಮೊದಲಿದ್ದದ್ದು ಒಟ್ಟಾರೆ ಸ್ಥೂಲ ಅರ್ಥ. ಶಾಸ್ತ್ರಕ್ಕಾಗುವಾಗ ಈ ಸ್ಥೂಲಕ್ಕೊಂದು ನಿಶ್ಚಿತ ಮೌಲ್ಯ ಕೊಡಲಾಗುತ್ತದೆ ಅಷ್ಟೇ. ಕನ್ನಡದಲ್ಲೂ ಅಷ್ಟೇ. ಸಂಸ್ಕೃತ ಅಥವಾ ಇಂಗ್ಲೀಷಿನಲ್ಲೂ ಅಷ್ಟೇ.

## ೧೧೯

''ರೊಕ್ಕವೆರಡಕ್ಕು ದುಕ್ಕ ಕಾಣಕ್ಕ'' ಎಂದು ದಾಸರು ಹಾಡಿದ್ದಾರೆ. ಪುರಂದರ ಮತ್ತು ಕನಕದಾಸರಿಬ್ಬರೂ ಈ ಪದವನ್ನು ಬಳಸಿದ್ದಾರೆ. **ರೊಕ್ಕ**ವೆಂದರೆ ಇಲ್ಲಿ ಹಣ. ಆದರೆ ಈ ಶಬ್ದ ಎಲ್ಲಿಂದ ಬಂತು ? ಕನ್ನಡದ ವಿಜಯನಗರ ಪೂರ್ವದ ಕೋಶಗಳಲ್ಲಿ ಇದು ಕಾಣಸುವುದಿಲ್ಲ. ಮರಾಠಿಯಲ್ಲಿ ಯಾದವ ಕಾಲದಿಂದ (೧೨-೧೪ನೇ ಶತಮಾನ) **ರುಕಾ** ಎಂಬ ರೂಪದಲ್ಲಿ ಅದುಂಟೆಂದು ಕುಲಕರ್ಣಿಯವರ ವ್ಯುತ್ಪತ್ತಿ ಕೋಶ ಹೇಳುತ್ತದೆ. **ರೊಖ್ಖ** ಎಂಬ ರೂಪದಲ್ಲಿ ಕೂಡ ಅದನ್ನು ಅಲ್ಲಿ ಕಾಣಬಹುದೆಂದು ಅವರೆನ್ನುತ್ತಾರೆ. ರುಕಾ ಎಂಬ ಶಬ್ದಕ್ಕೆ ಒಂದಾಣೆಯ ಹನ್ನೆರಡನೇ ಅಂಶ (ದಶಾಂಶ ನಾಣ್ಯಕ್ಕಿಂತ ಹಿಂದಿನ ''ಪೈ'') ಎಂದರ್ಥ. ರುಕ್ವಾ ಎಂಬ ರೂಪವೂ ಇದೆ. ಇದನ್ನು ಕುಲಕರ್ಣಿಯವರು ಸಂಸ್ಕೃತದ ರುಕ್ಮ (ನ್) ಶಬ್ದಕ್ಕೆ (ಚಿನ್ನ, ಹೊಳೆಯುವ) ತಗಲಿಸಿದ್ದರೂ ಅವರು ಅರಬ್ಬಿಯ ರುಕ್ಕಅ ಶಬ್ದವನ್ನೂ ಉಲ್ಲೇಖಿಸಿದ್ದಾರೆ. ಆ ಭಾಷೆಯಲ್ಲಿ **ರುಕ್ಕಅ** (-ಉರ್ದು ''ರುಕ್ಕಾ'') ಎಂದರೆ ಚೀಟಿ (ಚಿಕ್ಕ ಪತ್ರ), ತುಣುಕು ಎಂದೂ ಅರ್ಥ ಹೇಳಿದೆ. **ರುಕಾ** ಎಂಬ ನಾಣ್ಯ ಅತಿ ಚಿಕ್ಕದ್ದಾದ್ದರಿಂದ ಇದು ಸಂಭವನೀಯ ಮೂಲವಾಗಿ ಕಾಣುತ್ತದೆ. ಡಾ॥ ಶಂಕರ್ ಕೆದ್ಲಾಯರೂ ಅದೇ ಮೂಲವನ್ನು ನಿರ್ದೇಶಿಸಿದ್ದಾರೆ.

ಚಿಲ್ಲರೆ ಹಣ ಎಂಬರ್ಥದಲ್ಲಿ ಮೇಲಿನದು ನ್ಯಾಯವೆನಿಸಿದರೂ ಉತ್ತರ ಕರ್ನಾಟಕದಲ್ಲಿ ''**ರೋಖ** ಹಣ ಕೊಡು'' (ನಗದಿ, **cash**) ಎಂಬರ್ಥದಲ್ಲಿ ನಡೆಯುವ **ರೊಕ್ಕ** ಮಾತ್ರ ಅಷ್ಟು ಸಲೀಸಾಗಿ ಬೇರು ತೋರಿಸುವುದಿಲ್ಲ. ಇದಕ್ಕೆ **ರೋಕಡ್, ರೋಖಡ್** ಎಂಬ ಮರಾಠಿ ರೂಪಗಳಲ್ಲದೆ ಬಂಗಾಲಿ, ಹಿಂದಿ, ಪಂಜಾಬಿಗಳಲ್ಲಿಯೂ ರೋಕಡ್ ಎಂಬ ಸಂವಾದಿ ಪದಗಳು ಕಾಣಸುತ್ತಿವೆ. ದೇಶ್ಯ ಪ್ರಾಕೃತದಲ್ಲಿ ಕೂಡ **ರೋಕ್ಕಲು** ಎಂಬ ಪದವನ್ನು ಸಂಸ್ಕೃತದಲ್ಲಿ ರೋಕಕ್ರಯ (= ನಗದಿ ಬೆಲೆ) ಎಂಬ ಶಬ್ದವನ್ನೂ ಕೋಶಗಳು ಕೊಡುತ್ತವೆ. ವೈದಿಕ ಸಂಸ್ಕೃತದಲ್ಲಿ ರೋಕ ಶಬ್ದಕ್ಕೆ ಹೊಳೆಯುವಂಥಾದ್ದು (ರುಚ್ = ಹೊಳೆ) ಎಂಬರ್ಥವಿದೆ. ರುಕ್ಮ ಎಂದರೂ ಹೊಳೆಯುವಂಥಾದ್ದು. ಆದ್ದರಿಂದ ಚಿನ್ನ = **ರುಕ್ಮಕ** ಎಂಬುದು ಪ್ರಾಕೃತದಲ್ಲಿ **ರೋಕ್ಕಅ, ರೋಕಲು** ಆಗಿ ದೇಶೀಯ ಆರ್ಯಭಾಷೆಗಳಲ್ಲಿ ಸ್ಥಾನ ಪಡೆದಿರಬೇಕು. ಕಡೆಗೆ ದೇಶೀಯ **ರೋಕ್ಕವೂ** ಅರಬ್ಬಿ **ರುಕ್ಅ** ವೂ ಅರ್ಥವ್ಯಾಮಿಶ್ರಣಕ್ಕೊಳಗಾಗಿ ಕನ್ನಡಕ್ಕಾಗುವಾಗ **ರೊಕ್ಕ** ಕ್ಷುದ್ರ ನಾಣ್ಯ ಮತ್ತು ನಗದಿ ಹಣ ಎಂಬೆರಡೂ ಅರ್ಥಗಳನ್ನು ಕೊಡುವಂತಾಯಿತು.

ಪ್ರಾಚೀನ ಆಯುಧಗಳಲ್ಲಿ **ಬಿಲ್ಲು-ಬಾಣ**ಗಳು ಅತ್ಯಂತ ಜನಪ್ರಿಯವಾದವುಗಳು.

ಬಾಣಗಳನ್ನು ಏತರಿಂದ ಮಾಡುತ್ತಿದ್ದರು? ಬಾಣ ಎಂಬ ಹೆಸರೇ ಅದರ ಗುಟ್ಟು ಹೇಳುತ್ತದೆ. **ವಾಣ** (ಋಗ್ವೇದದಲ್ಲಿ), **ಬಾಣ** ಶಬ್ದಗಳ ಮೂಲಾರ್ಥ ಬಿದಿರು ಅಥವಾ ಆ ಜಾತಿಯ ಗಟ್ಟಿಹುಲ್ಲಿನ ಕಾಂಡ ಎಂದು. ಮೊದಲ ಬಾಣಗಳು ಚೂಪುಮಾಡಿದ ತೆಳ್ಳನ್ನ ಗಳಗಳೇ. ಬಾಣಕ್ಕಿರುವ ಇನ್ನೊಂದು ಹೆಸರು **ಶರ**. **ಶರ** ಎಂದರೂ ಒಂದು ತರದ ಬಿದಿರು ಜಾತಿಯ ಸಸ್ಯವೇ. **ಶರಾವತಿ** ಎಂಬ ನದಿಯ ಹೆಸರು ಅದರ ದಡದಲ್ಲಿ ಈ ಸಸ್ಯ ಬೆಳೆಯುತ್ತಿದ್ದುದನ್ನು ಸೂಚಿಸುತ್ತಿರಬಹುದು. ಬಹುಶಃ ಬೆತ್ತ. ಕನ್ನಡ ಕವಿಗಳು ಬಾಣಕ್ಕೆ ಬಳಸುವ ಎರಡು ಮುಖ್ಯ ಹೆಸರುಗಳು **ಕೋಲ್** ಮತ್ತು **ಕಣೆ**. ಮೊದಲನೆಯದು ಸಾಮಾನ್ಯವಾಗಿ ಯಾವುದೇ ಮರದ ಗಟ್ಟಿಯಾದ, ತೆಳುವಾದ ನೀಳಕಾಂಡವಾಗಿರ ಬಹುದಾದರೂ ಕಣೆಯೆಂಬುದು ಖಂಡಿತವಾಗಿ ಬಿದಿರ ಜಾತಿಯನ್ನೇ ನಿರ್ದೇಶಿಸುತ್ತದೆ. ಇದರಲ್ಲಿ ಸೋಜಿಗವಿಲ್ಲ. ಏಕೆಂದರೆ ಬಿದಿರ ಜಾತಿಯ ಸಸ್ಯ ಹಗುರಾಗಿಯೂ ಬಲವಾಗಿಯೂ ಇರುವ ಕಾಂಡವನ್ನು ಪಡೆದಿದೆ. (**ಬಾಣಕ್ಕೆ** '**ಕಾಂಡ**'ವೆಂದೂ ಹೆಸರಿದೆ). ಬಾಣಕ್ಕಿರುವ **ಶಿಲೀಮುಖ** ಎಂಬ ಇನ್ನೊಂದು ಹೆಸರು ಅದರ ತುದಿ (ಮುಖ) ಗಟ್ಟಿಯಾಗಿರುವುದನ್ನು ಸೂಚಿಸುತ್ತದೆ. ಬಾಣದ ತುದಿಗೆ ಪ್ರಥಮತಃ ಶಿಲೆಯಿಂದ ಸಿದ್ಧಗೊಳಿಸಿದ ಚೂಪು ತುದಿಯ ''ಮುಖ''ವನ್ನು ಜೋಡಿಸುತ್ತಿದ್ದರೆಂಬುದಕ್ಕೆ ಇದು ಒಂದು ಸೂಚಕವೆನ್ನಬಹುದು. (''ಶಿಲೀಮುಖ'' ಎಂದರೆ ಚೂಪಾದ, ಕಠಿನ ಸೊಂಡಿಯುಳ್ಳ ತುಂಬಿಯೂ ಹೌದು). ಬಿಲ್ಲು ಬಾಣ ಬಹುಶಃ ಶಿಲಾಯುಗದ ಆಯುಧ. ಬಾಣಕ್ಕಿರುವ **ಮಾರ್ಗಣ** ಎಂಬ ಇನ್ನೊಂದು ಹೆಸರು ಬೇಟೆಯಲ್ಲಿ (ಮೃಗಯಾ) ಇದರ ಉಪಯೋಗದ ದ್ಯೋತಕ. ಬಂದೂಕು ಬರುವ ಮುಂಚೆ ಬಾಣ ದೂರದಲ್ಲಿರುವ ಮೃಗಗಳನ್ನು ಹೊಡೆಯಲು ಎಲ್ಲಕ್ಕಿಂತ ಅನುಕೂಲ ಮತ್ತು ಬೇಟೆಗಾರನನ್ನು ಸುರಕ್ಷಿತವಾಗಿಟ್ಟೂ ಬೇಟೆಯನ್ನು ಕೊಲ್ಲಬಲ್ಲ ಆಯುಧವಾಗಿತ್ತು ತಾನೆ?

''**ಏಕಾಏಕಿ** ಬಂದುಬಿಟ್ಟಿತು'' ಎನ್ನುವಾಗ ಅನಿರೀಕ್ಷಿತವಾಗಿ, ಒಂದೇ ಪೆಟ್ಟಿಗೆ ಎಂದರ್ಥ. ಈ **ಏಕಾಏಕಿ** ಸಂಸ್ಕೃತದಿಂದ ಬಂತೆಂದು ಮೊದಲ ನೋಟಕ್ಕೆ ಅನ್ನಿಸುತ್ತದೆ. ಆದರೆ ನಿಜಕ್ಕೂ ಅದು ಪಾರಸೀಕ (ಆಧುನಿಕ) ಭಾಷೆಯ ದೇಣಿಗೆ. ಅಲ್ಲಿ **ಯಕಾಯಕ್** ಎಂಬುದು ರೂಪ. ಮೂಲತಃ ಇಲ್ಲಿ **ಯಕ್** ಎಂಬುದು ಸಂಸ್ಕೃತದ **ಏಕ** (= ಒಂದು) ಎಂಬುದಕ್ಕೆ ಸಂಬಂಧಿಸಿದ್ದು ಹೌದು. ಎರಡೂ ಭಾಷೆಗಳು ಒಂದೇ ತಳಿಯವು. ಆದರೆ ಸಂಸ್ಕೃತದಲ್ಲಿ ಈ ಪುನರುಕ್ತ ಶಬ್ದವಿಲ್ಲ. ಕೇಶಾಕೇಶಿ ಮೊದಲಾದಡೆಗಳಲ್ಲಿ ಇಂಥಾ ಪ್ರಯೋಗ ಸಂಸ್ಕೃತದಲ್ಲಿ ಕಾಣಿಸಿದರೂ **ಏಕಾಏಕಿ** ಸಂಸ್ಕೃತ ವ್ಯಾಕರಣದಿಂದ ನಿಷ್ಪನ್ನವಾಗಲು ಸಾಧ್ಯವಿಲ್ಲ. ಕನ್ನಡದಲ್ಲಿ ''ಏಕಾಏಕಿ'' ಮೊದಲ ಬಾರಿ ಕಾಣಿಸುವುದು ಕಳೆದ ಶತಮಾನದ ಉತ್ತರಾರ್ಧದಲ್ಲಿ; ಮೈಸೂರಿನಲ್ಲಿ ಸುಲ್ತಾನಿ ರಾಜ್ಯದ ಅವಧಿಯಲ್ಲಿ ಪಾರಸೀಕ ಭಾಷೆಯ ಪ್ರಭುತ್ವ ಏರಿಕೆಗೆ ಬಂದಾಗ. ಆ ಭಾಷೆಯಲ್ಲಿ ಈ ಶಬ್ದಕ್ಕೆ ಒಮ್ಮಿಂದೊಮ್ಮೆ, ಅನಿರೀಕ್ಷಿತ ಎಂದೇ ಅರ್ಥವಿದೆ.

ಇಷ್ಟು ಮಾತ್ರವಲ್ಲ: **ಒಮ್ಮಿಂದೊಮ್ಮೆ** ಎಂಬ ಕನ್ನಡ ಪದ ಕೂಡ ಪಾರಸೀಕ ''ಏಕಾಏಕಿ''ಯ ಪ್ರಭಾವದಿಂದ ಹುಟ್ಟಿಕೊಂಡ ಪದವೆನಿಸುತ್ತದೆ. ಇದಕ್ಕೂ ಪ್ರಾಚೀನ ಪ್ರಯೋಗ ಕಾಣಿಸುವುದಿಲ್ಲ. ನಮ್ಮ ಪ್ರಾಚೀನ ಸಾಹಿತ್ಯದಲ್ಲಿ ಈ ಅರ್ಥದಲ್ಲಿ **ಒರ್ಮೊದಲ್** ಎಂಬ ಪ್ರಯೋಗ ''ವಡ್ಡಾರಾಧನೆ''ಯಲ್ಲೇ ಇದೆ.

ಕರಾವಳಿ ಕರ್ನಾಟಕದಲ್ಲಿ ಒಂದೇ ಸಮನೆ ಎಂಬರ್ಥದಲ್ಲಿ **ಏಕ್‌ಸಾನ್** ಎಂಬ ಪದ ಚಾಲ್ತಿಯಲ್ಲಿದೆ. ಇದೂ ತೋರಿಕೆಗೆ ಮಾತ್ರ ಸಂಸ್ಕೃತ. ಅದೂ ಪಾರಸೀಕ **ಯಕ್‌ಸಾಂ** ಎಂಬುದರ ಕನ್ನಡೀಕರಣವೇ. **ಏಕಿನಿ** ಎಂಬ ಇನ್ನೊಂದು ಪದವೂ ಕರಾವಳಿಯಲ್ಲಿ ಬಳಕೆಯಲ್ಲಿದೆ. ಅದಕ್ಕೆ ಪ್ರಾಮಾಣಿಕತೆ, ವಿಶ್ವಾಸಾರ್ಹತೆ ಎಂಬರ್ಥವಿದೆ. ಇದಕ್ಕೂ ಏಕಕ್ಕೂ ಏನೂ ಸಂಬಂಧವಿಲ್ಲ. ಅದು ಪಾರಸೀಕ **ಯಕೀನ್ ಯಕೀನೀ** ಪದಗಳ ಸ್ವೀಕೃತಿ.

೧೧೦

**ಹೋಳಿಗೆ** ಕನ್ನಡಿಗರಿಗೆ ಎಷ್ಟು ಇಷ್ಟ ಮತ್ತು ಪರಿಚಿತವಾಗಿದೆಯೆಂದರೆ ಅದರ ವಂಶಾನುಕ್ರಮದ ಪ್ರಶ್ನೆಯೇ ಅವರ ತಲೆಗಳಲ್ಲಿ ಮೂಡದು. ಆದರೆ ಅದರ ಲಿಖಿತ ದಾಖಲೆ ೧೨ನೇ ಶತಮಾನಕ್ಕಿಂತ ಹಿಂದೆ ಹೋಗುವುದಿಲ್ಲ. ವಾಸ್ತವಿಕವಾಗಿ ಹೆಚ್ಚಿನ ಕೋಶಗಳಲ್ಲಿ ಹೋಳಿಗೆ, ಹೋಟಿಗೆಗಳಿಗೆ ಇರುವ ಅರ್ಥ (ಮೈಯಲ್ಲಿ ಏಳುವ) **ಗುಳ್ಳೆ, ಹುಗುಳು** ಎಂದಲ್ಲದೆ ಸಿಹಿತಿಂಡಿಯೆಂದಲ್ಲ. ಚನ್ನಬಸವಣ್ಣನ ಒಂದು ವಚನದಲ್ಲಿ ಕಡುಬು, ಕಜ್ಜಾಯಗಳೊಡನೆ **ಹೋಳಿಗೆಯೂ** ಪ್ರಸ್ತಾಪಿಸಲ್ಪಟ್ಟಿದೆಯಾದ್ದರಿಂದ ೧೨ನೇ ಶತಮಾನದಲ್ಲಿ ಅದು ಪ್ರಚಲಿತ ಖಾದ್ಯವಾಗಿತ್ತೆಂದು ವಿದಿತವಾಗುತ್ತದೆ. ೧೩ನೇ ಶತಮಾನದ ಜೈನ ಕಾವ್ಯ ಶಾಂತೀಶ್ವರ ಪುರಾಣದಲ್ಲಿ **ಅಂಗರ ಹೋಳಿಗೆಯ** ಉಲ್ಲೇಖವಿದೆ. **ಅಂಗರವೋಳಿಗೆ, ಅಂಗರವಳಿಗೆ, ಅಂಗರೋಳಿಗೆ** ಎಂಬ ರೂಪಗಳಲ್ಲಿ ಕೂಡಾ ಅದು ಸಿಗುತ್ತದೆ. ಅದರ ಸಂಸ್ಕೃತ ರೂಪ **ಅಂಗಾರ ಸ್ಫೋಟಿಕಾ.** ಅಂದರೆ ಕೆಂಡದಲ್ಲಿ ಸುಟ್ಟ ಉಬ್ಬುರೊಟ್ಟಿ. ಸಂಸ್ಕೃತ ಕೋಶಗಳಲ್ಲಿ ''ಅಂಗಾರ ಸ್ಫೋಟಿಕಾ'' ಎಂಬ ತಿಂಡಿಯ ಸುದ್ದಿ ಇಲ್ಲ. ಅಲ್ಲಿ ಕೂಡ **ಸ್ಫೋಟಿಕಾ** ಎಂದರೆ ಗುಳ್ಳೆ ಎಂದೇ ಅರ್ಥ. ''ಅಂಗಾರ ಸ್ಫೋಟಿಕೆ'' ಅಥವಾ ''ಅಂಗರ ಹೋಳಿಗೆ'' ಈಗಿನ ಹೂರಣದ ಸಿಹಿ ತಿಂಡಿಯೇ ಆಗಿತ್ತೋ ಬರಿ ಉಬ್ಬುರೊಟ್ಟಿಯೋ ತಿಳಿಯದು. ಹುಣ್ಣಿಮೆಯ ಚಂದ್ರನಂತೆ ಅದು ಬೆಳ್ಳಗೆ ಮತ್ತು ದುಂಡಾಗಿತ್ತೆಂಬುದು ಶಾಂತೀಶ್ವರ ಪುರಾಣದ ಹೇಳಿಕೆ. ಚನ್ನಬಸಣ್ಣನ ಹೇಳಿಕೆಯಿಂದ ತಾನೇ ಅದು ಸಿಹಿ ಭಕ್ಷವೆಂದು ಊಹಿಸಬರುತ್ತದೆ.

**ಸ್ಫೋಟಿಕಾ** ಅಂದರೆ ಉಬ್ಬಲು, ಸುಟ್ಟು ಅಥವಾ ಕಾದು ಉಬ್ಬಿದ್ದು. ಅದೇ **ಪೋಳಿಗೆ, ಹೋಳಿಗೆ.** ಹೀಗೆ ಅದು ಮರಾಠಿಯ ಪೋಳಿ (ಉದಾ : ಶಂಕರ ಪೋಳಿ = ಶಾಕರ ಪೋಳಿ), ಪೋಡಿ (ಭಜ್ಜಿ) ಇತ್ಯಾದಿಗಳ ಸಗೋತ್ರದ್ದು. ಬಂಗಾಲಿಯಲ್ಲಿ ಪೋಡಾ=ಸುಟ್ಟದ್ದು. ನಾದಿದ ಹಿಟ್ಟಿನ ಉಂಡೆಯೊಳಗೆ ಹೂರಣ ತುಂಬಿ ಲಟ್ಟಿಸಿ ಅಥವಾ ತಟ್ಟಿ ಹಂಚಿನಲ್ಲಿ ಬೇಯಿಸುವ ಉಪಾಯ ಎಂದೋ ಆಮೇಲೆ ಸೇರಿಕೊಂಡದ್ದು. ಹೂರಣ ಅಂದರೆ ಸಂಸ್ಕೃತದಲ್ಲಿ **ಪೂರಣ** (=ತುಂಬುವುದು). ಈ ಹೂರಣ ಎಳ್ಳು, ಸಕ್ಕರೆ, ಕಡಲೆ ಅಥವಾ ಹೆಸರು ಬೇಳೆಯದು. ರವಾಶಿರಾ, ಬೆಲ್ಲ ಕಲಸಿದ ತೆಂಗಿನ ತುರಿ ಇತ್ಯಾದಿ ಯಾವುದೇ ಆಗಬಹುದೆಂಬುದು ಆಧುನಿಕ ಪಾಕಶಾಸ್ತ್ರಜ್ಞರ ಆವಿಷ್ಕಾರ.

ಹೋಳಿಗೆಗೆ ಸಂಬಂಧಿಸಿದ ಶಬ್ದಗಳು ಸಂಸ್ಕೃತ-ಪ್ರಾಕೃತ ಮೂಲವಾಗಿದ್ದರೂ ಅದರ ಬೆಳವಣಿಗೆಯೆಲ್ಲ ಕರ್ನಾಟಕದಲ್ಲಿ ಆದಂತೆ ಕಾಣುತ್ತದೆ. ಯಾಕೆಂದರೆ ನೆರೆಯ ಮರಾಠಿ ಮೊದಲಾದ ಭಾಷೆಗಳಲ್ಲಿ ಈ ಶಬ್ದಗಳಿಲ್ಲ. ತೆಲುಗಿಗೂ **ಪೋಳಿ** ಹೋಗಿದೆ. ''ಪೋಳಿ''

ಕನ್ನಡದಿಂದಲೇ ಬಂತೆಂದು ತೆಲುಗು ಕೋಶ ಹೇಳುತ್ತದೆ. ಆದರೆ ಕರ್ನಾಟಕದ ಸೀಮೆಯೊಳಗೇನೇ ಹಳೇ ಮೈಸೂರಿನಲ್ಲಿ ಹೋಳಿಗೆಯನ್ನು ಹೋಲುವ **ಒಬ್ಬಟ್ಟು** ಇದೆ. ತೆಲುಗಿನಲ್ಲಿ ಕೂಡ ಒಬ್ಬಟ್ಟು ಸೇರಿದೆ. ಹೋಳಿಗೆ, ಒಬ್ಬಟ್ಟು ಒಂದೇ ಎಂದು ತೆಲುಗು ಕೋಶದ ಹೇಳಿಕೆ. ಇತರ ದ್ರಾವಿಡ ಭಾಷೆಗಳಲ್ಲಿ ಈ ಶಬ್ದವಿಲ್ಲ. ಅಲ್ಲದೆ ಈ ಶಬ್ದದ ನಿರುಕ್ತಿಯ ಬಗ್ಗೆ ಕನ್ನಡ ಕೋಶಗಳೂ ಮೌನವಾಗಿವೆ. **ಥಾಲೀಪಟ್ಟು, ಥಾಲೀಪಿಟ್ಟು** ಶಬ್ದದಂತೆ ಅಂಗೈಯಿಂದ ತಟ್ಟಿ ತಯಾರಿಸಿದ ಚಪ್ಪಟೆ (= ಪಟ್ಟು) ಹೂರಣ ಭಕ್ಷ ಎಂಬ ಅರ್ಥಕೊಡಬಹುದು. ''ಒಬ್'' ಎಂದರೆ ಬಹುಶಃ ''ಉಬ್ಬು''ವಿನ ಒಂದು ರೂಪ.

**ಪುರಿ ಬಾಸುಂದಿಯ** ಸವಿ ಉತ್ತರ ಕರ್ನಾಟಕದಲ್ಲಿ ಸರ್ವವಿದಿತ. ಈಚೆಗಿನವರೆಗೆ, ಅಂದರೆ ಒಳ್ಳೇ ಹಾಲು ಪರಿಮಳದ್ರವ್ಯಗಳು ದುರ್ಮಿಳವಾಗುವವರೆಗೆ! ಅನೇಕ ಸಿಹಿತಿಂಡಿಗಳಂತೆ ಇದೂ ಕನ್ನಡಿಗರಿಗೆ ಹೊರಗಿಂದ ಬಂದದ್ದು. ಅದು ಹಿಂದಿಯ **ಬಸೌಂಧೀ** ಅಥವಾ **ಬಾಸೌಂಧೀ** ಯ ಅಪಭ್ರಂಶ. **ಬಾಸ್** (ಸಂಸ್ಕೃತ ''ವಾಸ್'') ಎಂದರೆ ವಾಸನೆ, (ಸು) ಗಂಧ + **ದುಗ್ಧ** (= ಹಾಲು). ಹಾಲು ಮರಳಿಸಿ ಮುದ್ದೆಯ ಮಟ್ಟಕ್ಕೆ ತಂದು ಸಕ್ಕರೆ, ಕೇಶರ ಬೆರೆಸಿ ತಯಾರಿಸಿದ್ದು ಬಾಸುಂದಿ ಎಂದು ಗುಜರಾಥಿ ಕೋಶದ ಹೇಳಿಕೆ.

ಹೆಣ್ಣು ಮಕ್ಕಳನ್ನು **ಮೂದೇವಿ** ಎಂದು ಬಯ್ಯುವುದುಂಟಲ್ಲ, ಈ ಮೂದೇವಿ ಯಾರು? ಅವಳು **ಮುದುದೇವಿ**. ಮುದು ಎಂದರೆ ಹಳೆಯ, ಹಿಂದಿನ, ಮುಂಚಿನ, ಮೊದಲಿನ. **ಮೊದಲಿನ ದೇವಿ** ಅವಳು. ಇಲ್ಲಿ ದೇವಿ ಎಂದರೆ **ಮಾ-ದೇವಿ**, ಅರ್ಥಾತ್ ಲಕ್ಷ್ಮೀ, ಮಹಾಲಕ್ಷ್ಮೀ. ಅವಳಿಗೆ ಅಕ್ಕನಾದವಳು **ಜ್ಯೇಷ್ಠಾದೇವಿ** ಅಥವಾ ಜ್ಯೇಷ್ಠಾಲಕ್ಷ್ಮೀ. ಅವಳು ದಾರಿದ್ರ್ಯದ ದೇವತೆ, ಅಮಂಗಲ ದೇವಿ. ಅವಳ ಕಥೆ ಪುರಾಣಗಳಲ್ಲಿ (ಪದ್ಮ, ಭಾಗವತ) ಬರುತ್ತದೆ. ಅವಳು ಹೊಕ್ಕ ಮನೆ ಹಾಳು. ಹೀಗೆ ಮೂದೇವಿ ಎಂದರೆ ಮನೆಹಾಳಿ.

ಈ ''**ಮೂ**'', ''**ಮುದು**'', ''**ಮುನ್**'', **ಮುತ್** ಎಂಬ ಬೇರಿನಿಂದ ಹಲವು ದ್ರಾವಿಡ ಶಬ್ದಗಳು ಹುಟ್ಟಿವೆ. **ಮುತ್ತಜ್ಜ** ಎಂದರೆ ಮೊದಲಿನ ಅಜ್ಜ ಅರ್ಥಾತ್ ಅಜ್ಜನಿಗಿಂತ ಹಿರಿಯ. ''ಮುತ್ತಪ್ಪ'' ''ಮುತ್ತಯ್ಯ'' ಇತ್ಯಾದಿ ಅಂಕಿತ ನಾಮಗಳೂ ಬಂದಿವೆ. ಈ ಹೆಸರುಗಳಿಗೂ ಮುತ್ತು (ಚುಂಬನ) ಅಥವಾ ಮುತ್ತು (ಒಂದು ಬೆಳೆಬಾಳುವ ರತ್ನ. ಸಂ. ಮುಕ್ತಾ) ಇವುಗಳಿಗೂ ಸಂಬಂಧವಿಲ್ಲ; ''ಮುದುಕ'' ಎಂದು ನಾವು ಸಾಮಾನ್ಯವಾಗಿ ತಿಳಿಯುವ ಅರ್ಥವೂ ಇಲ್ಲಿ ಅನ್ವಯಿಸುವುದಿಲ್ಲ. ಹಿರಿಯ, ಶ್ರೇಷ್ಠ, ಜ್ಯೇಷ್ಠ ಎಂದು ತಾನೇ ಇಲ್ಲಿ ಗೌರವಪೂರ್ಣ ಅನ್ವಯ. ಬಹುಶಃ ನಮ್ಮ ವಚನಕಾರ್ತಿ ಮುಕ್ತಾಯಕ್ಕನ ಹೆಸರು **ಮುತ್ತಾಯಕ್ಕ** (ಮುನ್ + ತಾಯ್ + ಅಕ್ಕ) ಎಂಬುದರ ಸಂಸ್ಕೃತೀಕೃತ ರೂಪ. ಪ್ರಸಿದ್ಧ ''ತಿರುಕನ ಕನಸು'' ಎಂಬ ನೀತಿಪದದ ಕರ್ತ ''**ಮುಪ್ಪಿನ** ಷಡಕ್ಷರ'' ದೇವ; ಅವನು ಅನಂತರ ಬಂದ ಪ್ರಸಿದ್ಧ ಮಹಾಕವಿ ಷಡಕ್ಷರ ದೇವನಿಂದ ಭಿನ್ನ ಮತ್ತು ಹಿಂದಿನವ ಎಂದಷ್ಟೇ ತಾತ್ಪರ್ಯ ಹೊರತು ಮುಪ್ಪು ಬಂದವನೆಂದು ಅಲ್ಲ. ನಮ್ಮ ಪ್ರಸಿದ್ಧ ಸಂಗೀತ ಕೃತಿಗಳ ಕರ್ತರಾದ **ಮುತ್ತಯ್ಯ** ಭಾಗವತರು, ತಮಿಳುನಾಡಿನ ನವಕೋಟಿ ನಾರಾಯಣ **ಮುತ್ತಯ್ಯ** ಚೆಟ್ಟಿಯಾರ್ ಮೊದಲಾದವರ ಹೆಸರುಗಳು ''ಮುತ್ತ''ರ ಬಗ್ಗೆ ಹಿಂದಿನ ಕಾಲದಲ್ಲಿದ್ದ ಗೌರವವನ್ನು ಸೂಚಿಸುತ್ತವಲ್ಲದೆ ತುಚ್ಛತೆಯನ್ನಲ್ಲ.

ಸಂಸ್ಕೃತದಲ್ಲಿ **ವೃದ್ಧ** ಎಂಬ ಶಬ್ದ ಕನ್ನಡದಲ್ಲಿ ಮೇಲೆ ಹೇಳಿದಂತೆ ''ಮುಪ್ಪಿನ'' ಶಬ್ದವು

ಮಾಡುವ ಕೆಲಸವನ್ನೇ ಮಾಡುತ್ತದೆ. ''ವೃದ್ಧಪರಾಶರ'' ಎಂಬೊಬ್ಬ ಸ್ಮೃತಿಕಾರನಿದ್ದಾನೆ. ಅವನು ಪ್ರಸಿದ್ಧನಾದ ಪರಾಶರ ಋಷಿಗಿಂತ ಭಿನ್ನನೂ ಅವನಿಗಿಂತ ಪೂರ್ವಿಕನೂ ಆಗಿದ್ದಾನೆ.

ನಾವೀಗ ''ವೃದ್ಧ'' ಎಂದರೆ ವಯಸ್ಸು ಮೀರಿದವ ಎಂದು ತಿಳಿಯುತ್ತೇವೆ. ಆದರೆ ಆ ಶಬ್ದದ ಮೂಲ ಅರ್ಥ ''ಬೆಳೆದವ'' (ವೃಧ್ = ಬೆಳೆ; ವೃದ್ಧಿ= ಬೆಳವಣಿಗೆ). ''ಜ್ಞಾನ ವೃದ್ಧ'',''ತಪೋ ವೃದ್ಧ'' ಎಂಬ ಪದಗಳಲ್ಲಿ ವೃದ್ಧ ಶಬ್ದಕ್ಕೆ ಬೆಳೆದ, ಹಿರಿಯ (= ದೊಡ್ಡವ) ಎಂದು ಮಾತ್ರ ಅರ್ಥ. ''ವಯೋವೃದ್ಧ'' ಸಾಕಷ್ಟು ವಯಸ್ಸಾದವನನ್ನು ನಿರ್ದೇಶಿಸುತ್ತದೆ; ಆದರೂ ಇದು ಮುದಿತನವನ್ನು ಸೂಚಿಸುವುದಕ್ಕಿಂತಲೂ ಗೌರವವನ್ನು (ಗೌರವ = ಗುರುತನ, ಹಿರಿಯತನ) ಅಭಿಪ್ರಾಯಿಸುತ್ತದೆ. ಸಂಸ್ಕೃತ ''ವೃದ್ಧ''ವೇ ಪ್ರಾಕೃತದಲ್ಲಿ ''**ವಡ್ಡ**ನಾಗಿ'' ಕನ್ನಡಕ್ಕೂ ಬಂದಿದ್ದಾನೆ. ''ವಡ್ಡವಣಿಯ'' ಎಂದರೆ ವೃದ್ಧವಣಿಜ = ಹಿರಿಯ ವರ್ತಕ; ಅವನು ವಯಸ್ಸಿನಲ್ಲಿ ಹಿರಿಯನಾಗಿರಬೇಕಿಲ್ಲ. ''ಗ್ರಾಮವೃದ್ಧ''ನೇ **ಗಾಮುಂಡ, ಗಾವುಂಡ, ಗೌಡ**. ಇದು ಅಧಿಕಾರಸ್ಥಾನವನ್ನು ಸೂಚಿಸುವ ಶಬ್ದವಾಗಿ ರೂಪುಗೊಂಡಿತು.

ವೃದ್ಧ ಶಬ್ದವೇ ಹಿಂದಿಯಲ್ಲಿ ಬುಡ್ಡಾ, ಆಗಿದೆ. ಇದು ಮಾತ್ರ ವಯಸ್ಸಿನಲ್ಲಿ ಮುಪ್ಪಾದವನನ್ನೇ ನಿರ್ದೇಶಿಸುತ್ತದೆ.

೧೧೧

ಪ್ರಪಂಚದಲ್ಲಿ ಇದ್ದದ್ದಕ್ಕೆಲ್ಲ ಹೆಸರು ಬೇಕೇ ಬೇಕು. ಅದಕ್ಕೇ ನಾಮ ರೂಪಮಯ ಪ್ರಪಂಚ ಅನ್ನುವುದು. ಕೈಗೆ ಐದು ಬೆರಳು. ಅವಕ್ಕೆಲ್ಲ ಒಂದೊಂದು ಹೆಸರು ಬೇಕು. ಕನ್ನಡದಲ್ಲಿ **ಹೆಬ್ಬೆರಳು, ತೋರುಬೆರಳು, ನಡುಬೆರಳು, ಉಂಗುರಬೆರಳು, ಕಿರಿಬೆರಳು.** ಸಂಸ್ಕೃತದಲ್ಲಿ **ಅಂಗುಷ್ಠ, ತರ್ಜನಿ, ಮಧ್ಯಮ, ಅನಾಮಿಕ, ಕನಿಷ್ಠಿಕ.** ಬೆರಳ ಸಾಮಾನ್ಯಕ್ಕೆ ಸಂಸ್ಕೃತದಲ್ಲಿ **ಅಂಗುಲಿ**ಯೆಂದು ಅಭಿಧಾನ. ಸಂಸ್ಕೃತದ ಸೋದರಿ ಭಾಷೆಯಾದ ಪಾರಸೀಕದಲ್ಲಿಯೂ **ಅಂಗುಶ್ತ್** ಎಂದರೆ ಬೆರಳು. ಈ ಹೆಸರುಗಳ ಮತ್ತು ಅವುಗಳ ಹಿಂದೆ ಉದಯಿಸಿದ ನುಡಿಕಟ್ಟುಗಳ ಬಗ್ಗೆ ಯೋಚಿಸಿದರೆ ಅರ್ಥವತ್ತಾದ ಅಂಶಗಳು ಹೊರಪಡುತ್ತವೆ. ಹೆಬ್ಬೆರಳು, ನಡುಬೆರಳು, ಕಿರಿಬೆರಳು ಇವು ಸ್ವಯಂವ್ಯಕ್ತವಾದ ಅರ್ಥವುಳ್ಳವು. ಸಂಸ್ಕೃತದ ''ಅಂಗುಷ್ಠ'' ಎಂಬುದು ಅಂಗುಲಿಗಳಲ್ಲಿ ಹಿರಿಯದು ಎಂಬುದಾಗಿ ಸೂಚಿಸುತ್ತದೆ. ''ಮಧ್ಯಮ'' ಮತ್ತು ''ಕನಿಷ್ಠಿಕ'' ಕೂಡ ನಡು ಮತ್ತು ಕಿರಿ ಎಂಬರ್ಥದವುಗಳವೇ. ಹೆಬ್ಬೆರಳಿಗೆ ದ್ರಾವಿಡ ಭಾಷೆಗಳೊಂದೆರಡರಲ್ಲಿ ''ತಾಯಿಬೆರಳು'' ಎಂಬರ್ಥದ ಪದಗಳು ಇವೆ.

ವಿಶೇಷವಿರುವುದು ಎರಡನೇ, ನಾಲ್ಕನೇ ಬೆರಳುಗಳ ಹೆಸರುಗಳಲ್ಲಿ. ಎರಡನೆಯದಕ್ಕೆ ಕನ್ನಡದಲ್ಲಿ ''ತೋರುಬೆರಳು'' ಎನ್ನುವಾಗ ಮಾನವನು ಸಾಮಾನ್ಯವಾಗಿ ಏನನ್ನಾದರೂ ತೋರಿಸಲು ಬಳಸುವುದು ಅನಾದಿಯಿಂದಲೂ ಈ ಬೆರಳನ್ನೇ ಎಂಬಂಶ ನೆನಪಿಗೆ ಬರುತ್ತದೆ. ತೋರಿಸುವ ಬೆರಳು ಎಂದು ಇದನ್ನು ಕರೆಯುವುದು ಅಂತರ ಭಾಷೀಯ ಪ್ರವೃತ್ತಿಯಾಗಿದೆ. ಇಂಗ್ಲೀಷಿನಲ್ಲಿ ಇದಕ್ಕಿರುವ Index Finger ಎಂಬ ಹೆಸರು ಇದೇ ಅರ್ಥದ್ದು. Index ಎಂಬುದು ನಿರ್ದೇಶಿಸು (= ತೋರಿಸು) ಎಂಬರ್ಥದ ಲ್ಯಾಟಿನ್ ಶಬ್ದ.

ಈ ಬೆರಳು ತೋರಿಸುವುದೆಂಬುದು ಯಾವಾಗಲೂ ಒಳ್ಳೆ ಅರ್ಥದ ಕೆಲಸವಲ್ಲ.

ವಾಸ್ತವಿಕವಾಗಿ ಯಾರಿಗಾದರೂ, ಯಾತಕ್ಕಾದರೂ ಬೆರಳು ತೋರಿಸುವುದು ಮರ್ಯಾದೆಯ ರೀತಿಯಲ್ಲ. ದೇವರ ಪ್ರತಿಮೆಯ ಕಡೆ ಬೆರಳು ತೋರಿಸಿ ಆಡಬಾರದು ಎಂದಷ್ಟೆ ಅಲ್ಲ, ನೀರಿನ ಬುಗ್ಗೆಯ ಕಡೆಗೆ ಕೂಡ ಬೆರಳು ತೋರಿಸಬಾರದು, ತೋರಿಸಿದರೆ ಅದು ಮುನಿದು ಒಸರುವುದನ್ನೇ ನಿಲ್ಲಿಸುತ್ತದೆ ಎಂದು ಹಿಂದೆ ಹಿರಿಯರು ಎಚ್ಚರಿಸುವುದಿತ್ತು. ''ನಾಲ್ಕು ಜನ ಬೆರಳು ತೋರಿಸುವಂತಾಯಿತು'' ಎಂದೆನ್ನುವಾಗ ಅದು ನಿಂದಾವ್ಯಂಜಕ ಕ್ರಿಯೆಯೆಂದು ತಾತ್ಪರ್ಯವಲ್ಲವೆ? ಸಂಸ್ಕೃತದಲ್ಲಿ ತೋರು ಬೆರಳನ್ನು ''ತರ್ಜನಿ'' ಎಂದು ಕರೆಯುವಾಗಂತೂ ಹೆಸರಲ್ಲೆ ನಿಂದಾವ್ಯಂಜನೆ ಅಡಕವಾಗುತ್ತದೆ. ಸಂಸ್ಕೃತದಲ್ಲಿ **ತರ್ಜ್** ಧಾತುವಿಗೆ ಜರೆ, ನಿಂದಿಸು, ಭರ್ತ್ಸನೆ ಮಾಡು, ಆರೋಪ ಹೊರಿಸು, ಬೆದರಿಸು ಎಂದೆಲ್ಲ ಅರ್ಥವುಂಟು. ನಿಜವಾಗಿ ನಾವು ಯಾರನ್ನಾದರೂ ಎದುರಾ ಎದುರು ದೂಷಿಸಬೇಕಾದರೆ ಈ ಬೆರಳನ್ನಲ್ಲದೇ ಅವನ/ಳತ್ತ ಕುಕ್ಕಿದಂತೆ ಅಭಿನಯಿಸಿ ಆಡುತ್ತೇವೆ. ಭಾರತದ ಗಡಿಯಾಚೆಗೆ ಪಾರಸೀಕ ಭಾಷೆಯಲ್ಲಿ ಕೂಡ ನಿಂದಿತ ಅಥವಾ ಅಪಕೀರ್ತಿಗೊಳಗಾದ ವ್ಯಕ್ತಿಗೆ ''ಅಂಗುಶ್ತ್-ನುಮಾ'' ಎನ್ನುತ್ತಾರೆ. ಇಂಗ್ಲೀಷಿನಲ್ಲಿಯೂ to point a finger at ಅಂದರೆ ಯಾರನ್ನಾದರೂ ಕುರಿತಾಗಿ ನಿಂದಾವ್ಯಂಜನೆ ಮಾಡುವುದು.

ನಾಲ್ಕನೆಯ ಬೆರಳಾದ ''ಉಂಗುರ ಬೆರಳಿಗೆ'' ಆ ಹೆಸರು ಯಾವಾಗಿಂದ ಇದೆಯೆಂದು ಹೇಳಲಾಸಲ್ಲ. ಕನಕದಾಸನ ''ಮೋಹನ ತರಂಗಿಣಿ'' ಕಾವ್ಯದಲ್ಲಿ ಅದನ್ನು ಕಾಣುತ್ತೇವೆ. ಸಾಹಿತ್ಯದಲ್ಲಿ ಅದಕ್ಕಿಂತ ಪ್ರಾಚೀನ ಉಲ್ಲೇಖವಿದೆಯೇ ಎಂದು ಖಚಿತವಾಗಿ ನಾನರಿಯೆ. ವೈದಿಕರು ಅದಕ್ಕೆ ''ಪವಿತ್ರ ಬೆರಳು'' ಎನ್ನುತ್ತಾರೆ. ದರ್ಭೆ ಹುಲ್ಲಿಂದ ಉಂಗುರವನ್ನು ಮಾಡಿ (ಅದೇ ''ಪವಿತ್ರ'') ವೈದಿಕ ಕರ್ಮಾಚರಣೆಯ ಸಮಯದಲ್ಲಿ ತೊಡುವುದು ಬಹಳ ಪ್ರಾಚೀನ ರೂಢಿ. ಇಂಗ್ಲೀಷಿನಲ್ಲಿಯೂ ಅದಕ್ಕೆ Ring Finger (ಉಂಗುರ ಬೆರಳು) ಎಂದೇ ಹೆಸರಿದೆ. ಸಂಸ್ಕೃತದಲ್ಲಿ ಇದಕ್ಕೆ ಕುತೂಹಲಕರವಾದ ''ಅನಾಮಿಕ'' (= ಹೆಸರಿಲ್ಲದ್ದು) ಎಂಬ ಹೆಸರು ಕೊಟ್ಟಿದ್ದಾರೆ. ಉಳಿದ ನಾಲ್ಕು ಬೆರಳುಗಳಿಗೆ ಅವುಗಳ ಸಹಜ ರೂಪ ಸ್ವಭಾವಗಳಿಗನುಸಾರವಾಗಿ ಹೆಸರು ಕೊಟ್ಟಿದ್ದರೂ ಈ ಒಂದು ಬೆರಳಿಗೆ ಹೆಸರಿಡಬಹುದಾದ ಯಾವ ಗುಣವೂ ಎದ್ದು ಕಾಣುವುದಿಲ್ಲವಾದ್ದರಿಂದ ಅದಕ್ಕೆ ಅಭಿಧಾನವೇ ಇಲ್ಲ! ಅದಕ್ಕೆ ಉಂಗುರ ತೊಡಿಸಿದರು.

ಸ್ವಲ್ಪ ವಿಷಯಾಂತರ ಮಾಡುವುದಾದರೆ ಈ ''ಅನಾಮಿಕ'' ಎಂಬ ಹೆಸರು ಹಳೆ ಪರ್ಶಿಯನ್ ಭಾಷೆಯಲ್ಲಿ ಒಂದು ತಿಂಗಳಿಗೆ ಇತ್ತಂತೆ. ಅದು ಅವರ ಹತ್ತನೇ ತಿಂಗಳಾಗಿತ್ತು. ಅದು ಅವರ ಪರಮಾತ್ಮನಿಗೆ ಅರ್ಪಿತವಾದ ತಿಂಗಳು. ಪರಮಾತ್ಮ ಹೆಸರಿಲ್ಲದವನು. ಯಾಕೆಂದರೆ ಅವನೊಡನೆ ಹೋಲಿಸಲು ಯಾವ ವಸ್ತುವೂ ಇಲ್ಲ. ಯಹೂದ್ಯರ ''ಯಹೋವಾ'' (ಪರಮಾತ್ಮ) ಕೂಡ ನಾಮರಹಿತತ್ವವನ್ನೆ ಸೂಚಿಸುವ ನಾಲ್ಕಕ್ಷರಗಳ ಸಮಾಹಾರ. ಆವನಿಗೊಂದು ಹೆಸರಿಡುವುದೇ ಪಾಪ ಎಂಬ ಭಾವನೆ ಪ್ರಾಚೀನ ಯಹೂದ್ಯರಿಗಿತ್ತು.

ನಿಜ ಎಂದರೇನೆಂದು ಯಾವ ಕನ್ನಡಿಗನನ್ನು ಕೇಳಿದರೂ ''ಸತ್ಯ'' ಎಂದುತ್ತರ ಕೊಟ್ಟಾನು. ಆದರೆ ನಿಜಕ್ಕೆ ಈ ಅರ್ಥ ಕನ್ನಡಕ್ಕೆ, ಅದೂ ಆಧುನಿಕ ಕನ್ನಡಕ್ಕೆ ವಿಶಿಷ್ಟವಾದದ್ದೆಂದು ತೋರುತ್ತದೆ. ನಿಜಕ್ಕೆ ಸಂಸ್ಕೃತದಲ್ಲಿ ಸ್ವಂತದ್ದು, ತನ್ನದು ಎಂದೇ ಪ್ರಾಥಮಿಕ ಅರ್ಥ. ಅರ್ಥವನ್ನು ವಿಸ್ತರಿಸಿ ಸಹಜವಾದದ್ದು, ಸ್ವಾಭಾವಿಕವಾದದ್ದು ಎಂದೂ

ಅಭಿಪ್ರಾಯ ಕೊಡುವಂತೆ ಪ್ರಯೋಗಿಸಲಾಯಿತು. ''ನಿಜಜನ'' ಎಂದರೆ ತನ್ನವರು, ''ಪರಜನ'' ಎಂದರೆ ಹೆರವರು; ಶತ್ರುಗಳು ಎಂದರೂ ಸಲ್ಲಬಹುದು. ''**ನಿಜಸುಖಾಪೇಕ್ಷಿ**'' ಅಂದರೆ ತನ್ನ ಸುಖವನ್ನಷ್ಟು ನೋಡಿಕೊಳ್ಳುವವನು. ಆಧ್ಯಾತ್ಮವಾದಿಗಳು ''ನಿಜಸುಖ''ವನ್ನು ಆಧ್ಯಾತ್ಮಿಕ ಸುಖ ಎಂದೂ ಅರ್ಥಯಿಸಬಹುದು. ಆದರೆ ಈ ನಿಜ ಕನ್ನಡಿಗರ ಕೈಯಲ್ಲಿ ''ಸತ್ಯ'' ಎಂಬರ್ಥಕ್ಕೆ ಹೇಗೆ ತಿರುಗಿತು? ನಿಜ ಎಂದರೆ ಸ್ವಾಭಾವಿಕವಾದದ್ದು. ಯಾಕೆಂದರೆ ತನ್ನದು ಎಂಬಲ್ಲಿ ಅಸತ್ಯ (ತನ್ನಮಟ್ಟಿಗೆ) ಹೇಗಿದ್ದೀತು? ಸ್ವಾಭಾವಿಕವಿದ್ದದ್ದು, ಸಹಜವಾದದ್ದು ಸತ್ಯವೂ ಇರಬೇಕು. ಅನೇಕರು ''ಸಹಜವಾಗಿ ಹೇಳುತ್ತೇನೆ'' ಎಂದು ''ನಿಜವಾಗಿ ಹೇಳುತ್ತೇನೆ'' ಎಂಬರ್ಥದಲ್ಲಿ ಹೇಳುತ್ತಾರೆ. ಅಲ್ಲಿಯೂ ಅರ್ಥ ವಿಸ್ತರಣೆ ''ನಿಜ''ದ ಅರ್ಥವಿಸ್ತರಣೆಯ ಜಾಡಿನಲ್ಲೇ ಸಾಗಿದೆ. ''ನಿಜಾನಂದ'' ಎಂಬರ್ಥದಲ್ಲಿ ''ಸಹಜಾನಂದ'' ಎಂಬ ಪದದ ಬಳಕೆಯಾಗುತ್ತದೆ. ''ಸ್ವಾಮಿ ಸಹಜಾನಂದ'' ಎಂಬ ಹೆಸರು ಚಿರಪರಿಚಿತವಾದದ್ದು. ಆತ್ಮಕ್ಕೆ ಸಹಜವಾದ ಶುದ್ಧ ಆತ್ಮಾನಂದ, ಇಂದ್ರಿಯ ವಿಷಯದಿಂದ ಅಲಿಪ್ತವಾದದ್ದು ''ಸಹಜಾನಂದ''. ಸಹಜದ ತದ್ಭವವಾಗಿ ಸಾಜ ಎಂಬ ಕನ್ನಡ ಪದ ಹುಟ್ಟಿದೆ. ಅದಕ್ಕೆ ಲೌಕಿಕ ಸತ್ಯವೆಂಬರ್ಥ ಬಂದಿದೆ. ''ಸಾಜ'' ಎಂದರೆ ಸತ್ಯವೆಂದು ''ಕರ್ನಾಟಕ ಶಬ್ದಸಾರ''ವೆಂಬ ೧೪-೧೫ನೇ ಶತಮಾನದ ನಿಘಂಟು ಹೇಳುತ್ತದೆ. ಆದರೂ ಉತ್ತರ ಕರ್ನಾಟಕದಲ್ಲಿ ''ಸಹಜ''ವನ್ನು ''ಸ್ವಾಭಾವಿಕ'' ಎಂಬರ್ಥದಲ್ಲೇ ತಾನೇ ಬಳಸುವುದು ಕಾಣಿಸುತ್ತದೆ.

೧೧೨

''**ವಿಮರ್ಶೆ** ಮಾಡಿ ನೋಡಿದರೆ ಇದರಲ್ಲಿ ಏನೂ ಹುರುಳಿಲ್ಲ'' ಎನ್ನುತ್ತೇವೆ. ''**ಪರಾಮರ್ಶೆ** ಮಾಡಿಯೇ ಈ ಕ್ರಮ ಕೈಕೊಂಡದ್ದಾಗಿದೆ'' ಎನ್ನುತ್ತೇವೆ. ಎರಡಕ್ಕೂ ಸುಮಾರು ಒಂದೇ ತಾತ್ಪರ್ಯ; ಸರಿಯಾಗಿ ಆಲೋಚನೆ ಮಾಡುವುದು, ಚರ್ಚೆ ಮಾಡುವುದು ಇತ್ಯಾದಿ. ಆದರೆ ಇದೀಗ ವಾಲ್ಮೀಕಿ ರಾಮಾಯಣ ಓದುತ್ತಿರುವಾಗ, ತಾನು ಅರಣ್ಯಕ್ಕೆ ಹೋಗುವುದನ್ನು ತಿಳಿಸಿ ಅಪ್ಪಣೆ ಪಡೆಯಲು ಕೌಸಲ್ಯೆಯ ಬಳಿ ಶ್ರೀರಾಮ ಹೋದ ಪ್ರಸಂಗದಲ್ಲಿ ಸುದ್ದಿ ಕೇಳಿ ಸ್ಮೃತಿ ತಪ್ಪಿ ನೆಲಕ್ಕೆ ಬಿದ್ದು ಹೊರಳಾಡಿದ ತಾಯಿಯನ್ನು ಮೇಲೆತ್ತಿ, ಮೈಯೆಲ್ಲ ಧೂಳಾದ ಅವಳನ್ನು ಆತ ''ವಿಮಮರ್ಶ ಪಾಣಿನಾ'' (ಕೈಯಿಂದ ವಿಮರ್ಶೆ ಮಾಡಿದನು) ಎಂಬ ವಾಲ್ಮೀಕಿ ಪ್ರಯೋಗವನ್ನು ಕಂಡು ಚಕಿತನಾದೆ. ತಾಯಿಯನ್ನು, ಅಥವಾ ಅವಳ ಮೈಯನ್ನು ವಿಮರ್ಶೆ ಮಾಡುವುದೆಂದರೇನು? ಅದೇನು ಪುಸ್ತಕವೋ ಅಥವಾ ಚರ್ಚಾ ಕೂಟದ ವಿಷಯವೋ! ಆದರೆ ಸಿದ್ಧಾಂತ ಕೌಮುದಿ ವ್ಯಾಕರಣ ಗ್ರಂಥವನ್ನು ತೆಗೆದು ನೋಡಿದರೆ ''ಮೃಶ ಆಮರ್ಶನೇ ಆಮರ್ಶನಂ ಸ್ಪರ್ಶಃ'' (ಮೃಶ ಧಾತುವಿಗೆ ಆಮರ್ಶನವೆಂದರ್ಥ, ಆಮರ್ಶನವೆಂದರೆ ಮುಟ್ಟುವುದು) ಎಂದೇ ಹೇಳಿದ್ದಾರೆ. ಅರ್ಥಾತ್ ಶ್ರೀರಾಮ ತಾಯಿಯ ಮೈಯನ್ನು ತಡವಿ ಧೂಳು ಒರಸಿದ! ಧಾತುವಿನ ಅರ್ಥ ಹೀಗಿರುವಾಗ ವಿಮರ್ಶೆ ಎಂಬ ಪದ ನಾವು ತಿಳಿದ ಅರ್ಥಕ್ಕೆ ಹೇಗೆ ವಿಸ್ತಾರಗೊಂಡಿತು? ಕೈಯಾಡಿಸಿ ತಾನೇ ನಾವು ಪದಾರ್ಥಗಳ ಸರಿಯಾದ ಪರಿಚಯ ಮಾಡಿಕೊಳ್ಳುವುದು? ವಿಚಾರವೆಂದರೇನು? ಮನಸ್ಸಿನಿಂದ ತಡಹುವುದು. ಪರಾಮರ್ಶೆಯೆಂದರೂ ಸುಮಾರಾಗಿ

ಅಷ್ಟೇ ಅರ್ಥ. ''ವಿ'', ''ಪರಾ'' ಎಂಬ ಉಪಸರ್ಗಗಳ ಊರೆಕೊಟ್ಟು ಅರ್ಥವನ್ನು ವಿಸ್ತರಿಸಲಾಗಿದೆ.

ಭಾವಾತ್ಮಕ ಅಥವಾ ಅಮೂರ್ತವಿಷಯಗಳನ್ನು ವ್ಯಕ್ತಪಡಿಸುವುದಕ್ಕೆ ಮೂರ್ತ ಪದಾರ್ಥಗಳ ಅಥವಾ ಕ್ರಿಯೆಗಳ ಕುರಿತ ಶಬ್ದಗಳನ್ನು ಬಳಸುವುದು ಸಾರ್ವಭಾಷಿಕ ಲಕ್ಷಣವಾಗಿದೆ. ಶರೀರದ ಅಂಗಗಳ ಮತ್ತು ಅವುಗಳ ಕ್ರಿಯೆಗಳನ್ನು ಕುರಿತ ಶಬ್ದಗಳು ಅಮೂರ್ತ ಅಭಿವ್ಯಕ್ತಿಗೆ ನೆರವಾಗುವುದಂತೂ ಬಹಳ ಸಾಮಾನ್ಯ. ಕೈಗಳನ್ನೆ ಕುರಿತು ಹೇಳುವುದಾದರೆ ''**ಹಸ್ತಕ್ಷೇಪ**'', ''**ಕೈಯಾಸರೆ**'' ಇತ್ಯಾದಿ ಶಬ್ದಗಳನ್ನು ನೋಡಿ. ಇವೆಲ್ಲವುಗಳಲ್ಲಿ ಕೈಯ ಪ್ರತ್ಯಕ್ಷ ಸಂಬಂಧವಿಲ್ಲ. ಹಾಗೆಯೇ ಕಾಲು ಮತ್ತು ಅದರ ಕ್ರಿಯೆ ಕೂಡ. ''**ವಿಚಾರ**'', ''**ಪ್ರಚಾರ**'', ''**ಆಚಾರ**'' ಇವು ಕಾಲಿನ ಕ್ರಿಯೆಯಾದ ''ಚರಣ''ದಿಂದ (ಚರ=ನಡೆ) ಹುಟ್ಟಿದವು. ''**ನಡತೆ**'', ''**ನಡವಳಿಕೆ**'' ಇತ್ಯಾದಿ ಕನ್ನಡ ಪದಗಳಿಗೂ ನಡೆಯುವ ಕ್ರಿಯೆಗೂ ಪ್ರತ್ಯಕ್ಷ ಸಂಬಂಧವಿಲ್ಲ. ''ನನ್ನ ಮಾತು ನಡೆಯಲಿಲ್ಲ'' ಎನ್ನುವಾಗ ನಡೆಯುವುದಕ್ಕೂ ಕಾಲಿನ ಚಲನೆಗೂ ನೇರ ಸಂಬಂಧವಿಲ್ಲ. ಸಂಸ್ಕೃತ ''**ಚರಿತ್ರ**'', ''ಚರಿತ್ರೆ'' ಕೂಡ ಹಾಗೆಯೇ. **ಕ್ರಮ** ಎಂದರೂ ನಡೆ ಅಥವಾ ಹೆಜ್ಜೆ. ''ನಿನ್ನ ಮೇಲೆ **ಕ್ರಮ** ತೆಗೆದುಕೊಳ್ಳಲಾಗುತ್ತದೆ'' ಎನ್ನುವ ನಮ್ಮ ವಾಕ್‌ಧೋರಣೆಗೂ steps will be taken against you ಎಂಬ ಇಂಗ್ಲೀಷ್ ವಾಕ್ ಧೋರಣೆಗೂ ಏನೂ ವ್ಯತ್ಯಾಸವಿಲ್ಲ. ಕ್ರಮ ಎಂದರೂ step ಎಂದರೂ ಹೆಜ್ಜೆ.

ಗಮನ ಎನ್ನುವುದು ಇಂಥ ಇನ್ನೊಂದು ಶಬ್ದ. ''ತರಗತಿಯಲ್ಲಿ ಪಾಠಕ್ಕೆ **ಗಮನ** ಕೊಡಲಿಲ್ಲ'' ಎಂದು ನಾವು ಆಕ್ಷೇಪಿಸುವಾಗ ''ಗಮನ'' ಶಬ್ದದ ಮೂಲಾರ್ಥ **ಹೋಗುವುದು** ಎಂಬುದನ್ನು ಗಮನಿಸುವುದೆ ಇಲ್ಲ. ಪಾಠಕ್ಕೆ ಗಮನ ಕೊಡುವುದೆಂದರೆ ಹೇಳುವ ವಿಷಯದ ಕಡೆಗೆ ಹೋಗುವುದು. ಕಾಲಿನ ಕ್ರಿಯೆಯನ್ನು ತಲೆಗೆ ಕಟ್ಟಿದ್ದು ಇದು! ಅರ್ಥವಾಗದ್ದು ''ಅಗಮ್ಯ'' **ಗಮನಕ್ಕೆ** ಇರುವ ಇನ್ನೊಂದು ಅರ್ಥ ಮತ್ತೂ ದೂರಾನ್ವಯವಾದದ್ದು. ಸಂಭೋಗ ಎಂಬರ್ಥದಲ್ಲಿ ಅದನ್ನು ಪ್ರಯೋಗಿಸುವುದುಂಟು. ''ಅಗಮ್ಯಾಗಮನ'' ಹೋಗಬಾರದವಳ ಕಡೆಗೆ ಹೋಗುವುದು ಎಂಬ ನೇರ ಅರ್ಥವುಳ್ಳ ಪದ ಪುಂಜವನ್ನು ಲೈಂಗಿಕ ಸಂಬಂಧಕ್ಕೆ ಅನ್ವಯಿಸಲಾಗಿದೆ. ತಾಯಿ, ಅಕ್ಕ, ತಂಗಿ, ಗುರುಪತ್ನಿ ಅಥವಾ ವಿವಾಹಿತ ಇಲ್ಲವೇ ಕೀಳು ಅಂತಸ್ತಿನ ಹೆಂಗಸಿನ ಸಂಗಡ ಮಾಡುವ ಲೈಂಗಿಕ ಸಂಬಂಧ ಅಗಮ್ಯಾಗಮನ. ಕನ್ನಡದಲ್ಲಿ ಕೂಡ ಕೆಲ ಪ್ರದೇಶಗಳಲ್ಲಿ ''ಅವನ ಹತ್ತಿರ'' ಅಥವಾ ''ಅವಳ ಹತ್ತಿರ'' ಹೋಗುವುದು ಎಂದರೆ ಸಂಭೋಗವೇ ಅಭಿಪ್ರೇತವಾಗಿದೆ. ತುಳುವಿನಲ್ಲಿ ಕೂಡ ಹಾಗೆಯೇ. ಮತ್ತ ಭಾರತೀಯ ಭಾಷೆಗಳಿಗಷ್ಟೆ ಇದು ಸೀಮಿತವಾಗಿಲ್ಲ. Polygamy, Monogamy ಮೊದಲಾದ ಗ್ರೀಕ್ ಮೂಲದ ಶಬ್ದಗಳಲ್ಲಿ gamy (= ಸಂ. ಗಮನ) ಕೂಡ ಈ ಪ್ರವೃತ್ತಿ ತೋರುತ್ತದೆ. gamy = ವಿವಾಹ ಎಂದು ಶಬ್ದಕೋಶಗಳು ವಿವರಿಸುತ್ತವೆ.

ನಾಲಗೆಯ ಕ್ರಿಯೆಯನ್ನು ಮಾನಸಿಕ ಕ್ರಿಯೆಗೆ ತೊಡಕಿಸುವುದು ಉಂಟು. ''ರಸಾಸ್ವಾದನೆ'' ಪೂರ್ತಿ ನಾಲಗೆಗೆ ಸಲ್ಲುವ ಕೆಲಸ. ರಸದ ರುಚಿ ನೋಡುವುದು (ನೋಡಿ ಮೆಚ್ಚುವುದು ಕೂಡ). ಆದರೆ ಕವಿತೆಯನ್ನು **ಆಸ್ವಾದಿಸುವುದು**, ಸಂಗೀತವನ್ನು **ಆಸ್ವಾದಿಸುವುದು** ಪೂರ್ಣವಾಗಿ ಮಾನಸಿಕ ಕ್ರಿಯೆ. ಬುದ್ಧಿಯ ಮಾತು ಅವನಿಗೆ ''**ರುಚಿಸಲಿಲ್ಲ**'' ಎನ್ನುವಾಗಲೂ

ನಾವು ನಾಲಗೆಯ ಕೆಲಸವನ್ನು ಮನಸ್ಸಿಗೆ ಅನ್ವಯಿಸುತ್ತೇವೆ.

ಇನ್ನೊಬ್ಬರ ವಿಚಾರದಲ್ಲಿ "**ಮೂಗು ತುರುಕಿಸುವುದು**" ಎಂಬ ವ್ಯಂಗ್ಯೋಕ್ತಿ ಬಹುಶಃ ಇಂಗ್ಲಿಷ್ ಪ್ರಭಾವದಿಂದ ಕನ್ನಡದಲ್ಲಿ ಉದ್ಭವಿಸಿದೆ. ಆದರೆ ದೇಶೀಯ ಭಾಷೆಗಳಲ್ಲಿಯೂ ಮೂಗಿನ ವ್ಯಾಪಾರವನ್ನು ಇತರತ್ರ ಅನ್ವಯಿಸುವುದು ಇಲ್ಲದೇ ಇಲ್ಲ. "ಅಧಿಕಾರ ಕಳೆದುಕೊಂಡ ಮೇಲೆ ಅವನನ್ನು **ಮೂಸಿ ನೋಡುವವರಿಲ್ಲ**", "ಅವನ ಕವಿತೆಗಳನ್ನು ಈಗ **ಮೂಸುವವರಿಲ್ಲ**" ಎಂಬವುಗಳನ್ನು ಉದಾಹರಿಸಬಹುದು. "ಅವನಿಗೆ ವಿದ್ಯೆಯ **ಗಂಧವಿಲ್ಲ**" ಎಂಬಲ್ಲಿ ಬೌದ್ಧಿಕ ಪರಿಣತಿಯನ್ನು ಪರಿಮಳಕ್ಕೆ ಹೋಲಿಸುತ್ತೇವೆ. ಸುಗಂಧವು ಅತ್ಯಂತ ಸೂಕ್ಷ್ಮ ಪ್ರಮಾಣದಲ್ಲಿದ್ದರೂ ಅದು ಇಡುಗದೆ ಇರುವುದಿಲ್ಲ. ವಿದ್ಯೆಯೂ ಹಾಗೆಯೆ. ಗಂಧವಿಲ್ಲ ಎಂದರೆ ತುಸುವೂ ಇಲ್ಲ.

ಮೂಗನ್ನಾಧರಿಸಿದ ನುಡಿಕಟ್ಟುಗಳಲ್ಲಿ ಕೆಲವು ಮೂಗನ್ನು ಆತ್ಮಗೌರವ, ಮರ್ಯಾದೆಯ ಸಂಕೇತವಾಗಿ ಬಳಸುವುದು ಕೌತುಕದ ವಿಷಯ. ದ್ರೌಪದಿ ಬಂದು ಕೀಚಕನಿಂದ ಕಾಪಾಡಲು ಕೋರಿದಾಗ ಭೀಮನು ಅಣ್ಣನ ಅಪ್ಪಣೆಗೆ ಕಟ್ಟುಬಿದ್ದು ತಾನು ಅಸಹಾಯಕನಾಗಿರುವುದನ್ನು ವಿವರಿಸುತ್ತ "ಈ ನಪುಂಸಕನೊಡನೆ ಹುಟ್ಟಿದ ನಾನು **ಮೂಗುಳ್ಳವನೇ**!" ಎಂದು ಪರಿತಪಿಸುತ್ತಾನೆ (ಕುಮಾರವ್ಯಾಸ). ಇದು ಬಹುಶಃ ಕೆಲವೊಂದು ಅಪರಾಧಕ್ಕೆ ಮೂಗನ್ನು ಕೊಯ್ಯುವ ಶಿಕ್ಷೆ ಕೊಡುವ ಪೌರಸ್ತ್ಯ ಪುರಾತನ ಸಂಪ್ರದಾಯದಿಂದ ಹುಟ್ಟಿದ ವಾಗ್‌ಧೋರಣೆ. ಹೀಗೆ ಮೂಗು ಕೊಯ್ಯುವುದೂ ಅವಮಾನ ಮಾಡುವುದೂ ಸಮೀಕೃತವಾಗಿ ಭಾಷೆಯಲ್ಲಿ ಬೇರೂರಿದೆ. ಸೇವಕನ ಮೂಗಿಗೆ ಸುಣ್ಣ ಬಳಿದು ಕಳಿಸಿದರೆ ಅದು ಯಜಮಾನನಿಗೆ ಮಾಡಿದ ಅವಮಾನ, ಅವನಿಗೆ ನೀಡಿದ ಕೆಣಕು ಎಂಬ ತಿಳುವಳಿಕೆ ಕರ್ನಾಟಕದಲ್ಲಂತೂ ಇತ್ತು. "**ಮೂಗು ತುರಿಸುವುದು**" ಎಂಬುದು ಎದುರಾಳಿಯನ್ನು ಜಗಳಕ್ಕೆ ಕರೆಯುವುದು. **ಎತ್ತರ ಮೂಗು** ಇರುವುದು ಅಧಿಕಾರ, ಪ್ರಭುತ್ವದ ಶಾರೀರಿಕ ಲಕ್ಷಣವೆಂದು ಪರಿಗಣಿಸುತ್ತಿದ್ದರು. ಈ ಅಂಗಲಕ್ಷಣವುಳ್ಳವರನ್ನು ಸಂಸ್ಕೃತದಲ್ಲಿ **ಉನ್ನಸ** (ಉನ್ನತವಾದ ನಾಸಿಕವುಳ್ಳವನು) ಎನ್ನುತ್ತಾರೆ. ಪಾಶ್ಚಾತ್ಯರಲ್ಲಿ ಇಂಥ ಕಲ್ಪನೆ ಇಲ್ಲವೆಂದು ಕಾಣುತ್ತದೆ. ಆದರೆ ಪತ್ರಿಕೋದ್ಯೋಗದಲ್ಲಿ Nose for News, ಸುದ್ದಿಯನ್ನು ಗುರುತಿಸುವ ಮೂಗು, (ಘ್ರಾಣಶಕ್ತಿ) ಎನ್ನುವಾಗ ಯಾವುದು ಮಹತ್ವದ ಅಥವಾ ಜನ ಕೇಳಬಯಸುವ ಸುದ್ದಿ ಯಾವುದು ಅಲ್ಲ ಎಂಬ ಸಹಜ ನಿರ್ಣಯ ಶಕ್ತಿ ಎಂದು ತಾತ್ಪರ್ಯ. ಬಹುಶಃ ಪ್ರಬಲ ಘ್ರಾಣಶಕ್ತಿಯಿರುವ ನಾಯಿಯ ದೆಸೆಯಿಂದ ಈ ಕಲ್ಪನೆ ಇಂಗ್ಲಿಷ್ ಭಾಷೆಯಲ್ಲಿ ತಲೆಯೆತ್ತಿದೆ.

೧೧೩

**ಸೂತಕ** ಎಂದೊಡನೆ ಈಗ ನಮಗೆ ಪ್ರತೀತವಾಗುವ ಅರ್ಥವೆಂದರೆ ಬಂಧುಗಳ ಸಾವಿನಿಂದ ಸಂಬಂಧಿಕರಿಗೆ ಬರುವ ಹತ್ತು ದಿನದ ಮೈಲಿಗೆ. ಆದರೆ ಈ ಶಬ್ದದ ಮೂಲಾರ್ಥ ಸಾವಿನಿಂದಲ್ಲ, ಹುಟ್ಟಿನಿಂದ. ಅರ್ಥಾತ್ ಹೆರಿಗೆಯಿಂದ ಅಥವಾ ಗರ್ಭಪಾತದಿಂದ ಬರುವ ಹತ್ತು ದಿನದ ಶಾರೀರಿಕ ಮೈಲಿಗೆ, ಅದು ("ಸೂತಕ"ವೆಂದರೇನೇ ಮನುಷ್ಯರ ಅಥವಾ ಸಾಕುಪ್ರಾಣಿಗಳ ಹೆರಿಗೆ ಮಾತ್ರ. (ಸೂ = ಹಡೆ) ಹೀಗೆ ಹೆರಿಗೆ ಮನೆ ಸೂತಿಕಾಗೃಹ). ಇದು

ಯಾಜ್ಞವಲ್ಕ್ಯ, ಮನುಸ್ಮೃತಿಗಳಲ್ಲಿ ಕಾಣಿಸುವ ಸಂಗತಿ. ಈ ಬಗೆಯ ಸೂತಕಕ್ಕೆ "ಸೂತ್ಯಾಶೌಚ" ಎಂದೂ ಹೆಸರು ಇದೆ. (ಅಶೌಚ = ಅಶುಚಿತ್ವ, ಮೈಲಿಗೆ). "ಸೂತಿಕಾ" ಪದ ಬಾಣಂತಿಯೆಂಬ ಅರ್ಥದಲ್ಲಿ ಅಥರ್ವವೇದದಲ್ಲಿ ಬರುತ್ತದೆ. ಸಂಸ್ಕೃತ ಸ್ಮೃತಿಗ್ರಂಥಗಳಲ್ಲಿ ಹುಟ್ಟಿನಿಂದ ಬರುವ ಶಾರೀರಿಕ ಮೈಲಿಗೆಗೆ "ಜಾತಾಶೌಚ"ವೆಂದೂ ಸಾವಿನಿಂದ ಒದಗುವುದಕ್ಕೆ "ಮೃತಾಶೌಚ"ವೆಂದೂ ಅಭಿಧಾನಗಳಿವೆ.

ಇಷ್ಟಿದ್ದು ಕನ್ನಡದಲ್ಲಿ ಸೂತಕ ಮರಣದೊಡನೆ ಹೇಗೆ ಸಂಬದ್ಧವಾಯಿತೆಂಬುದು ದುರೂಹ್ಯವಾಗಿದೆ (ಬಂಗಾಲಿ, ಹಿಂದಿ, ಮರಾಠಿ ಮೊದಲಾದವುಗಳಲ್ಲಿ ಸೂತಕ ಈಗಲೂ ಹುಟ್ಟಿನ ಮೈಲಿಗೆಯಾಗಿಯೇ ಉಳಿದಿದೆ). ಈ ಪರಿವರ್ತನೆಯ ಜಾಡು ಬಹುಶಃ ಸಂಸ್ಕೃತದ ಮಧ್ಯಯುಗೀನ ಸಾಹಿತ್ಯದಲ್ಲಿ ಅಡಗಿದೆ. ಸೂತಕಕ್ಕೆ ಒಟ್ಟಿನಲ್ಲೇ **ಮೈಲಿಗೆ** ಎಂಬರ್ಥ ಸುಭಾಷಿತಗಳಲ್ಲಿ ತಗಲಿಕೊಂಡದ್ದು ಕಾಣುತ್ತದೆ. ಹಿಂದಿಯಲ್ಲಿ ಸೂರ್ಯ-ಚಂದ್ರ ಗ್ರಹಣಗಳಿಗೂ "ಸೂತಕ" ಶಬ್ದ ಅನ್ವಯಿಸುತ್ತದೆಂದು ಗಮನಿಸಿದರೆ ಎಲ್ಲಾ ಮೈಲಿಗೆಗಳಿಗೆ ಇದರ ಅರ್ಥ ವಿಸ್ತಾರವಾದ ರೀತಿ ಗೊತ್ತಾಗುತ್ತದೆ. ಪ್ರಭುದೇವರ ವಚನಗಳಲ್ಲಿ ಒಟ್ಟಿನಲ್ಲಿ ಎಲ್ಲ ತರದ ಆಧ್ಯಾತ್ಮಿಕ ಅಜ್ಞಾನ, ಮಾಲಿನ್ಯಗಳಿಗೆ ಸೂತಕ ಶಬ್ದವನ್ನು ಅನ್ವಯಿಸಲಾಗಿದೆ. ("ಕಂಗಳ ಸೂತಕ", "ಭ್ರಾಂತಿ ಸೂತಕ", "ಶಬ್ದಸೂತಕ" ಇತ್ಯಾದಿ). ದಾಸರ ಪದವೊಂದರಲ್ಲಿ "ಹೆತ್ತ ಸೂತಕ", "ಮೃತ್ಯು ಸೂತಕ" ಎಂಬ ಪ್ರಯೋಗಗಳುಂಟು. ಕಡೆಗೆ ಪ್ರಬಲವಾಗಿ ಭಾವಿಸಲ್ಪಟ್ಟ "ಮೃತ್ಯು ಸೂತಕ"ವೇ ಸೂತಕವೆನಿಸಿತು. ಹೆತ್ತ ಸೂತಕಕ್ಕೆ ಬೇರೆಯೆ ಹೆಸರನ್ನು ಕಲ್ಪಿಸಬೇಕಾಯಿತು. **ವೃದ್ಧಿ**ಯೆಂಬ ಪದ ಆ ಕೆಲಸ ಮಾಡುತ್ತಿದೆ. ವೃದ್ಧಿಯೆಂದರೆ ಹೆಚ್ಚಳ. ಹುಟ್ಟಿನಿಂದ (ಜನಸಂಖ್ಯೆಯು) ಹೆಚ್ಚಳವಾಗುತ್ತದಲ್ಲವೆ ?

**ಕರ್ಮಕಾಂಡ**ಗಳ ಬಗ್ಗೆ ನಾವೀಗ ಬಹಳ ಕೇಳುತ್ತಿದ್ದೇವೆ. ಉದಾಹರಣೆಗೆ "ಶರಾವತಿ ಕರ್ಮಕಾಂಡ." ಶರಾವತಿ ಕಣಿವೆಯ ವಿದ್ಯುತ್ ಇತ್ಯಾದಿ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ನಡೆದ ಅವ್ಯಾಪಾರ-ಅಫರಾತಫರಾ ಇತ್ಯಾದಿಗಳ ಬಗ್ಗೆ ಸಾರ್ವಜನಿಕ ಕೋಲಾಹಲ ಎಬ್ಬಿಸಿದವರು ಆ ಪ್ರಕರಣಕ್ಕೆ ಇಟ್ಟ ಹೆಸರು ಅದು. ಈ "ಕರ್ಮಕಾಂಡ" ಎಂಬ ಪದದ ಅರ್ಥವಿಕಾಸ ಅಥವಾ ಅರ್ಥವಿಪರ್ಯಾಸ ಕುತೂಹಲದ್ದು. ಮೂಲತಃ **ಕರ್ಮ** ಎಂದರೆ ಕೆಲಸ; ಆಮೇಲೆ ವಿಶಿಷ್ಟವಾದ ಕೆಲಸ ವೈದಿಕ ಯಜ್ಞಯಾಗ ಮತ್ತು ಧರ್ಮ ಕರ್ಮಗಳೂ ಕರ್ಮವೇ. ಬರಬರುತ್ತ ಇವುಗಳ ತಾಂತ್ರಿಕತೆ ಜಟಿಲವಾಗುತ್ತ ಬಂದು ಅದು ವೈದಿಕ ವಿದ್ಯೆಯ ಒಂದು ಪ್ರತ್ಯೇಕ ವಿಭಾಗವೇ ಆಗಿಹೋಯಿತು. ವಿಭಾಗ = **ಕಾಂಡ**. (ಒಂದು ಬಿದಿರಲ್ಲಿ ಒಂದು ಗಿಣ್ಣಿಗೂ ಇನ್ನೊಂದಕ್ಕೂ ನಡುವೆ ಇರುವುದು ಒಂದು "ಕಾಂಡ" ಎನಿಸುತ್ತದೆ). ಹೀಗೆ ಯಜ್ಞಯಾಗಾದಿ ಕರ್ಮಗಳನ್ನು ನಡೆಸುವ ವಿಧಿ ವಿಧಾನಗಳ ಜಟಿಲ ವಿದ್ಯಾವಿಭಾಗವೇ "ಕರ್ಮಕಾಂಡ." ಅದನ್ನು ಕಲಿತು ಯಜಮಾನರಿಗಾಗಿ ಕರ್ಮಗಳನ್ನು ನೆರವೇರಿಸಿಕೊಡುವ ಪುರೋಹಿತರು **ಕರ್ಮಕಾಂಡಿ**ಗಳಾದರು.

**ಉಪನಿಷತ್ತುಗಳು** ಮತ್ತು ವೇದಾಂತ ವಿದ್ಯೆ ಜನಪ್ರಿಯವಾದಾಗ ಅದಕ್ಕೆ "ಜ್ಞಾನಕಾಂಡ" ಎಂದು ಹೆಸರಿಟ್ಟರು. ಶ್ರೇಷ್ಠ ಮತಿಗಳು ಜ್ಞಾನಕಾಂಡದತ್ತ ಹೊರಳಿದವು. "ಕರ್ಮಕಾಂಡ"ದ ಪ್ರತಿಷ್ಠೆ ಇಳಿಮುಖವಾಯಿತು. (ವೈದಿಕ) **ಕರ್ಮ**ಗಳು ವ್ಯರ್ಥ ಎಂಬ ಭಾವನೆ ಹಬ್ಬಿ "ಕರ್ಮಕಾಂಡ" ಈಗ ನಾವು "ಕಂದಾಚಾರ"ವೆಂದು ಕರೆಯುವ ಅರ್ಥಕ್ಕೆ ತಿರುಗಿತು. ಈಗ ಯಾವುದೇ ತುಂಬ ಜಟಿಲ, (ಆದರೆ ಹೆಚ್ಚು ಉಪಯೋಗವಿಲ್ಲದ)

ವಿಧಿವಿಧಾನಗಳಿಗೆ ''ಕಾಂಡ'' ಎನ್ನುವ ಮಾತು ಅನ್ವಯಿಸುತ್ತದೆ. ಬಂಗಾಲಿಗಳು ''ಅಕಾಂಡ ಕಾಂಡ'' ಎಂಬ ಮಾತಿನಿಂದ ಯಾವುದೊಂದು ಜಟಿಲ ವ್ಯವಹಾರ ಅಥವಾ ಘಟನೆಯನ್ನು ವಿಶೇಷಿಸುತ್ತಾರೆ.

ಒಂದು ರೀತಿಯಲ್ಲಿ ಸರಕಾರಿ ವ್ಯವಹಾರವೆಲ್ಲ ಕರ್ಮಕಾಂಡವೇ. ಪೌರೋಹಿತ್ಯದ ವಿಧಾನಗಳ ಹಾಗೆಯೇ. ಈ ಜಟಿಲ ವಿಧಿವಿಧಾನಗಳ ನಡುವೆ ನಿಜವಾಗಿ ಏನು ನಡೆಯುತ್ತದೆನ್ನುವುದು ಅಧಿಕಾರಶಾಹಿಯ ಹೊರಗಿನವರಿಗೆ ತಿಳಿಯುವುದಿಲ್ಲ. ಅದರ ಸಂದಿಗೊಂದಿಗಳಲ್ಲಿ ಅನೇಕ ಕು-ಕರ್ಮಗಳು ನಡೆಯುತ್ತವೆ. ಶರಾವತೀ ಕಾಂಡವೂ ಅಂಥಾದ್ದೇ. ಸರಕಾರಿ ಅವ್ಯಾಪಾರಕ್ಕೆ ''ಕರ್ಮಕಾಂಡ''ವೆಂಬ ಹೆಸರನ್ನು ಮೊದಲು ಕೊಟ್ಟವನ ಚಿತ್ರವತ್ತಾದ ಕಲ್ಪನೆಗೆ ನಮೋ ಎಂಬೆ.

ರಾಮಾಯಣವನ್ನು ಕಾಂಡಗಳಾಗಿ ವಿಭಾಗಿಸಿದ್ದಾರೆ. ಒಂದೊಂದು ಕಾಂಡದಲ್ಲಿಯೂ ಒಂದು ವಿಶಿಷ್ಟ ಘಟನಾ ಚಕ್ರ ನಡೆಯುತ್ತದೆ. (ಉದಾ: ಅಯೋಧ್ಯಾ ಕಾಂಡದಲ್ಲಿ ರಾಮನನ್ನು ವನವಾಸಕ್ಕಟ್ಟಿದ ಘಟನಾ ಚಕ್ರ ನಡೆಯುತ್ತದೆ). ''ಅಕಾಂಡ ಕಾಂಡ'' ಮತ್ತು ''ಶರಾವತೀ ಕರ್ಮಕಾಂಡ''ದಂಥ ಪದಗಳನ್ನು ಹುಟ್ಟಿಸುವಲ್ಲಿ ರಾಮಾಯಣದ ಕಾಂಡಗಳ ಕಲ್ಪನೆಯೂ ಹಿಂ-ಮಿದುಳಲ್ಲಿ ಕೆಲಸ ಮಾಡಿರಬಹುದು. ಇಂಥ ಕಾವ್ಯಕಾಂಡಗಳನ್ನು ಲ್ಯಾಟಿನ್, ಇಂಗ್ಲಿಷ್ ಇತ್ಯಾದಿಗಳಲ್ಲಿ canto ಎಂದು ಹೆಸರಿಸಿದ್ದಾರೆ. ಆದರೆ ನಮ್ಮ ಕಾಂಡಕ್ಕೂ ಈ canto ಕ್ಕೂ ಧ್ವನಿ ಸಾಮ್ಯವಲ್ಲದೆ ಅರ್ಥ ಸಾಮ್ಯವಿಲ್ಲ. ಕ್ಯಾಂಟೋ ಎಂಬುದು ರಾಗವಾಗಿ ಪಠಿಸುವುದಕ್ಕೆ (chant) ಸಂಬಂಧಿಸಿದ ಲ್ಯಾಟಿನ್ ಪದ. ಆದರೂ ರಾಮಾಯಣವನ್ನು ಲವಕುಶರು ''ಹಾಡಿದರು'' ಎಂಬುದರಿಂದ ಕಾಂಡಕ್ಕೂ chant-canto ಕ್ಕೂ ಏನಾದರೂ ಬಾಂಧವ್ಯ ಇರಬಹುದೆ, ಎಂಬ ಅನುಮಾನ ನನಗೆ.

ರಾಮಾಯಣ ಕಾಂಡಗಳಾಗಿ ವಿಭಕ್ತವಾದರೆ ಮಹಾಭಾರತ ೧೮ **ಪರ್ವ**ಗಳಾಗಿ ವಿಂಗಡಿತವಾಗಿದೆ. ''ಪರ್ವ'' ಎಂದರೆ ಬಿದಿರು, ಕಬ್ಬು ಮೊದಲಾದವುಗಳ ಗಂಟು, ಗಿಣ್ಣು, ಸಂಧಿಸ್ಥಾನ. (ಪರ್ವಕ್ಕೂ ಪರ್ವಕ್ಕೂ ನಡುವಿನದು ಕಾಂಡ). ಹೀಗೆ ಪರ್ವ ಎಂದರೆ ವಿರಾಮ ಸ್ಥಾನ ಎನ್ನಬಹುದು. ಈ ಪರ್ವ ಕೂಡ ಹಲವು ಅರ್ಥಗಳಲ್ಲಿ ಟಿಸಿಲೊಡೆದಿದೆ. ''ಪರ್ವಕಾಲ'' ನೋಡಿ. ಅದು ಸಂಧಿಕಾಲವನ್ನು, ದೊಡ್ಡ ಬದಲಾವಣೆಯ ಕಾಲವನ್ನು ಸೂಚಿಸುತ್ತದೆ. ಮೂಲದಲ್ಲಿ **ಪರ್ವಕಾಲ**ವೆಂದರೆ ಚಂದ್ರನ ಗತಿಯ ಸಂಧಿಸ್ಥಾನಗಳ ಕಾಲ. ಹುಣ್ಣಿಮೆ, ಅಮಾವಾಸ್ಯೆ ಎರಡು ಅಷ್ಟಮಿಗಳು ಈ ನಾಲ್ಕು **ಪರ್ವ** ದಿನಗಳು. ಆ ದಿನಗಳಲ್ಲಿ ವಿಶೇಷ ಧಾರ್ಮಿಕ ಆಚರಣೆಗಳಿರುವುದರಿಂದ ಅವು **ಪರ್ವ ತಿಥಿ**ಗಳು. ಈ ''ಪರ್ವ''ವೇ ನಮ್ಮ ''ಹಬ್ಬ''ದ ತಂದೆ.

## ೧೧೪

''ಹುಟ್ಟು ಗುಣ **ಗಟ್ಟ/ಘಟ್ಟ** ಹತ್ತಿದರೂ ಹೋಗ'' ಎಂಬ ಗಾದೆಯಲ್ಲಿ ''ಗಟ್ಟ''/ ''ಘಟ್ಟ'' ಶಬ್ದ ಪರ್ವತಗಳ ಸಾಲು ಎಂಬರ್ಥ ಕೊಡುತ್ತದೆ. ಕನ್ನಡ ಕರಾವಳಿಯ ಜನ ಜೀವನೋಪಾಯಕ್ಕಾಗಿ (ಪಶ್ಚಿಮ) ಘಟ್ಟಗಳನ್ನು ದಾಟಿಹೋಗಿ ಮಲೆನಾಡಲ್ಲೋ ಬಯಲು ಸೀಮೆಯಲ್ಲೋ ದುಡಿದು ಕಾಲಕಾಲಕ್ಕೆ ಊರಿಗೆ ಬಂದು ಹೋಗುವ ಬಹುಕಾಲದ

ರೂಢಿಯಿಂದ ಹುಟ್ಟಿದ ಗಾದೆಯಿದು. ''ಘಟ್ಟ'' (ಗಟ್ಟ) ಶಬ್ದ ಈ ಅರ್ಥದಲ್ಲಿ ಇಂಗ್ಲೀಷಿಗೂ ದಾಟಿ Western Ghats ಮತ್ತು Eastern Ghats ಎಂಬ ಭೌಗೋಲಿಕ ಪದಗಳು ಹುಟ್ಟಿವೆ.

ಸಂಸ್ಕೃತದ **ಘಟ್ಟ** (ತಾಗು, ತಿಕ್ಕಾಡು) ಧಾತುವಿನಿಂದ ಈ ಶಬ್ದಕ್ಕೆ ನಿಷ್ಪತ್ತಿ ಹೇಳಿದರೂ ಅದರ ಮೂಲ ಅರ್ಥ ದಾಟುವ ಅಥವಾ ಇಳಿಯುವ ಸ್ಥಳ ಎಂದು. (ಕನ್ನಡ, ತುಳು ''ಕಡವು'', ''ಕಡೆಪು'' ಶಬ್ದ ಇದೇ ಅರ್ಥದಲ್ಲಿ ಬಳಕೆಯಲ್ಲಿದೆ). ಹೆಚ್ಚಾಗಿ ನದಿಗಳನ್ನು ದಾಟುವ ಅಥವಾ ನದಿಗೆ ಇಳಿಯುವ ಸ್ಥಳಕ್ಕೆ ಸಂಸ್ಕೃತದಲ್ಲಿ ಈ ಪದ ಪ್ರಯೋಗವಾಗುತ್ತದೆ. ಹಿಂದಿ, ಬಂಗಾಲಿ, ಇತ್ಯಾದಿ ಉತ್ತರದ ಭಾಷೆಗಳಲ್ಲಿ ಇದೇ **ಘಾಟ್** ಎಂಬ ರೂಪದಲ್ಲಿ ನದಿ, ಕೆರೆ ಮೊದಲಾದವನ್ನು ದಾಟುವ ಅಥವಾ ಅಲ್ಲಿ ಇಳಿಯುವ ಸ್ಥಳ, ಸೋಪಾನ ಎಂಬರ್ಥ ಕೊಡುತ್ತದೆ. ಹೀಗೆ ''ಘಟ್ಟ'' ವೆಂದರೆ ಮೂಲತಃ ''ಇಳಿಯುವ ಸ್ಥಳ'' ಎಂದೇ ಅರ್ಥವಿರಬೇಕು. ಪರ್ವತಾವಳಿಗಳಲ್ಲಿ ಅಲ್ಲಲ್ಲಿ ಆಚೆ ಅಥವಾ ಈಚೆಗೆ ದಾಟಿ ಹೋಗುವುದಕ್ಕೆ ಅನುಕೂಲವಾದ ಕಣಿವೆಗಳೇ ಘಟ್ಟಗಳು. ಹಿಂದಿಯಲ್ಲಿ ಅದೇ ಘಾಟ್. ನಮ್ಮ ಪಾಲಿನ ಪಶ್ಚಿಮ ಘಟ್ಟಗಳನ್ನು ದಾಟುವ ನೈಸರ್ಗಿಕ ಎಡೆಗಳಿಗೆ ಚಾರ್ಮಾಡಿ **ಘಾಟ್**, ದೇವಿ ಮನೆ **ಘಾಟ್** ಇತ್ಯಾದಿಯಾಗಿಯೇ ಹೆಸರುಗಳಲ್ಲವೆ? ಹೀಗೆ ಘಟ್ಟ ಎಂಬುದು ಮೊದಲು ದಾಟು ತಾಣವಾಗಿದ್ದು ಕನ್ನಡದಲ್ಲಿ ಘಟ್ಟಗಳ ಮೂಲಕ ದಾಟಿ ಹೋಗಲು ಸಾಧ್ಯವುಳ್ಳ ಪರ್ವತ ಶ್ರೇಣಿಯೆಂಬ ಅರ್ಥಕ್ಕೆ ವಿಸ್ತಾರಗೊಂಡ ಪದ. ಮರಾಠಿಯಲ್ಲಿ ಕೂಡ ಘಾಟ್ ಶಬ್ದ ಕನ್ನಡದಲ್ಲಿನಂತೆ ಪರ್ವತ ಶ್ರೇಣಿಯೆಂಬರ್ಥಕ್ಕೆ ವಿಸ್ತರಿಸಿದೆ. ಅದೇ ಶಬ್ದ ಮರಾಠಿಯಲ್ಲಿ ಪರ್ವತಗಳ ನಡುವಿನ ದಾಟು ತಾಣಗಳಿಗೂ ಹಾಗೆಯೇ ನದೀ ಕೆರೆಗಳಿಗಿಳಿಯಲು ನಿರ್ಮಿಸಿದ ಪಾವಟಿಗೆಗಳಿಗೂ ಅನ್ವಯಿಸುತ್ತದೆ. ಹಿಂದಿಯಲ್ಲಿ ನದಿಗಳಿಗೆ ಸ್ನಾನಾದಿಗಳಿಗಾಗಿ ಇಳಿಯುವ ಸೋಪಾನ ಅಥವಾ ಪಾವಟಿಕೆಗಳ ಶ್ರೇಣಿಗೆ ಘಾಟ್ ಪದ ಇರುವಂತೆ ತುಳುವಿನಲ್ಲಿ **ಕಟ್ಟಣ** ಎಂಬ ಪದವುಂಟು. ಇದು ''ಕಟ್ಟು'' ಎಂಬ ದ್ರಾವಿಡ ಧಾತುವಿನಿಂದ ಹುಟ್ಟಿದೆಯೆಂದು ಅನಿಸಿದರೂ ನಾವೀಗ ಚರ್ಚಿಸಿದ ಘಾಟ್ ಶಬ್ದದ ಬೆಳಕಿನಲ್ಲಿ ಗಟ್ಟ, ಘಾಟಿ ಶಬ್ದದ್ದೇ ಒಂದು ದ್ರಾವಿಡೀಕೃತ ರೂಪವಿರಬಹುದೇ ಎಂಬ ಅನುಮಾನವೂ ಬರುತ್ತದೆ.

ಸೋಪಾನಗಳಿಗೆ ಇರುವ ಘಟ್ಟ (ಸ್ನಾನಘಟ್ಟ) ಎಂಬ ಶಬ್ದದಿಂದ ಇನ್ನೊಂದು ಅರ್ಥಕ್ಕೂ ಆಸ್ಪದವಾಗಿದೆ. ''ಈ ಕೆಲಸ ಒಂದು ಘಟ್ಟಕ್ಕೆ ಬಂದು ನಿಂತಿದೆ'' ಎನ್ನುವಾಗ ಸೋಪಾನದ ಶ್ರೇಣಿಯನ್ನೇ ಮನಸ್ಸಿನಲ್ಲಿಟ್ಟುಕೊಂಡಿದ್ದೇವೆ. ಹೀಗೆ **ಘಟ್ಟ = ಹಂತವೂ** ಹೌದು.

ಘಾಟಿನ ಮಾತು ಬಂದಾಗ ಈ ಪದದ ಇನ್ನೊಂದು ಅರ್ಥ ತಲೆಗೆ ಹೊಳೆಯುತ್ತದೆ.

ಮಸಾಲೆ ಪದಾರ್ಥಗಳ, ವಿಶೇಷವಾಗಿ ಮೆಣಸಿನಕಾಯಿ, ಇಂಗು, ಇತ್ಯಾದಿಗಳ ಬಲು ಕಡುವಾದ ವಾಸನೆಗೆ **ಘಾಟು** ಎನ್ನುತ್ತೇವೆ. ಇದಕ್ಕೆ ತಮಿಳು, ತೆಲುಗು, ತುಳು, ಕೊಲಾಮಿ ಭಾಷೆಗಳಲ್ಲಿ ಜ್ಞಾತಿ ಪದಗಳು ಸಿಗುತ್ತವೆ. ಇದು ದ್ರಾವಿಡ ಶಬ್ದವೇ ಎಂದು ದ್ರಾವಿಡ ತುಲನಾತ್ಮಕ ನಿಘಂಟು ಹೇಳಿದರೂ ''ಕಾರ'' (ಖಾರ) ಶಬ್ದದಿಂದ ಅದರ ಅರ್ಥ ಪ್ರಭಾವಿತವಾಗಿರಬಹುದೆಂದರೆ ಒಪ್ಪುತ್ತದೆ. ''ಖಾರ'' ಶಬ್ದ ಸಂಸ್ಕೃತ ''ಕ್ಷಾರ'' ದಿಂದ ತದ್ಭವವಾದದ್ದು. ಹೀಗೆ ಒಂದು ಭಾಷೆಯ ಶಬ್ದಗಳು ಇನ್ನೊಂದು ಭಾಷೆಯ ಸಂಪರ್ಕದಿಂದ

ಹೊಸ ಅರ್ಥಗಳಿಗೆ ತಿರುಗುವುದು ಅಪರೂಪವಲ್ಲ.

''ಘಾಟಿ''ಗೆ ಮೇಲಿನ ಎಲ್ಲ ಅರ್ಥಗಳಿಗಿಂತ ಭಿನ್ನವಾದ ಇನ್ನೊಂದು ಅರ್ಥವಿದೆ. ಉದಾಹರಣೆಗೆ ''**ಘಾಟಿ** ಮುದುಕ.'' ಇಲ್ಲಿ ಘಾಟಿ ಶಬ್ದಕ್ಕೆ, ಸಂಸ್ಕೃತದಲ್ಲಿ ಧೂರ್ತ ಎಂದು ಹೇಳುವ, ಅರ್ಥ ಇದೆ. ಸುಲಭವಾಗಿ ಮೋಸ ಹೋಗದ, ಇತರರನ್ನು ಮೋಸಗೊಳಿಸಬಹುದಾದ, **ಚುರುಕು** ಬುದ್ಧಿಯುಳ್ಳವರಿಗೆ ಘಾಟಿ ಪದ ಅನ್ವಯಿಸುತ್ತದೆ. ಸಂಸ್ಕೃತದ ಧೂರ್ತ. ಇದರ ಚರಿತ್ರೆ ಹೆಚ್ಚು ಹಳೆಯದಲ್ಲ. ಲಿಖಿತ ಪ್ರಯೋಗ ಈ ಶತಮಾನದಲ್ಲೇ ಮೊದಲು ಕಾಣಿಸಿಕೊಂಡಂತೆ ಪರಿಷತ್ತಿನ ಬೃಹತ್ಕೋಶದಲ್ಲಿ ಕೊಟ್ಟ ಉದಾಹರಣೆಗಳಿಂದ ವ್ಯಕ್ತವಾಗುತ್ತದೆ. ಆದರೆ ಈ ಶಬ್ದ ಎಲ್ಲಿಂದ ಬಂತೆಂಬ ಬಗ್ಗೆ ಪರಿಷತ್ ನಿಘಂಟು ಪ್ರಶ್ನಾರ್ಥಕ ಚಿಹ್ನೆಯನ್ನು ಕೊಟ್ಟಿದೆ. ಈ ನಿಘಂಟಿನಲ್ಲಿ ಕೊಟ್ಟ ಪ್ರಯೋಗಗಳಿಂದ ಅದು ದಕ್ಷಿಣ ಕನ್ನಡದಲ್ಲಿ ಮೊದಲು ತಲೆದೋರಿದಂತೆ ಕಾಣುತ್ತದೆ. ಒಂದು ದಿಟ್ಟ ಊಹೆ ಮಾಡುವುದಾದರೆ ಅದು ಮುಂಬಯಿ ಕಡೆಯಿಂದ ನುಸುಳಿತೆಂದೂ ಅದರ ಮೂಲ ಮರಾಠಿ, ಹಿಂದಿ, ಬಂಗಾಲಿ ಮೊದಲಾದ ಔತ್ತರೇಯ ಭಾಷೆಗಳಲ್ಲಿರುವ **ಖಾಟೀ** ಶಬ್ದವೆಂದೂ ಹೇಳಬೇಕು. ಖಾಟಿ ಎಂದರೆ ತೀವ್ರವಾದ ಹುಳಿ ರುಚಿಯ ಪದಾರ್ಥ. ಹುಳಿ ಬುದ್ಧಿಯ ಮನುಷ್ಯ **ಖಾಟೀ**. ಅದನ್ನು ತಂದವರು ದಕ್ಷಿಣ ಕನ್ನಡದಿಂದ ಮುಂಬಯಿಗೆ ಹೋದ ಅಷ್ಟು ವಿದ್ಯಾವಂತರಲ್ಲದ ಜನರಾದ್ದರಿಂದ ಖಾಟೀ ಹೋಗಿ ಘಾಟಿ ಆಗಿದ್ದರೆ ಸೋಜಿಗವಿಲ್ಲ.

**ಲಗಾಡಿ** ಮತ್ತು **ಲಬಾಡಿ** ಎಂಬ ಶಬ್ದಗಳು ಕನ್ನಡ ಜಿಲ್ಲೆಯಲ್ಲಿ ಬಳಕೆಯಲ್ಲಿವೆ. ಲಗಾಡಿಯೆಂದರೆ ಸತ್ಯಾನಾಶ. ಮನೆಮಾರು ಲಗಾಡಿ ತೆಗೆದ ಎನ್ನುತ್ತಾರೆ. ಇದು **ಲಿಗಾಡಿ** ಎಂಬ ರೂಪವನ್ನೂ ಧರಿಸುತ್ತದೆ. ಮರಾಠಿಯಲ್ಲಿ ''ಲಿಗಾಡ್'' ಎಂದರೆ ತಲೆಕೆಡಿಸುವ ಬಲು ತೊಡಕಾದ ತೊಂದರೆ, ಒಳಸಂಚು; ''ಲಿಗಾಡಿ'' ಎಂದರೆ ಇಂಥಾ ತೊಡಕುಗಳಿಂದ ಜಟಿಲವಾದ, ಭೇದೋಪಾಯಗಳಿಂದ ಯುಕ್ತವಾದ ಎಂಬರ್ಥ. ಈ ಅರ್ಥ ತುಸು ವ್ಯತ್ಯಾಸವಾಗಿ ನಾಶ ಎಂಬುದಾಗಿ ಕನ್ನಡ/ತುಳುವಿನಲ್ಲಿ ಬಳಕೆಗೆ ಬಂದಿರಲೇಬೇಕು.

''ಲಬಾಡಿ'' ಎಂದರೆ ಅಪಹಾರ. ಇದೂ ಮರಾಠಿಯಿಂದಲೇ ಬಂದಿರಬೇಕು. ಮರಾಠಿ ಹಿಂದಿ ಭಾಷೆಗಳಲ್ಲಿ **ಲಬಾಡ್, ಲಬಾರ್** ಎಂದರೆ ಸುಳ್ಳುಗಾರ, ಬಾಯಿಬಡಕ, ಚಾಡಿಕೋರ, ಗಳಹ, ಬಡಾಯಿಖೋರ. ಬಹುಶಃ ಸಂಸ್ಕೃತದ ''ಲಪ'' (= ಗಳಹು) ಧಾತುವಿನಿಂದ ಹುಟ್ಟಿದ ಲಬಾಡ್ ಬಡಾಯಿಖೋರತನದ ಮುಂದಿನ ಹೆಜ್ಜೆಯಾದ ಮೋಸ, ಅಪಹಾರ ಎಂಬರ್ಥಕ್ಕೆ ತಿರುಗಿರಬೇಕು. ಘಟ್ಟದ ಮೇಲಿನ **ಲಪಟಾಯಿಸು** ಎಂಬ ಪದದ ಪ್ರಭಾವ ಮರಾಠಿಯಿಂದ ತೆಗೆದುಕೊಂಡು ಲಬಾಡ್ ಮೇಲೆ ಆಗಿರಬೇಕು. ''ಲಪಟಾನಾ'' ಎಂದರೆ ಹಿಂದಿಯಲ್ಲಿ ಮುಚ್ಚುವುದು, ಮುಸುಕು ಹಾಕುವುದು. ಕನ್ನಡಕ್ಕಾಗುವಾಗ ಮುಚ್ಚಿ ಅಪಹರಿಸುವುದು ಎಂದು ಅರ್ಥ ಕಾಲು ಚಾಚಿತು.

**ತೇಜಿ** ಎಂಬ ಶಬ್ದ ಕನ್ನಡದಲ್ಲಿ ವಚನಕಾರರಿಂದ ಹಿಡಿದು ಹರಿದಾಸರವರೆಗೆ ಎಲ್ಲರಿಂದ ಧಾರಾಳವಾಗಿ ಬಳಸಲ್ಪಟ್ಟಿದೆ. ಅರ್ಥ ಕುದುರೆಯೆಂದು. ''ತೇಜಿಯನೇರಿ ಬಂದ'' ಎಂದು ವಾದಿರಾಜ ಸ್ವಾಮಿಗಳು ಹಾಡಿದ್ದಾರೆ. ತೋರಿಕೆಗೆ ಇದು ಸಂಸ್ಕೃತ (ತೇಜಸ್)ದಂತೆ ಕಂಡರೂ ನಿಜವಾಗಿ ಅದು ಬಂದದ್ದು ಪಾರಸೀಕ ಭಾಷೆಯಿಂದ. ಆ ಭಾಷೆಯಲ್ಲಿ **ತಾಜೀ** ಎಂದರೆ ಅರಬೀ ಕುದುರೆ ಅಥವಾ ಅರಬೀನಾಯಿ. ನಿಜಕ್ಕೂ ಆ ಶಬ್ದ ಕುದುರೆಯನ್ನು ಕುರಿತದ್ದಲ್ಲ.

ದೇಶವನ್ನು (ಅರಬಸ್ಥಾನ) ಕುರಿತದ್ದು. ಪಾರಸೀಕ ಭಾಷೆಯಲ್ಲಿ ಅರಬ್ಬಿ ಭಾಷೆಗೂ ತಾಜಿಯೆಂಬ ಅಭಿಧಾನವಿದೆ. ತಾಜಿಯೆಂಬುದು ತುಸು ಪಲ್ಲಟ ಹೊಂದಿ ಮರಾಠಿಯಲ್ಲಿ ಮತ್ತು ಕನ್ನಡದಲ್ಲಿ ತೇಜಿ ಎಂದಾಗಿದೆ ಅಷ್ಟೇ. ಹಿಂದೀ ಬಂಗಾಲಿಗಳಲ್ಲಿ ತಾಜಿ ಎಂದೇ ಇದೆ. ಅಲ್ಲೆಲ್ಲ ಅರಬ್ಬಿ ಕುದುರೆಯಷ್ಟೆ ತಾಜೀ ಪದಾಂಕಿತವಾಗಿದೆ. ಜ್ಯೋತಿಷ್ಯದಲ್ಲಿ ಆಸಕ್ತಿಯುಳ್ಳವರಿಗೆ **ತಾಜಿಕ** ಜ್ಯೋತಿಷ್ಯಶಾಸ್ತ್ರದ ಸುದ್ದಿ ಗೊತ್ತು. **ತಾಜಿಕ** ಎಂಬುದು ಸಂಸ್ಕೃತದಲ್ಲಿ ಪಾರಸೀಕ ಅಥವಾ ಅರಬರನ್ನು ನಿರ್ದೇಶಿಸುತ್ತದೆ. ಕಾಶ್ಮೀರದಿಂದ ಬರುವ ಕೇಶರಕ್ಕೆ ಕಾಶ್ಮೀರವೆಂದೇ ಸಂಸ್ಕೃತದಲ್ಲಿ ಹೆಸರಿರುವ ಹಾಗೆ.

೧೧೫

ಕನ್ನಡದಲ್ಲಿ ನಾವು **ತೇಗು ತೇಗ ತೇಂಗು** ಇತ್ಯಾದಿಯಾಗಿ ಕರೆಯುವ ಶ್ರೇಷ್ಠ ನಾಟಿನ ಮರದ ಹೆಸರು ಮಲೆಯಾಳಿ ಭಾಷೆಯಲ್ಲಿ **ತೆಕ್ಕ**. ಅದೇ ಇಂಗ್ಲೀಷಿಗೆ ದಾಟಿ ''ಟೀಕ್'' (Teak) ಆಗಿದೆ. ಬಹಳ ಪ್ರಾಚೀನ ಕಾಲದಿಂದ ಮಧ್ಯಪೂರ್ವಕ್ಕೆ ರಫ್ತಾಗುತ್ತಿದ್ದ ಈ ಮರಕ್ಕೆ ಈಗ ಕರ್ನಾಟಕದ ಉತ್ತರ ಭಾಗದಲ್ಲಿ **ಸಾಗುವಾನಿ** ಎಂಬ ಹೆಸರೇ ಹೆಚ್ಚು ಪ್ರಚಾರವಾಗಿದೆ. ಈ ಹೆಸರೂ ಮಧ್ಯಪೂರ್ವದಿಂದಲೇ ಬಂದಿರಬಹುದೇ ಎಂದು ಹುಡುಕುವಾಗ ಅದೂ ಸ್ವದೇಶಿ ಎಂದೇ ಸಿದ್ಧವಾಯಿತು. ಹಿಂದಿಯಲ್ಲಿ **ಸಾಗೌನ, ಸಾಗವನ್** ಇತ್ಯಾದಿ ಮತ್ತು ಮರಾಠಿಯಲ್ಲಿ **ಸಾಗ್, ಸಾಗವಾನ್** ಎಂಬ ಹೆಸರುಗಳು ಉಂಟು. ಅದೇ ನಮ್ಮ ತೇಗವನ್ನು ಮರೆಸಿ ತನ್ನನ್ನು ಸ್ಥಾಪಿಸಿಕೊಂಡಿದೆ. ಆದರೆ ಈ ''ಸಾಗವನ್'' ಆದರೂ ಎಲ್ಲಿಂದ ಬಂತು? ಹಳೇ ಹಿಂದೀ ಕೋಶವೊಂದು ''ಸಂಸ್ಕೃತ'' ಎಂದು ಹೇಳುವುದರಿಂದ ಈ ಜಾಡನ್ನು ಬೆಂಬತ್ತಿ **ಶಾಕ** ಶಬ್ದಕ್ಕೆ ಬಂದು ನಿಂತದ್ದಾಯಿತು. ''ಶಾಕ'' ಎಂದರೆ ನಮಗೆಲ್ಲ ಗೊತ್ತಿರುವುದು ಕಾಯಿಪಲ್ಲೆ ಎಂಬರ್ಥ. ಆದರೆ ವೈದಿಕೋತ್ತರ ಕಾಲದ ಶ್ರೌತ ಮತ್ತು ಗೃಹ್ಯಸೂತ್ರ, ಮಹಾಭಾರತ ಕಾಲಗಳಿಂದಲೇ ತೇಗದ ಮರಕ್ಕೂ ''ಶಾಕ'' ಎಂಬ ಹೆಸರಿತ್ತು (ಅನಂತರ ಕಾಲದಲ್ಲಿ ಬಾಗೆ ಎಂಬ ಮರಕ್ಕೂ ಶಾಕವೆಂಬ ಹೆಸರಿತ್ತು.) ಮಹಾಭಾರತದ ಪ್ರಕಾರ ಶಾಕ ದ್ವೀಪವೆಂಬ ಮಹಾಭೂಖಂಡ (ಸಪ್ತ ದ್ವೀಪಗಳಲ್ಲಿ ಒಂದು) ದಲ್ಲಿ ಕ್ಷೀರಸಾಗರದಿಂದಾವೃತವಾದ ಒಂದು ತೇಗ (ಶಾಕ) ದ ಮರವಿತ್ತಂತೆ!

ಹೀಗೆ ''ಶಾಕ''ದ ತದ್ಭವವಾಗಿ **ಸಾಗ** ಹುಟ್ಟಿತು, ಸೈ. ಆದರೆ **ಸಾಗವನ್** ಎಂಬಲ್ಲಿ ''ವನ್'' ಎಂದರೇನು? ವಿಚಿತ್ರವೆಂದರೆ ವನ ಶಬ್ದಕ್ಕೆ ಅರಣ್ಯ ಇತ್ಯಾದಿ ಅರ್ಥಗಳೊಡನೆ ನಾಟು (Timber), ಒಣಗಿಸಿದ ಮರ ಎಂಬರ್ಥವೂ ಇದೆ. ಋಗ್ವೇದದಲ್ಲೇ! ಹೀಗೆ ಶಾಕ+ವನ = ಸಾಗವನ್ = **ತೇಗದ ನಾಟು**. ಅದೇ ನಮ್ಮ ಸಾಗುವಾನಿ. ವಾಸ್ತವವಾಗಿ ಸಾಗವಾನಿ ಎಂದರೆ (ಮರಾಠಿಯಲ್ಲಿ) ತೇಗದ ಕಟ್ಟಿಗೆಯಿಂದ ಮಾಡಿದ ಸಾಮಾನು. ಆದರೆ ವನ (ವಾನ) ಶಬ್ದ ಸ್ವತಂತ್ರವಾಗಿ ಹಿಂದಿ ಮರಾಠಿ ಬಂಗಾಲಿಗಳಲ್ಲಿ ಸಿಗದಿರುವುದೊಂದು ತೊಡಕು, ಎಂದೆನಿಸುತ್ತದೆ.

ಕನ್ನಡದಲ್ಲಿ ಕಟ್ಟಡದಲ್ಲಿ ಬಳಸುವ ಮರ (ಕಟ್ಟಿಗೆ)ಕ್ಕೆ **ಮೋಪು** ಎಂಬ ಶಬ್ದ ಪ್ರಾದೇಶಿಕವಾಗಿ ಬಳಕೆಯಲ್ಲಿದೆ. ಇದು ತಮಿಳು ''ಮೋ'', ಕನ್ನಡ ''ಮೋರ್'' ಧಾತುವಿನಿಂದ ಉದ್ಭವಿಸಿದ್ದು. **ಮೋ, ಮೋರ್** ಅಂದರೆ ಹೊರುವುದು, ಮೋಪು ಎಂದರೆ

ಹೊರೆ, ಭಾರ, ಭಾರವಾದ ಕಟ್ಟಿಗೆ, ಗಟ್ಟಿಮುಟ್ಟಾದ (ಒಣ) ಮರ ಎಂಬ ರೀತಿಯಲ್ಲಿ ಈ ಶಬ್ದ ಬೆಲೆಬಾಳುವ ಕಟ್ಟಿಗೆ ಎಂಬರ್ಥವನ್ನು ಸಂಪಾದಿಸಿರಬೇಕು. ಉತ್ತರ ಕರ್ನಾಟಕದಲ್ಲಿ ಪ್ರಸ್ತುತದಲ್ಲಿ ''ಟಿಂಬರ್''ಗೆ ''**ಇಮಾರತಿ ಕಟ್ಟಿಗೆ**'' ಎಂಬ ಶಬ್ದವೇ ಹೆಚ್ಚು ರೂಢವಾಗಿದೆ. **ಇಮಾರತ್** ಎಂದರೆ ದೊಡ್ಡ ಕಟ್ಟಡ, ಭವನ ಎಂಬರ್ಥದ ಅರಬ್ಬೀ ಪದ. ಅದಕ್ಕಾಗಿ ಬಳಸುವ ಮರ ಇಮಾರತಿ ಕಟ್ಟಿಗೆ. ಪಾರಸೀಕ ಮತ್ತು ಅನಂತರ ಉರ್ದು ಭಾಷೆ ಮುಸ್ಲಿಂ ಆಡಳಿತದಲ್ಲಿ ಪಡೆದ ಸ್ಥಾನ ಎಷ್ಟು ವಿಶಾಲ ಮತ್ತು ಆಳವಾಗಿ ಬೇರೂರಿತ್ತೆಂಬುದಕ್ಕೆ ಇಂಥ ಪದಗಳು ಸಾಕ್ಷಿಯಾಗಿವೆ.

**ಮಾರ್ಜಾಲ** ಅಥವಾ **ಮಾರ್ಜಾರ** ಎಂದರೆ ಬೆಕ್ಕು ಎಂದು ಶಾಲಾ ಹುಡುಗರಿಗೂ ಗೊತ್ತು. ಇದು ಸಂಸ್ಕೃತ ಸಾಹಿತ್ಯದಲ್ಲಿ ಮಹಾಭಾರತ, ಮನುಧರ್ಮಶಾಸ್ತ್ರ ಕಾಲದಿಂದಲೇ ಬೆಕ್ಕನ್ನು ನಿರ್ದೇಶಿಸುತ್ತದೆ. ಆದರೆ ಆ ಹೆಸರು ಅದಕ್ಕೆ ಹೇಗೆ ಬಂತು? ಸಂಸ್ಕೃತದಲ್ಲಿ **ಮಾರ್ಜ್** ಧಾತುವಿಗೆ ತಿಕ್ಕು, ತೊಳೆ, ಒರೆಸು, ಬೆಳಗು, ಸ್ವಚ್ಛ ಮಾಡು ಇತ್ಯಾದಿ ಅರ್ಥಗಳಿವೆ. ನಾವು ಬೆಳಿಗ್ಗೆ ಎದ್ದು ಮುಖಮಾರ್ಜನ ಮಾಡಿಕೊಳ್ಳುತ್ತೇವೆ. ಬೆಕ್ಕು ಕೂಡ ಅದನ್ನೇ ಮಾಡಿಕೊಳ್ಳುತ್ತದೆ. ಇಡೀ ದಿನ ನಾಲಗೆಯಿಂದಲೂ ಬಾಯೆಂಜಲು ಹಚ್ಚಿಕೊಂಡ ತನ್ನ ಪಂಜಗಳಿಂದಲೂ ಅದು ಮಾರ್ಜನ ಮಾಡಿಕೊಂಡಿರುತ್ತದೆ. ಅದು ಗೃಹ್ಯಪಶುಗಳಲ್ಲೆಲ್ಲ ಅತಿ ಸ್ವಚ್ಛವಾದದ್ದು. ಆದ್ದರಿಂದ ಅದು ''ಮಾರ್ಜಾಲ.'' ಹಳೆಗನ್ನಡದಲ್ಲಿ ಅದು **ಮಂಜರ,** ಮರಾಠಿಯಲ್ಲಿ **ಮಾಂಜರೂ.** ತುಳುವಿನಲ್ಲಿ ಹೆಣ್ಣು ಬೆಕ್ಕನ್ನು **ಮಂಗು** ಎಂದು ಪ್ರೀತಿಯಿಂದ ಕರೆಯುತ್ತಾರೆ. ಇದು ಕೂಡ ಮಂಜರದ ಒಂದು ರೂಪವೇ ಇರಬೇಕು.

**ರಾಜೀನಾಮೆ** ಎಂದು ನಾವು ಕನ್ನಡದಲ್ಲಿ ಬಳಸುವ ಪದ ರಾಜೀನಾಮೆ ಅಲ್ಲವೇ ಅಲ್ಲ. **ನಾಮಾ** ಎಂಬ ಪಾರಸೀಕ ಪದ ಯಾವುದೇ ಲಿಖಿತ ದಾಖಲೆಯನ್ನು ಸೂಚಿಸುತ್ತದೆ. **ರಾಜೀ** ಎಂಬ ಅರಬ್ಬೀ ಪದ ಒಪ್ಪಿಗೆ, ಪರಸ್ಪರ ಒಪ್ಪಂದ, ಸಮ್ಮತಿ ಇತ್ಯಾದಿ ಅರ್ಥಗಳನ್ನು ಕೊಡುವಂಥಾದ್ದು. ಹೀಗೆ ''ರಾಜೀನಾಮಾ'' ಎಂದರೆ ವಾದಿ ಪ್ರತಿವಾದಿಗಳು ಯಾವುದೊಂದು ವಿವಾದದಲ್ಲಿ ''ರಾಜೀ'' ಮಾಡಿಕೊಂಡದ್ದನ್ನು ಬರಹಕ್ಕಿಳಿಸಿದ ಪತ್ರ ಎಂದು ಉರ್ದು ನಿಘಂಟುಗಳು ಹೇಳುತ್ತವೆ. ಅದು ದ್ರಾವಿಡ ಭಾಷೆಗಳಲ್ಲಿ ಯಾವುದಾದರೂ ಅಧಿಕಾರದ ಸ್ಥಾನ ಇಲ್ಲವೆ ಹಕ್ಕನ್ನು ಬಿಟ್ಟುಕೊಡುವ ಪತ್ರ ಎಂಬರ್ಥಕ್ಕೆ ತಿರುಗಿದ್ದು ಸ್ವಲ್ಪ ಸುತ್ತು ಬಳಸಿನ ತರ್ಕದಿಂದ. ನಿಮ್ಮನ್ನು ಕೆಲಸದಿಂದ ಕಿತ್ತುಹಾಕುವ ಬದಲಿಗೆ ನೀವೇ ಸ್ವಂತ ಖುಷಿಯಿಂದ ಕೆಲಸ ಅಥವಾ ಹಕ್ಕು ಬಿಡುವುದೆಂದರೆ ಒಂದು ತರಹದ ರಾಜಿಯಲ್ಲವೆ? ಹಿಂದಿಯಲ್ಲಿ ಇದಕ್ಕೆ ''ಇಸ್ತೀಫಾ'' ಎನ್ನುತ್ತಾರೆ.

ರಜಾದ ಮಾತೂ ಅಷ್ಟೆ. ಅರಬ್ಬಿ ರಿಜಾದಿಂದ ವಿಕಾರಗೊಂಡ ಈ ಪದಕ್ಕೆ ಇಚ್ಛೆ, ಮರ್ಜಿ, ಅನುಮತಿ, ಒಪ್ಪಿಗೆ, ಅಪ್ಪಣೆ ಇತ್ಯಾದಿ ಅರ್ಥಗಳು. ಕೆಲಸಕ್ಕೆ ಇಂದು ಬರುವುದಿಲ್ಲ ಎಂದು ಹೇಳಿ ಒಪ್ಪಿಗೆ ಪಡೆಯುವುದಕ್ಕೆ ''ರಜಾ'' ಎನ್ನುವುದು ಉರ್ದುವಿನಲ್ಲಿ ಮಾತ್ರ. ಮೇಲಿನವರಿಂದ ಅನುಮತಿ ಪಡೆದುಕೊಂಡು ಕೆಲಸಕ್ಕೆ ಹಾಜರಾಗದಿರುವುದರಿಂದ ಅದಕ್ಕೆ ರಜಾ ಎಂದು ಹೆಸರು ಕೊಡುವುದಾಯಿತು ಉರ್ದುವಿನಲ್ಲಿ. ಅದು ಹಲ ಕೆಲವು ದೇಶಿ ಭಾಷೆಗಳಿಗೆ ದಾಟಿತು. ಈಗ ಅದೊಂದೇ ಅರ್ಥದಲ್ಲಿ ಅದು ಕನ್ನಡದಂಥ ಭಾಷೆಗಳಲ್ಲಿ ಉಳಿದಿದೆ. ಹೈದರಾಬಾದಿನಲ್ಲಿ **ರಜಾಕಾರರ** ಹಾವಳಿ ಹೆಚ್ಚಾಗಿದ್ದಾಗ ಅವರ ಪ್ರಸಿದ್ಧಿ ಕೇಳಿ ರಜೆ ಕೇಳುವವರನ್ನು ರಜಾಕಾರ ಎಂದು ತಮಾಷೆಯಾಗಿ ಕರೆಯುವುದೂ ಇತ್ತು!

ರಜೆಗೆ ಉತ್ತರ ಕರ್ನಾಟಕದಲ್ಲಿ **ಸೂಟಿ** ಎಂಬ ಶಬ್ದ ಬಳಕೆಯಲ್ಲಿದೆ. ಇದು ಹಿಂದಿಯ **ಛುಟ್ಟಿ** ಶಬ್ದದ ಒಂದು ರೂಪ. ''ಛೋಡ್‌ನಾ'' ಎಂದರೆ ಬಿಡುವುದು. ''ಛುಟ್ಟಿ'' ಎಂದರೆ ಕೆಲಸದಿಂದ ಗೈರುಹಾಜರಿರುವುದು ಅರ್ಥಾತ್ ತಾತ್ಕಾಲಿಕ ಬಿಡುಗಡೆ. ಈ ಅರ್ಥದಲ್ಲೇ ಉತ್ತರ ಕರ್ನಾಟಕದಲ್ಲಿ **ಬಿಡುವು** ಎಂಬ ಶಬ್ದವನ್ನು ರೂಪಿಸಲಾಯಿತು. ನಮ್ಮ ಹಿಂದಿನ ತಲೆಮಾರಿನವರು ಕನ್ನಡ ಭಾಷೆಯ ಮರ್ಮವನ್ನು ನಮಗಿಂತ ಹೆಚ್ಚು ಬಲ್ಲವರಾಗಿದ್ದುದರಿಂದ ನಮಗಿಂತ ಸುಲಲಿತವಾಗಿ ಶಬ್ದಗಳನ್ನು ಸೃಷ್ಟಿಸಿಕೊಳ್ಳಬಲ್ಲವಾಗಿದ್ದರು. ನಾವು ಇಂಗ್ಲಿಷ್ ಆಲದ ನೆರಳಿನಲ್ಲಿ ಬೆಳೆದವರಾದ್ದರಿಂದ ನಮ್ಮ ತಲೆ ಶಬ್ದ ಸೃಷ್ಟಿಯಲ್ಲಿ ಕೆಲಸ ಮಾಡಲು ಬಲು ಕಷ್ಟ ಪಡುತ್ತಿದೆ.

ಉತ್ತರ ಕರ್ನಾಟಕದಲ್ಲಿ ವಿಶಿಷ್ಟ ತರಹದ ಹರುವೆ ಸೊಪ್ಪಿಗೆ **ರಾಜಗಿರಿ** ಎಂಬ ಹೆಸರಿದೆ. ಮರಾಠಿಯಲ್ಲಿಯೂ ರಾಜಗೀರ್ ಎಂಬ ಪದವಿದೆ. ಮರಾಠಿಯಲ್ಲಿ ಅದು ಹರುವೆ, ಬಸಲೆ ಮೊದಲಾದ ಹಲ ಬಗೆಯ ಸೊಪ್ಪಿನ ಪಲ್ಯಗಳಿಗೆ ಸಲ್ಲುವ ಹೆಸರು. ಆದರೆ ಇದು ಮೂಲತಃ ದ್ರಾವಿಡ ಪದದ್ದೆ ವಿಸ್ತರಣೆ. ತಮಿಳಿನಲ್ಲಿ **ಕೀರೈ** ಮಲಯಾಳಿಯಲ್ಲಿ **ಚೀರ** ತೆಲುಗಿನಲ್ಲಿ **ಕೀರ** ಕನ್ನಡದಲ್ಲಿ **ಕೀರೆ.** ಕಿರೆ ಎಂಬುದು ಬಗೆ ಬಗೆಯ ತೊಪ್ಪಲು ಪಲ್ಯಕ್ಕೆ ಸಲ್ಲುವ ಪದಗಳು. ಅದರಲ್ಲೆ ವಿಶಿಷ್ಟ ಮಾದರಿಗೆ, ಬಹುಶಃ ಉತ್ತಮ ವರ್ಗದ ತೊಪ್ಪಲು ಪಲ್ಯಕ್ಕೆ **ರಾಜ** ಶಬ್ದದಿಂದ ವಿಶೇಷಿಸಿ **ರಾಜಗೀರ್** ರಾಜಗಿರಿ ಹುಟ್ಟಿದೆ.

## ೧೧೬

''**ತುರುಕರು ಕರೆದರೆ ಉಣಬಹುದಣ್ಣ**'' ಎಂದು ಪುರಂದರದಾಸರು ಹಾಸ್ಯವಾಗಿ ಶ್ಲೇಷೆ ಮಾಡಿದ್ದಾರೆ. ತುರು-ಕರು (ಹಾಲು) ಕರೆದರೆ ಊಟಕ್ಕೆ ಸುಲಭ ಎಂಬುದು ವಾಸ್ತವಾರ್ಥವಾದರೆ ತುರುಕರು ಊಟಕ್ಕೆ ಕರೆದರೆ ಹೋಗಬಹುದೆಂಬ ಅಸಂಗತಾರ್ಥ ಹಾಸ್ಯವೆಬ್ಬಿಸುತ್ತದೆ – ನಿಷ್ಠಾವಂತ ಬ್ರಾಹ್ಮಣನ ಬಾಯಲ್ಲಿ. ಈ ಎರಡನೇ ಅರ್ಥದಲ್ಲಿ ತುರುಕ ಎಂದದ್ದು ಮುಸಲ್ಮಾನನಿಗೆ. ಇಂದಿಗೂ ಇತಿಹಾಸ ಓದಿ ನೆನಪಿಟ್ಟುಕೊಂಡವರನ್ನು ಹೊರತುಪಡಿಸಿದರೆ ಇತರರಿಗೆ ತುರಕನೆಂದರೆ ಮುಸಲ್ಮಾನನೇ. ನಿಜವೆಂದರೆ, ಈ ದೇಶದಲ್ಲಿ ದಂಡಯಾತ್ರೆ ನಡೆಸಿ ಗೆದ್ದು ಆಳಿದ ಮುಸಲ್ಮಾನರಲ್ಲಿ ತುರಕರು (ಸಾಹಿತ್ಯದಲ್ಲಿ **ತುರುಃಕ** ಎಂದೂ ಇದೆ – ಇದು ಸಂಸ್ಕೃತ **ತುರುಷ್ಕ**ದ ಅಪಭ್ರಂಶ) ಒಂದು ಕುಲ ಮಾತ್ರ. ಅಫಗಾನರು, ಮೊಗಲರೇ ಮೊದಲಾದವರು ಹಲವರುಂಟು. ಇಂತು ಇಸ್ಲಾಂ ಧರ್ಮಾವಲಂಬಿಗಳನ್ನೆಲ್ಲ ಕನ್ನಡಿಗರು ತುರುಕರೆನ್ನುವುದು ಸೋಜಿಗವೆನಿಸೀತು. ನಿಜಕ್ಕೂ ವಿಜಯನಗರ ಕಾಲದಷ್ಟು ಹಿಂದೆಯೆ ಬಹುಮನೀರಾಜ್ಯ ಪ್ರದೇಶಕ್ಕೆ **ತುರುಕಾಣ್ಯ** ಎಂಬ ಹೆಸರೇ ವಿಜಯನಗರ ದಾಖಲೆಗಳಲ್ಲಿ ಕಾಣಸುತ್ತದೆ.

ಈ ವೈಶಿಷ್ಟ್ಯಕ್ಕೆ ಕಾರಣವನ್ನು ಭಾರತದಲ್ಲಿ ಇಸ್ಲಾಂ ರಾಜಕೀಯ ವಿಸ್ತರಣೆಯ ಚರಿತ್ರೆಯಲ್ಲಿ ಕಾಣಬಹುದು. ಪ್ರವಾದಿ ಮಹಮ್ಮದರೇನೋ ಅರಬರು. ಆದರೆ ಅರಬರ ಪ್ರಾರಂಭಿಕ ವಿಸ್ತರಣೋತ್ಸಾಹ ಸಿಂಧು ಕರಾವಳಿ ಪ್ರದೇಶವನ್ನು ತಲುಪಿ ವಿಶ್ರಾಂತವಾಯಿತು. ಆಮೇಲೆ ಭಾರತಕ್ಕೆ ಉತ್ತರದಿಂದ ನುಗ್ಗಿಬಂದು ಕೊಳ್ಳೆ ಹೊಡೆಯುವುದರಿಂದಾರಂಭಿಸಿ (ಗಜನಿ ಮಹಮ್ಮದ), ರಾಜ್ಯಸ್ಥಾಪನೆ ಮಾಡಿದ (ಘೋರಿ ಮಹಮ್ಮದ) ಮತ್ತು

ಕರ್ನಾಟಕದವರೆಗೂ ದಂಡುಗಳ ತುಳಿತದಿಂದ ಭೂಮಿಯನ್ನು ತತ್ತರಗೊಳಿಸಿದ್ದು **ತುರ್ಕಿ** ಮೂಲದ ಖಿಲ್ಜಿ, ತೊಗಲಖ ವಗೈರೆ ಕುಲಗಳವರು. ಹೀಗೆ ೧೬ನೇ ಶತಮಾನದ ಪ್ರಥಮ ಪಾದದ ಕುಮಾರರಾಮ ಸಾಂಗತ್ಯ ''ತುರುಕ ದಂಡಿಗೆ ಕಾಲುವಟ್ಟೆಯಾದುದು ಕರ್ನಾಟಕ'' ಎಂದು ಹೇಳುತ್ತದೆ. ಈ ಪ್ರಕಾರ ತುರುಕರು ಇಸ್ಲಾಂ ಧರ್ಮದೊಡನೆ ಏಕಾತ್ಮಕತೆ ಹೊಂದಿ ನಮ್ಮ ಭಾಷೆಯಲ್ಲಿ ಸ್ಥಾನ ಪಡೆದರು. ಮಹಮ್ಮದೀಯ, ಮುಸ್ಲಿಂ ಮೊದಲಾದ ಪದಗಳು ಈಚೆಗಿನ ಕಾಲದವು. **ಮುಸಲ** ಎನ್ನುವ ತಿರಸ್ಕಾರಾತ್ಮಕ ಪದವೂ ಬಹಳ ಹಳೆಯದಲ್ಲ.

ಆದರೂ ತುರುಕ ಮುಂದಾಳ್ತನದಲ್ಲಿ ಮುಸ್ಲಿಂ ರಾಜ್ಯದ ಬಿರುಸನ್ನು ಅನುಭವಿಸಿದ ಉತ್ತರದ ಭಾಷೆಗಳಲ್ಲಿ ತುರುಕನು ಮುಸಲ್ಮಾನನೆಂದು ಅರ್ಥ ಕೊಡುವುದು ಹಿಂದಿಯಲ್ಲಿ ಕಾಣಿಸಿದರೂ ಬಂಗಾಲಿ, ಮರಾಠಿಗಳಲ್ಲಿ ಎದ್ದು ಕಾಣುವುದಿಲ್ಲ. ಮೋನಿಯರ್ ವಿಲಿಯಮ್ಸ್ ಕೋಶದ ಪ್ರಕಾರ ಸಂಸ್ಕೃತದಲ್ಲಿ 'ತುರುಷ್ಕ' ಶಬ್ದ ಇಸ್ಲಾಂ ಪೂರ್ವದಲ್ಲೇ ಗೋಚರಕ್ಕೆ ಬಂದರೂ (ಸುಶ್ರುತ ಸಂಹಿತೆ, ವರಾಹಮಿಹಿರ ಸಂಹಿತೆ) ಅದು ಒಂದು ಜನಾಂಗವನ್ನು ಸೂಚಿಸುತ್ತದೆ ಹೊರತು ಮತಾನುಯಾಯಿಯಾಗಿ ಗುರುತಿಸುವುದಿಲ್ಲ. ಇಸ್ಲಾಂ ಪೂರ್ವದಿಂದಲೆ ತುರ್ಕರ ಸಂಪರ್ಕವಿದ್ದ ಉತ್ತರ ಭಾರತೀಯರಿಗೆ ಕುಲಕ್ಕೂ ಧರ್ಮಕ್ಕೂ ಇರುವ ಅಂತರದ ಪ್ರಜ್ಞೆ ಇದ್ದಿರಬೇಕು. ಬದಲಿಗೆ ಸಂಗೀತ ಶಾಸ್ತ್ರದಲ್ಲಿ **ತುರುಷ್ಕ ಗಂಡ** ಎಂಬೊಂದು ರಾಗವೇ ಇದೆ. ಇದು ತುರುಕ ಭಾರತೀಯ ಸಾಂಸ್ಕೃತಿಕ ಕೊಡುಕೊಳೆಯನ್ನು ದ್ಯೋತಿಸುತ್ತದೆ, ವಿದ್ವೇಷವನ್ನಲ್ಲ.

'ವಿಲಾಯತಿ', 'ಯವನ' ಮೊದಲಾದ ಶಬ್ದಗಳ ಹಾಗೆ 'ತುರುಕ', 'ತುರುಷ್ಕ' ಶಬ್ದಗಳೂ ನಿರ್ದಿಷ್ಟತೆ ಇಲ್ಲದೆ ಒಟ್ಟಿಗೆ ಸ್ವದೇಶಿ ಅಲ್ಲದವು ಎಂಬರ್ಥವನ್ನು ಬೆಳೆಸಿಕೊಂಡಿವೆ. ಒಂದು ಉದಾಹರಣೆ **ತುರುಕಬೇವು**. ನಮ್ಮ ದೇಶದ ಹೊರಗಿನ ಎಲ್ಲಿಂದಲೋ ಬಂದ ಬೇವಿನ ಜಾತಿ. ಹಾಗೆಯೇ ಲೋಬಾನಕ್ಕೆ ಸಂಸ್ಕೃತದಲ್ಲಿ 'ಯವನ' ಎಂಬೊಂದು ಹೆಸರಿದ್ದ ಹಾಗೆ 'ತುರುಷ್ಕ' ಎಂಬ ಹೆಸರೂ ಇದೆ. (ಕನ್ನಡದಲ್ಲಿ ಇದಕ್ಕೆ 'ಹಾಲು ಮಡ್ಡಿ'ಯೆಂಬ ಸುಂದರವಾದ ಹೆಸರುಂಟು). ಇಲ್ಲಿಯೂ ಒಟ್ಟು 'ವಿದೇಶಿ'ಯೆಂದೇ ಹೊರತು ಲೋಬಾನದ ಮರ ತುರ್ಕಿ ಜನರ ಮೂಲಸ್ಥಾನವಾದ ದೂರ ಉತ್ತರದ ಸ್ಟೆಪ್ಪಿ ಬಯಲಲ್ಲಿ ಬೆಳೆಯುತ್ತದೆಂದಾಗಲಿ ಅರಬಸ್ಥಾನ ಅಥವಾ ಆಫ್ರಿಕದಿಂದ ಅದನ್ನು ಭಾರತಕ್ಕೆ ತಂದು ಮಾರುತ್ತಿದ್ದವರು ತುರಗಾರೂಢ ವೀರರಾದ ತುರ್ಕರೆಂದಾಗಲಿ ತಿಳಿಯಲಾಗದು. ಲೋಬಾನಕ್ಕೆ 'ತುರುಷ್ಕ' ಎಂಬ ಹೆಸರು ಸುಶ್ರುತ ಸಂಹಿತೆಯಲ್ಲಿ ಕಾಣಿಸುವುದರಿಂದ ಕ್ರಿಸ್ತಪೂರ್ವ ಶತಮಾನಗಳಿಂದಲೆ ತುರುಕರು ಉತ್ತರ ಭಾರತಕ್ಕೆ ವಿದೇಶೀಯರಾಗಿ ಪರಿಚಿತರಾಗಿದ್ದರೆಂದು ಹೇಳಬಹುದಷ್ಟೆ?

**ಅಗ್ನ್ಯಸ್ತ್ರ**ಗಳೆಂಬವು ನಮ್ಮ ಪುರಾಣಕಥೆಗಳಲ್ಲಿ ಬರುವುದರಿಂದ ಈಗಿನ ಬಂದೂಕು ಇತ್ಯಾದಿಗಳೆಲ್ಲ ನಮ್ಮ ಪ್ರಾಚೀನರಲ್ಲಿದ್ದುವೆಂದು ಸಾಧಿಸಬಹುದಾದರೂ ಈಗ ಈ ಅಗ್ನ್ಯಸ್ತ್ರಗಳಿಗಿರುವ ಹೆಸರುಗಳೆಲ್ಲ ವಿದೇಶೀಯವಾಗಿರುವುದು ವಸ್ತುಸ್ಥಿತಿ. ಇಂದು ಆಗ್ನೇಯಾಸ್ತ್ರಗಳಲ್ಲಿ ಪ್ರವೀಣರು ಯುರೋಪಿಯನ್ನರಾದರೂ ಅನೇಕ ಪ್ರಚಲಿತ ಪದಗಳು ಮಧ್ಯಪೂರ್ವದವಾಗಿವೆ. **ಬಂದೂಕು** ಅರಬೀ ಪದ, **ತುಪಾಕಿ** ತುರ್ಕಿ 'ತುಪಕ್'ನ ಕನ್ನಡ ರೂಪ. **ತೋಪ್** ಕೂಡ ತುರ್ಕಿಯೇ. ಈ ಶಬ್ದಗಳನ್ನು ಅನೇಕ ಭಾರತೀಯ ಭಾಷೆಗಳು ಸ್ವೀಕರಿಸಿವೆಯೆಂದರೆ ತುರ್ಕರು ಅವುಗಳನ್ನು ನಮಗೆ ಪರಿಚಯಿಸಿದರೆಂದರ್ಥ. ಆದರೆ ಕೆಲ

ಶತಮಾನಗಳೊಳಗೆ ಮಧ್ಯಪೂರ್ವದವರು ಅದರಲ್ಲಿ ಮೇಲ್ಗೈ ಕಳೆದುಕೊಂಡರೆಂಬುದಕ್ಕೆ ಫಿರಂಗಿ ಶಬ್ದ ಸಾಕ್ಷಿಯಾಗಿದೆ. 'ಫಿರಂಗಿ'ಯೆಂದರೆ, ಮೂಲತಃ ಫ್ರಾನ್ಸಿಗೆ ಅರಬ್ಬಿ ಹೆಸರಾದ **ಫ್ರಾಂಕ್** (ಯುರೋಪಿಯನ್ ಭಾಷೆಗಳಲ್ಲೂ ಆ ಹೆಸರಿದೆ) ಎಂಬುದರ ಪಾರಸೀಕ ರೂಪವಾದ 'ಫರಂಗ್' ಇನ ಉರ್ದು ರೂಪ. 'ಫಿರಂಗ್'ನಲ್ಲಿ ಉತ್ಪನ್ನವಾದದ್ದು 'ಫಿರಂಗಿ'. ಆದರೆ ಉರ್ದು ಕೋಶದಲ್ಲಿ ಫಿರಂಗಿಗೆ ಫ್ರೆಂಚ್ ದೇಶ, ಫ್ರೆಂಚ್ ಮನುಷ್ಯ ಎಂಬರ್ಥಗಳೊಡನೆ ಪೋರ್ಚುಗೀಸರನ್ನೊಳಗೊಂಡ ಫ್ರೆಂಚರು ಮತ್ತು ಅಖಿಲ ಯುರೋಪ್ ನಿವಾಸಿಗಳು ಎಂದು ಅರ್ಥವಿದೆ ಹೊರತು ತೋಪು ಎಂಬರ್ಥವಿಲ್ಲ. ಅದು ದಕ್ಷಿಣದ ದ್ರಾವಿಡ ಭಾಷೆಗಳಲ್ಲಿ ಪ್ರಚಲಿತವಾಗಲಿಕ್ಕೆ ದಕ್ಷಿಣದಲ್ಲಿ ನಡೆದ ಅಂತರ್ಯುದ್ಧಗಳಲ್ಲಿ ಬಹುತರವಾಗಿ ಫ್ರೆಂಚರು ತೋಪಖಾನೆಗಳ ಸಲಹೆಗಾರರಾಗಿ ಸೇರಿದ್ದು ಕಾರಣವೆನ್ನಬೇಕು. ಬಹುತರವಾಗಿ ಇಲ್ಲಿಯೂ ಆಗ ಮುಸ್ಲಿಂ ಅರಸರೇ (ಟಿಪ್ಪು ಸುಲ್ತಾನ ಇತ್ಯಾದಿ) ಫ್ರೆಂಚರ ತಜ್ಞತ್ವವನ್ನು ಬಳಸಿಕೊಂಡವರು. ಹೀಗೆ ಫ್ರೆಂಚರನ್ನು ಸೂಚಿಸುವ ಪಾರಸೀಕ ಶಬ್ದ ಈ ಅಸ್ತ್ರಕ್ಕೂ ಅನ್ವಯಿಸಿತಷ್ಟೆ.

ಫ್ರೆಂಚರೇ ಅಲ್ಲದಿದ್ದರೂ ಪಾಶ್ಚಾತ್ಯರಾದ ಪೋರ್ಚುಗೀಸರು ತಂದ ನವಜಗತ್ತಿನ ಪಪ್ಪಾಯಿ, ಅನಾನಾಸು ಹಣ್ಣುಗಳೂ 'ಪರಂಗಿ'ಯೆಂಬ ಉಪಾಧಿಗೆ ಭಾಗಿಗಳಾದವು. ಕಟ್ಟಕಡೆಗೆ, ಈ ದೇಶದಲ್ಲಿ **ಸಿಫಿಲಿಸ್** ಎಂಬ ಲೈಂಗಿಕ ರೋಗವನ್ನು ಬಿತ್ತಿದವರೂ ಬಿಳಿಯರೆ ಎಂಬುದನ್ನು ತಲೆಮಾರುಗಳವರೆಗೆ ನೆನಪಿಸುವಂತೆ ಆ ರೋಗ **ಫರಂಗಿ ರೋಗ** ಎಂದು ಹೆಸರಾಗಿದೆ.

ಶೌರ್ಯಕ್ಕೋ ಕಲೆಗೋ ಮೆಚ್ಚಿಗೆ ಪ್ರದರ್ಶಿಸಬೇಕಾದಾಗ ಉಪಯೋಗಿಸುವ ಶಬ್ದಗಳಿಗೆ ನಮ್ಮಲ್ಲಿ ಬರಗಾಲವಿರಲಿಲ್ಲ. **'ಭಳಿರೇ'**, **'ಭಾಪುರೇ'** ಇತ್ಯಾದಿ ಶಬ್ದಗಳು ಕುಮಾರವ್ಯಾಸನಲ್ಲಿ ಧಾರಾಳವಾಗಿದೆ. ಇವುಗಳಲ್ಲಿ 'ಭಳಿರೇ' (ಹಿಂದಿ – **ಭಲಾ** = ಒಳ್ಳೆದು), ಭಾಪುರೇ (**ಬಾಪ್**ರೇ = ಅಪ್ಪಾ!). ಆದರೆ ವಿದೇಶಿ ಅಥವಾ ಹೊಸ ಶಬ್ದವೊಂದು ಸಿಕ್ಕಿದರೆ ತಟ್ಟನೆ ಹೆಕ್ಕಿಕೊಂಡು ಬಳಸುವುದು ಜನರ ಸ್ವಭಾವ. ಹೀಗೆ ಈ ಹಳೆ ಪದಗಳು ಮೂಲೆ ಸೇರಿ ಬದಲಿಗೆ **'ವಾಹ್‌ವಾ!'**, **'ಶಭಾಸ್'** ಸ್ಥಾನಾಪನ್ನವಾದವು. ಎರಡೂ ಪರಸೀಕ ಪದಗಳು. 'ವಾಹ್' ಎಂಬುದು ಆಶ್ಚರ್ಯ ಅಥವಾ ಪ್ರಶಂಸಾಸೂಚಕ ಅವ್ಯಯ. ಅದರ ಪುನರುಕ್ತಿ 'ವಾಹ್‌ವಾಹ್'. ಅದು ನಮ್ಮ ಬಾಯಲ್ಲಿ ವ್ಹಾ-ವಹವ್ವಾ ಇತ್ಯಾದಿಯಾಗಿಯೂ ವಿಕೃತವಾಗುವುದುಂಟು. 'ಶಾಭಾಸ್' ಪಾರಸಿಕ್ **ಶಾದ್‌ಬಾಶ್**, **ಶಾಹ್-ಬಾಶ್** ಎಂಬುದರ ಸಂಕ್ಷೇಪ. ಅರ್ಥ ಸುಖವಾಗಿರು! ಸಂತೋಷವಾಗಿರು! (ಶಾದ್ = ಸಂತೋಷ. ಶಾಹ್ = ಹಿರಿದು, ಶ್ರೇಷ್ಠ; ಬಾಶ್ = ಇರು, ಆಗಿರು).

೧೧೭

**ದುರ್ಯೋಧನ**, **'ದುಶ್ಶಾಸನ'** ಮೊದಲಾದ ಕೌರವರ ಹೆಸರುಗಳನ್ನು ಕೇಳಿ ನಮಗೆ ಸ್ವಲ್ಪ ಆಶ್ಚರ್ಯವಾಗುವುದು ಸಹಜ. ಯಾರಾದರೂ ತಮ್ಮ ಮಕ್ಕಳಿಗೆ ಇಂಥಾ ಹೆಸರಿಡುವುದುಂಟೆ? ಇದಕ್ಕೆ 'ದುಷ್ಟ', 'ದುರ್ಜನ' ಮೊದಲಾದ ಶಬ್ದಗಳ ಪರಿಚಯ ದಿಂದ **ದುರ್-ದುಸ್** – ಉಪಸರ್ಗಗಳು 'ಕೆಟ್ಟ' ಎಂಬರ್ಥ ಸೂಚಿಸುವಂಥವು ಎಂಬ

ತಿಳಿವಳಿಕೆಯಾಗಿರುವುದು ಕಾರಣ. ಸಂಸ್ಕೃತದಲ್ಲಿ ದುರ್, ದುಸ್ ಉಪಸರ್ಗಗಳು ಕೆಟ್ಟ ಎಂಬರ್ಥವನ್ನು ಸೂಚಿಸುವುದುಂಟಾದರೂ ಮುಖ್ಯವಾಗಿ 'ಕಷ್ಟದಿಂದ' ಎಂಬರ್ಥವನ್ನು ಸೂಚಿಸುತ್ತವೆ. ಹೀಗೆ **ದುಷ್ಕರ್ಮ** ಎಂದರೆ ಕೆಟ್ಟ ಕೆಲಸವೆಂದು ಅರ್ಥವಾದರೂ **ದುಷ್ಕರ** ಎಂದರೆ **ಕಷ್ಟದಿಂದ** (ದುಃಖೇನ) ಮಾಡಬಹುದಾದ ಅರ್ಥಾತ್ ಕಠಿಣ ಕಾರ್ಯವೆಂದಾಗುತ್ತದೆ. ಅದೇ ಪ್ರಕಾರ 'ದುರ್ಯೋಧನ' ಎಂದರೆ ಇವನ ಸಂಗಡ ಹೋರಾಡುವುದು (ಯೋಧನ) ಬಲು ಕಷ್ಟ, ಅರ್ಥಾತ್ ಇವನು ಮಹಾಶೂರ ಎಂದು ತಾತ್ಪರ್ಯ. 'ದುಃಶಾಸನ' ಎಂದರೆ ಅವನಿಗೆ ಶಾಸನ ಮಾಡುವುದು, ಇವನನ್ನು ನಿಗ್ರಹಿಸುವುದು ಸುಲಭವಲ್ಲ. ಯಾಕೆಂದರೆ ಇವನು ಅಷ್ಟು ಬಲಿಷ್ಠ, ಶೂರ ಎಂದರ್ಥ. ಆದ್ದರಿಂದಲೇ ದುರ್ಯೋಧನನಿಗೆ **ಸುಯೋಧನ** ( = ಚೆನ್ನಾಗಿ(ಸು) + ಯುದ್ಧ ಮಾಡುವವ) ಎಂದೂ ನಾಮಾಂತರವಿದೆ. ಕರ್ನಾಟಕದ ರಾಜರಲ್ಲೊಬ್ಬನಿಗೆ **ದುರ್ವಿನೀತ** ಎಂಬ ಹೆಸರುಂಟು. ಅವನನ್ನು ವಿನೀತನನ್ನಾಗಿ ( = ವಿಧೇಯನಾಗಿ) ಮಾಡುವುದು ಕಷ್ಟ. ಅವನು ಬಡಪೆಟ್ಟಿಗೆ, ಬಗ್ಗಿ ನಡೆಯುವವನಲ್ಲ ಎಂದು ಅಭಿಪ್ರಾಯ. ವ್ಯಾವಹಾರಿಕ ಭಾಷೆಯಲ್ಲಿ **ದುರ್ಗಮ** ( = ಗಮಿಸಲು, ಹೋಗಲು ಕಷ್ಟವಾದದ್ದು), **ದುರ್ಧರ** (ಧರಿಸಲು, ಸಹಿಸಲು ಕಷ್ಟಸಾಧ್ಯವಾದದ್ದು) **ದುರ್ಜಯ** (ಜಯಿಸಲು ಕಷ್ಟವಾದವ) ಇತ್ಯಾದಿ ಪದಗಳು ಸಾಕಷ್ಟು ರೂಢಿಯಲ್ಲಿವೆ. ದುರ್-ದುಸ್ ಉಪಸರ್ಗಗಳಿಗೆ 'ಹೀನ' ಎಂಬರ್ಥವೂ ಇದೆ. **ದುರ್ಬಲ** ಇದಕ್ಕೊಂದು ಉದಾಹರಣೆ.

ಇದಕ್ಕೆ ತದ್ವಿರುದ್ಧವಾದ ಸು ಎಂಬ ಉಪಸರ್ಗಕ್ಕೆ ಒಳ್ಳೇ ಮತ್ತು ಕಷ್ಟವಿಲ್ಲದೆ (ಸುಖೇನ) ಎಂಬರ್ಥಗಳುಂಟು. **ಸುಜನ** ಎಂದರೆ ಒಳ್ಳೆ ಮನುಷ್ಯ. **ಸುಲಭ** ಎಂದರೆ **ಕಷ್ಟವಿಲ್ಲದೆ** ಸಿಗುವಂಥಾದ್ದು. ಸ್ವಲ್ಪ ಸಡಿಲು ಅರ್ಥದಲ್ಲಿ **ಕಷ್ಟವಿಲ್ಲದೆ ಮಾಡಬಹುದಾದ್ದು**. **'ಸುಲಭಾ** ಮೈತ್ರೇಯಿ' ಎಂಬ ವೈದಿಕ ಕಾಲದ ಮಹಿಳೆಯಿದ್ದಳು. 'ಸೂಲಭಾ' ಎಂದು ಈಗಲೂ ಹೆಂಗಸರಿಗೆ ಹೆಸರಿಡುವುದುಂಟು. ಇಲ್ಲಿ ಸುಲಭದಲ್ಲಿ ಕೈವಶವಾಗುವವಳೆಂದು ಅರ್ಥಮಾಡಿದರೆ ಕೆಟ್ಟಿರಿ! ಇಲ್ಲಿ **ತುಂಬಾ ಯೋಗ್ಯಳು** ಎಂದೇ ಅರ್ಥ. ತುಳಸಿಗೂ 'ಸುಲಭಾ' ಎಂಬ ಹೆಸರಿದೆ.

ಮುಂದೆ ಬರುವ ಶಬ್ದಕ್ಕೆ 'ಒಳ್ಳೆ' ಎಂಬ ಗುಣವನ್ನು ಕೊಡುವ 'ಸು' ಎಂಬ ಉಪಸರ್ಗಕ್ಕೆ ವಿರುದ್ಧವಾಗಿ ಕೆಟ್ಟ ಗುಣವನ್ನು ಸೂಚಿಸುವ **ಕು-** ಉಪಸರ್ಗ ಸಂಸ್ಕೃತದಲ್ಲಿದೆ. ಇದು ಕೂಡ **ಕೆಟ್ಟ** ಎಂಬರ್ಥವನ್ನಲ್ಲದೆ **ಅಲ್ಪ, ಕ್ಷುದ್ರ** ಇತ್ಯಾದಿ ಒಟ್ಟಿನಲ್ಲಿಯೆ ನಿಂದಾಸೂಚಕ ಉಪಸರ್ಗವಾಗಿದೆ. **ಕುಕರ್ಮ, ಕುಕವಿ, ಕುವಾರ್ತೆ** ಕೆಟ್ಟ ಎಂಬರ್ಥಯುಕ್ತವಾಗಿದೆ. **ಕು-ಚೇಲ** ಎಂದರೆ **ಹರಕು ಬಟ್ಟೆ** (ಚೇಲ)ಯವ. **ಕು-ನದಿ** ಎಂದರೆ ಕ್ಷುದ್ರ ನದಿ, ಹಳ್ಳ. **ಕುಮಾರ** ಎಂದರೆ **ಮಗ, ಹುಡುಗ** ಎಂಬರ್ಥ ನಮಗೆ ಗೊತ್ತು. ಆದರೆ ಶಬ್ದಶಾಸ್ತ್ರಜ್ಞರು ಕೆಲವರ ಪ್ರಕಾರ ಇಲ್ಲಿಯೂ ಕೆಟ್ಟ, ದುರ್ಬಲ ಎಂಬ ಭಾವವೇ ಮೂಲದಲ್ಲಿದ್ದಂತೆ. 'ಕುಮಾರ' ಎಂದರೆ ಬಹಳ ಚಿಕ್ಕ ಕಾರಣ (ರೋಗ ಇತ್ಯಾದಿ)ಗಳಿಗಾಗಿ ಸಾಯುವವ!

ದುಷ್ಟಾರ್ಥ ಕೊಡುವ ಉಪಸರ್ಗವಾಗಿ **'ಕು'** ಮಾತ್ರವಲ್ಲ, ಕಕಾರಾದಿಯಾದ **ಕಃ ಕಾ ಕದ್** ಇತ್ಯಾದಿಗಳೂ ಇವೆ. **ಕಃ ಪದಾರ್ಥ** ಎಂದರೆ ಲೆಕ್ಕಿಸುವ ಅಗತ್ಯವಿಲ್ಲದಷ್ಟು ಕ್ಷುದ್ರ ಎಂಬುದಾಗಿ ಮನುಷ್ಯರನ್ನೂ ತುಚ್ಛೀಕರಿಸುತ್ತೇವೆ. ಇವೆಲ್ಲವೂ 'ಕ' ಎಂದರೆ 'ಯಾರು' ಎಂಬರ್ಥದ ಸರ್ವನಾಮದಿಂದಲೇ ಹೊರಟಿವೆ ಎಂದು ಒಂದು ಅಭಿಪ್ರಾಯವಿದೆ.

ನಾವು ಯಾರಿಗಾದರೂ ದುರ್ಲಕ್ಷ್ಯ ತೋರಿಸಬೇಕಾದರೆ "ಯಾವೋನೋ ನೀನು?" ಎನ್ನುವುದಿಲ್ಲವೆ? ಹಾಗೆ 'ಕಃಪದಾರ್ಥ' (ಯಾವ ಸರಕೋ) ಮನುಷ್ಯರಲ್ಲಿ ಅವನನ್ನು ಗಣಿಸುವುದಿಲ್ಲ ಎನ್ನುವುದು ತಾತ್ಪರ್ಯ. **ಕಾಪುರುಷ** ಎನ್ನುವಾಗ **ಕೆಟ್ಟವನೂ** ಹೌದು, **ಕ್ಷುಲ್ಲಕನೂ** ಹೌದು. "ದೈವೇನ ದೇಯಮಿತಿ ಕಾಪುರುಷಾ ವದಂತಿ" ದೈವ ಕೊಡುತ್ತದೆ ಎನ್ನುವವರು ಕಾಪುರುಷರು ಎಂದು ಭರ್ತೃಹರಿ ಹೇಳುವಾಗ ಕ್ಷುದ್ರ ಪುರುಷ, ಕೈಲಾಗದವನು, ಸಾಹಸಹೀನ ಎಂಬುದೇ 'ಕಾಪುರುಷದ' ಅರ್ಥ. ಎಂಥಾ ಮನುಷ್ಯ ಈತ ಎಂದಂತೆ. ಅದೇ ರೀತಿ **ಕದನ್ನ** ತಿನ್ನಬೇಕಾಗಿದೆ ಎನ್ನುವಾಗ ಎಂಥದೋ ಅನ್ನ, ಅಂದರೆ **ರಸಹೀನ ರುಚಿಹೀನ** ಅನ್ನ ಎಂದು ತಾತ್ಪರ್ಯ. ಪ್ರಶ್ನಾರ್ಥಕ ಸರ್ವನಾಮವೊಂದು ಉಪಸರ್ಗದ ಕೆಲಸ ಮಾಡುವಾಗ, ತಿರಸ್ಕಾರ ಸೂಚಿಸುವ ಬಲವಾದ ವಾಗಾಯುಧವಾಗುವುದೊಂದು ಸ್ವಾರಸ್ಯವಾದ ಸಂಗತಿ.

ಇದೇ ಸಂಸ್ಕೃತ ಸರ್ವನಾಮದ ನಪುಂಸಕ ಲಿಂಗ ರೂಪ **ಕಿಂ** ಎಂದು. ಇದನ್ನು ಸ್ವಲ್ಪ ತುಚ್ಛೀಕಾರದೊಡನೆ ಬಳಸಿದ ಉದಾಹರಣೆಗಳೆಂದರೆ **ಕಿನ್ನರ, ಕಿಂಪುರುಷ.** ಹಿಮಾಲಯದ ತಪ್ಪಲಿನಲ್ಲಿ ಬಹುಶಃ ವಾಸಿಸುತ್ತಿದ್ದ ಎರಡು ಜನಾಂಗಗಳಿವು. ಕಿನ್ನರ ಎಂದರೆ ಕುದುರೆಯಂಥ ಮುಖ, ಮನುಷ್ಯರಂಥ ಮೈಯವರು. ಕಿಂಪುರುಷರೆಂದರೆ ಕುದುರೆ ಮೈ, ಮನುಷ್ಯ ಮುಖದವರು. ಆದ್ದರಿಂದ ಅವರು ಕಿಂ ( = ಏನು) ನರರು, ಕಿಂ ( = ಏನು) ಪುರುಷರು, ಎಂಥವರೋ ನರರು!

**ವಾನರ** (ಮಂಗ) ಕೂಡ ಹೀಗೆ ಹುಟ್ಟಿದ್ದು ಎನ್ನುವವರಿದ್ದಾರೆ. **ನರೋ ವಾ** (ಮನುಷ್ಯನೋ ಇನ್ನೇನೋ) ಎಂದು ವಿಶ್ಲೇಷಣೆ ಅವರದು. ಆದರೂ ಬಹುಶಃ ಅದು ವನರ್ (ವನಕ್ಕೆ ಸಂಬಂಧಿಸಿದ್ದು) ಎಂಬುದರಿಂದ ಹುಟ್ಟಿದ್ದು ಎಂಬ ವಿವರಣೆಯೇ ಸಾಧುವೆನಿಸುತ್ತದೆ.

ಎಲ್ಲ ಭಾಷೆಗಳಲ್ಲಿಯೂ ನಾಗರಿಕ ಮಟ್ಟದಲ್ಲಿ ಲೈಂಗಿಕ ಮತ್ತು ಆಹಾರದ ಅವಶೇಷದ (ಮಲ) ವಿಸರ್ಜನೆಯ ಕ್ರಿಯೆಗಳನ್ನು ಸಭ್ಯರು ಮರಸಿ ಹೇಳುವ ಸಂಪ್ರದಾಯವಿದೆ. ಮೊದಲನೆಯದನ್ನು ಸದ್ಯಕ್ಕೆ ಚರ್ಚಿಸದೆ ವಿಸರ್ಜನಾ ಕ್ರಿಯೆಯ ಸಭ್ಯ ವಾಕ್ಸಂಪ್ರದಾಯವನ್ನು ನೋಡಿದರೆ ತಮಾಷೆಯ ಸಂಗತಿಗಳು ಕಾಣಿಸುತ್ತವೆ. ಇದಕ್ಕೆ **ಹೇಲು** ಎಂಬ ಕ್ರಿಯಾಪದ ಮತ್ತು ನಾಮಪದವನ್ನು ಹಳ್ಳಿಗರು ಅಸಹ್ಯವಿಲ್ಲದೆ ಬಳಸುತ್ತಾರೆ. ಆದರೆ ಸಭ್ಯ ಪ್ರಪಂಚದಲ್ಲಿ ಅದು ಎಷ್ಟು ನಿಷಿದ್ಧವೆಂದರೆ 'ಹೇ ಲತಾ ಕೋಮಲಾಂಗಿ' ಎಂಬ ರೀತಿಯಲ್ಲಿ ಪದ ಸಂಯೋಜನೆ ಮಾಡಲೇಬಾರದೆಂದು ವೈಯಾಕರಣಿ ಕೇಶಿರಾಜ ಆದೇಶಿಸುತ್ತಾನೆ. ಈ ಬಗ್ಗೆ ಆಡಲೇಬೇಕಾದರೆ **ಮಲ** ಎಂಬ ಸಂಸ್ಕೃತ ಪದವನ್ನಾದರೂ ಬಳಸಿದರೆ ನಾತ ಸ್ವಲ್ಪ ಸಹ್ಯವಾಗುತ್ತದೆ! ಈ ಕ್ರಿಯೆಗೆ ಸಭ್ಯ ಪ್ರಪಂಚದಲ್ಲಿ **ಶೌಚಕ್ಕೆ** ಹೋಗುವುದೆನ್ನುತ್ತೇವೆ. 'ಶೌಚ' ಎಂಬುದು ಶುಚಿ ಶಬ್ದದಿಂದ ಹುಟ್ಟಿದ್ದು. ಶುಚಿತ್ವ ಎಂದು ಅದರ ಅರ್ಥ. ದೇಹವನ್ನು ಶುಚಿ ಮಾಡಿಕೊಳ್ಳುವ ಕ್ರಿಯೆಯಾದ್ದರಿಂದ ಈ ಪ್ರಯೋಗ ತಪ್ಪಲ್ಲವೆನ್ನಿ. ಆದರೆ "ಅವನ ಶೌಚ ತಿನ್ನುವುದಕ್ಕೆ ಯಾಕೆ ಹೋದಿ?" ಎನ್ನುವಾಗ ಈ 'ಶುಚಿತ್ವ'ವೇ 'ಹೇಲು' ಎಂಬರ್ಥಕ್ಕೆ ತಿರುಗುವ ಆಭಾಸ ನೋಡಿ! ಸಂಸ್ಕೃತದಲ್ಲಿ ಕೂಡ **ಶೌಚ ಕೂಪ** (ಮಲ ವಿಸರ್ಜನೆಯ ಹೊಂಡ) ಎನ್ನುವಲ್ಲಿ ಶೌಚ ಸ್ವಲ್ಪ ದುರ್ವಾಸನೆಯನ್ನು ಇಡುಗಿಸುತ್ತದೆ! ಕನ್ನಡದಲ್ಲಂತೂ ಈ ಪದದ ಮೂಲಾರ್ಥವೇ ಹೋಗಿ ವಿರುದ್ಧಾರ್ಥ ನೆಲೆಗೊಂಡುಬಿಟ್ಟಿದೆ. 'ಶೌಚ ತಿನ್ನು',

'ಶೌಚ ಬಳಿ' ಇತ್ಯಾದಿಗಳನ್ನು ಉದಾಹರಿಸಬಹುದು. ಭಾಷಾರೂಢಿಗಳು ಶುದ್ಧವನ್ನು ಅಶುದ್ಧ ಮಾಡಬಲ್ಲುವು.

ಈ ಕ್ರಿಯೆ ಇನ್ನೂ ತುಸು ಕೆಳ ಹಂತದಲ್ಲಿ ಚಿತ್ರವಿಚಿತ್ರವಾಗಿ ವರ್ತಿಸುತ್ತದೆ. **ತಂಬಿಗೆ ತೆಗೆದುಕೊಂಡು ಹೋಗುವುದು** ಎಂಬುದು ಹಿಂದೆ ಮಲ ವಿಸರ್ಜನೆಗೆ ದೂರಕ್ಕೆ ನೀರ ತಂಬಿಗೆಯೊಡನೆ ಹೋಗುತ್ತಿದ್ದರು ಎಂಬುದನ್ನು ಅಟಾಚ್‌ಡ್ ಬಾತ್‌ರೂಂ, ಕಮೋಡ್‌ಗಳ ಕಾಲದಲ್ಲಿಯೂ ನೆನಪಿಗೆ ತರುತ್ತದೆ. ''ತಂಬಿಗೆ ತೆಗೆದುಕೊಂಡು ಆಗಲಿಲ್ಲ'' ಎಂದು ವೈದ್ಯರಿಗೆ ತಕರಾರು ಹೇಳುವಾಗ ''ತಂಬಿಗೆ ತೆಗೆದುಕೊಂಡು'' ಎಂಬ ಅಪೂರ್ಣ ಕ್ರಿಯೆ ನಾಮಪದವಾಗಿಬಿಡುತ್ತದೆ. ಈ ಕ್ರಿಯೆಗೆ ಆಯಾ ಪ್ರದೇಶದವರು ಬಳಸುವ ಸುತ್ತುಕಾಟಿನ ಮಾತುಗಳು. ಅವರು ವಿಸರ್ಜನ ಕ್ರಿಯೆಗೆ ಎತ್ತ ಹೋಗುತ್ತಿದ್ದರು ಎಂದು ಕೂಡ ತಿಳಿಸಿಬಿಡುತ್ತವೆ. ಕೆಲವೆಡೆ ''**ಬಯಲು ಕಡೆಗೆ** ಹೋದ'' ಎಂದರೆ ಕೆಲವೆಡೆ (ಉದಾ : ದಕ್ಷಿಣ ಕನ್ನಡದಲ್ಲಿ) '**ಗುಡ್ಡೆಗೆ** ( = ಗುಡ್ಡಕ್ಕೆ) ಹೋದ' ಎನ್ನುತ್ತಾರೆ. ಆಮೇಲೆ 'ಬೈಲುಕಡೆ' ಮತ್ತು 'ಗುಡ್ಡೆ' ಎಂಬುವೇ ಹೇಲು ಎಂಬರ್ಥ ಕೊಡುವಂತಾಯಿತು. ಶಬ್ದಗಳ ನಡತೆ ನಿಜಕ್ಕೂ ವಿಚಿತ್ರ ಅಲ್ಲವೇ ?

೧೧೮

ಒಳ್ಳೇ ಅರ್ಥ ಕೊಡುವ ಪದಗಳು ತಮ್ಮ ದುರ್ದೈವದಿಂದಲೋ ಏನೋ ದುಷ್ಟಾರ್ಥಕ್ಕೆ ತಿರುಗುವುದು ಭಾಷೆಗಳಲ್ಲಿ ಸಾಧಾರಣ ಸಂಗತಿ. ಈಗೀಗ ಪತ್ರಪತ್ರಿಕೆಗಳಲ್ಲಿ ಸರಕಾರದ ಅಥವಾ ಅಧಿಕಾರಿ ವರ್ಗದ ಅಕರ್ಮಣ್ಯತೆ ಅಥವಾ ದುಷ್ಕರ್ಮಣ್ಯತೆಯನ್ನು ವರ್ಣಿಸುವಾಗ **ವೈಖರಿ** ಎಂಬ ಪದ ತುಂಬಾ ಚಾಲ್ತಿಗೆ ಬಂದಿದೆ. ಜನತಾ (ಅಥವಾ ಕಾಂಗ್ರೆಸ್) ಸರಕಾರದ 'ಆಡಳಿತ ವೈಖರಿ', ಇಂಥಿಂಥಾ ಅಧಿಕಾರಿಯ 'ಕಾರ್ಯವೈಖರಿ' ಇತ್ಯಾದಿ.

'ವೈಖರಿ' ಶಬ್ದದ ವ್ಯುತ್ಪತ್ತಿ ಸಂದಿಗ್ಧವೇ ಆಗಿದ್ದರೂ ಉಪನಿಷತ್ತು, ಯೋಗಶಾಸ್ತ್ರ ಮೊದಲಾದ ಪುರಾತನ ಗ್ರಂಥಗಳಲ್ಲಿ ಕಾಣಿಸಿಕೊಳ್ಳುವ ಈ ಪದ ಕಾರ್ಯಕ್ಕಲ್ಲ, ವಾಕ್ಕಿ (ಮಾತು)ಗೆ ಸಂಬಂಧಿಸಿದ್ದು. ವಾಕ್ ಶಕ್ತಿ ಮತ್ತು ವಾಗ್ದೇವತೆಯನ್ನು ಅದು ನಿರ್ದೇಶಿಸುತ್ತದೆ. ವಾಕ್ಕಿನ ಉತ್ಪತ್ತಿಯನ್ನು ಉಸಿರಿನ ಪ್ರಥಮ ಚಲನೆಯಿಂದಾರಂಭಿಸಿ ಅದು ಸ್ಪಷ್ಟ ಧ್ವನಿಯಾಗಿ ಪೂರ್ಣ ಅರ್ಥಕೊಡುವ ಪದ ಅಥವಾ ವಾಕ್ಯದ ಉನ್ಮೇಷಣ ಅಥವಾ ಉಚ್ಚಾರ ವಾಗುವವರೆಗಿನ ನಾಲ್ಕು ಹಂತಗಳಲ್ಲಿ (ಪರಾ, ಪಶ್ಯಂತಿ, ಮಧ್ಯಮಾ ಮತ್ತು ವೈಖರಿ) ಕೊನೆಯ ಹಂತವೇ ವೈಖರಿ. ಒಟ್ಟಾರೆ ವಾಣಿ, ಭಾಷಣ ಎಂದೂ ಸ್ಪಷ್ಟವಾದ ಮಾತೆಂದೂ ಕೊನೆಯಲ್ಲಿ ಮಾತಿನ ಚಾತುರ್ಯವೆಂದೂ ಈ ಶಬ್ದ ಅರ್ಥಸಂಪತ್ತನ್ನು ಬೆಳೆಸಿಕೊಂಡಿತು. ಅನಂತರ ಅರ್ಥದ ಉದಾತ್ತತೆ ಸ್ವಲ್ಪ ಇಳಿಮುಖವಾಗಿ 'ವಾಗ್ವೈಖರೀ ಶಬ್ದಝರೀ' (ಮಾತಿನ ಚಮತ್ಕಾರ, ಶಬ್ದಗಳ ಧಬೆಧಬೆ) ಎಂದು ಬರೇ ಮಾತುಗಳಿಂದ ಮರುಳುಗೊಳಿಸುವ (ಒಳಗೆ ಹೆಚ್ಚು ಹುರುಳಿಲ್ಲದೆ) ರೀತಿಗೆ ವೈಖರಿಯನ್ನು ಅನ್ವಯಿಸಲಾಯಿತು.

ಆದರೂ ವೈಖರಿಯೆಂಬುದು ಮಾತಿಗೆ ಮಾತ್ರ ಈಚೆಗಿನವರೆಗೆ ಸಲ್ಲುತ್ತಿತ್ತು. ವೈಖರಿಯೆಂಬುದು ಚಮತ್ಕಾರ ಎಂಬರ್ಥಕ್ಕೆ ಇಳಿದ ಮೇಲೆ ಯಾರೋ ಅದನ್ನು ಮಾತಿನಿಂದ ಕೃತಿಗೆ ಎಳೆದರು. **ಕಾರ್ಯ ವೈಖರಿ, ಆಡಳಿತ ವೈಖರಿ** ಇತ್ಯಾದಿಗಳು ಚಾತುರ್ಯ ಎಂಬುದಕ್ಕೆ ಸಾರ್ವತ್ರಿಕವಾಗಿ ಸಲುವಳಿಯಾದದ್ದು ಈಗ ಕೆಲ ದಶಕಗಳೊಳಗಿನ ಮಾತು. ಯಾಕೆಂದರೆ,

ಪರಿಷತ್ತಿನ ಬೃಹತ್ ನಿಘಂಟಿನಲ್ಲಿ 'ಕಾರ್ಯವೈಖರಿ'ಯ ದಾಖಲೆ ಇಲ್ಲ. ಒಮ್ಮೆ ಹೀಗಾದ ಮೇಲೆ ಅದು ಕಾರ್ಯದ ಅಥವಾ ವರ್ತನೆಯಲ್ಲಿನ ಧೂರ್ತತನ (ಚತುರ = ಧೂರ್ತ)ಕ್ಕೂ ಕಡೆಗೆ ಅವ್ಯವಸ್ಥಿತತೆಗೂ ಅಚಾತುರ್ಯಕ್ಕೂ ಅನ್ವಯವಾಗತೊಡಗಿ ಈಗಂತೂ ದೇವಿ ಸರಸ್ವತಿಯನ್ನು ಬಹುದೂರ ಹಿಂದೆ ಬಿಟ್ಟು ಅನಿಷ್ಟ ಅರ್ಥಕ್ಕೆ ಮೀಸಲಾಗುವ ಪರಿಸ್ಥಿತಿ ಬಂದಿದೆ.

ಹೀಗೆ ವಿರುದ್ಧಾರ್ಥಕ್ಕೆ ತಿರುಗಿದ ಇನ್ನೊಂದು ಪದವೆಂದರೆ **ಕಾಯಕ. ಕಾಯಕ, ಕಾಯಿಕ,** ಸಂಸ್ಕೃತದಲ್ಲಿ ಶಾರೀರಿಕ, ದೈಹಿಕ (ಕಾಯ = ದೇಹ) ಎಂದಷ್ಟೇ ಪರಿಮಿತಾರ್ಥ ಹೊಂದಿದೆ. ಬಸವಣ್ಣನವರ ವೀರಶೈವ ಚಳವಳಿಯಲ್ಲಿ ಅದನ್ನು ಘನತೆಗೇರಿಸಿ ಪ್ರಾಮಾಣಿಕವಾದ ಪರಿಶ್ರಮದಿಂದ, ಶಿವಾರ್ಪಣ ಭಾವದಿಂದ ಮಾಡಿದ ಯಾವುದೇ ಕಸುಬಿನಿಂದ ಸಂಪಾದಿಸಿದ ಧನ ಎಂಬರ್ಥ ಕೊಡಲಾಯಿತು. ಕಾಯಕ ಪ್ರತಿಯೊಬ್ಬನ ಅವಶ್ಯ ಕರ್ತವ್ಯವೆಂದೂ ಅದು ಪ್ರಾಮಾಣಿಕವಾಗಿದ್ದಷ್ಟು ಕಾಲ ಅದರಲ್ಲಿ ಮೇಲು ಕೀಳೆಂಬುದಿಲ್ಲವೆಂದೂ ಉಪದೇಶಿಸಲಾಯಿತು. ಹೀಗೆ ಉದಾತ್ತ ಅರ್ಥ ಹೊಂದಿದ ಪದವನ್ನು ವ್ಯಂಗ್ಯವಾಗಿ ದುಷ್ಟ ವೃತ್ತಿ, ಕೆಟ್ಟ ಕೆಲಸ, ಮರೆಮೋಸ ಎಂಬುದಾಗಿ ವಿರುದ್ಧಾರ್ಥದಲ್ಲಿ ಬಳಸಲು ಪ್ರಾರಂಭವಾಗಿಬಿಟ್ಟುದು ಅರ್ಧಶತಮಾನಕ್ಕಿಂತಲೂ ಹಿಂದೆ ಎಂಬುದು ಪರಿಷತ್ ನಿಘಂಟು ಕೊಡುವ ಪ್ರಯೋಗಗಳಿಂದ ವಿದಿತವಾಗುತ್ತದೆ.

ಹೀಗೆ ವಿರುದ್ಧಾರ್ಥಕ್ಕೆ ತಿರುಗಿದ ಶಬ್ದಗಳ ಉದಾಹರಣೆಗಳು ಎಲ್ಲ ಭಾಷೆಗಳಲ್ಲಿ ಸಿಗುತ್ತವೆ. ಅಲಂಕಾರಶಾಸ್ತ್ರದಲ್ಲಿ ಈ ಒಲವಿಗೆ ಲಕ್ಷಣಾವೃತ್ತಿಯಲ್ಲಿ ಸ್ಥಾನ ಕೊಡುತ್ತಾರೆ. ಕ್ಷುಲ್ಲಕನನ್ನು ''ದೊಡ್ಡ ಮನುಷ್ಯ ಇದ್ದೀ ಬಿಡು'' ಎನ್ನುವಾಗ, ಅಸಜ್ಜನನನ್ನು ''ಸಜ್ಜನ'' ಎನ್ನುವಾಗ (ಇಂಗ್ಲೀಷಿನಲ್ಲಿ ವ್ಯಂಗ್ಯವಾಗಿ Gentleman ಶಬ್ದವನ್ನು ನೋಡಬಹುದು), ಬೈಗಳನ್ನು 'ಆಶೀರ್ವಾದ' ಎನ್ನುವಾಗ ನಾವು ಲಕ್ಷಣಾವೃತ್ತಿಯನ್ನು ಬಳಸುತ್ತೇವೆ. ಹೆಡ್ಡನನ್ನು 'ಭೂಪತಿ' ಎನ್ನುವುದು, ಯಾವುದಾದರೂ ಅಸ್ವಾಭಾವಿಕ, ವಿಲಕ್ಷಣ ವರ್ತನೆ ಅಥವಾ ವೇಷವನ್ನು 'ಅವತಾರ' ಎನ್ನುವುದು ಇದೇ ಚೌಕಟ್ಟಿನಲ್ಲಿ ಬರುತ್ತದೆ. ಆದರೆ ಇಂಥ ಉದಾಹರಣೆಗಳು 'ವೈಖರಿ' ಮತ್ತು 'ಕಾಯಕ'ದ ಹಾಗೆ ಕಾಯಂ ಆಗಿ ತಮ್ಮ ಉದಾತ್ತ ಅರ್ಥವನ್ನು ಕಳೆದುಕೊಳ್ಳುವ ಗಂಡಾಂತರ ಮಟ್ಟವನ್ನು ತಲುಪಿಲ್ಲ.

ವಿಶೇಷವೆಂದರೆ, ಮರಾಠಿ, ಹಿಂದಿ, ಬಂಗಾಲಿ ಮೊದಲಾದ ನೆರೆಭಾಷೆಗಳಲ್ಲಿ ವೈಖರಿ ಮತ್ತು ಕಾಯಕ (ಈ ಭಾಷೆಗಳಲ್ಲಿ ಕಾಯಕವಿಲ್ಲ, ಕಾಯಿಕ ಇದೆ) ಇಂಥ ವಿಪರೀತವೃತ್ತಿಯನ್ನು ಪಡೆದಿಲ್ಲ.

ತದ್ವಿರುದ್ಧವಾಗಿ **ಚಾಣಾಕ್ಷ** ಶಬ್ದವನ್ನು ತೆಗೆದುಕೊಳ್ಳಿ. ''ಚಾಣಾಕ್ಷನಾದ ರಾಜಕಾರಣಿ'', ''ಚಾಣಾಕ್ಷನಾದ ಅಧಿಕಾರಿ'', ಆಡಳಿತಗಾರ, ಎಂದೆಲ್ಲ ವರ್ಣಿಸುತ್ತೇವಲ್ಲ, ಇದು ಸಂಸ್ಕೃತವೆಂದೇ ಹಲಗಾಲ ನನ್ನ ತಲೆಯಲ್ಲಿತ್ತು. **ಚಾಣ** ಎಂದರೆ **ಶಾಣ** (ಮಸೆಗಲ್ಲು)ದ ಒಂದು ರೂಪ; ಅದಕ್ಕೆ ಸಾಣೆಹಿಡಿದ ಆಯುಧವೆಂದೂ ಅರ್ಥ ಇದೆ. (ಉದಾ: ಚಾಣದಿಂದ ಕೊರೆ), ಅಕ್ಷ = ಕಣ್ಣು. ಹೀಗೆ ಚಾಣಾಕ್ಷ ಎಂದರೆ ಚುರುಕು ಕಣ್ಣಿನವ. ಇದು ನಾನು ಕಲ್ಪಿಸಿಕೊಂಡ ನಿಷ್ಪತ್ತಿ. ಇದು ವಾದಸಾಧ್ಯವಾದರೂ ನಿಜವಾಗಿದ್ದದ್ದಲ್ಲ. ಚಾಣಾಕ್ಷ ಶಬ್ದ ನಮಗೆ ಮರಾಠಿಯಿಂದ ಬಂದದ್ದು, ಮರಾಠಿಯವರು ಅದನ್ನು **ಚಾಣಕ್ಯ** ಶಬ್ದದಿಂದ ವಿಕಾರ ಹೊಂದಿದ್ದೆಂದೇ ನಿಶ್ಚಯಿಸಿದ್ದಾರೆ. ಮರಾಠಿಯಲ್ಲಿ

**ಚಾಣಾಖ್ಯ**, **ಚಾಣಾಕ್ಷ** ಎಂಬೆರಡು ರೂಪಗಳಲ್ಲಿ ಅದು ಚಲಾವಣೆಯಲ್ಲಿದೆ. ಚಾಣಕ್ಯನಿಗೆ ಎಲ್ಲ ಬಗೆಯ ಧೂರ್ತತನವನ್ನು ಆರೋಪಿಸಲಾಗಿದ್ದರೂ ಚಾಣಾಕ್ಷ ಎಂಬ ಶಬ್ದ ರೂಪಕ್ಕೆ ದೂರದರ್ಶಿ, ಇನ್ನೊಬ್ಬನ ಇರಾದೆಗಳನ್ನು ಸರಿಯಾಗಿ ತರ್ಕಿಸಬಲ್ಲವ, ಜಾಣ ಎಂಬರ್ಥಗಳು ನಡೆಯುತ್ತವೆ. ಚಾಣಕ್ಯನಿಗೆ ಆರೋಪಿಸಲಾದ ಎಲ್ಲ ವಕ್ರಬುದ್ಧಿಯೂ ಚಾಣಾಕ್ಷನಿಗೆ ದಾಟಿಲ್ಲ. ಅವನ ಪುಣ್ಯ! ಆದರೆ **ಜಾಣ, ಜಾಣತನ, ಬುದ್ಧಿವಂತ, ಬುದ್ಧಿವಂತಿಕೆ** ಇವೆಲ್ಲ ಶಬ್ದಗಳು ಚುರುಕು ತಲೆಯನ್ನು ಸೂಚಿಸಿದರೂ ನೈತಿಕ ಅಥವಾ ಧರ್ಮದೃಷ್ಟಿಯಲ್ಲಿ ತಟಸ್ಥ (neutral) ಅರ್ಥ ವನ್ನಷ್ಟೇ ಸೂಚಿಸುತ್ತವಲ್ಲವೆ? ಚುರುಕುಮತಿಯವರೆಲ್ಲ ಸಂಭಾವಿತರಾಗಿರಬೇಕಿಲ್ಲ ತಾನೆ?

ಅಂದ ಹಾಗೆ **ಚಾಣಕ್ಯ** ಎಂದರೇನು? ಅದು ಆ ಮಹಾ ರಾಜಕಾರಣಿಯ ಅಂಕಿತ ನಾಮವಲ್ಲ. ಅಂಕಿತ ನಾಮ ವಿಷ್ಣುಶರ್ಮನೆಂದು. ಚಾಣಕ್ಯ ಅವನ ಕುಲನಾಮ. **ಚಣ, ಚಣಕ** ಎಂದರೆ ಕಡಲೆ. ಚಾಣಕ್ಯ ಎಂದರೆ ಕಡಲೆ ಗದ್ದೆಯ ಒಡೆಯ ಅಥವಾ ಅದರ ಸಮೀಪ ಮನೆಯುಳ್ಳವನೆಂದೆ? ಯಾಕಾಗದು? ನಮ್ಮಲ್ಲಿ 'ಬಸರೀಗಿಡದ', 'ಕದಂಬ', 'ತೋಂಟದಾರ್ಯ' ಎಂದೆಲ್ಲ ಅಡ್ಡ ಹೆಸರುಗಳಿಲ್ಲವೆ?

ನಾವೀಗ ನಮ್ಮ ಹಿಂಗಾರಿ ಮತ್ತು ಮುಂಗಾರಿ ಮಳೆ ಮತ್ತು ಮಳೆಗಾಲಗಳಿಗೆ ಇಂಗ್ಲೀಷಿನ **ಮಾನ್ಸೂನ್** ಎಂಬ ಪದವನ್ನು ಹೆಚ್ಚು ಹೆಚ್ಚಾಗಿ ಬಳಸತೊಡಗಿದ್ದೇವಲ್ಲವೆ? ಅದು ವಾಸ್ತವಿಕವಾಗಿ ಇಂಗ್ಲೀಷ್ ಪದವೇ ಅಲ್ಲ; ಇಂಗ್ಲೀಷಿನವರು ಪೋರ್ಚುಗೀಸರ **ಮೋನ್‌ಶಾಂವ್** (moncao) ಪದವನ್ನು ತಮ್ಮ ಬಾಯಿಗೆ ಸರಿಹೊಂದಿಸಿಕೊಂಡದ್ದು, ಪೋರ್ಚುಗೀಸರು ಮಲಯಿ ಭಾಷೆಯಿಂದ **ಮೂಸಿಮ್** ಎಂದಿದ್ದದ್ದನ್ನು ತಮ್ಮ ನಾಲಿಗೆಗೆ ಅಳವಡಿಸಿಕೊಂಡದ್ದು. ಮಲಯಿ ಭಾಷೆಗೆ ಅರಬ್ಬಿಯಿಂದ (ಅರಬ್ಬಿ-**ಮೊಸಿಮ್**) ಬಂದದ್ದು. ಅರಬ್ಬಿಯಲ್ಲಿ "**ಮೊಸಿಮ್**" ಎಂದರೆ ಕಾಲ ಕಾಲಕ್ಕೆ ಅಥವಾ ಋತುಮಾನಕ್ಕೆ ಅನುಸಾರ ವಾದದ್ದು ಎಂದರ್ಥ. ಏಪ್ರಿಲ್‌ನಿಂದ ಅಕ್ಟೋಬರ್‌ವರೆಗೆ ನೈಋತ್ಯದಿಂದ, ಅಕ್ಟೋಬರ್‌ನಿಂದ ಏಪ್ರಿಲ್‌ವರೆಗೆ ಈಶಾನ್ಯದಿಂದ ಪ್ರತಿ ವರ್ಷ ಬೀಸುವ ಹಿಂದೂಸಾಗರದ ಗಾಳಿಗಳ ಗುಂಟ ಅರಬರು ಶತಮಾನಗಳ ಕಾಲದಿಂದ ಅರಬ್ಬಿ ಸಮುದ್ರವನ್ನು ಹಡಗುಗಳಲ್ಲಿ ಅಡ್ಡಹಾಯ್ದು ಭಾರತದ ಪಶ್ಚಿಮ ಕರಾವಳಿ ಮತ್ತು ಮಲಯ ಮೊದಲಾದ ಪೂರ್ವದೇಶಗಳೊಡನೆ ವ್ಯಾಪಾರ ನಡೆಸುತ್ತ ಇದ್ದರು. ಈ ಗಾಳಿಗಳ ಗುಂಟ ಸಾಗಿದರೆ ಕರಾವಳಿಯ ಗುಂಟ ಬರುವುದಕ್ಕಿಂತ ನೂರಾರು ಮೈಲು ಹತ್ತಿರವಾಗುತ್ತಿತ್ತು. ಪೋರ್ಚುಗೀಸರು ಆಫ್ರಿಕದ ಕೇಪ್ ಆಫ್ ಗುಡ್ ಹೋಪನ್ನು ಸುತ್ತುವರಿದು ಭಾರತ ಮತ್ತು ಪೂರ್ವ ಏಶಿಯದ ದೇಶಗಳಿಗೆ ಬರಲು ಹವಣಿಸಿದಾಗ ಅವರಿಗೆ ಈ ಗಾಳಿಗಳ ಗುಟ್ಟು ತಿಳಿಯಿತು. ಮಲಯದಲ್ಲಿ ಅವರು ಈ ಗಾಳಿಗಳ (ಅಂದರೆ ಮೌಸಮ್ಮುಗಳಿಗೆ = ಋತುಗಳಿಗೆ ಸರಿಯಾಗಿ ಬೀಸುವ ಗಾಳಿಗಳ) ಅರಬ್ಬಿ ಹೆಸರನ್ನು ಹೆಕ್ಕಿಕೊಂಡರು ಎಂಬ ಇತಿಹಾಸವನ್ನು ಈ ಪದ ಒಳಗೊಂಡಿದೆ.

೧೧೯

ಶಬ್ದ ವ್ಯಾಪಾರಗಳಲ್ಲಿ ಇದೊಂದು ಸೋಜಿಗ. ಒಂದು ಶಬ್ದ ಒಂದು ಪ್ರದೇಶದಲ್ಲಿ ಒಂದರ್ಥದಲ್ಲಿ ಪ್ರಯೋಗದಲ್ಲಿರುತ್ತದೆ. ಆದರೆ ಐತಿಹಾಸಿಕವಾಗಿಯೂ ಪ್ರಾದೇಶಿಕ

ವಾಗಿಯೂ ಅದಕ್ಕೇ ಸಂಬಂಧಿತವಾದ ಹತ್ತಿರದ ಬೇರೆ ಭಾಷೆಗಳಲ್ಲಿ ಅದರ ಪ್ರಸಾರ ಕಾಣಿಸುವುದಿಲ್ಲ; ಬದಲಾಗಿ ದೂರದ ಪ್ರದೇಶಗಳಲ್ಲಿ ಸಂಬಂಧಿತವಲ್ಲದ ಭಾಷೆ ಅಥವಾ ಭಾಷೆಗಳಲ್ಲಿ ಅದೇ ಶಬ್ದ ಅದೇ ಅರ್ಥದಲ್ಲಿ ನಡೆಯುತ್ತಿರುತ್ತದೆ. ಇದು ಹೇಗೆ, ಯಾಕೆಂಬುದು ತಿಳಿಯುವುದಿಲ್ಲ. ಕೆಲ ಉದಾಹರಣೆಗಳನ್ನು ಇಲ್ಲಿ ಚರ್ಚಿಸುವಾ.

ಕರ್ನಾಟಕದ ಕರಾವಳಿಯಲ್ಲಿ, ಅದೂ ದಕ್ಷಿಣ ಕನ್ನಡದಲ್ಲಿ **ಬೊಜ್ಜ** ಎಂಬ ಪದ ಸತ್ತವರ ಅಂತ್ಯಕ್ರಿಯೆ, ಅದರ ಸಂಬಂಧವಾಗಿ ನಡೆಯುವ ಭೋಜನ ಇದಕ್ಕೆಲ್ಲ ಸೇರಿ ಅನ್ವಯಿಸುತ್ತದೆ. ಬಹುತರವಾಗಿ ತುಳು ಜನರಲ್ಲಿ – ಬ್ರಾಹ್ಮಣೇತರರಲ್ಲಿ, ಬ್ರಾಹ್ಮಣರಲ್ಲಿ ಮತ್ತೆ ಕನ್ನಡ ಮನೆಮಾತಿನ ನೆರೆಯ ಜನರಲ್ಲಿ ಕೂಡ ಅದು ಬಳಕೆಯಲ್ಲಿದೆ. ಈ ಶಬ್ದದ ಮೂಲಕ್ಕೆ ಹೆಚ್ಚು ತಡಕಾಡಬೇಕಾಗಿಲ್ಲ. ಅದು ಸಂಸ್ಕೃತದ ಭೋಜ್ಯ, ಭೋಗದ ತದ್ಭವ. ಅರ್ಥ: ಊಟ, ಊಟದ ಪದಾರ್ಥಗಳು, ದೇವರಿಗಿಡುವ ನೈವೇದ್ಯ. **ಬೊಜ್ಜ ತಿನ್ನು** ಅಂದರೆ ಉತ್ತರ ಕ್ರಿಯೆಯ ಭೋಜನಕ್ಕೆ ಹೋಗು ಎಂಬೀ ಪ್ರಯೋಗದಿಂದ ಬೊಜ್ಜ ಎಂಬುದು ಅಪರ ಕರ್ಮದ ಊಟಕ್ಕೆ ಮೊದಲು ಅನ್ವಯಿಸಿ ಅನಂತರ ಉತ್ತರ ಕ್ರಿಯೆಯ ಎಲ್ಲ ಪ್ರಕ್ರಿಯೆಗಳಿಗೆ ಸಲ್ಲತೊಡಗಿತೆಂಬಲ್ಲಿ ಸಂಶಯವಿಲ್ಲ.

ಸರಿ. ಆದರೆ ಕನ್ನಡದ ಇತರ ಪ್ರದೇಶಗಳಲ್ಲಿ, ಆ ಜಿಲ್ಲೆಗೇ ತಗಲಿರುವ ಶಿವಮೊಗ್ಗಾದಿ ಜಿಲ್ಲೆಗಳಲ್ಲಿ ಕೂಡ ತುಳು ವಲಸೆಗಾರರಲ್ಲಿ ಹೊರತು ಉತ್ತರ ಕ್ರಿಯೆಗಳಿಗೆ ಬೊಜ್ಜ ಎಂಬ ಹೆಸರಿಲ್ಲ. ಆದರೆ ಈಚೆಗೆ ಚರಣಸಿಂಗರ ಮರಣದ ನಂತರ ಅವರ ಅಪರ ಕರ್ಮಗಳಿಗೆ ಸಂಬಂಧಿಸಿದ ಸುದ್ದಿಯಲ್ಲಿ **ಭೋಗ, ಭೋಜ** ಶಬ್ದಗಳನ್ನು ಗುರುತಿಸಿ ನಾನು ಚಕಿತನಾದೆ. ಪಂಜಾಬಿನಲ್ಲಿ, ಅಲ್ಲಿಯ ಸೀಖರಲ್ಲಿಯೂ ಇವೇ ಶಬ್ದಗಳು ಇವೆಯೆಂದೂ ತಿಳಿಯಿತು. ಹಿಂದೀ ಬಂಗಾಲಿಗಳಲ್ಲಿ ಕೂಡ ಉತ್ತರ ಕ್ರಿಯೆಗೆ ವಿಶೇಷವಾಗಿ ಅಲ್ಲದಿದ್ದರೂ ಭೋಗ, ಭೋಜ ಶಬ್ದಗಳು ನೈವೇದ್ಯ, ಭೂರಿ ಭೋಜನಗಳಿಗೆ ಅನ್ವಯಿಸುತ್ತವೆ. ಆದರೆ ಹತ್ತಿರದ ಕನ್ನಡ ಪ್ರದೇಶಗಳಲ್ಲಿ ಇವು ಯಾಕೆ ಜನಜನಿತವಾಗಿಲ್ಲ? ಉತ್ತರದಿಂದ ಒಂದು ಕಪ್ಪೆ ಜಿಗಿತ ಮಾಡಿದಂತೆ ಕರಾವಳಿಗೆ ಬೊಜ್ಜ ಹೇಗೆ ಬಂತು? ನನಗೆ ಗೊತ್ತಿಲ್ಲ.

ಇಂಥದೇ ಇನ್ನೊಂದು ಶಬ್ದ **ಸಂಕ**. ಅರ್ಥ ಚಿಕ್ಕ ಸೇತುವೆ, ಅರ್ಥಾತ್ ಉತ್ತರ ಕರ್ನಾಟಕ ಪ್ರದೇಶದಲ್ಲಿ, ಹಿಂದಿಯಲ್ಲಿ ಕೂಡ 'ಪೂಲ್' (ಇಂಗ್ಲೀಷಿನಲ್ಲಿ bridge, culvert). ಇದೂ ಕರಾವಳಿ ಬಿಟ್ಟರೆ ಇತರ ಕನ್ನಡ ಪ್ರದೇಶಗಳಲ್ಲಿ ಚಲಾವಣೆಯಲ್ಲಿಲ್ಲ. ಉಡುಪಿಯ ೧೫-೧೬ನೇ ಶತಮಾನದ ಶಾಸನದಲ್ಲಿ **ಸಂಕಟು** (ಕಲ್ಲ ಸಂಕಟು) ಎಂಬ ರೂಪದಲ್ಲಿ ಇದೆ. ಈಗದನ್ನು **ಕಲ್ಸಂಕ** ಎಂದು ಕರೆಯುತ್ತಾರೆ. ಆದರೆ ಮರಾಠಿಯಲ್ಲಿ **ಸಾಂಕೂ, ಸಾಂಕವ** ಎಂದೂ, ಹಿಂದಿಯಲ್ಲಿ **ಸಾಖೂ** ಎಂದೂ, ಬಂಗಾಲಿಯಲ್ಲಿ **ಸಾಂಕೋ** ಎಂದೂ ಅದು ಕಾಣಿಸಿಕೊಳ್ಳುತ್ತದೆ. ರವೀಂದ್ರನಾಥ ಠಾಕೂರರ ಮನೆಯಿದ್ದ ಕಲಕತ್ತೆಯ ಪ್ರದೇಶಕ್ಕೆ **ಜೋಡಾ ಸಾಂಕೋ** ಎಂದೇ ಹೆಸರಿದೆ. ಅರ್ಥ: ಜೋಡುಸಂಕ. ಸಂಸ್ಕೃತದ **ಸಂಕ್ರಮ** = ದಾಟಿ ಹೋಗುವುದಕ್ಕಿರುವ ಸಾಧನ ಎಂಬುದು ಅದರ ಮೂಲ. ಆದರೆ ಕರ್ನಾಟಕದ ಬಾಕಿ ಪ್ರದೇಶಗಳನ್ನು ಮರೆತು ಕರಾವಳಿ ಜಿಲ್ಲೆಗೇ ಅದು ಹೇಗೆ ಹಾರಿ ಬಂತು? ಯಾರು ಬಲ್ಲರು?

ದಕ್ಷಿಣ ಕನ್ನಡದಲ್ಲಿ ನಾಯಿಗೆ ನಾಯಿಯೆಂಬುದಲ್ಲದೆ ಗಂಡಿಗೆ **ಬೊಗ್ರ** ಎಂದೂ ಹೆಣ್ಣಿಗೆ **ಬೊಗ್ಗಿ**ಯೆಂದೂ ಹೆಸರುಂಟು. ತುಳುವಿನಲ್ಲಿ ಹೆಚ್ಚಾಗಿ, ಕನ್ನಡದಲ್ಲಿ ಕ್ವಚಿತ್ತಾಗಿ ಈ ಪದ

ಬಳಕೆಯಲ್ಲಿದೆ. ಹರಿಜನ ಪಂಗಡಗಳಲ್ಲಿ ಒಂದಾದ ಕೊರಗರಲ್ಲಿ ಹುಡುಗರಿಗೆ ಬೊಗ್ರ ಎಂದೂ ಹುಡುಗಿಯರಿಗೆ ಬೊಗ್ಗಿಯೆಂದೂ ಸಾಮಾನ್ಯ ಸಂಬೋಧನೆ ಇದೆ. ದಲಿತ ಜಾತಿಗಳಲ್ಲಿ ತಮ್ಮನ್ನೇ ಕೀಳೆಣಿಸಿಕೊಳ್ಳುವುದು ಎಷ್ಟು ರಕ್ತಗತವಾಗಿದೆಯೆಂಬುದಕ್ಕೆ ಇದೊಂದು ಸಾಕ್ಷಿ; ಆದರೆ ಮೇಲಿನ ಜಾತಿಯವರಲ್ಲಿ ಕೂಡ, ಯಾವುದೊಂದು ಸಂಭಾವ್ಯ ಅನಿಷ್ಟವನ್ನು ನಿವಾರಿಸಿಕೊಳ್ಳಲು ಮಕ್ಕಳಿಗೆ ಅನಿಷ್ಟ ಹೆಸರನ್ನಿಡುವ ಸಂಪ್ರದಾಯವನ್ನು ಅನುಸರಿಸಿ ಬೊಗ್ಗು, ಬೊಗ್ರ ಎಂಬ ಹೆಸರನ್ನಿಟ್ಟು ಕರೆಯುವುದುಂಟು. ಡಾ. ಶಂ. ಬಾ. ಜೋಶಿಯವರು 'ಕರ್ನಾಟಕದ ವೀರಕ್ಷತ್ರಿಯರು' ಗ್ರಂಥದಲ್ಲಿ ಇಲ್ಲಿನ ಮಲ್ಲಯ್ಯ ದೇವರ ಭಕ್ತರು ತಮ್ಮನ್ನು ಆ ದೇವರ ನಾಯಿಗಳೆಂದು ಭಾವಿಸಿಕೊಂಡು (ಅನು-ನಾಯಿಗಳು) **ವಗ್ಗಯ್ಯ** ಎಂದು ಕರೆದುಕೊಳ್ಳುತ್ತಾರೆಂದು ದಾಖಲಿಸಿದ್ದಾರೆ. ತುಳುನಾಡಿನ ಬೊಗ್ರಗಳೂ ಈ ವಗ್ಗಯ್ಯಗಳೂ ಒಂದೇ ಎಂದಾಯಿತು. ಆದರೆ ನಾಯಿಗಳಿಗೆ ವಗ್ಗಯ್ಯ, ಬೊಗ್ರ ಎಂಬ ಅಭಿಧಾನ ಹೇಗೆ ಬಂತು? ಅದು **ವ್ಯಾಘ್ರ** ಎಂಬ ಸಂಸ್ಕೃತ ಪದದ ತದ್ಭವ. ವ್ಯಾಘ್ರ = ಹುಲಿ. ವ್ಯಾಘ್ರ-ಬಾಘ-ಬಗ್ಗ-ಬೊಗ್ರ. ನಾಯಿ ಎಂದರೆ 'ಗ್ರಾಮಸಿಂಗ' ತಾನೆ! ಈಗಿನವರು ನಾಯಿಗಳಿಗೆ Tiger ಎಂದು ಹೆಸರಿಡುತ್ತಾರಲ್ಲ, ಹಾಗೆ ಹಿಂದಿನವರು ಮನುಷ್ಯರಿಗೆ ನಾಯಿಗಳೆಂದು ಹೆಸರು ಕೊಡುತ್ತಿದ್ದರು!

ನಾಯಿಗಿರುವ ಒಂದು ಸಂಸ್ಕೃತ ಹೆಸರು **ಕುರ್ಕುರ** ಅಥವಾ **ಕುಕ್ಕುರ**. ಇದು ದ್ರಾವಿಡದ ಬಹುತರ ಭಾಷೆಗಳಲ್ಲಿ ಕಾಣಿಸುವ ಗೊರೆ, ಕೊರೆ ಎಂಬ ಅನುಕರಣ ಧಾತುವಿನಿಂದ ಸಂಸ್ಕೃತ ಸ್ವೀಕರಿಸಿರಬಹುದಾದ ಪದವೆಂದು ಗಣಿಸಲಾಗಿದೆ. ತೆಲುಗಿನಲ್ಲಿ, ತಮಿಳಿನಲ್ಲಿ **ಕುಕ್ಕ** ಎಂಬೊಂದು ಹೆಸರು ನಾಯಿಗಿದೆ. ಆದರೆ ಇತರ ದ್ರಾವಿಡ ಭಾಷೆಗಳಲ್ಲಿ ನಾಯಿಯನ್ನು 'ಕುರೋ ಕುರೋ' ಇತ್ಯಾದಿಯಾಗಿ ಕರೆಯುವುದಿದ್ದರೂ ನಾಯಿಗೇ ಅದನ್ನು ಪ್ರಯೋಗಿಸುವುದಿಲ್ಲ. ತುಳುವಿನಲ್ಲಿ ಮಾತ್ರ **ಕೂಕುರು** ಎಂದು ನಾಯಿಯ ಮರಿಗೆ ಹೆಸರುಂಟು. ಅಂತ್ಯ ರಕಾರ ಸಹಿತವಾಗಿ ಸಂಸ್ಕೃತದಲ್ಲಿ ಈ ಶಬ್ದ ಕಾಣಿಸುವುದರಿಂದ ಅದನ್ನು ತುಳುವಿನಿಂದ ಸಂಸ್ಕೃತ ಸ್ವೀಕರಿಸಿತೆ? ನಂಬಲು ಕಷ್ಟ. ಆದರೆ ತುಳುವನ್ನೇ, ತಮಿಳು, ಕನ್ನಡದಂಥ ನೆರೆಯ ದಕ್ಷಿಣ ದ್ರಾವಿಡ ಗುಂಪಿಗೆ ಸೇರಿಸದೆ, ದೂರದ ತೆಲುಗು ಇತ್ಯಾದಿ ಮಧ್ಯ ದ್ರಾವಿಡ ಗುಂಪಿಗೆ ಭಾಷಾಶಾಸ್ತ್ರಿಗಳು ಸೇರಿಸುತ್ತಿರುವುದನ್ನು ನಂಬಬಹುದಾದರೆ ಸಂಸ್ಕೃತ ತುಳುವಿನಿಂದ ಸ್ವೀಕರಿಸಿತೆನ್ನುವುದು ಅಸಂಭವ ಹೇಗಾದೀತು?

ನನ್ನನ್ನು ಸೋಜಿಗಗೊಳಿಸಿದ ಇನ್ನೊಂದು ಶಬ್ದ, ತುಳುವಿನ **ಶಿಮ** ಶಬ್ದ. ಸಂಸ್ಕೃತದಲ್ಲಿ **ಹಿಮ** ಹೇಗೊ ಹಾಗೆ ಚಳಿ, Snow ಎಂಬರ್ಥಗಳನ್ನು ತುಳುವಿನಲ್ಲಿ 'ಶಿಮ' ಕೂಡ ಕೊಡುತ್ತದೆ. ದ್ರಾವಿಡ ಭಾಷಾಶಾಸ್ತ್ರಿಗಳು, 'ಚೆಮ್ಮಲ್' = (ತಮಿಳಿನಲ್ಲಿ ನೀರು, ಇತರ ದ್ರಾವಿಡ ಭಾಷೆಗಳಲ್ಲಿ ಒದ್ದೆತನ, ಜವುಳು)ನೊಡನೆ ತುಳುವಿನ 'ಶಿಮ'ವನ್ನು ಸಾಲುಗಟ್ಟಿಸುತ್ತಾರೆ. ಹಾಗಾದರೆ ಸಂಸ್ಕೃತವೇ ದ್ರಾವಿಡದಿಂದ ಕೊಂಡಿತೊ ಎಂದರೆ ಸಂಸ್ಕೃತದಲ್ಲಿ ಋಗ್ವೇದದಲ್ಲೇ ಇದರ ಪ್ರಯೋಗವಿದೆಯಲ್ಲದೆ ಇರಾಣದ ಪ್ರಾಚೀನ ಜೆಂಡ್ ಭಾಷೆಯಿಂದಾರಂಭಿಸಿ ಯುರೋಪಿನ ಲ್ಯಾಟಿನ್‌ವರೆಗೆ ಭಾರೋಪ್ಯ ಭಾಷೆಗಳಲ್ಲೆಲ್ಲ 'ಹಿಮ'ದ ಸಂವಾದಿಗಳಿವೆ. ಭಾಷೆಗಳಲ್ಲಿ ಕೆಲವೊಮ್ಮೆ ಇಂಥ ಚಿದಂಬರ ರಹಸ್ಯಗಳು ತಲೆ ಕೆಡಿಸುತ್ತವೆ.

**ಪಥ್ಯ** ಎಂದೊಡನೆ ಹೆಚ್ಚಾಗಿ ಅಸ್ವಸ್ಥರಾದವರಿಗೆ ವೈದ್ಯರು ನಿಯಮಿಸುವ ಹಿತಕರ

ಆಹಾರಗಳು ಎಂದು ತಿಳಿಯುತ್ತೇವೆ. ಇದು ಹೊರಟಿದ್ದು ಮಾತ್ರ 'ದಾರಿ' ಎಂಬರ್ಥದ ಸಂಸ್ಕೃತ **ಪಥ** ಶಬ್ದದಿಂದ. ದಾರಿ, ಅಂದರೆ ಸರಿದಾರಿಯಲ್ಲಿ ಸಾಗುವಂಥಾದ್ದು, ಅದರಲ್ಲಿ ನಡೆಯುವವರು ಸ್ವೀಕರಿಸುವಂಥಾದ್ದು ಎಂಬಿತ್ಯಾದಿಯಾಗಿ ಈ ಪದದ ಹಿಂದಿರುವ ಆಲೋಚನೆ.

ದಕ್ಷಿಣ ಕನ್ನಡಕ್ಕೆ ಹೋಗಿ, ನಾಲ್ಕು ದಿನ ನೀವಿದ್ದರೆ **ನಂಬರ್** ಅಥವಾ **ನಂಬ್ರ** ನಿಮ್ಮ ಕಿವಿಗೆ ಬಿದ್ದೇ ಬೀಳುತ್ತದೆ. 'ನಾನೇನೋ ಒಳ್ಳೇದಕ್ಕೆ ಹೇಳಿದೆ. ಅದನ್ನ ದೊಡ್ಡ **ನಂಬ್ರ** ಮಾಡಿಬಿಟ್ಟ' ಎಂದು ಸಾತ್ವಿಕ ಪರಿತಾಪ ಪಡುವವರಾಗಲಿ, 'ರಸ್ತೇಲಿ ಏನಪ್ಪ ನಿಮ್ಮ **ನಂಬ್ರ** ?' ಎಂದು ಕೇಳುವವರಾಗಲಿ ನಿಮಗೆ ಸಿಗುತ್ತಾರೆ. ಸ್ವಲ್ಪ ದಿನದಲ್ಲಿ ನಿಮಗೆ 'ನಂಬ್ರ' ಎಂದರೆ ದೂರು, ತಕರಾರು, ಜಗಳ ಎಂದು ತಿಳಿಯುತ್ತದೆ. ನೀವು ಎಷ್ಟೇ ಕಮ್ಮಿ ಇಂಗ್ಲೀಷನ್ನು ಬಲ್ಲವರಾಗಿದ್ದರೂ ಇಂಗ್ಲೀಷಿನಲ್ಲಿರುವ (Number) ನಿಮಗೆ ಗೊತ್ತಿರುತ್ತದೆ. ಆದರೆ ಮೇಲೆ ಹೇಳಿದ ನಂಬ್ರವೂ ಇದೂ ಒಂದೇ ಎಂದರೆ ನಿಮಗೆ ಆಶ್ಚರ್ಯ ವಾಗುತ್ತದೆ. ಆದರೆ ಈ ಶಬ್ದ ಈ ಅರ್ಥ ಪಡೆಯಲು ಕಾರಣ ನ್ಯಾಯಾಲಯಗಳು. ನ್ಯಾಯಾಲಯಗಳಲ್ಲಿ ಫಿರ್ಯಾದುಗಳು (= ದೂರುಗಳು) ದಾಖಲಾದಲ್ಲಿ ಅವುಗಳಿಗೊಂದು ನಂಬರು (= ಸಂಖ್ಯೆ) ಕೊಡುತ್ತಾರೆ. ವಿಚಾರಣೆಗೆ ತೆಗೆದಾಗ ಆ ನಂಬರನ್ನು ಕೋರ್ಟಿನ ಪೇದೆ ಕೂಗುತ್ತಾನಲ್ಲವೆ ? ಆದ್ದರಿಂದ ನಂಬರು ಎಂದರೆ ದೂರು !

## ೧೨೦

**ಕಥೆ** ಎಂಬುದು ಸಂಸ್ಕೃತ **ಕಥಾ** ಶಬ್ದದ ಕನ್ನಡ ರೂಪ. 'ಕಥೆ' ಎಂದರೆ ನಮಗೀಗ ಯಾವುದಾದರೂ ಕಾಲ್ಪನಿಕ ವೃತ್ತಾಂತ ಎಂದು ಅರ್ಥವಾಗುತ್ತದೆ. ಆದರೆ ಮೂಲದಲ್ಲಿ 'ಕಥಾ' ಎಂದರೆ 'ಹೇಳಿಕೆ' ಎಂದಷ್ಟೇ ಅರ್ಥ. ವಿಶೇಷವಾಗಿ ನಡೆದದ್ದನ್ನು ಇನ್ನೊಬ್ಬರಿಗೆ ವಿವರವಾಗಿ ಹೇಳುವುದು ಕಥೆ. ಈ ನಿಟ್ಟಿನಿಂದ ಕಥೆ ಒಂದು ಸಾಹಿತ್ಯ ಪ್ರಕಾರವಾಗಿ – ವಿಶೇಷವಾಗಿ ಗದ್ಯ ಕೃತಿಯೆಂಬುದಾಗಿ ಅರ್ಥ ವಿಸ್ತರಿಸಿಕೊಂಡದ್ದು ಆಶ್ಚರ್ಯವಲ್ಲ. ಇದು ಭಾಷೆಗಳಲ್ಲಿ ಸಾಮಾನ್ಯವಾದ ಒಲವು. ಹಿಂದಿಯಲ್ಲಿ **ಕಹಾನಿ** ಎಂದರೆ ಕಥೆ : 'ಕಹ್' ಎಂದರೆ ಹೇಳುವುದು. ಬಂಗಾಲಿಯಲ್ಲಿ ಅದೇ **ಕಾಹಿನಿ**. ಇಂಗ್ಲೀಷಿನಲ್ಲಿ ಕಥೆಯೆಂಬರ್ಥದಲ್ಲಿ tale ಪದ ಇದೆ. ಅದು tell ( = ಹೇಳು) ಪದದಿಂದ ಹುಟ್ಟಿದ್ದು.

**ದಂತಕಥೆ** ಎಂಬ ಪದ ಎಲ್ಲರಿಗೂ ಗೊತ್ತು. ಯಾವ ಖಚಿತ ಆಧಾರವಿಲ್ಲದೆ ಬಾಯಿಂದ ಬಾಯಿಗೆ ತಲೆಮಾರುಗಳಲ್ಲಿ ಹಬ್ಬುತ್ತ ಬೆಳೆದ ವಾರ್ತೆ ದಂತಕಥೆಯೆನಿಸುತ್ತದೆ. ಇದು ಹಿಂದಿ, ಮರಾಠಿಗಳಲ್ಲಿಯೂ ಸಿಗುವ ಪದ. ಆದರೆ **ದಂತ** ( = ಹಲ್ಲು)ಕ್ಕೂ ಕಥೆಗೂ ಏನು ಸಂಬಂಧ ? ಮಾಸ್ತಿಯವರು ಇದಕ್ಕೊಂದು ವ್ಯುತ್ಪತ್ತಿಯನ್ನು ಊಹಿಸುತ್ತಾರೆ. ದಂತಕಥೆಯ 'ದಂತ' ಹಲ್ಲು ಅಲ್ಲವೇ ಅಲ್ಲ. 'ಉದಂತ' ಎಂದರೆ ಸಂಸ್ಕೃತದಲ್ಲಿ ವೃತ್ತಾಂತ, ವರ್ತಮಾನ (ಉದಾ : ರಾಮೋದಂತಃ) ಈ ಉದಂತದಲ್ಲಿ ಪ್ರಥಮಾಕ್ಷರ ಉದುರಿಹೋಗಿ 'ದಂತ' ಮಾತ್ರ ಉಳಿಯಿತು. ಉದಂತ ಮತ್ತು ಕಥೆ ಸುಮಾರಾಗಿ ಒಂದೇ ಅರ್ಥದ ಶಬ್ದಗಳು. ಹೀಗೆ ಒಂದೇ ಅರ್ಥದ ಜೋಡಿ ಪದಗಳು ಒಂದೇ ಶಬ್ದದಂತೆ ಚಲಾವಣೆಗೆ ಬರುವುದು ಎಲ್ಲ ಭಾಷೆಗಳಲ್ಲಿ ಸಾಮಾನ್ಯ ಪ್ರವೃತ್ತಿ. (ಉದಾ : ಕಾಂಪೌಂಡ್ ಗೋಡೆ). ಅದೇ ಪ್ರಕಾರ

ಶಬ್ದಗಳು ಅಕ್ಷರಗಳನ್ನು ಉದುರಿಸಿಕೊಳ್ಳುವುದು ಅಪರೂಪವಲ್ಲ.

**ಇತಿಹಾಸ** ಮತ್ತು **ಚರಿತ್ರೆ** ಎಂಬೆರಡೂ ಪದಗಳು ಯಾವುದಾದರೂ ದೇಶ ಅಥವಾ ಪ್ರದೇಶದಲ್ಲಿ ನಡೆದುಹೋದ ಸಂಗತಿಗಳ ವ್ಯವಸ್ಥಿತ ನಿರೂಪಣೆಗೆ ಸಲ್ಲುತ್ತವೆ. "**ಚರಿತ್ರೆ**" ಅಥವಾ "ಚರಿತ್ರ" ಎಂದರೆ ಶಬ್ದಶಃ ನಡೆಯುವುದು ಅಥವಾ ನಡೆದದ್ದು, ಚಲಿಸಿದ್ದು. ವೈಯಕ್ತಿಕವಾಗಿ ಪ್ರಯೋಗಿಸಿದಾಗ ಅದು ಒಬ್ಬನ ನಡತೆಯ ಒಳ್ಳೆಯತನ ಅಥವಾ ಕೆಟ್ಟತನವನ್ನೂ ನಿರ್ದೇಶಿಸುತ್ತದೆ. '**ಚರಿತ್ರಹೀನ**' ಅಂದರೆ (ಒಳ್ಳೆಯ) ನಡತೆಯಿಲ್ಲದವನು. ಆದರೆ 'ಇತಿಹಾಸ' ಒಂದು ದೇಶಕ್ಕೆ ಸಂಬಂಧಿಸಿದ ಗತಕಾಲದ ಆಗುಹೋಗು ಎಂಬರ್ಥದಲ್ಲಿ ತುಂಬಾ ಪ್ರಾಚೀನ ಪದ. ಇದರ ವ್ಯುತ್ಪತ್ತಿ ಸ್ವಾರಸ್ಯವಾದದ್ದು. – 'ಇತಿ-ಹ-ಆಸ' ಹೀಗೆ ಇತ್ತಂತೆ – ಅರ್ಥಾತ್ ಪರಂಪರೆಯಿಂದ ಇಳಿದುಬಂದ ಹೇಳಿಕೆಗಳ ನಿರೂಪಣೆಯೇ ಇತಿಹಾಸ. ಇತಿಹಾಸ ತಿರುಳಿನಲ್ಲಿ ವಾಸ್ತವಿಕವಾಗಿ ನಡೆದ ಜಾನಾಂಗಿಕ ಮಹತ್ವವುಳ್ಳ ಸಂಗತಿಗಳನ್ನು ಹೇಳುತ್ತದೆ.

ತದ್ವಿರುದ್ಧವಾಗಿ **ಐತಿಹ್ಯ** ಅದೂ-'ಇತಿ-ಹ' ( = ಹೀಗಂತೆ)ವೇ. ಆದರೆ ಅದಕ್ಕೆ ಇತಿಹಾಸದ ಹರಹು ಇರಬೇಕಿಲ್ಲ. ಒಂದೂರಿನ, ಒಬ್ಬ ಮನುಷ್ಯ ಯಾವುದಾದರೂ ಅರ್ಥಪೂರ್ಣ ಘಟನೆಯ ಪರಂಪರಾಗತ ನಿರೂಪಣೆ ಅದು. ಪಂಡಿತ ಮೋತಿಲಾಲ ನೆಹರೂ ಅವರು ತಮ್ಮ ಬಟ್ಟೆಗಳನ್ನು ಮಡಿ ಮಾಡಲು ಪ್ಯಾರೀಸಿಗೆ ಕಳಿಸುತ್ತಿದ್ದರು ಎಂಬ (ಕಾಲಿಲ್ಲದ) ಐತಿಹ್ಯವನ್ನು ಉದಾಹರಿಸಬಹುದು.

**ಕಿಂವದಂತಿ** ಎಂಬುದು ಐತಿಹ್ಯದಷ್ಟು ಹಳೆಯದಲ್ಲ. ಅದು ಅಂತೆ-ಕಂತೆ ಸುದ್ದಿ. ಹಿಡಿಯಬೇಕೆಂದು ಹೊರಟರೆ ಎಲ್ಲಿ ಅದರ ಮೂಲ ಎಂದು ಕಂಡುಹಿಡಿಯುವುದು ಸಾಧ್ಯವಿಲ್ಲ. ಆ ಶಬ್ದದ ಅರ್ಥವೇ 'ಏನು ಹೇಳುತ್ತಾರೆ?' ಎಂದು. ಶಿವರಾಮ ಕಾರಂತರ ಕಿರುನಾಟಕ, 'ಯಾರೋ ಅಂದರು-ಏನಂತೆ?' ಕಿಂವದಂತಿಯ ಸ್ವರೂಪವನ್ನು ಸೊಗಸಾಗಿ ಗಾಳಿಗೆ ಹಿಡಿಯುತ್ತದೆ. ಅದರದೇ ಸಂಕ್ಷಿಪ್ತ ರೂಪ **ವದಂತಿ** ( = ಹೇಳುತ್ತಾರೆ) ಯಾರು ಹೇಳುತ್ತಾರೆಂದು ಕೇಳಬೇಡಿ. ಇಂದಿನ ಎಲ್ಲ ತರಹದ ರಾಜಕಾರಣದಲ್ಲಿ ಕಿಂವದಂತಿ, ವದಂತಿಗಳ ಪಾತ್ರ ಗಾಳಿಯಂತೆ ಅದೃಶ್ಯವಾದರೂ ಗಾಳಿಯಂತೆಯೇ ಹವಾಮಾನವನ್ನು ಪ್ರಭಾವಿಸುವಂಥಾದ್ದು.

ಕನ್ನಡದ **ಅಂತೆ** ಕೂಡ 'ವದಂತಿ'ಯೇ. ಅದು 'ಅನ್ನುತ್ತಾರೆ' ಅಥವಾ 'ಅನ್ನುತ್ತದೆ' ಎಂಬುದರ ಹ್ರಸ್ವೀಕರಣ. ಈ ಶಬ್ದ ಜನರ ಬಾಯಿಯಲ್ಲಿ ಎಷ್ಟು ಕಾಲದಿಂದ ಇತ್ತೋ ನಾ ಕಾಣೆ. ಲಿಖಿತ ಸಾಹಿತ್ಯದಲ್ಲಿ ಅದು ಪ್ರಥಮತಃ ಕಾಣಿಸಿಕೊಳ್ಳುವುದು ಪುರಂದರದಾಸರ ಒಂದು ಹಾಡಿನಲ್ಲಿ. ಹಳೆಗನ್ನಡದಲ್ಲಿ ಅದಕ್ಕೆ 'ಎಂಬರ್' ಎಂಬ ಶಬ್ದವೇ ಕಾಣಸುವುದು. ಎಂಬರ್=ಅನ್ನುತ್ತಾರೆ, ಹೇಳುತ್ತಾರೆ. ಈ ಎಂಬರ್ ಇಂದಿಗೂ ಪ್ರಾದೇಶಿಕ ಉಪಭಾಷೆಗಳಲ್ಲಿ ಉಳಿದುಕೊಂಡು ಬಂದಿದೆ. ಉದಾಹರಣೆಗೆ ದಕ್ಷಿಣ ಕನ್ನಡದ ಉತ್ತರ ಭಾಗದಲ್ಲಿ ಪ್ರಚಲಿತವಾದ ಜನಪದ ಭಾಷೆಯಲ್ಲಿ **ಅಂಬ್ರ** ಎಂಬುದನ್ನು 'ಅಂತೆ' ಎಂಬರ್ಥದಲ್ಲಿ ಬಳಸುತ್ತಾರೆ. ಅಂಬ್ರ = ಎಂಬರ್. ಉಪಭಾಷೆಗಳ ಕ್ರಮವಾದ ಅಧ್ಯಯನವಾದಲ್ಲಿ ಪ್ರಾಚೀನ ಸಾಹಿತ್ಯ ಭಾಷೆಯಲ್ಲಿದ್ದು ಈಗಿನ ಶಿಷ್ಟಭಾಷೆಯಲ್ಲಿ ಅಳಿದುಹೋದಂತೆ ಕಾಣಿಸುವ ಎಷ್ಟೆಲ್ಲ ಪ್ರಯೋಗಗಳು, ವ್ಯಾಕರಣ ರೂಪಗಳು ಜೀವಂತವಿರುವುದು ಗೋಚರಕ್ಕೆ ಬರಬಹುದು.

ಅಂತೆ ಕಂತೆಗಳ ಪರಭಾಷಾ ಹೋಲಿಕೆಗಾಗಿ ಇಂಗ್ಲೀಷಿನ rumour (= ಗಾಳಿಸುದ್ದಿ)ನ ಮೂಲಕ ಹೋಗಬಹುದು. ಇದು ಲ್ಯಾಟಿನ್ ಭಾಷೆಯಿಂದ (rumour) ಹಳೆ ಫ್ರೆಂಚ್ ಮೂಲಕ ಇಂಗ್ಲೀಷಿಗೆ ದಾಟಿ ಬಂದದ್ದು. ಅದರ ಮೂಲಾರ್ಥ ಸಪ್ಪಳ (noise) ಎಂದು! ಜನವಾಣಿಯಲ್ಲಿ ಅದೇ they say = ಅವರು ಹೇಳುತ್ತಾರೆ. ಅವರು ಅಂದರೆ ಯಾರು? ದೇವರಿಗೇ ಗೊತ್ತು = God knows!

ಇಸ್ಲಾಮಿ ಆಳಿಕೆಯ ಕಾಲದಲ್ಲಿ ಸಾಮಾನ್ಯವಾಗಿ ಸನಾತನಿಗಳೆನಿಸಿದ ಹಿಂದುಗಳು ಮುಸ್ಲಿಂ ಸಂಸ್ಕೃತಿಯ ಲಕ್ಷಣಗಳನ್ನು ದೂರವೇ ಇರಿಸಿದ್ದರು. ಇಸ್ಲಾಮಿ ಆಳಿಕೆಯಲ್ಲಿ ಅರಮನೆಯ ಸಂಪರ್ಕವುಳ್ಳವರನ್ನು ಬಿಟ್ಟರೆ ವೇಷ ಭೂಷಣಗಳಲ್ಲಿ ಅವರ ಪ್ರಭಾವ ಸನಾತನಿಗಳ ಮೇಲಂತೂ ಕಡಿಮೆಯಾಗಿತ್ತು. ಆದರೆ ಎಲ್ಲ ವಿಷಯಗಳಲ್ಲಿ ಇದು ಸಾಧ್ಯವಾಗಿರಲಿಲ್ಲ. ಉದಾಹರಣೆಗೆ ಮುಸ್ಲಿಂ ಬಾವರ್ಚಿಗಳು ಅನ್ವೇಷಿಸಿದ ಕೆಲ ಸಿಹಿ ತಿಂಡಿಗಳು ಹಿಂದೂ ಜನರ ಅಡಿಗೆಯಲ್ಲಿ ತಲೆಹಾಕಿದ್ದವು. 'ಶಿರಾ' ವಿಷಯ ಹಿಂದೆಯೇ ಚರ್ಚಿಸಿದ್ದೇನೆ (ಪದಾರ್ಥ-೨೩). ಇನ್ನೊಂದು ಸಿಹಿ ತಿಂಡಿ **ಜಹಾಂಗೀರ್**. ಇದು ಜಹಾಂಗೀರ್ ಬಾದಶಾಹನ ಕಾಲದಲ್ಲಿ ಯಾವನೋ ಮುಸ್ಲಿಂ ಅಡಿಗೆ ಭಟ್ಟನ ಆವಿಷ್ಕಾರವಿದ್ದಿರಬೇಕೆಂಬ ಕಲ್ಪನೆ ಹುಟ್ಟಬಹುದು. ಆದರೆ ವಸ್ತುಸ್ಥಿತಿ ಹಾಗಿಲ್ಲವೆಂದು ಕಾಣುತ್ತದೆ. **ಜಹಾಂಗೀರೀ** ಎಂಬುದೊಂದು ಹಸ್ತಾಭರಣ. ಈ ಪದ ಪಾರಸೀಕ ಮೂಲದ್ದು. ನಮ್ಮ **ಮುರಗಿ** (=ಮುರಿಗೆ)ಯನ್ನು ಹೋಲುವಂಥಾದ್ದು. ಜಹಾಂಗೀರಿ ಕೂಡ ಮುರಗಿಯಂತೆ ಸುರುಳಿ ಸುರುಳಿಯಾಗಿ ಹಿಟ್ಟನ್ನು ಹೊಯ್ದು ಕರಿದು ಸಕ್ಕರೆ ಪಾಕದಲ್ಲಿ ಹಾಕಿ ತಯಾರಿಸಿದ ತಿಂಡಿ. ''ಜಹಾಂಗೀರೀ'' ಉದ್ದಿನ ಹಿಟ್ಟಿನಿಂದ ತಯಾರಿಸಿದ್ದಾದರೆ **ಜಲೇಬಿ** ಎಂಬ ಅಂಥದೇ ಇನ್ನೊಂದು ತಿಂಡಿ ಮೈದಾಹಿಟ್ಟಿನಿಂದ ಸುಮಾರಾಗಿ ಅದೇ ರೀತಿ ತಯಾರಿಸಿದ ಪಾಕದ ತಿಂಡಿ. ಅದು ಹಿಂದಿಯಲ್ಲಿ 'ಜಲೇಬಿ' ಎಂದು ಬರೆಯಲ್ಪಡುತ್ತದೆ. ಕನ್ನಡ ಸಾಹಿತ್ಯದಲ್ಲಿ ಇದು ೧೬ನೇ ಶತಮಾನದ ಅಂತ್ಯದಲ್ಲಿ ಕಾಣಿಸಿಕೊಳ್ಳುತ್ತದೆ. ಅಣ್ಣಾಜಿ ಕವಿ 'ಸೌಂದರ ವಿಳಾಸ' ಕಾವ್ಯದಲ್ಲಿ (ಕ್ರಿ.ಶ. ಸು. ೧೬೦೦) ''ಅಮೃತ ಸರಳಿನಿಂದ ನಿರ್ಮಿಸಿದ ಲತೆಯಂತೆ ಜಿಲ್ಲಬಿಯ ಅಂಗಡಿಗಳೆಸದಿರ್ದವು'' ಎನ್ನುತ್ತಾನೆ. ಈ ಶಬ್ದ ಎಲ್ಲಿಯದು? ಹಿಂದಿ ಕೋಶಗಳು ಅದು (ಜಲೇಬಿ) ಹಿಂದಿ ದೇಶ್ಯ ಶಬ್ದವೆಂದು ಹೇಳುತ್ತವೆ. ಆದರೆ ಡಾ. ಶಂಕರ ಕೆದಿಲಾಯರ ಪ್ರಕಾರ (Foreign Words in Kannada)ಅದು ಪಾರಸೀಕ ಪದವೇ. ಈ ವಿಚಾರ ಹೇಗೇ ಇರಲಿ. ಸ್ವಾರಸ್ಯವೆಂದರೆ ಜಹಾಂಗೀರಿಯಂತೆ ಇದರ ಹೆಸರೂ ಅದರ ಆಕಾರದಿಂದಲೇ ಬಂದದ್ದು. ಜಲೇಬಿ ಎಂದರೆ ಕುಂಡಲಿ (ಜಲೇಬಿಗೆ ಹಿಂದಿಯಲ್ಲಿ ಕುಂಡಲಿಯೆಂದೂ ಹೆಸರುಂಟು) = ಸುರುಳಿಯಾಗಿ ಸುತ್ತಿಕೊಂಡ ಹಾವು ಇತ್ಯಾದಿ. ಜಲೇಬಿ ಕೂಡ ಬಳೆಯಂತೆ ದುಂಡಗೆ ಹೊಯ್ದು ಕರಿದು ಪಾಕಕ್ಕೆ ಹಾಕಿದ್ದು ತಾನೆ?

ಅಂದ ಹಾಗೆ ನಮಗೆಲ್ಲ ಇಂದು ಸುಪರಿಚಿತವಾಗಿರುವ ಸೂಕ್ಷ್ಮ ಬಿಳಿ ಗೋದಿ ಹಿಟ್ಟಗಿರುವ **ಮೈದಾ** ಎಂಬ ಹೆಸರೂ ಪಾರಸೀಕ.

೧೨೧

''**ತಾಳ ತಂಬೂರಿ** ಕೈಯೊಳಗೆ ವಿಠಲನ ಭಜನೆ ಮನದೊಳಗೆ'' ಎಂದು ವೈಷ್ಣವ

ದಾಸರು ಹಾಡಿದರು. 'ತಾಳ' ಅಥವಾ ಸಂಸ್ಕೃತದಲ್ಲಿ 'ತಾಲ' ಎಂದರೆ ಈಗ ನಮಗೆ ತಟ್ಟನೆ ಹೊಳೆಯುವುದು ಸಂಗೀತದಲ್ಲಿ ಉಪಯೋಗಿಸುವ ಕಾಲಾವರ್ತದ ಗತಿ. ಹಾಡು ನಡೆಯುತ್ತಿರುವಾಗ ಅದು ಸಾಗುವ ಲಯವನ್ನು ಅನುಸರಿಸಿ ಆದಿತಾಳ, ತ್ರಿಪುಟ ತಾಳ, ಮಠ್ಯತಾಳ ಇತ್ಯಾದಿಯಾಗಿ ವರ್ಗೀಕರಿಸುತ್ತೇವೆ. ಈ ತಾಳದ ಗತಿಯನ್ನು ತೋರಿಸಲು ಭಜನೆ ಕೀರ್ತನೆಗಳಲ್ಲಿ ಬಳಸುವ ಬಹುತರವಾಗಿ ಕಂಚಿನ ಚಕ್ರಾಕಾರದ ಜೋಡು ಉಪಕರಣವೂ 'ತಾಳ'ವೇ. ಆದರೆ ಈ ಶಬ್ದದ ಮೂಲಕ್ಕೆ ಹೋದರೆ ಅದು ಮಾನವನ ಯಾವೊಂದು ಶಾಸ್ತ್ರ ಅಥವಾ ಯಾವೊಂದು ಲೋಹೋಪಕರಣಕ್ಕಿಂತ ಹಿಂದಿನ ಆದಿಮ ಯುಗದ ಗಾನ ಭಜನೆಗಳ ಪದ್ಧತಿಗೆ ನಮ್ಮನ್ನು ಒಯ್ಯುತ್ತದೆ. ತಾಳ ಅಥವಾ ತಾಲ 'ತಳ' ಅಥವಾ 'ತಲ'ದಿಂದ ಹುಟ್ಟಿದ್ದು. **ತಲ** ಎಂದರೆ ಸಮತಟ್ಟು; ಬಿಚ್ಚಿದರೆ ಅಂಗೈ ಕೂಡ ಸಮತಟ್ಟಾದ್ದರಿಂದ ಅಂಗೈಯೂ ತಲವೇ. 'ಕೆಂದಳ' ಎಂದರೆ ಕೆಂಪಾದ ಅಂಗೈ. ಆದಿಮ ಮನುಷ್ಯ ಹಾಡುವಾಗ ಲಯವನ್ನು ವಿಭಾಗ ಮಾಡಲು ಬಳಸುತ್ತಿದ್ದದ್ದು ಅಂಗೈಗಳನ್ನೇ. ಅಂಗೈಗಳ ತಟ್ಟುವಿಕೆಯೇ ಆದಿಮ 'ತಾಳ'. ಇಂದಿಗೂ ತಾಳ ವಿಭಾಗವನ್ನು ಸಂಗೀತದವರು ಅಂಗೈಗಳ ಪೆಟ್ಟುಗಳಿಂದ ತೋರಿಸುತ್ತಾರಲ್ಲವೇ ? ಲೋಹಗಳು ಕಂಡುಹಿಡಿಯಲ್ಪಟ್ಟು ಎರಕ ಹೊಯ್ಯುವ ವಿದ್ಯೆ ಕರಗತವಾದ ಮೇಲೆ, ಹೆಚ್ಚೆಂದರೆ ನಾಲ್ಕೈದು ಸಾವಿರ ವರ್ಷಗಳ ಹಿಂದೆ ಕಂಚಿನ ತಾಳ ನಿರ್ಮಿಸಲ್ಪಟ್ಟು, ಕೈ ತಟ್ಟುವುದಕ್ಕಿಂತ ಇಂಪಾದ ತಾಳ ಸಾಧನ ಬಳಕೆಗೆ ಬಂದದ್ದು. ಕಂಚಿನ, ಸಂಸ್ಕೃತದಲ್ಲಿ ಕಾಂಸ್ಯದ – ತಾಳವೇ **ಕಂಸಾಳ**. ಹೆಸರು ಮಾತ್ರ ಅಂಗೈ ತಟ್ಟನದೇ ಉಳಿಯಿತು. ಅಂಗೈಗಳಂತೆ ಲೋಹ-ತಾಳಗಳೂ ಜೋಡಾಗಿಯೆ ಉಳಿದವು. ಹಾಗೆ ಕೇಳಿದರೆ 'ತಾಳ' ಎಂಬುದು ನಮ್ಮ ಸಂಗೀತದ ಅತಿ ಪ್ರಾಚೀನ ಶಬ್ದವೆನ್ನಲೂಬಹುದು.

ದಾಸರು ಉಲ್ಲೇಖಿಸುವ 'ತಂಬೂರಿ' ಮಾತ್ರ ಸ್ವದೇಶಿಯಲ್ಲವೆಂದು ಕೇಳಿದರೆ ಮಡಿವಂತರು ಬೆಚ್ಚಿಬೀಳಬಹುದು. ನಮ್ಮ ದಾಸರು ಶತಮಾನಗಳಿಂದ ತಂಬೂರಿ ಮೀಟಿದ್ದರೂ ಈ ಶಬ್ದ ಮತ್ತು ಬಹುಶಃ ಅದರ ರೂಪ ರೇಖೆ ಕೂಡ ಅರಬಸ್ತಾನದಿಂದ ಬಂದದ್ದು. **ತಂಬೂರಃ** ಎಂಬುದು ಒಂದು ಅರಬಿ ತಂತ್ರೀ ವಾದ್ಯ. ಹಿಂದಿಗೆ ಬರುವಾಗ ಅದು **ತಾನಪುರಾ** ಎಂಬ ರೂಪಾಂತರವನ್ನು ಹೊಂದಿತು. ಆದರೆ ಶ್ರುತಿಗೆ ತಂತ್ರೀವಾದ್ಯವನ್ನು ನಮ್ಮಲ್ಲಿ ಬಹು ಪ್ರಾಚೀನದಿಂದಲೇ ಬಳಸುತ್ತಿದ್ದರೆಂಬುದಕ್ಕೆ ರಾಮಾಯಣದ ಆದಿ ಕಾಂಡದಲ್ಲಿ ಲವಕುಶರು ರಾಮಾಯಣವನ್ನು 'ತಂತ್ರೀಲಯವದತ್ಯರ್ಥಂ' ತಂತ್ರೀಲಯ ಯುಕ್ತವಾಗಿ ಹಾಡಿದರೆಂಬುದು ಸಾಕ್ಷಿಯಾಗಿದೆ. ಎಲ್ಲ ತಂತ್ರೀ ವಾದ್ಯಗಳಿಗೂ ಸೇರಿ **ವೀಣೆ**ಯೆಂಬ ಹೆಸರಿತ್ತೆಂದು ಮಂಗರಾಜನ 'ಅಭಿನವಾಭಿದಾನ' (ನಾಟ್ಯವರ್ಗ-೭)ದಿಂದ ತರ್ಕಿಸಬಹುದು. **'ವಲ್ಲಕಿ'** ಎಂಬ ಎರಡು ತಂತಿಯ ವೀಣೆಯನ್ನು ಶ್ರುತಿಗೆ (ಈಗ ಶಂಖದಾಸರು ಏಕತಾರಿಯನ್ನು ಬಳಸುವಂತೆ) ಬಳಸುತ್ತಿರಬಹುದು.

**ಮೃದಂಗ, ಮರ್ದಲ** (ಮದ್ದಳೆ) ಅಥವಾ **ಮುರಜ** ಎಂಬ ಚರ್ಮವಾದ್ಯವನ್ನು ಸಂಗೀತದಲ್ಲಿ ನಮ್ಮವರು ಬಳಸುತ್ತಿದ್ದರು. ಈ ಪದಗಳ ಮೂಲಾರ್ಥ ಏನೆಂಬಲ್ಲಿ ಏಕವಾಕ್ಯತೆಯಿಲ್ಲ. ಮೃದಂಗ, ಮರ್ದಲ ಶಬ್ದಗಳು **ಮೃದ್, ಮರ್ದ್** ಧಾತುಗಳಿಂದ ಹುಟ್ಟಿದ್ದರೆ ಬಡಿ, ಕುಟ್ಟು, ಹೊಡೆಯೆಂಬರ್ಥದಲ್ಲಿ ಬಡಿಯುವ ವಾದ್ಯವೆಂದು ಸೂಚಿಸಬಹುದು. 'ಮುರಜ' ಎನ್ನುವುದು ಚರ್ಮವನ್ನು ಚರ್ಮದ ಬಾರುಗಳಿಂದ ಮರದ ಕಳಸಕ್ಕೆ ಎಳೆದು ಕಟ್ಟಿದ್ದು (ಮುರ್ = ಕಟ್ಟು) ಎಂಬ ಅನ್ವರ್ಥ ಶಬ್ದವಾಗುತ್ತದೆ. ದಾಕ್ಷಿಣಾತ್ಯ

ಸಂಗೀತದಲ್ಲಿ ಇಂದಿಗೂ ಈ ವಾದ್ಯಗಳು ಬಳಕೆಯಲ್ಲಿದ್ದರೂ ಹಿಂದೂಸ್ತಾನಿ ಸಂಗೀತದಲ್ಲಿ ಬಳಸುವ ಚರ್ಮವಾದ್ಯ, ತಂತ್ರೀವಾದ್ಯಗಳು ಬಹುತರವಾಗಿ ವಿದೇಶಿ ಮೂಲದವು. **ತಬಲಾ** ಶಬ್ದ ಅರಬ್ಬಿ (ತಬಲಹ್). ಅದರದೇ ಇನ್ನೊಂದು ಅವತಾರವಾದ 'ತಬಲ್' ದೊಡ್ಡ ಡೋಲನ್ನು ನಿರ್ದೇಶಿಸುತ್ತದೆ. ನಮ್ಮ ಮಠಗಳಲ್ಲಿ ಕೂಡ ಇಂದು ಬಾರಿಸುವ **ನಗಾರಿ** ಎಂಬ ಭೇರಿ ಪಾರಸೀಕ **ನಗಾರಾ** ಶಬ್ದದ ರೂಪಾಂತರ (ಬಹುಶಃ ನಗಾರಾ-ನಗಾರೆ-ನಗಾರಿ)ವೇ ಹೊರತು ಅದು ಯಾವ ನಗ ( = ಗುಡ್ಡ)ಕ್ಕೂ ಅರಿ ( = ಶತ್ರು)ಯಲ್ಲ. ವಿಶಿಷ್ಟ ಕಾಲಗಳಲ್ಲಿ ಕಾಲಸೂಚಕವಾಗಿ ಮಠಗಳಲ್ಲಿ ಬಾರಿಸುವ **ನೌಬತ್ತು** ಕೂಡ ಪಾರಸೀಕ ಮೂಲದ್ದು. ಅದೂ ನಗಾರಿಯಂಥ ವಾದ್ಯವೇ. ಅದು ಆನಂದ ಅಥವಾ ವೈಭವಸೂಚಕವಾದ ಬಾಜನೆ. ಈಗ ಹಿಂದೂಸ್ತಾನಿ ಸಂಗೀತದಲ್ಲಿ ವೀಣೆಯಂತೆ ಸ್ವತಂತ್ರ ತಂತ್ರೀ ವಾದ್ಯವಾಗಿರುವ **ಸಿತಾರು** ಪಾರಸೀಕ (ಸಿತಾರ್) ವಾದ್ಯ – ಪಾರಸಿಕ ಪದ ಕೂಡ. ಅದು **ಸೇಹ** ( = ಸಪ್ತ = ಏಳು) + **ತಾರ್** ( = ತಂತಿ) ಎಂಬ ಸಮಸ್ತ ಪದದ ಸಮಾಹಾರ ರೂಪ.

ದಾಕ್ಷಿಣಾತ್ಯ ಸಂಗೀತ ತನ್ನ ಭಾರತೀಯತೆಯನ್ನು ಶುದ್ಧವಾಗಿ ಉಳಿಸಿಕೊಂಡಿದೆಯೆಂದು ಸಾವೆಣಿಸುತ್ತೇವೆ. ಆದರೆ ಅದು ಇಂದು ಪ್ರಧಾನವಾಗಿ ಬಳಸುತ್ತಿರುವ ಪಕ್ಕವಾದ್ಯವಾದ ಪಿಟೀಲು ಮದ್ರಾಸಿನಲ್ಲಿ ಹಾಗೂ ಸುತ್ತಮುತ್ತ ಬೀಡು ಬಿಟ್ಟಿದ್ದ ಇಂಗ್ಲೀಷ್ ಜನರ ವಾದ್ಯವಾಗಿತ್ತು. 'ಪಿಟೀಲು' ಇಂಗ್ಲಿಷ್ **ಫಿಡ್ಲ್** ಶಬ್ದದ ಕನ್ನಡೀಕರಣ. ಅದರದೇ ಇನ್ನೊಂದು ಹೆಸರು **ವಯೋಲಿನ್** ಎಂಬುದು ಈಗ ಪಿಟೀಲು ಎಂಬುದಕ್ಕಿಂತ ಹೆಚ್ಚು ಬಳಕೆಗೆ ಬರುತ್ತಿದೆ. ಇದಕ್ಕೆ ಒಂದುಕಾರಣ ಬಹುಶಃ 'ಫಿಡ್ಲ್' ಶಬ್ದಕ್ಕೆ ಇಂಗ್ಲೀಷಿನಲ್ಲಿ ಅರ್ಥಾವನತಿ ಆದದ್ದು. ಉದಾಹರಣೆಗೆ fiddle sticks ಅಂದರೆ ಅರ್ಥಹೀನ ಮಾತುಗಳು. second fiddle ಅಂದರೆ ಕ್ಷುಲ್ಲಕ ಪಾತ್ರ ಇತ್ಯಾದಿ. ವಿಚಿತ್ರವೆಂದರೆ ಕನ್ನಡದಲ್ಲಿ ಕೂಡ ಪಿಟೀಲಿಗೆ ಕೆಟ್ಟ ಅರ್ಥ ತಗುಲಿಕೊಂಡಿದೆ. ಮೊದಲು ಒಪ್ಪಿಕೊಂಡು ಈಗ ಪಿಟೀಲು ಬಾರಿಸತೊಡಗಿದ್ದಾನೆ (ಕುಂಟು ನೆವ ಮುಂದೊಡ್ಡುತ್ತಿದ್ದಾನೆ) ಎಂದು ದಕ್ಷಿಣ ಕನ್ನಡದಲ್ಲಿ ಹೇಳುವುದುಂಟು. 'ವಯೋಲಿನ್' ಗೌರವಾಸ್ಪದ ಶಬ್ದವೆಂದು ಭಾವಿಸಲಾಗಿದೆ. ಪಿಟೀಲು ಪಕ್ಕವಾದ್ಯವಾಗಿ ಸ್ವೀಕರಿಸಲ್ಪಡುವ ಮುಂಚೆ ದಕ್ಷಿಣದಲ್ಲಿ ವೀಣೆಯೇ ಮುಖ್ಯ ಪಕ್ಕವಾದ್ಯವಾಗಿತ್ತೆಂದು ಹೇಳುತ್ತಾರೆ. ಪಿಟೀಲು ಮನುಷ್ಯ ಕಂಠಕ್ಕೆ ಹೆಚ್ಚು ಸಾಮ್ಯವುಳ್ಳದ್ದಾಗಿದ್ದು 'ಕಮಾನಿ'ನಿಂದ (ಮತ್ತೆ ಪಾರಸೀಕ ಪದ ಕಮಾನ್ = ಬಿಲ್ಲು = ಇಂಗ್ಲೀಷ್ bow) ಬಾರಿಸುವುದರಿಂದ ಅದರ ಸ್ವರ ಹರಿಗಡಿಯುವುದಿಲ್ಲ ಎಂಬುದರಿಂದ ದಾಕ್ಷಿಣಾತ್ಯ ಸಂಗೀತಗಾರರು ಅದನ್ನು ಸ್ವೀಕರಿಸಿದರಂತೆ. ಇವೆಲ್ಲ ಇಂದು ಭಾರತೀಯ ಸಂಸ್ಕೃತಿಯಲ್ಲಿ ಹೊಕ್ಕು ಹಾಸುಹೊಕ್ಕಾಗಿ ಬೆರೆತುಹೋಗಿವೆ.

ಸುಷಿರ (ತೂತುಳ್ಳ) ವಾದ್ಯಗಳಲ್ಲಿ ಬಲು ಜನಪ್ರಿಯವಾದದ್ದು **ಕೊಳಲು**. ಬಹಳ ಪ್ರಾಚೀನವಾದದ್ದು ಕೂಡ. ದನಗಾಹಿಗಳೂ ಕುರಿಗಾಹಿಗಳೂ ಅದನ್ನು ಬಾರಿಸುತ್ತಿದ್ದದ್ದು ಅನಾದಿಯಿಂದ. ಗ್ರೀಕ್ ಮತ್ತು ಭಾರತೀಯ ಪುರಾಣ ಸಾಹಿತ್ಯದಲ್ಲಿ ಅದರ ಉಲ್ಲೇಖಗಳಿವೆ. ಕನ್ನಡದಲ್ಲಿ 'ಕೊಳಲು' ಸಂಸ್ಕೃತದಲ್ಲಿ **ವೇಣು, ಮುರಳಿ, ವಂಶಿ**. ಎಲ್ಲ ದೇಶಗಳಲ್ಲಿ ಅದು ಪ್ರಧಾನವಾಗಿ ಬಿದಿರು ಅಥವಾ ಆ ಜಾತಿಯ ಹುಲ್ಲುಗಳ ನಳಿಗೆಗಳಲ್ಲಿ ಕಣ್ಣು ಕೊರೆದು ಮಾಡುತ್ತಿದ್ದ ವಾದ್ಯ. 'ಕೊಳಲು' ಎಂಬ ಪದದ ಮೂಲಶೋಧನೆ ಅಷ್ಟು ಕಷ್ಟದ್ದಲ್ಲ. ಸ್ಪಷ್ಟವಾಗಿಯೇ ಅದು **ಕೊಳವಿಯ** ಅಕ್ಕನೋ ತಂಗಿಯೋ. ಕೊಳವಿಯೆಂದರೆ

ನಳಿಗೆ. ಸಂಸ್ಕೃತದ ವೇಣು ಮತ್ತು ವಂಶ ಎರಡೂ ಬಿದಿರಿನ ಹೆಸರುಗಳು. ವಂಶದಿಂದ ಮೂಡಿದ್ದು ವಂಶಿ; ಅದೇ ಹಿಂದಿಯ **ಬಾಂಸುರಿ**ಯ ಮೂಲ. 'ಮುರಲಿ'ಯ ಮೂಲ ಮಾತ್ರ ಸಂದಿಗ್ಧ. ಇಂಗ್ಲೀಷಿನ Flute (= ಕೊಳಲು)ನ ಮೂಲ ಕೂಡ ಅನಿಶ್ಚಿತವೆಂದೇ ಕೋಶಗಳು ಹೇಳುತ್ತವೆ.

ಇಂಗ್ಲೀಷಿನ demandಗೆ ಪ್ರತಿಯಾಗಿ ಉತ್ತರ ಕರ್ನಾಟಕದಲ್ಲಿ ರೂಪಿಸಿಕೊಂಡ **ಬೇಡಿಕೆ** ಎಂಬ ಶಬ್ದದ ಬಗ್ಗೆ ಈಚೆಗೆ ಬೆಂಗಳೂರಿನಲ್ಲಿ ವಿರೋಧ ವ್ಯಕ್ತವಾಯಿತು. demand ಅಂದರೆ ವಿನಯಪೂರ್ವಕ ಬೇಡುವ ಭಿಕ್ಷೆಯಲ್ಲ. ಹಕ್ಕಿನಿಂದ ಬರಬೇಕಾದ್ದು ಎಂಬುದು ವಾದ. ಆದರೆ ಶಬ್ದಗಳ ಮೂಲಕ್ಕೆ ಹೋಗಿ ಆ ಬೀಜವೋ ಬೇರೋ ಕೊಡುವ ಅರ್ಥವನ್ನೇ ಎಲೆಗೋ ಟೊಂಗೆಗೋ ತೊಡರಿಸಬೇಕೆಂದರೆ ಅನೇಕ ಪೀಕಲಾಟಗಳನ್ನು ಸ್ವಾಗತಿಸಿದಂತೆ. **ಬೇಕು, ಬೇಡ** ಎಂಬೀ ಎರಡು ಧಡಪ್‌ಶಾಹಿ ಪದಗಳ ತಳಕ್ಕೆ ಹೋದರೆ ಅವೆರಡೂ ಅಕ್ಕ ತಂಗಿಯರೇ. 'ಬೇಕು' ಎಂಬುದರ ವಂಶಾವಳಿ ಬೇಡುಗುಂ-ಬೇಳ್ಕುಂ-ಬೇಕು ಎಂಬುದಾಗಿದೆ. ಬೇಕು ಎಂದರೆ ಬೇಡುತ್ತದೆ, ಬೇಡಲ್ಪಡುತ್ತದೆ. **ಬೇಡು** (ಬೇಳ್) ಎಂದರೆ ಇಚ್ಛಿಸು, ಬಯಸು, **ಬೇಡ** ಎಂದರೆ **ಬೇಡದು.** ಬೇಡುವುದಿಲ್ಲ, ಬಯಸುವುದಿಲ್ಲ ಎಂದು ಅದೇ ಧಾತುವಿನ ನಿಷೇಧಾರ್ಥಕ ರೂಪ. ಬಹು ಕಾಲದಿಂದ 'ಬೇಡಿಕೆ' ಬಲಪೂರ್ವಕವಾಗಿ ಬೇಡಿದ್ದು ಎಂಬರ್ಥ ಕೊಡುವಂತೆ ಬಳಕೆಗೆ ಬಂದಿರುವಾಗ ಅದನ್ನೀಗ ಬದಲಿಸುವುದರಲ್ಲೇನು ಫಲ? ಮೇಲಾಗಿ ನಮ್ಮಲ್ಲಿ ಭಿಕ್ಷೆ ಕೂಡ ಹಕ್ಕೇ ಆಗಿತ್ತಲ್ಲವೆ?

೧೨೨

ಭಾನಾಮತಿಯ ಸುದ್ದಿಗಳು ಕೆಲ ಕಾಲದಿಂದ ಪ್ರಾಧಾನ್ಯ ಪಡೆಯುತ್ತಿವೆ. ಒಂದು ತರಹದ ಮಾಟ, ಮಂತ್ರದಿಂದ ಅಥವಾ ಇತರ ಲೋಕೋತ್ತರ ಶಕ್ತಿಯಿಂದ ಮನುಷ್ಯರ ಬುದ್ಧಿಯಲ್ಲಿ ಭ್ರಮೆಯುಂಟುಮಾಡುವುದು, ಮಾಯೆ, ವಶೀಕರಣ ಮೊದಲಾದವೆಲ್ಲ ಇದರಡಿಯಲ್ಲಿ ಬರುತ್ತವೆ. ಆದರೆ ಈ ಶಬ್ದ ಹೇಗೆ ಬಂತು? ಎಲ್ಲಿಂದ? ಕನ್ನಡಕ್ಕೆ ಈ ಶಬ್ದ ಬಹುಶಃ ಮರಾಠಿಯಿಂದ ಬಂತು. ಆ ಭಾಷೆಯಲ್ಲಿ 'ಭಾನಾಮತಿ' ಎಂದರೆ ಜಾದೂ, ಇಂದ್ರಜಾಲ, ದೊಂಬರ ಕೈಚಳಕ, ಚಮತ್ಕಾರವಿದ್ಯೆ, 'ಚಪಡಿ' ವಿದ್ಯೆ; ಆ ವಿದ್ಯೆಯನ್ನು ಪ್ರದರ್ಶಿಸುವವಳು; **ಭಾನಾಮಾತ್ಯಾ** ಅಂದರೆ ಕೈಚಳಕ ತೋರಿಸುವವ, ಇಂದ್ರಜಾಲಿಕ. ಮರಾಠಿ ನಿಘಂಟುಕಾರ ಮೋಲ್ಸ್‌ವರ್ತ್ ಪ್ರಕಾರ ಈ ಶಬ್ದ ಸಂಸ್ಕೃತದ **ಭಾನುಮತಿ**ಯ ಅಪಭ್ರಂಶ. ಹಿಂದಿ, ಬಂಗಾಲಿಗಳಲ್ಲಿ 'ಭಾನುಮತಿ' ಎಂಬ ರೂಪದಲ್ಲಿಯೇ ಈ ಶಬ್ದ ನಡೆಯುತ್ತದೆ. ಅರ್ಥವೂ ಅದೇ.

ಲೋಕಕಥೆಗಳ ಅಪ್ರತಿಮ ನಾಯಕನಾದ ವಿಕ್ರಮಾದಿತ್ಯನ ಚರಿತ್ರೆಯಲ್ಲಿ ಉಜ್ಜಯಿನಿಯ ಆ ಚಕ್ರವರ್ತಿಯ (ಈತ ಕಾಲ್ಪನಿಕ ನಾಯಕನೆಂಬುದು ಕೆಲ ಇತಿಹಾಸಜ್ಞರ ಮತ) ಒಬ್ಬ ಹೆಂಡತಿಯ ಹೆಸರು ಭಾನುಮತಿ. ಅವಳು ಇಂದ್ರಜಾಲವಿದ್ಯೆಯಲ್ಲಿ ಪ್ರವೀಣೆಯಾಗಿದ್ದಳೆಂದು ಪ್ರಸಿದ್ಧಿ. ಅವಳಿಂದಲೇ ಈ ಮಾಯಾವಿದ್ಯೆಗೆ ಈ ಹೆಸರು ಪ್ರಚಲಿತವಾಯಿತೆಂದು ಹೇಳಲಾಗುತ್ತದೆ.

ಆದರೆ ತದ್ವಿರುದ್ಧವಾಗಿ ವಿಕ್ರಮಾದಿತ್ಯನ ಕಥೆಯಲ್ಲಿ ಬರುವ ಈ ಹೆಂಗಸಿಗೆ ಹಾಗೆ

ಹೆಸರು ಕೊಟ್ಟಿದ್ದೇ ಅವಳು ಮಾಯಾವಿದ್ಯೆಯಲ್ಲಿ ಪರಿಣತಳೆಂಬುದಕ್ಕಿರಬೇಕು. ಯಾಕೆಂದರೆ **ಭಾನುಮತ್** ಎಂಬ ಶಬ್ದ ವಾಲ್ಮೀಕಿ ರಾಮಾಯಣದಲ್ಲೇ (ಅರಣ್ಯಕಾಂಡ ೪೩, ೭) ಮಾಯೆಗೆ ಸಂಬಂಧಿಸಿ ಕಾಣಸಿಕೊಳ್ಳುತ್ತದೆ. ಸ್ವರ್ಣಮೃಗ ರೂಪದಲ್ಲಿ ಮಾರೀಚನು ಕಾಣಸಿಕೊಂಡು ಸೀತೆ ಅದಕ್ಕಾಗಿ ದುಂಬಾಲು ಬಿದ್ದಾಗ ಲಕ್ಷ್ಮಣನು ಇದು ಯಾವನೋ ಮಾಯಾವಿದನು ಸೃಷ್ಟಿಸಿದ 'ಭಾನುಮತ್' ಆಗಿರಬೇಕೆಂದು ರಾಮನನ್ನು ಎಚ್ಚರಿಸುತ್ತಾನೆ. 'ಭಾನುಮತ್' ಎಂದರೆ ಕ್ಷಣಭಂಗುರವಾದ ಅವಾಸ್ತವ 'ಆಭಾಸ'. 'ಭಾನ' ಶಬ್ದಕ್ಕೆ ಪ್ರಕಾಶ, ದೀಪ್ತಿ, ಆಭಾಸ (ಅವಾಸ್ತವವಾದ ಪ್ರತೀಕ) ಎಂಬರ್ಥಗಳಿರುವುದನ್ನು ಗಮನಿಸಬೇಕು.

ಇಲ್ಲಿ ರಾಮಾಯಣದ **ಮಾರೀಚ** ರಾಕ್ಷಸನ ಹೆಸರೇ ಅರ್ಥಪೂರ್ಣವಾಗಿದೆಯೆಂದು ನಿರ್ದೇಶಿಸಬೇಕಾಗಿದೆ. 'ಮಾರೀಚ' ಎಂದರೆ ಮರೀಚಿಗೆ ಸಂಬಂಧಿಸಿದಾತ. ಆ ಹೆಸರಿನ ಋಷಿಯ ಅಪತ್ಯ – ಎಂದು ಕಥೆಯಿದ್ದರೂ ಮರೀಚಿ ಪದ ಕಿರಣ, ಮನಮೋಹಿಸುವ ಕಿರಣವಿಲಾಸ, ಪ್ರಕಾಶದ ಆಟ, ಕಣ್ಮಸಕು ಎಂಬರ್ಥವನ್ನು ಕೊಡುತ್ತದೆ. ಈ ಪ್ರಕಾರ ಬಿಸಿಲುಗುದುರೆಗೆ **ಮೃಗಮರೀಚಿಕೆ** ಎಂಬ ಹೆಸರಿದೆ. ಇಂಗ್ಲೀಷಿನಲ್ಲಿ mirage ಇದೆ. ಅರ್ಥ ಮೃಗಮರೀಚಿಕೆ. ಇದಕ್ಕೆ ಮೂಲವಾದ ಲ್ಯಾಟಿನ್ ಧಾತು ವಿಸ್ಮಯಕರ ನೋಟ ಎಂಬರ್ಥದ್ದು. 'ಮಾರೀಚ' ಶಬ್ದ ಕೂಡ ಆ ಇಂಡೋ ಯುರೋಪಿಯನ್ ಉಗಮದ್ದಿರಬೇಕು. ಹೀಗೆ 'ಮಾರೀಚ' ಅಂದರೆ ಲಕ್ಷ್ಮಣ ಹೇಳಿದಂತೆ ಬೆಳಕಿನ ಕಣ್ಮಸಕೇ ಇರಬೇಕು. ಭ್ರಾಮಕ ದೃಶ್ಯವೇ ಮಾರೀಚ. ಅದೇ ಭಾನುಮತ್.

**ಕಿಶೋರ** ಎಂದರೆ ನಮಗೆ ತಟ್ಟನೆ ಪ್ರತೀತವಾಗುವ ಅರ್ಥ ಇನ್ನೂ ತಾರುಣ್ಯದಲ್ಲಿ ಕಾಲಿಡದ ಹುಡುಗ. ಹೀಗೆ ಬಾಲಕೃಷ್ಣನನ್ನು ಕಿಶೋರನೆಂದು ಕರೆಯಲಾಗುತ್ತದೆ. ತನ್ಮೂಲಕ ಕಿಶೋರ ಎಂಬ ಹೆಸರನ್ನು ಇಡುವುದೂ ಪ್ರಚಲಿತಕ್ಕೆ ಬಂತು. ಹಾಗೆಯೇ ನವತಾರುಣ್ಯಕ್ಕೆ ಇನ್ನೂ ಪ್ರವೇಶಿಸಬೇಕಾದ ಹುಡುಗಿ **ಕಿಶೋರಿ**. ಆದರೆ ವಾಸ್ತವಿಕವಾಗಿ 'ಕಿಶೋರ' ಶಬ್ದದ ಮೂಲಾರ್ಥ ಮರಿಕುದುರೆ ಎಂದು ಅಥರ್ವವೇದದಲ್ಲೇ ಈ ಶಬ್ದ ಈ ಅರ್ಥದಲ್ಲಿ ಕಾಣಸಿಕೊಳ್ಳುತ್ತದೆ. ರಾಮಾಯಣದಲ್ಲಿ ಮಂಥರೆಯ ದುರ್ಬೋಧನೆಯ ಪ್ರಭಾವದಿಂದ ಕೈಕೇಯಿ **ಕಿಶೋರಿ**ಯಂತೆ ದಾರಿ ಬಿಟ್ಟು ವರ್ತಿಸಿದಳೆಂಬ ಮಾತು ಬರುತ್ತದೆ. (ಅಯೋಧ್ಯಾ ೯.೩೭)

ಪ್ರಾಣಿಗಳೊಡನೆ ನಮಗಿಂತ ಹೆಚ್ಚು ಸಂಸರ್ಗ ಹೊಂದಿದ್ದ ನಮ್ಮ ಪುರಾತನರು ಮನುಷ್ಯರ ಮಕ್ಕಳಿಗೂ ಸಾಕುಪ್ರಾಣಿಗಳ ಮರಿಗಳಿಗೂ ಏಕಭಾವನೆಯನ್ನು ತಾಳಿದ್ದರ ಉದಾಹರಣೆ ಇದೊಂದೇ ಅಲ್ಲ. **ವತ್ಸ** ಎಂದರೆ ಆಕಳ ಕರು. ಮಕ್ಕಳನ್ನು, ಆಮೇಲೆ ವಯಸ್ಸಿನಲ್ಲಿ ತಮಗಿಂತ ಕಿರಿಯರನ್ನು ಪ್ರೀತಿಯಿಂದ ವತ್ಸ ಎಂದು ಕರೆದರಲ್ಲದೆ ಕಿರಿಯರ ಬಗ್ಗೆ ಪ್ರೇಮ ಇರುವವರನ್ನು **ವತ್ಸಲ** ಎಂದೂ ಆ ಭಾವನೆಯನ್ನು ವಾತ್ಸಲ್ಯ ಎಂದೂ ಹೆಸರಿಸಿದರು. ನಾವೀಗ 'ಹುಡುಗ' ಎಂದು ಕಿಶೋರರನ್ನು ಕರೆಯುತ್ತೇವಲ್ಲ, ಅದೂ ಮೊದಲಲ್ಲಿ ಪ್ರಾಣಿ ಶಿಶುಗಳಿಗೆ ಅನ್ವಯಿಸುತ್ತಿದ್ದ 'ಪೃಥುಕ' ಪದದ ತದ್ಭವವೇ ಇರಬೇಕೆಂದು ಹಿಂದೆ ವಿವೇಚಿಸಿದ್ದಿದೆ (ಪದಾರ್ಥ, ೯೪). ಅದರ ಪ್ರಾಕೃತ ರೂಪವಾದ 'ಹುಡೊ' ಆಡು ಕುರಿಮರಿಗಳಿಗೆ ಸಲ್ಲುತ್ತಿತ್ತು. ಮಕ್ಕಳನ್ನು ಪ್ರೀತಿಯಿಂದ 'ಮರಿಯಾನೆ' ಎಂದು ಸಂಬೋಧಿಸುವುದೂ ಇತ್ತು.

**ಮನುಷ್ಯ** ಎಂಬುದಕ್ಕೆ ವಿವರ ಬೇಕಾಗಿಲ್ಲ. ಹಲವು ಭಾರೋಪ್ಯ ಭಾಷೆಗಳಲ್ಲಿ ಇದಕ್ಕೆ

ಜ್ಞಾತಿ ಶಬ್ದಗಳು ಸಿಗುತ್ತವೆ. ಇಂಗ್ಲೀಷ್ – man, ಡಚ್ – man, ಜರ್ಮನ್ – mann ಇತ್ಯಾದಿ. ಆಯಾ ಭಾಷೆಯ ದಂತ ಕಥೆಗಳಲ್ಲಿ ಹೆಚ್ಚಾಗಿ ಮನ್ – ಎಂಬ ಒಬ್ಬ ಆದಿಪುರುಷನ ಕಲ್ಪನೆ ಕೂಡ ಸಮಾನವಾಗಿ ಇದೆ. ಆದರೆ ಈ ಶಬ್ದ ಪಡೆದಿರುವ ಅನೇಕ ಕವಲು ಅರ್ಥಗಳಲ್ಲಿ ಒಂದು ಸ್ವಾರಸ್ಯವಾಗಿದೆ. ''ನನ್ನ **ಮನುಷ್ಯ**ನ್ನ ಕಳಿಸುತ್ತೇನೆ'' ಎನ್ನುವಾಗ 'ಮನುಷ್ಯ' ಸೇವಕನೆಂಬ ಅರ್ಥಕ್ಕೆ ತಿರುಗುತ್ತದೆ. ಇದು **ಮನಿಶ್ಯಾ** ಎಂಬ ಅಪಭ್ರಂಶ ರೂಪವನ್ನೂ (ಉತ್ತರ ಕರ್ನಾಟಕದ ಆಡುಮಾತಿನಲ್ಲಿ) ಹೊಂದುತ್ತದೆ. ಗಡಿಯಾಚೆ ತೆಲುಗಿನಲ್ಲಿ ಕೂಡ **ಮನಿಶಿ** ಎಂಬ ರೂಪದಲ್ಲಿ ಅದು ಸೇವಕನನ್ನು ನಿರ್ದೇಶಿಸುವುದುಂಟು. ಸಂಸ್ಕೃತದಲ್ಲಿ ಮನುಷ್ಯ ಶಬ್ದ ಸೇವಕನೆಂಬ ಅರ್ಥವನ್ನು ಪಡೆದದ್ದು ಕೋಶಗಳಲ್ಲಿ ಕಾಣುವುದಿಲ್ಲವಾದರೂ ಅದೇ ಅರ್ಥದ **ಪುರುಷ** ಸೇವಕನಾಗುತ್ತಾನೆ. **ರಾಜಪುರುಷ** ಇತ್ಯಾದಿಗಳಲ್ಲಿ ಈ ಅರ್ಥವನ್ನು ಕಾಣಬಹುದು. ದ್ರಾವಿಡದಲ್ಲಿ **ಆಳ್** ಎಂದರೆ ಮನುಷ್ಯನೂ ಹೌದು, ಸೇವಕನೂ ಹೌದು. ಅರಬ್ಬಿಯಲ್ಲಿ 'ಆದ್ಮೀ' ಎಂದರೆ ಮನುಷ್ಯ. ನಮ್ಮ **ಮನು**ವಿನಂತೆ ಅರಬರಲ್ಲದೆ ಹಿಬ್ರೂ ಜನಾಂಗಗಳಿಗೂ **ಆದಮ್** ಮೂಲ ಪುರುಷನೂ ಆದಿ ಋಷಿಯೂ ಆಗಿದ್ದಾನೆ. ಅಲ್ಲಿ ಕೂಡ **ಆದ್ಮೀ** ಶಬ್ದ ಸೇವಕನೆಂಬ ಅರ್ಥವನ್ನು ಸಂಪಾದಿಸಿದೆ. ಖಂಡಾಂತರದಲ್ಲಿ ಇಂಗ್ಲಿಷ್ man ಕೂಡ ನಮ್ಮಲ್ಲಿಯಂತೆ ಸೇವಕನೆಂಬ ಅರ್ಥ ಪಡೆಯುತ್ತದೆ. I will send my man ಎನ್ನುತ್ತಾರೆ. ಶಬ್ದಸೃಷ್ಟಿಯಲ್ಲಿ ಅರ್ಥದಾನದಲ್ಲಿ ಮಾನವಕುಲದ ಸಮಾನ ಚಿಂತನವನ್ನು ನಿರ್ದೇಶಿಸುವ ಮತ್ತೊಂದು ಉದಾಹರಣೆ ಇದು.

**ಅಕ್ಕಸಾಲಿಗ** ಎಂಬುದು ಬಂಗಾರದ ಕೆಲಸ ಮಾಡುವವನಿಗೆ ಇರುವ ಹೆಸರು. ಇದು ಸಂಸ್ಕೃತದ **ಅಕ್ಷಶಾಲಿಕ**ದ ತದ್ಭವ. **ಅಕ್ಷ** ಅಂದರೆ ನಾಣ್ಯ. ''ಅಕ್ಷಶಾಲೆ'' ಎಂದರೆ ನಾಣ್ಯ ತಯಾರಿಸುವ ಶಾಲೆ. ಈ ವ್ಯುತ್ಪತ್ತಿಯನ್ನು ಒಪ್ಪಿದರೆ ಒಂದು ಸಂಗತಿ ಹೊರಡುತ್ತದೆ. ನಾಣ್ಯಗಳನ್ನು ತಯಾರಿಸುವವನೇ ಆಭರಣಗಳನ್ನು ಮಾಡುವವನೂ ಆಗಿದ್ದನು. ಇದು ಆಶ್ಚರ್ಯಕರವೇನೂ ಅಲ್ಲ. ವೇದಗಳಲ್ಲಿ ಬರುವ **ನಿಷ್ಕ** ಎಂಬುದು ಒಂದು ಬಂಗಾರದ ನಾಣ್ಯ. ಅದು ದಕ್ಷಿಣೆಯಾಗಿಯೂ ಉಪಯೋಗದಲ್ಲಿತ್ತು. ಆದರೆ **ನಿಷ್ಕ** ಎಂಬುದನ್ನು ಪ್ರಾಥಮಿಕವಾಗಿ ಪದಕದಂಥ ಕಂಠಾಭರಣವಾಗಿ ಬಳಸುತ್ತಿದ್ದರೆಂಬುದೂ ವೈದಿಕ ಸಾಹಿತ್ಯದಿಂದ ವೇದ್ಯವಾಗುತ್ತದೆ. ಋಗ್ವೇದದಲ್ಲೇ ಬರುವ 'ನಿಷ್ಕ'ಜಾಲ ಪುರಾತನವಾದದ್ದೇ ಸೈ. 'ಅಕ್ಕಸಾಲಿಗ'ಕ್ಕೆ 'ಅರ್ಕಶಾಲಿಕ' ಎಂಬ ಸಂಸ್ಕೃತ ಶಬ್ದ ಮೂಲವೆನ್ನುವುದೂ ಇದೆ. **ಅರ್ಕ** ಶಬ್ದಕ್ಕೆ **ಬಂಗಾರ, ತಾಮ್ರ** ಎಂಬ ಅರ್ಥಗಳೂ ಉಂಟು, ಅಕ್ಕಸಾಲಿಗಕ್ಕೆ **ಅರ್ಕಸಾಲಿ**ಯೆಂಬ ರೂಪವೂ ಉಂಟಾದ್ದರಿಂದ ಬಂಗಾರ ಅಥವಾ ತಾಮ್ರದ ಕೆಲಸ ಮಾಡುವವನೆಂಬ ನೇರ ವ್ಯುತ್ಪತ್ತಿಯೂ ಸುಸಂಗತವಾಗಬಲ್ಲದು. ಇವೆರಡೂ ಲೋಹಗಳು ನಾಣ್ಯ ನಿರ್ಮಾಣದಲ್ಲಿ ಬಳಕೆಯಾಗುತ್ತ ಬಂದವುಗಳು. ಆದ್ದರಿಂದ ಅಕ್ಕಸಾಲಿಗನೇ ನಾಣ್ಯ ನಿರ್ಮಾತನೂ ಆಗಿದ್ದನೆಂಬ ತಥ್ಯಕ್ಕೆ ಚ್ಯುತಿಯಿಲ್ಲ. ಇದಕ್ಕೆ ಉಪಷ್ಟಂಭಕವಾಗಿ ಬಂಗಾಲಿಯಲ್ಲಿ ಅಕ್ಕಸಾಲಿಗನಿಗಿರುವ **ಸೇಕ್ರಾ** ಎಂಬ ಪದವನ್ನು ಗಮನಿಸಬಹುದು. ಇದು **ಸಿಕ್ಕಾ** (= ನಾಣ್ಯ, ಮುದ್ರೆ) ಎಂಬ ಅರಾಮಿಕ್ ಭಾಷೆಯ ಪದ. ಅರಬ್ಬಿ ಪರ್ಶಿಯನ್ ಮೂಲಕ ಭಾರತಕ್ಕೆ ಬಂದು ಬಂಗಾಲಿಯಲ್ಲಿ ತದ್ಭವಗೊಂಡದ್ದೆಂದು ಸುನೀತಿಕುಮಾರ ಚಟರ್ಜಿ ಹೇಳುತ್ತಾರೆ.

೧೨೩

ಕೆಲ ಭಾಷೆಗಳಲ್ಲಿ, ಕೆಲ ದೇಶಗಳಲ್ಲಿ ಕೆಲ ಶಬ್ದಗಳು ಚಿತ್ರವಿಚಿತ್ರವಾದ ಅರ್ಥ ಛ್ಛಾಯೆಗಳನ್ನು ಸಂಪಾದಿಸಿಕೊಳ್ಳುತ್ತವೆ. ಕನ್ನಡ **ಸಾಯ್** ಧಾತುವನ್ನೇ ತೆಗೆದುಕೊಳ್ಳುವಾ. ಕೇಶಿರಾಜನು ಈ ಧಾತುವನ್ನು ಮರಣಾರ್ಥಕವೆಂದು ಹೇಳುತ್ತಾನೆ. ದಕ್ಷಿಣ ದ್ರಾವಿಡ ತಮಿಳು, ಮಲೆಯಾಳಿಗಳಲ್ಲಿಯೂ, ತೆಲುಗಿನಲ್ಲಿ, ತುಳುವಿನಲ್ಲಿಯೂ ಇದಕ್ಕೆ ಸಂವಾದಿ ಧಾತುಗಳಿವೆ. ಅರ್ಥವೂ ಅದೇ. ''ಆತ ಸತ್ತ'', ''ಸಾಯಬೇಕೆನಿಸುತ್ತೆ'', ''ತಾನು ಸಾಯಬೇಕು, ಸ್ವರ್ಗ ಪಡೆಯಬೇಕು'' ಇವೆಲ್ಲ ನೇರವಾಗಿ ಮರಣವನ್ನೇ ಸೂಚಿಸುತ್ತವೆ.

ಆಮೇಲೆ ''**ಸಾಯಲಿ, ನನಗೇನು?**'' ಎನ್ನುವಾಗ ಈ ಧಾತು ಸಾಯುವುದನ್ನು ಹಾಳಾಗುವುದಕ್ಕೆ ಸರಿ ಹೊಂದಿಸುತ್ತದೆ. ಹೇಳಿದ್ದನ್ನು ಕೇಳದೆ ಹುಚ್ಚಾಬಟ್ಟೆಯಾಗಿ ವರ್ತಿಸುವವರಿಗೆ ಅನ್ವಯಿಸುವಾಗ ಲಕ್ಷಣಾವೃತ್ತಿಯಿಂದ ಅರ್ಥಾಂತರವಾಯಿತು. ಇಂಗ್ಲೀಷಿನಲ್ಲಿ Let him die ! ಎಂದು ವಿರಕ್ತಿಯಿಂದ ಉದ್ಗರಿಸುವುದೂ ಇದೇ ಅರ್ಥದಲ್ಲಿ. ಹಿಂದಿಯಲ್ಲಿಯೂ ಸಮಾನ ಪ್ರಯೋಗ ಸಿಗುತ್ತದೆ. ''ಮರನೇದೋ, ಮುಝೇ ಕ್ಯಾ?'' ಇದರಿಂದಾಚೆಗೆ ವಿಚಿತ್ರಗಳನ್ನು ನೋಡಬಹುದು. ''ಇವನು ಹೀಗೆ ನಡಕೊಂಡರೆ ನಾನು **ಏನು ಸಾಯಬೇಕು** ಹೇಳಿ?'' ಅಥವಾ ''**ಏನು ಸಾಯಲಿ?**'' – ಇಲ್ಲಿ 'ಸಾಯ್' ಎನ್ನುವ ಅಕರ್ಮಕ ಧಾತು ಒಂದು ತರಹದ ಅರ್ಥ ಸಕರ್ಮಕತ್ವವನ್ನು ಸಂಪಾದಿಸುವುದಿಲ್ಲವೆ? ಇಲ್ಲಿ 'ಸಾಯ್' ಧಾತು 'ಮಾಡು' ಎಂಬರ್ಥಕ್ಕೆ ತಿರುಗುತ್ತದೆ; ಸಂಗಡಲೇ ಒಂದು ತರದ ವಿರಕ್ತಿಯನ್ನು, ಬೇಜಾರನ್ನು ದ್ಯೋತಿಸುವ ಈ ಪ್ರಯೋಗಕ್ಕೆ ತುಳುವಿನಲ್ಲಿ (''ದಾನೆ ಸಯ್ಪುನಿ?'' ''ದಾನೆ ಸಯ್ಯೊಡು?'') ಸಮಾನ ಪ್ರಯೋಗ ಸಿಕ್ಕಿದರೂ ಹಿಂದಿಯಲ್ಲಿ ಅದು ಕಾಣಿಸುವುದಿಲ್ಲವೆಂದು ನನ್ನ ಹಿಂದೀ ಮಿತ್ರರು ಹೇಳುತ್ತಾರೆ. ಇಂಗ್ಲೀಷಿನಲ್ಲಿ ಅಂತೂ ಇಲ್ಲವೇ ಇಲ್ಲ. ಅಕರ್ಮದಲ್ಲೇ ''**ಇಷ್ಟು ಹೊತ್ತು ಎಲ್ಲಿ ಸತ್ತಿದ್ದಿ?**'' ಎನ್ನುವಾಗ ಸಾಯುವುದು 'ಇರು' ಎಂಬುದಕ್ಕೋ 'ಹೋಗು' ಎಂಬುದಕ್ಕೋ ಸಮವಾಗುತ್ತದೆ. ಇದು ಕೋಪ ಮತ್ತು ಅಸಹನೆಯ ಬಲದಿಂದ ಆದ ಅರ್ಥವಿಪರ್ಯಯ.

''**ಹೋಳಿಗೇ ಅಂದರೆ ಸಾಯುತ್ತಾನೆ**'', ''**ಹೆಂಡತಿ ಅಂದರೆ ಸಾಯುತ್ತಾನೆ**'' ಅಥವಾ ''**ಜೀವ ಬಿಡುತ್ತಾನೆ**'' ಎಂಬಲ್ಲಿ ಸಾಯುವುದು ಅತಿಯಾದ ಆಸಕ್ತಿ, ಪ್ರೀತಿ ಎಂಬ ಭಾವವನ್ನು ದ್ಯೋತಿಸಿ ಈ ಹಿಂದಿನ ಉದಾಹರಣೆಗಳ ವಿರುದ್ಧಾರ್ಥದಲ್ಲಿ ಅವತರಿಸುತ್ತದೆ. ಇದಕ್ಕಾದರೆ ಬೇರೆ ಭಾಷೆಗಳಲ್ಲಿ ಸಮಾನಾಂತರ ವಾಗ್ಧೋರಣೆಗಳು ಸಿಗುತ್ತವೆ. ''**ಔರತ್ ಪರ್ ಮರತಾ ಹೈ**'' He dies on her ಅವಳೆಂದರೆ ಜೀವ ಬಿಡುತ್ತಾನೆ, ಎಂಬುದನ್ನು ಉದಾಹರಿಸಬಹುದು. ಇಲ್ಲಿ ''ಸಾಯು''ವುದು ಯಾವುದಾದರೊಂದು ಪ್ರಿಯ ಅಥವಾ ಗೌರವಾರ್ಹ ವಸ್ತುವನ್ನು ಪಡೆಯುವುದಕ್ಕೆ ಅಥವಾ ಕಾಪಾಡುವುದಕ್ಕಾಗಿ ಸಾಯಲು ಸಿದ್ಧವಾಗುವುದಲ್ಲ. ಹಾಗೆ ಮಾಡುವುದಕ್ಕೆ ''ಜೀವ ಕೊಡು''ವುದೆನ್ನುತ್ತೇವೆ.

ಎಲ್ಲಕ್ಕಿಂತ ಸೋಜಿಗದ ಸಾವು ಕರುಣೆಯಿಂದ ಹುಟ್ಟುವಂಥಾದ್ದು. ''ಅವನನ್ನು ಹಿಡಿದು ಚಚ್ಚಿ-ಹಾಕಬಹುದಿತ್ತು. **ಸಾಯಲಿ ಅಂತ ಬಿಟ್ಟೆ**'' ಅಥವಾ ''**ಪಾಪ, ಸಾಯಲಿ, ಬಿಟ್ಟುಬಿಡಿ!**'' ಎಂದು ಹೇಳುವಾಗ ತಿರಸ್ಕಾರಮಿಶ್ರಿತ ಕರುಣೆ ಪ್ರೇರಣೆ ಕೊಡುತ್ತದೆ. ಆಲೋಚನೆ ಮಾಡಿದರೆ ಕಚಕುಳಿ ಇಡುವಂಥ ಅರ್ಥವೈಪರೀತ್ಯವಿದು. ''ಸಾಯಲಿ'' ಅಂತ ನಿಮಗೆ ಅನಿಸುವುದಾದರೆ ಬಿಟ್ಟುಬಿಡುವುದೇಕೆ? ಕೊಂದೇ ಹಾಕಬಹುದಲ್ಲ? ನಾನ್ಯಾಕ

ಕೊಲ್ಲುವ ಕಷ್ಟ ತೆಗೆದುಕೊಳ್ಳಲಿ, ಅವನೇ ತನ್ನಷ್ಟಕ್ಕೆ ಸಾಯಲಿ ಅಂತಲೊ ?

ಮತ್ತೆ ಬಂಗಾಲಿಯಲ್ಲಿ ಮರಿ ಮರಿ ಅಂದರೆ ''ಅಯ್ಯೋ ಪಾಪ'' ಅಂತ (ಮರಾ = ಸಾಯಿ).

ಸಾಯುವುದನ್ನು ನಾವು ಕಾಮಕ್ಕೆ, ಕ್ರೋಧಕ್ಕೆ, ಲೋಭಕ್ಕೆ, ಮೋಹಕ್ಕೆ ಅಲ್ಲದೆ ಕರುಣೆಗೆ ತಳಕು ಹಾಕಿದ್ದೇವೆ. ಬೇರೆ ಭಾಷೆಗಳಲ್ಲಿ – ವಿಶೇಷವಾಗಿ ಪಾಶ್ಚಾತ್ಯ ಭಾಷೆಗಳಲ್ಲಿ ಇಂಥ ವಿಸ್ತೃತ ಅರ್ಥವೈಖರಿ ಸಾಯುವುದಕ್ಕೆ ಕಾಣಸುವುದಿಲ್ಲ. ಇದು ನಮ್ಮ ಮನೋವೃತ್ತಿಯ ಬಗ್ಗೆ, ನಮ್ಮ ತತ್ತ್ವದೃಷ್ಟಿಯ ಬಗ್ಗೆ ಏನನ್ನಾದರೂ ಹೇಳುತ್ತದೆಯೆ ? ಕೆಲ ಪಾಶ್ಚಾತ್ಯರು ಹೇಳುವಂತೆ (ಉದಾ : ಅರ್ಥರ್ ಕೆಸ್ಲರ್) ಭಾರತದ ತತ್ತ್ವಜ್ಞಾನಕ್ಕೆಲ್ಲ ಮರಣವೇ ಪ್ರೇರಣೆಯೆಂದು ಇದರ ತಾತ್ಪರ್ಯವೆ ? ನಾವು ಸದಾ ಮರಣಚಿಂತಕರೆ ?

ಸಾಯುವುದಕ್ಕಿರುವಷ್ಟಲ್ಲದಿದ್ದರೂ **ಕೊಲ್ಲು**ವುದಕ್ಕೂ ಒಂದಿಷ್ಟು ಅರ್ಥಶಾಖೆಗಳಿವೆ. ಕೊಲ್ಲುವುದೆಂದರೆ ಪ್ರಾಣ ತೆಗೆಯುವುದು, ಸಾಯಿಸುವುದು ಎಂಬುದು ಸರ್ವವಿದಿತ ಅರ್ಥ. ಈಗಿನ ಕಾಲದಲ್ಲಿ ಅದು ಏಕಮಾತ್ರ ಅರ್ಥವಾಗಿ ಉಳಿದಿದೆ. ಆದರೆ ಕೇಶಿರಾಜನು ''**ಕೊಲ್** ಹಿಂಸಾಯಾಂ'' – ಕೊಲ್ ಧಾತುವಿಗೆ ಹಿಂಸೆಯೆಂದರ್ಥ ಎನ್ನುತ್ತಾನೆ. ಹಿಂಸೆಯಲ್ಲಿ ಕೊಲೆ ಸೇರಬಹುದಾದರೂ ಸಾಯುವಷ್ಟು ಹೊಡೆಯದಿರುವುದೂ ಹಿಂಸೆ ತಾನೆ ? ಈ ಪ್ರಕಾರ ಹೊಡೆಯುವುದೂ ಕೊಲ್ಲುವುದರಲ್ಲಿ ಬರುತ್ತದೆ. ಈ ಅರ್ಥ ಹರಿದಾಸರ ಕಾಲದವರೆಗೂ ಇತ್ತು. ''ಕೋಲು ಕೊಂಡು **ಕೊಲ್ಲ ಹೋದರೆ** ಓಡಿಹೋದನಮ್ಮ'' ಎಂದು ಒಬ್ಬ ಗೋಪಿ ಯಶೋದೆಗೆ ಕೃಷ್ಣನ ಮೇಲೆ ದೂರು ಹೇಳುತ್ತಾಳೆ. ಪುರಂದರದಾಸರ ಪ್ರಕಾರ ಇಲ್ಲಿ **ಕೊಲ್ಲು**ವುದೆಂದರೆ **ಹೊಡೆ**ಯುವುದೆಂದಷ್ಟೇ ಅರ್ಥ. ಹಾಗೆಯೇ ಬಡಿದಾಟಕ್ಕೆ 'ಕೊಂದಾಟ' ಎಂಬ ಪದದ ಬಳಕೆ ಸೋಮೇಶ್ವರ ಶತಕದಲ್ಲಿ ಕಾಣುತ್ತದೆ. ''ಕೊಲ್'' ಧಾತುವಿಗೆ ಮೂಲ ಅರ್ಥ ಹೊಡೆಯೆಂಬುದಷ್ಟೆಯೋ ಎಂಬ ಅನುಮಾನ ಕೂಡ ನನಗೆ ಬರುತ್ತದೆ. **ಕೋಲ್** ಶಬ್ದ ನೋಡಿರಿ. ಅದು ಕೊಲ್ಲುವುದಕ್ಕೆ ಬಳಸುವ ಉಪಕರಣವೆಂದಲ್ಲವೆ ನಿಷ್ಪತ್ತಿ ?

ಈ ವಿಷಯದಲ್ಲಿ ಭಾರತೀಯ ಹಾಗೂ ಇತರ ಭಾಷೆಗಳಲ್ಲಿ ಸಾಮ್ಯ ಕಾಣುತ್ತದೆ. ಹಿಂದಿಯಲ್ಲಿ **ಮಾರ್‌ನಾ** ಎಂದರೆ ಕೊಲ್ಲುವುದೂ ಹೌದು, ಹೊಡೆಯುವುದೂ ಹೌದು. ''ಮಾರ್'' ಧಾತುವಿಗೆ ಸಂಸ್ಕೃತದ ''ಮೃ'' ಧಾತು ಮೂಲವಾಗಿದ್ದರೂ ಸಂಸ್ಕೃತದಲ್ಲಿ ಪ್ರಧಾನವಾಗಿರುವುದು ಸಾಯಿಸು ಎಂಬರ್ಥ ಮಾತ್ರ. ಹಿಂದಿಯಲ್ಲಾದರೋ **ಸಾಯಿಸು** ಎಂಬರ್ಥ ಸ್ಪಷ್ಟವಾಗಬೇಕಾದರೆ **ಮಾರ್ ಡಾಲ್‌ನಾ** (ಕೊಂದು ಹಾಕುವುದು) ಎಂದು ಹೇಳಬೇಕಾಗುತ್ತದೆ. ಇಂಗ್ಲೀಷಿನಲ್ಲಿ ಕೂಡ Kill ಶಬ್ದ ಬಹಳ ನೋಯಿಸು ಎಂಬರ್ಥದಲ್ಲಿ ಬಳಕೆಯಾಗುವುದುಂಟು.

ಒಂದು ಸೋಜಿಗವೆಂದರೆ ಇಂಗ್ಲೀಷಿನ killing time (ವ್ಯರ್ಥ ಕಾಲಹರಣ ಮಾಡುವುದು) ಎಂಬ ನುಡಿಕಟ್ಟಿಗೆ ಕನ್ನಡದಲ್ಲಿ ಸಮಾನ ನುಡಿಕಟ್ಟು ಇರುವುದು. ನಮ್ಮ ಕುಮಾರವ್ಯಾಸ **ಕಾಲವ ಕೊಲುವುದೇ** ? ಎಂದು ಕೇಳುತ್ತಾನೆ.

ನೀರಸವಾಗಿ ಉದ್ದಕ್ಕೆ ಮಾತಾಡುವುದಕ್ಕೆ ನಾವೀಗ **ಬೋರು ಹೊಡೆಯುವುದು** ಎಂದು ಹೇಳುತ್ತೇವಲ್ಲ. ಅದು ಇಂಗ್ಲೀಷಿನ Bore ಶಬ್ದದ ಸ್ವೀಕರಣವೆಂಬುದು ಖಂಡಿತ. ಆದರೆ ಅದರ ಮೂಲಾರ್ಥದ ಬಗ್ಗೆ ನಾವು ತಪ್ಪು ತಿಳಿದುಕೊಂಡಿದ್ದೇವೆ. ಯಾಕೆಂದರೆ ಈ Bore ಅನ್ನು ಕನ್ನಡೀಕರಿಸಿ **ಕೊರೆಯುವುದು** ಎಂದೂ, ಹಾಗೆ ಮಾತಾಡುವವರನ್ನು **ಭೈರಿಗೆ**ಯೆಂದೂ

ಕರೆಯುತ್ತೇವೆ. ಆದರೆ ಇಂಗ್ಲೀಷಿನ ಈ Bore ಪದಕ್ಕೂ ಕೊರೆಯುವುದು ಎಂಬರ್ಥದ Bore ಪದಕ್ಕೂ ಏನೂ ಸಂಬಂಧವಿಲ್ಲವೆಂದು ಆಕ್ಸ್‌ಫರ್ಡ್ ಡಿಕ್ಷನರಿಯಿಂದ ತಿಳಿಯುತ್ತದೆ. ತೂತು ಹೊಡೆಯುವುದು ಎಂಬರ್ಥದ Bore ಎಲ್ಲಿಂದ ಬಂತೆಂದು ಆ ಕೋಶದ ಕರ್ತರಿಗೆ ಖಚಿತವಾಗಿ ಗೊತ್ತಿದೆ. ಆದರೆ ನೀರಸವಾಗಿ ಮಾತಾಡಿ ಬೇಜಾರು ಬರಿಸುವವರಿಗೂ ಅವರ ಮಾತಿಗೂ ಅನ್ವಯಿಸುವ Bore ಎಂಬ ಶಬ್ದ ಎಲ್ಲಿಂದ ಬಂತೆಂದು ಅವರಿಗೂ ಗೊತ್ತಿಲ್ಲ. ಇದು ತೀರ ಈಚೆಗಿನ (೧೮ನೇ ಶತಮಾನದ) ಶಬ್ದವೆಂದೂ, ಅದರ ಪ್ರಾರಂಭ ಪ್ರಯೋಗಗಳಿಂದ ಅದು ಫ್ರೆಂಚ್ ಮೂಲದ್ದಿರುವಂತೆ ತೋರುತ್ತದೆಂದೂ ಅವರು ಹೇಳುತ್ತಾರೆ. ನಮ್ಮ ಅಜ್ಞಾನದಲ್ಲಿ ನಾವು Boring ಅನ್ನು ಕೊರೆಯುವುದು ಎನ್ನುತ್ತಿದ್ದೇವೆ. ಈಗಿನ ಯಾಂತ್ರಿಕ ಯುಗದ ಭೈರಿಗೆಗಳು ಮಾಡುವ ಶಬ್ದ ಈ ಅರ್ಥಕ್ಕೆ ಸರಿ ಹೊಂದುವುದಾದರೂ ಹಿಂದಿನ ಕಾಲದ ಭೈರಿಗೆಗಳು ಅಷ್ಟು ಕರ್ಕಶವಾಗಿದ್ದಿಲ್ಲ. ಆದರೆ ಅಜ್ಞಾನದಿಂದ ಹುಟ್ಟಿದ ಈ ಪರ್ಯಾಯ ಪದಗಳು ಕನ್ನಡದಲ್ಲಿ ಗಟ್ಟಿಯಾಗಿ ಉಳಿದುಹೋಗುವುದು ಖಂಡಿತ. ಹಾದರದ ಮಕ್ಕಳಿಗೂ ಪಾತಿವ್ರತ್ಯದ ಮಕ್ಕಳಿಗೂ ಆಯುರ್ದಾಯದಲ್ಲಿ ವ್ಯತ್ಯಾಸವಿಲ್ಲ; ಹಾಗೆಯೇ ತಪ್ಪು ಶಬ್ದಗಳಿಗೂ ಶುದ್ಧ ಶಬ್ದಗಳಿಗೂ ಒಂದೇ ಬಳ್ಳದಲ್ಲಿ ಆಯುಷ್ಯ ಅಳೆದುಬರುತ್ತದೆ.

## ೧೨೪

ಅನೇಕ ಆಧುನಿಕ ಉಪಕರಣಗಳ ಹೆಸರುಗಳು ಹೇಗೆ ಬಂದವೆಂದು ನೋಡಿದರೆ ಹಳೆಯದು ನಮ್ಮನ್ನು ಬೆಂಬಿಡುವುದಿಲ್ಲವೆಂದು ಖಚಿತವಾಗುತ್ತದೆ. ಇಂದು ಹಳ್ಳಿ ಹಳ್ಳಿಗೂ ಭಾಗ್ಯಜ್ಯೋತಿಯನ್ನು ಒದಗಿಸುವ ವಿದ್ಯುತ್ ಉಪಕರಣ ಬಲ್ಬು, ವ್ಯಾವಹಾರಿಕ ವಿಜ್ಞಾನಿಗಳಲ್ಲಿ ಸರಿದೊರೆಯಿಲ್ಲದ ಅಡಿಸನ್, ವಿದ್ಯುತ್ ಶಕ್ತಿಯನ್ನು ಬೆಳಕಾಗಿ ಪ್ರಕಟಗೊಳಿಸುವ ಸಾಹಸದಲ್ಲಿ ನೂರಾರು ಸೋಲುಗಳನ್ನು ತಿಂದ ನಂತರ ಈ ಗಾಜಿನ ಉಪಕರಣವನ್ನು ಸೃಷ್ಟಿಸಿದ. ಆದರೆ ಅದಕ್ಕೆ ಇಟ್ಟ ಬಲ್ಬ್ (bulb) ಎಂಬ ಹೆಸರಿನ ಮೂಲಾರ್ಥ ''ಗಡ್ಡೆ'' ಎಂದು. ಕೆಳಗೆ ಬೇರುಗಳನ್ನೂ ಮೇಲೆ ಮೊಳಕೆ ಕಾಂಡವನ್ನೂ ವಿಸ್ತರಿಸುವ ಗೋಲಾಯಿತ ಕಂದ ಮೂಲವೇ ಇಂಗ್ಲೀಷ್ ''ಬಲ್ಬು''. ಆ ಆಕಾರದ ರಬ್ಬರಿನ, ಗಾಜಿನ ಅಥವಾ ಇನ್ನಾವುದೇ ಉಬ್ಬಲು ರಚನೆಗೂ ಆ ನಿಸರ್ಗನಿರ್ಮಿತ ರಚನೆಯ ಹೆಸರನ್ನೇ ಕೊಡುವುದಾಯಿತು. ಇಂಗ್ಲೀಷಿಗೆ ಈ ಶಬ್ದ ಲ್ಯಾಟಿನ್ನಿನ bulbus ಎಂಬುದರಿಂದ ಬಂತು. ಲ್ಯಾಟಿನ್ನಿಗೆ ಎಲ್ಲಿಂದ ಬಂತಪ್ಪಾ ಎಂದರೆ ಗ್ರೀಕಿನಿಂದ. ಗ್ರೀಕಿನಲ್ಲಿ ಅದಕ್ಕೆ (bulbos) ಎಂದು ಹೆಸರು. ಏನಪ್ಪಾ ಅರ್ಥ ಎಂದರೆ ನೀರುಳ್ಳಿ! ಭಾಷೆಗಳ ಪದ ಸಂಪದಭಿವೃದ್ಧಿಗೆ ಸಾದೃಶ್ಯ ಒಂದು ದೊಡ್ಡ ಆಧಾರ. ಇಲ್ಲಿ ಆ ತತ್ತ್ವ ಕೆಲಸ ಮಾಡಿದೆ. ವಿದ್ಯುತ್ತನ್ನು ತಂತಿಯ ಮೂಲಕ ಹರಿಸುತ್ತೇವೆ. ಅದಕ್ಕಿರುವ ಆಂಗ್ಲನಾಮ ವಯರ್ (wire) ಇಂದು ನಮ್ಮೆಲ್ಲ ಭಾಷೆಗಳನ್ನಾಡುವ ಅನಕ್ಷರಸ್ಥರಿಗೂ ಗೊತ್ತು. ಮನೆ ಬಳಕೆಯ ವಿದ್ಯುತ್ ಬರುವುದಕ್ಕಿಂತಲೂ ಮುಂಚೆ ಊರೂರಿಗೆ ಕಾಲಿರಿಸಿದ ಟೆಲಿಗ್ರಾಫ್ ತಂತಿಗಳಿಂದಾಗಿ ''ವಯರ್'' ಪದ ಜನರ ನಾಲಗೆಯಲ್ಲಿ ತಳವೂರಿತ್ತು. ''ನನಗೆ ವಯರ್ ಬಂತು'' ಇತ್ಯಾದಿ. ವಿದ್ಯುತ್ ಬಂದ ನಂತರ ಅದು ಇನ್ನಷ್ಟು ಜನಜನಿತವಾಯಿತಷ್ಟೇ. ಈ ''ವಯರ್'' ಶಬ್ದ ಹಳೇ ಇಂಗ್ಲೀಷು, ಹಳೇ ನಾರ್ಸ್, ಹಳೇ ಲೋ ಜರ್ಮನ್ ಇತ್ಯಾದಿ

ಭಾಷೆಗಳಲ್ಲಿನ ಸುಮಾರಾಗಿ ಸಮಾನ ಧ್ವನಿಯ ಶಬ್ದಗಳಿಂದ ವಿಕಾಸ ಹೊಂದಿದೆ. ಅರ್ಥ : ಲೋಹದಿಂದ ಎಳೆಯಲ್ಪಟ್ಟ ಸೂಕ್ಷ್ಮವಾದ ಉದ್ದನ್ನ ಎಳೆ. ಈ ವಯರ್- ಇನ ಕಲ್ಪನೆಗಾದರು ಸ್ಫೂರ್ತಿ ಎಲ್ಲಿ ? ಹಳೇ ಜರ್ಮನಿಕ್ ಭಾಷೆಗಳ ''ವೀತೆ'' (withe) ಎಂಬ ಪದದಲ್ಲಿ. ವೀತ್ ಮೂಲ ಅರ್ಥ ದೊಡ್ಡ ದೊಡ್ಡ ಗಂಟುಗಳನ್ನು ಕಟ್ಟಲು ಅನಾದಿಯಿಂದ ಉಪಯೋಗವಾಗುತ್ತಿದ್ದ ವಿಲ್ಲೊ (willow) ಮೊದಲಾದ ಬಲವಾದ ಸ್ಥಿತಿಸ್ಥಾಪಕ ಬಳ್ಳಿ ಎಂದು. ಮತ್ತೆ ನೈಸರ್ಗಿಕ ಸಾಮ್ಯ ! **ಬಳ್ಳಿಯಿಂದ ವಯರ್.**

ನಮ್ಮದೇ **ತಂತಿ** ಸಂಸ್ಕೃತ **ತಂತ್ರಿ**ಯಿಂದ ಬಂದದ್ದು. ಉದ್ದಕ್ಕೆ ಎಳೆ, ವಿಸ್ತರಿಸು ಎಂಬರ್ಥದ ''ತನ್'' ಧಾತುವಿನಿಂದ ಹುಟ್ಟಿ ತೆಳ್ಳಗಿರುವುದಕ್ಕೆಲ್ಲ ವಿಸ್ತರಿಸಿ ಎಳೆ, ನೂಲು, ಲೋಹದ ತಂತಿ ಎಂಬರ್ಥಗಳನ್ನು ಪಡೆದದ್ದು. ಎಳೆಯನ್ನು ತೆಗೆಯುವುದು, ಉಪಯೋಗಿಸುವುದೇ, ಮೊದಲಾದ ಕ್ರಿಯೆಗಳಿಗೆ ಹೊಂದಿಕೊಂಡು ನೂಲುವ ನೇಯುವ ಯಂತ್ರಗಳು ಕೂಡ ''ತಂತಿ'' ಯೆನಿಸಿದವು.

ಬಲ್ಬಿಗೆ ನಾವು ಕನ್ನಡದಲ್ಲಿ **ಬುರುಡೆ** ಎನ್ನಬಹುದು. ''ಬುರುಡೆ'' ಶಬ್ದ ಅದರ ಆಕಾರಕ್ಕಿಂತ ಹೆಚ್ಚಾಗಿ ಅದರ ಟೊಳ್ಳುತನವನ್ನು ಧ್ವನಿಸುತ್ತದೆ. (ಪುಡಿ ಬುರುಡೆಯಿಂದ ತಲೆಬುರುಡೆವರೆಗೆ ಎಲ್ಲ ಕಡೆ ಬುರುಡೆ ಟೊಳ್ಳೆ) ಆದ್ದರಿಂದ ದೀಪದ ಬಲ್ಬಿಗೆ ಬಲ್ಬಿಗಿಂತ ಬುರುಡೆಯೇ ಹೆಚ್ಚು ಸಾರ್ಥಕ ಶಬ್ದ ಎಂದು ವಾದಿಸಬಹುದು. ಆದರೆ ನನ್ನನ್ನು ಯಾರು ಕೇಳುತ್ತಾರೆ ? ಶಬ್ದಮಾರ್ಗಮತರ್ಕ್ಯಂ !

ಬಲ್ಬಿನಿಂದ ವಿದ್ಯುಚ್ಛಕ್ತಿಯ ಕಡೆಗೆ ಹೋದರೆ ಅದಕ್ಕಿರುವ ಭಾರತೀಯ ಹೆಸರಿಗಿಂತಲೂ **ಇಲೆಕ್ಟ್ರಿಸಿಟಿ** ಎಂಬ ಪಾಶ್ಚಾತ್ಯ ಹೆಸರೇ ಇಂದು ಜನರ ಬಾಯಿಗೆ ಮೆಚ್ಚಿಕೆಯಾಗಿದೆ. ಈ **ಇಲೆಕ್ಟ್ರಿಸಿಟಿಯೋ** ಗ್ರೀಕಿನಿಂದ ಲ್ಯಾಟಿನ್ ಮೂಲಕ ಬಂದದ್ದು. ಗ್ರೀಕಿನಲ್ಲಿ ಇಲೆಕ್ಟ್ರಾನ್ (electron) ಎಂದರೆ ಮಿಂಚು ಅಲ್ಲ. ಲೋಹಾದಿ ಪದಾರ್ಥಗಳಿಗೆ ತಿಕ್ಕಿದರೆ ವಿದ್ಯುಚ್ಛಕ್ತಿಯನ್ನು ಉತ್ಪಾದಿಸಲು ನೆರವಾಗುವ ''ಅಂಬರ್'' ಎಂಬ ಸುಗಂಧ ದ್ರವ್ಯಕ್ಕೆ ಗ್ರೀಕಿನಲ್ಲಿ **ಇಲೆಕ್ಟ್ರಾನ್** ಎನ್ನುತ್ತಿದ್ದರು. ನಮ್ಮ **ವಿದ್ಯುತ್** ಶಕ್ತಿ ಎಂಬುದು ಕೃತಕವಾಗಿ ಹುಟ್ಟುವ ಶಕ್ತಿಯಲ್ಲ; ಅದು ಮೋಡಗಳಲ್ಲಿ ಹೊಳೆಯುವ ಮಿಂಚೇ. ವಿದ್ಯುತ್ ಎಂದರೆ ಹೊಳೆಯುವಂಥದ್ದು (ವಿ = ವಿಶೇಷವಾಗಿ- ದ್ಯುತ್ = ಬೆಳಗುವ). ತಂತಿಯಲ್ಲಿ ಹರಿಯುವ ಮನುಷ್ಯನಿರ್ಮಿತ ಕೃತಕ ಶಕ್ತಿಗೆ ಇಲೆಕ್ಟ್ರಿಸಿಟಿ ಎಂಬುದೇ ಹೆಚ್ಚು ಸಮರ್ಪಕ ಪದವೇನೋ. ಅಂಬರನ್ನು ತಿಕ್ಕಿ ಉತ್ಪಾದಿಸುವಂಥಾದ್ದು ಕೃತಕವಲ್ಲವೆ ? ಅಂದ ಹಾಗೆ ಇಂಗ್ಲೀಷು ಮಧ್ಯಮವರ್ಗದ ಮನೆ ಮನೆಗೆ ಧಾಳಿಯಿಡುವ ಮುಂಚೆ ನನ್ನ ಹಿರಿಯರಾಗಿದ್ದವರು ಇಲೆಕ್ಟ್ರಿಸಿಟಿಗೆ ''**ಮಿಂಚಿನ ಸತ್ವ**'' ಎಂದೇ ಕರೆಯುತ್ತಿದ್ದರು.

ನಾವು ಇನ್ನೂ ನಮ್ಮ ಗಾಂವಠಿ **ತಾಟು** (ಉತ್ತರ ಕರ್ನಾಟಕ) **ತಟ್ಟೆ** (ದಕ್ಷಿಣ ಕರ್ನಾಟಕ) **ಬಟ್ಟಲು** (ದಕ್ಷಿಣ ಕನ್ನಡ)ಗಳಲ್ಲಿ ಊಟ ಮಾಡುತ್ತಿದ್ದರೂ ತಿಂಡಿ ತಿನ್ನುವುದಕ್ಕೆ ಬಳಸುವುದು ಇಂಗ್ಲೀಷಿನ **ಪ್ಲೇಟ**ನ್ನೇ ! ಈ ''ಪ್ಲೇಟು'' ಸಮತಟ್ಟಾದದ್ದು ಎಂಬರ್ಥದ ಗ್ರೀಕ್ ಧಾತುವಿನಿಂದ ಹುಟ್ಟಿದ ''ಪ್ಲೇಟಸ್'' (Platus) ಎಂಬ ಪದದಿಂದ ಲ್ಯಾಟಿನ್, ಫ್ರೆಂಚ್ ಮೂಲಕ ಇಂಗ್ಲೀಷಿನಲ್ಲಿ ಅವತರಿಸಿತು. ಈಚೆಗಿನ Concise Oxford Dictionary ಪ್ರಕಾರ ಅದು **ತಗಡು** ಮುಂತಾದ ಸುಮಾರು ೧೫ ಅರ್ಥಗಳನ್ನು ಹುಟ್ಟಿಸಿಕೊಂಡಿದೆ. ಅಯ್ಯೋ ವಿದೇಶೀ ಪದಗಳನ್ನು ಸ್ವೀಕರಿಸಿ ನಮ್ಮವೇ ಸುಂದರ ಶಬ್ದಗಳನ್ನು ಮರೆಯುತ್ತಿರುವ ನಮ್ಮ

ನಾಚಿಕೇಗೇಡಿತನವೇ! ಎಂದು ಹಳಹಳಿಸುವ ಮುನ್ನ ಈ ''ನಮ್ಮ'' ತಾಟು ತಟ್ಟೆಗಳ ಮೂಲವನ್ನಿಷ್ಟು ಕೇಳಿ. ''ತಾಟು'' ಮರಾಠಿಯಿಂದ ಉತ್ತರ ಕರ್ನಾಟಕವನ್ನು ಆಕ್ರಮಿಸಿದ ಪದ; ''ತಟ್ಟೆ'' ಅದರದೇ ದ್ರಾವಿಡ ರೂಪ. ಎಲ್ಲ ದಕ್ಷಿಣ ದ್ರಾವಿಡ ಭಾಷೆಗಳಲ್ಲಿಯೂ ಇದೆ. ಇವೆಲ್ಲವೂ ಭಾಷಾವಿಜ್ಞಾನಿ ಸುನೀತಿಕುಮಾರ ಚಟರ್ಜಿಯವರನ್ನು ನೀವು ನಂಬುವಿರಾದರೆ-ಮಧ್ಯ ಪಾರಸೀಕ ಭಾಷೆಯಿಂದ ಭಾರತಕ್ಕೆ ಸದ್ದಿಲ್ಲದೆ ಕಾಲು ಚಾಚಿದ **ತಶ್ತ್** ಎಂಬ ಪದದ ತದ್ಭವಗಳು. ಆಧುನಿಕ ಪಾರಸೀಕ ಭಾಷೆಯಲ್ಲಿಯೂ ಒಂದು ಬಗೆಯ ದೊಡ್ಡ ಪರಾತ ಎಂಬರ್ಥದಲ್ಲಿ ''ತಶ್ತ್'' ಚಲಾವಣೆಯಲ್ಲಿದೆ.

ಇನ್ನು **ಬಟ್ಟಲಿನ** ವಿಚಾರ. ಇದು ಕರ್ನಾಟಕದ ಕೆಲವೆಡೆ ಊಟದ ತಾಟೆಂಬರ್ಥದಲ್ಲಿ ಉಪಯೋಗದಲ್ಲಿದ್ದರೆ ಇನ್ನು ಕೆಲವೆಡೆ ಚಿಕ್ಕ ದೊನ್ನೆಯಂಥ ತಟ್ಟೆಯೆಂಬರ್ಥದಲ್ಲಿ ಬಳಕೆಯಲ್ಲಿದೆ. ಹೇಗಿದ್ದರೂ ಅಷ್ಟೆ. ದುಂಡಗೆ ಎಂಬರ್ಥದ ಸಂಸ್ಕೃತದ ''ವೃತ್ತ'' ಶಬ್ದದ ಪ್ರಾಕೃತ ರೂಪ **ವಟ್ಟ, ಬಟ್ಟ**. ಅದಕ್ಕೆ ''ಲ್'' ಪ್ರತ್ಯಯ ಹಚ್ಚಿ ನಿರ್ಮಿತವಾದ ಪದವಿದು – ದುಂಡಗಿನದು ಬಟ್ಟಲು.

**ಪರಾತ** ಎಂದು ಮೇಲೆ ಹೇಳಿದೆನಲ್ಲ, ತಶ್ತ್ ಶಬ್ದದ ಸಂದರ್ಭದಲ್ಲಿ? ಅದು ನಮ್ಮದೇ ಪಾತ್ರದ ಅಕ್ಷರವೈಪರೀತ್ಯದಿಂದ ಉಂಟಾಗಿರಬೇಕೆಂದು ಇದನ್ನು ಬರೆಯುತ್ತ ಬರೆಯುತ್ತ ನನಗೆ ಅನಿಸುತ್ತಿತ್ತು. ಪರಿಷತ್ತಿನ ನಿಘಂಟು ನೋಡಿದರೆ ಅದು ಹಿಂದಿ, ಮರಾಠಿ **ಪರಾತ್**ನಿಂದ ನಾವು ಸ್ವೀಕರಿಸಿದ್ದು ಎಂದು ಬರೆದಿದೆ. ಇದ್ದೀತು, ತಪ್ಪೇನು? ನಮ್ಮ ದೇಶಿ ಪದವೇ ಅಲ್ಲವೆ ಎಂದು ಸಮಾಧಾನಿಸಿಕೊಂಡರೆ ಹಾಗಲ್ಲ; ಅದು ಪೋರ್ಚುಗೀಸಿನ **ಪ್ರಾಟೋ** (prato)ನಿಂದ ಉತ್ತರದ ಭಾಷೆಗಳಿಗೆ ಬಂದದ್ದು ಎಂದು ಸುನೀತಿ ಚಟರ್ಜಿಯವರು ಪಟ್ಟಿ ಮಾಡಿದ್ದಾರೆ.

ಚಹಾ ಕಾಫಿ ಕುಡಿಯುವವರಿಗೆಲ್ಲ ಇಂಗ್ಲೀಷಿನ **ಕಪ್** (Cup) **ಸಾಸರ್** (Saucer) ಮತ್ತು **ಸ್ಪೂನ್** (spoon) ಗೊತ್ತು. ಇವುಗಳಲ್ಲಿ ''ಕಪ್'' ಎಂಬುದು ಮಧ್ಯ ಲ್ಯಾಟಿನ್ನಿಂದ (Cuppa) ಹಳೇ ಇಂಗ್ಲೀಷಿಗೆ (Cuppe) ಹೋಗಿ ಆಧುನಿಕ ಇಂಗ್ಲೀಷಿನಲ್ಲಿ ಕಪ್ (Cup) ಆಯಿತು. ಅರ್ಥ ಪಾನಪಾತ್ರ ಎಂದೇ. ಮೂಲತಃ ಸಾಸರ್ ಎಂಬುದು ಊಟ ಮಾಡುವಾಗ ಬಾಯಿ ರುಚಿ ಚುರುಕಾಗಿಸಲು ಬಳಸುವ ತೆಳ್ಳಗಿನ ಮೇಲೋಗರವನ್ನು ಬಡಿಸಿಕೊಳ್ಳುವ ತಟ್ಟೆ. **ಸಾಸ್** ಎಂದರೆ ಮೇಲೋಗರ. ಮುಂದೆ ಈ ತಟ್ಟೆ ಕಾಫಿ ಅಥವಾ ಚಹಾವನ್ನು ಕಪ್ಪಿನಿಂದ ಕುಡಿಯುವಾಗ ತುಟಿಯಿಂದ ತಟಕಿಕ್ಕಬಹುದಾದ ಬಿಂದುಗಳನ್ನು ಮೈಗೆ ಬೀಳದಂತೆ ಹಿಡಿಯುವ ಸಾಧನವಾಯಿತು. (ಸಾಸರಿನಲ್ಲಿ ಚಹಾ ಹೊಯ್ದುಕೊಂಡು ಚೀಪಿ ಕುಡಿಯುವುದು ನಾಗರಿಕತೆಯಲ್ಲ!) **ಸ್ಪೂನ್** ಎಂದರೆ ಚಮಚಾ. ''ಈ ಚಮಚಾ'' ಬಗ್ಗೆ ಹಿಂದೆ ಚರ್ಚಿಸಿದ್ದೇನೆ (ಚಿಂತಾಮಣಿ ೨೩) ಸ್ಪೂನ್ ಎಂಬುದು ಲೋಹದ ಚಿಕ್ಕ ಸೌಟು ಎಂಬುದು ನಮಗೀಗ ಗೊತ್ತು. ಆದರೆ ಹಳೆ ಇಂಗ್ಲೀಷಿನಲ್ಲಿ **ಸ್ಪೋನ್** (Spon) ಎಂಬುದು ಮರದ ಚಕ್ಕೆ ಎಂಬರ್ಥದ ಶಬ್ದ. ಅರ್ಥಾತ್ ಸ್ಪೂನ್ ಎಂಬುದು ಮೂಲತಃ ಮರದಿಂದ ತಯಾರಿಸಿದ ಚಿಕ್ಕ ಸೌಟು. ಈ ಪ್ರಕಾರ ಇದು ಸಂಸ್ಕೃತದ ''ಚಮಸ''ಕ್ಕೆ ಹತ್ತಿರದ್ದು. ಚಮಸವೂ ಮರದ ಉಪಕರಣವೆ.

೧೨೫

**ಜಂಗಲ್** ಎಂದರೆ ಅರಣ್ಯ ಎಂದು ಎಲ್ಲರಿಗೆ ಗೊತ್ತು. ಆ ಶಬ್ದ ಇಂಗ್ಲೀಷಿನಿಂದ ಬಂದಿದೆ ಎಂದು ಹೆಚ್ಚಿನವರು ಹೇಳಿಯಾರು. jungle (ಜಂಗ್ಲ್) ಶಬ್ದ ಇಂಗ್ಲೀಷಿನಲ್ಲಿ ಸಾಕಷ್ಟು ಬೇರು ಬಿಟ್ಟಿದೆ. ಏರು ಕಟ್ಟಡಗಳ ಇಂದಿನ ನಗರಗಳಿಗೆ ''ಕಾಂಕ್ರೀಟು ಜಂಗಲ್'' ಎಂದೂ ''ಜಂಗಲ್ ನೀತಿ'' ಎಂದರೆ ಕಾಡು ಪ್ರಾಣಿಗಳಂತೆ ನಿರ್ಮಮವಾಗಿ ಬದುಕಿನ ಹೋರಾಟ ನಡೆಸುವುದೆಂದೂ ಸುಮಾರಾಗಿ ಇಂಗ್ಲೀಷ್ ಬಲ್ಲವರೂ ಕೇಳಿರುತ್ತಾರೆ. ಆದರೂ ಈ ಶಬ್ದ ಇಂಗ್ಲೀಷಿನಿಂದ ನಾವು ತಂದದ್ದಲ್ಲ. ಇಂಗ್ಲೀಷೇ ನಮ್ಮಿಂದ ಒಯ್ದದ್ದು. ಹಿಂದಿಯಲ್ಲಿ ''ಜಂಗಲ್'' ಎಂದರೆ ಅರಣ್ಯ. ಸಂಸ್ಕೃತದಲ್ಲಿ ''ಜಂಗಲ'' ಎಂದರೆ ಕಾಡೂ ಹೌದು, ಮರಭೂಮಿಯೂ ಹೌದು. ''ಬರೇ ಜಂಗ್ಲೀ ಮನುಷ್ಯ'' ಎನ್ನುವಾಗ ಅನಾಗರಿಕ ಎಂಬುದು ನಮ್ಮ ತಾತ್ಪರ್ಯ! ಈ ಪದ ಪಾರಸಿಕ ಭಾಷೆಗೂ ದಾಟಿದೆಯೆಂದು ಪರಿಷತ್ತಿನ ನಿಘಂಟಿನಿಂದ ತಿಳಿಯುತ್ತದೆ.

ಕರಾವಳಿಗೆ ಹೋದರೆ ಸೇತುವೆಗಳಿಲ್ಲದ ನದಿಗಳ ಬಳಿ ಇನ್ನೊಂದು **ಜಂಗಲ್** ಶಬ್ದ ಕಿವಿಗೆ ಬಿದ್ದೀತು. ಅದು ಕಾರು ಮೊದಲಾದ ವಾಹನಗಳನ್ನು ಹೊಳೆ ದಾಟಿಸಲು ಬಳಸುವ ಪೋತಕ್ಕೆ ಹೆಸರು. ಎರಡು ದೋಣಿಗಳನ್ನು ಜೋಡಿಸಿ ಮೇಲೆ ಹಲಗೆಗಳನ್ನು ಹಾಕಿ ಕಟಾಂಜನ ಕಟ್ಟಿದ ಈ ''ಜಂಗಲ್'' ಮೇಲಿನ ಜಂಗಲ್ಲಿಗೆ ಎತ್ತಣಿಂದಲೂ ಸಂಬಂಧಿಸಿದ್ದಲ್ಲ. ಅದು ಪೋರ್ಚುಗೀಸಿನಿಂದ ಬಂದದ್ದು. ಆ ಭಾಷೆಯಲ್ಲಿ ''ಜಂಗಡ'' (Jang-da) ಪದಕ್ಕೆ ತೆಪ್ಪ ಎಂದರ್ಥ. ತುಳುವಿನಲ್ಲಿ ಇದು **ಜಂಗಾಲ್, ಜಂಗಲ್** ಎಂಬ ರೂಪಗಳಲ್ಲಿಯೂ ಇದೆ.

ಏಳು ದಿವಸಗಳ ''ವಾರ''ವನ್ನು ಕುರಿತು ಹಿಂದೆ (ಪದಾರ್ಥ-೮೫) ಚರ್ಚಿಸಿದ್ದೇನೆ. ಪ್ರಾಚೀನ ಅಕ್ಕಾಡಿಯನ್ ಜ್ಯೋತಿಷಿಗಳು ಏಳು ದಿನಗಳ ವಾರದಲ್ಲಿ ಒಂದೊಂದು ದಿನವನ್ನೂ ಒಂದೊಂದು ಗ್ರಹಕ್ಕೆ ಹಂಚಿ ಹಾಕಿದ್ದನ್ನೂ ಹೇಳಿದ್ದೇನೆ. ಇಂಗ್ಲೀಷಿನ Sunday, Monday ಮೊದಲಾದವುಗಳೂ ನಮ್ಮ ರವಿವಾರ, ಸೋಮವಾರ ಮೊದಲಾದವುಗಳೂ ಸಮಾನ ಗ್ರಹಗಳನ್ನೇ ಆಯಾ ದಿನಗಳ ಅಧಿಪತಿಗಳಾಗಿ ಸ್ವೀಕರಿಸಿವೆ. ಪಶ್ಚಿಮದ ಅನೇಕ ಭಾಷೆಗಳಲ್ಲಿ ಈ ವಾರ ವ್ಯವಸ್ಥೆ ಸ್ವೀಕೃತವಾಗಿದೆ. ಆದರೆ ಪೋರ್ಚುಗೀಸ್-ಇಂಗ್ಲೀಷ್ ಕೋಶವನ್ನು ಮೊನ್ನೆ ತಿರುವಿ ಹಾಕುತ್ತಿದ್ದಾಗ ಒಂದು ಆಶ್ಚರ್ಯ ಕಾದಿತ್ತು. ಪೋರ್ಚುಗೀಸಿನಲ್ಲಿ ಸಪ್ತಾಹ (ಏಳುದಿನ)ದ ವ್ಯವಸ್ಥೆ ಇದೆ; ಆದರೆ ಅವಕ್ಕೆ ಗ್ರಹಗಳ ಹೆಸರು ಇಲ್ಲ! ರವಿವಾರ ಅಲ್ಲಿ ಸೂರ್ಯ(ರವಿ)ನಿಗೆ ಅರ್ಪಿತವಾಗಿಲ್ಲ; ಪ್ರಭುವಿಗೆ ಅರ್ಪಿತವಾಗಿದೆ: Domingo ದೋಮಿಂಗೊ = ರವಿವಾರ. (ಲ್ಯಾಟಿನ್ dominus ಪ್ರಭು, ಒಡೆಯ). ಇದು ಸಹಜ. ರವಿವಾರವನ್ನು ದೇವರ ದಿವಸವೆಂದು ಕ್ರೈಸ್ತ ಧರ್ಮ ನಿರ್ಣಯಿಸಿದೆ. ಆದರೆ ಮುಂದಿನ ಆರು ದಿವಸಗಳನ್ನು ಪೋರ್ಚುಗೀಸಿನಲ್ಲಿ ಎರಡನೇ ದಿನ (Segundo feira), ಮೂರನೇ ದಿನ (terea feira) ಇತ್ಯಾದಿಯಾಗಿ ಕರೆಯುತ್ತಾರೆ. ಹೊರತು ಗ್ರಹಗಳ ಹೆಸರುಗಳಿಂದಲ್ಲ. ಅದೇ ನೆರೆಯ ಕೆಥೋಲಿಕ್ ಧರ್ಮದ್ದೇ ಆದ ಫ್ರಾನ್ಸಿನ ಭಾಷೆಯಲ್ಲಿ ವಾರಗಳ ಮೇಲೆ ಗ್ರಹಗಳ ಆಧಿಪತ್ಯ ಸ್ವೀಕೃತವಾಗಿದೆ! ಭಾಷೆಗಳ ವಿಷಯ ಹೀಗೆ ಎಂದು ಹೇಳಲು ಬರುವುದಿಲ್ಲ. ಭಾರತದಲ್ಲಿ ಕೂಡ ಸಾಪ್ತಾಹಿಕ ವಾರ ಮತ್ತು ಅದರ ದಿನಗಳ ಹೆಸರುಗಳನ್ನು ತುಂಬಾ ತಡವಾಗಿ ಸ್ವೀಕರಿಸಲಾಯಿತು. ಕರ್ನಾಟಕ ಶಾಸನಗಳಲ್ಲಂತೂ

ಎಂಟನೇ ಶತಮಾನದವರೆಗೆ ವಾರಗಳ ಹೆಸರುಗಳಿಲ್ಲ. ವೈದಿಕ ಕರ್ಮಗಳೆಲ್ಲ ತಿಥಿಗಳನ್ನು ಅನುಸರಿಸುತ್ತವಲ್ಲದೆ ವಾರಗಳನ್ನಲ್ಲ ಎನ್ನುವುದು ಅರ್ಥವತ್ತಾಗಿದೆ. ತಡವಾಗಿ ಸೇರಿಸಿಕೊಂಡ ಈ ಕಲ್ಪನೆ ಈಗ ಎಷ್ಟು ಗಟ್ಟಿಯಾಗಿದೆಯೆಂದರೆ ಮದುವೆಯೇ ಮೊದಲಾದ ಶುದ್ಧ ವೈದಿಕ ವಿಧಿಗಳಲ್ಲಿ ಕೂಡ ವಾರಗಳನ್ನು ನೋಡುತ್ತೇವೆ; ಅಭ್ಯಂಜನ ಸ್ನಾನದಂಥ ಸಾಮಾನ್ಯ ವ್ಯವಹಾರಕ್ಕೂ ವಾರಗಳ ಶುಭಾಶುಭತ್ವವನ್ನು ಹೇಳುವ ಶ್ಲೋಕಗಳು ಉದ್ಭೂತವಾಗಿವೆ.

**ಚಕಾರ** ಶಬ್ದ ಎತ್ತಲಿಲ್ಲ. ಅಥವಾ **ಚಕಾರವೆತ್ತ**ಲಿಲ್ಲ ಎನ್ನುತ್ತೇವೆ. ತನ್ನ ಮುಂದೆಯೇ ಚರ್ಚೆ ಎಷ್ಟು ನಡೆದರೂ ಅದು ತನ್ನನ್ನೇ ಕುರಿತಿದ್ದರೂ ಏನೊಂದೂ ಮಾತಾಡಲಿಲ್ಲ. ಉತ್ತರ ಕೊಡಲಿಲ್ಲ ಎನ್ನುವುದು ತಾತ್ಪರ್ಯ. ಈ ಮಾತಿನ ಮೂಲ ಕುತೂಹಲಕರವಾಗಿದೆ. ಸಂಸ್ಕೃತದಲ್ಲಿ ''ಚ'' ಎಂಬೊಂದು ಅವ್ಯಯವಿದೆ. ಅದರ ಸಾಮಾನ್ಯ ಅರ್ಥ ''ಮತ್ತು'' ಎಂದು. ''ಅಹಂ ಚ ತ್ವಂ ಚ'' ಎಂದರೆ ''ನಾನು ಮತ್ತು ನೀನು.'' ಆದರೆ ಅದನ್ನು ಸಂಸ್ಕೃತ ಸಾಹಿತ್ಯದಲ್ಲಿ ವಿಪುಲವಾದ ಅರ್ಥಗಳಲ್ಲಿ ಕೆಲವೊಮ್ಮೆ ಏನೂ ಅರ್ಥವಿಲ್ಲದೆ ಶ್ಲೋಕಗಳಲ್ಲಿ ಕಡಿಮೆ ಬಿದ್ದ ಮಾತ್ರೆಗಳನ್ನು ಭರ್ತಿ ಮಾಡುವುದಕ್ಕೂ ಧಾರಾಳವಾಗಿ ಪ್ರಯೋಗಿಸಿರುವುದು ಕಾಣಿಸುತ್ತದೆ. ಅದು ಪಡೆದ ಅನೇಕಾರ್ಥಗಳಲ್ಲಿ ಯಾರಾದರೊಬ್ಬರ ಹೇಳಿಕೆಯನ್ನು ಆಕ್ಷೇಪಿಸುವುದು ಅಥವಾ ತಿದ್ದುಪಡಿ ಮಾಡುವುದು ಕೂಡ ಸೇರಿದೆ. ''ಅಪಿ ಚ'', ''ಕಿಂ ಚ'' (ಆದರೆ, ಆದರೂ) ಇತ್ಯಾದಿಗಳನ್ನು ಉದಾಹರಿಸಬಹುದು. ಹೀಗೆ ''ಚಕಾರ'' ಎಂದರೆ 'ಚ' ಎಂಬ ಅಕ್ಷರ ಎಂದೂ ಸೌಮ್ಯ ವಿರೋಧ ಎಂದೂ ಅರ್ಥವಾಗುತ್ತದೆ. ಚಕಾರವೆತ್ತಲಿಲ್ಲ ಎಂದರೆ ಒಂದೇ ಅಕ್ಷರದಲ್ಲಿ ಕೂಡ ಅಲ್ಲಗಳೆಯಲಿಲ್ಲ.

''**ಚಾ-ಚೂ ತಪ್ಪದೆ** ಎಲ್ಲವನ್ನೂ ಹೇಳಿಬಿಟ್ಟ'' ಎನ್ನುವುದೂ ಸಂಸ್ಕೃತದ ಅಪಭ್ರಂಶ ವೆಂದೇ ತೋರುತ್ತದೆ. ಸಂಸ್ಕೃತದಲ್ಲಿ ''ಚ''ದ ಹಾಗೆ ''ತು'' ಎಂಬ ಅವ್ಯಯವೂ ಇದೆ. ಅದಕ್ಕೆ ಸಾಮಾನ್ಯ ಅರ್ಥ ''ಅಂತೂ'' (ಅಹಂತು = ನಾನಂತೂ) ಆದರೆ ವಿಶೇಷವಾಗಿ ಯಾವ ನಿಶ್ಚಿತಾರ್ಥವನ್ನೂ ದ್ಯೋತಿಸದೆ ಅಕ್ಷರ ಭರ್ತಿಗೂ ಅದನ್ನು ಬಳಸಿದ್ದು ಹೆಚ್ಚಾಗಿ ಪುರಾಣ ಸಾಹಿತ್ಯದಲ್ಲಿ ಕಾಣಸುತ್ತದೆ. (ಹೀಗೆ ಬಳಸುವ ಇತರ ಅವ್ಯಯಗಳಲ್ಲಿ ''ವೈ'' = ನಿಜಕ್ಕೂ, ''ಹಿ'', ''ಹ'' = ಅಂತೆ ಇವನ್ನೂ ಉಲ್ಲೇಖಿಸಬೇಕು.) ಒಟ್ಟಿನಲ್ಲಿ **ಚ ವೈ ತು ಹಿ ಹ** ಇತ್ಯಾದಿ ಅವ್ಯಯಗಳು ಅರ್ಥವನ್ನು ವ್ಯತ್ಯಾಸಪಡಿಸುವುದಿಲ್ಲ. ಅವುಗಳಿಗೆ ಮಹತ್ವವಿಲ್ಲ. ಆದ್ದರಿಂದ ''**ಚ-ತು** ತಪ್ಪದೆ ಎಲ್ಲವನ್ನು ಹೇಳಿದ'' ಎಂದರೆ ಮುಖ್ಯ ಅಮುಖ್ಯ ಎಣಿಸದೆ ಇದ್ದಕ್ಕಿದ್ದಂತೆ ಹೇಳಿದನೆಂದು ಅರ್ಥ. ಸಂಸ್ಕೃತ **ಚ-ತು** ಎಂಬವು ಸಾಮಾನ್ಯರ ಬಾಯಲ್ಲಿ **ಚ-ಚು** ಮತ್ತು ಅನಂತರ **ಚಾ-ಚೂ** ಆಗಿರಬೇಕು ಮತ್ತು ಮೂಲ ಮರೆತುಹೋಗಿರಬೇಕು.

''**ಚರಖಾ** ಚಲಾಚಲಾ ಕೇ ಲೇಂಗೇ ಸ್ವರಾಜ್ಯ ಲೇಂಗೇ'' ಎಂದೋ ಚರಖಾದ ಸ್ಥಾನದಲ್ಲಿ **ತಕಲಿ** ಪದವನಿಟ್ಟೋ ಹಾಡುತ್ತ ನಮ್ಮ ಸ್ವರಾಜ್ಯ ಚಳವಳಿಯಲ್ಲಿ ಪ್ರಭಾತ ಫೇರಿ ತೆಗೆಯುತ್ತಿದ್ದುದುಂಟು. ಈ ''ಚರಕಾ'', ''ಚರಖಾ'' ಪದಗಳು ಮಾತ್ರ ಪಾರಸಿಕ ಭಾಷೆಯಿಂದ ತಂದವು. ಅವು ಸಂಸ್ಕೃತದ ''ಚಕ್ರ'' ಗ್ರೀಕಿನ kuklos ಇತ್ಯಾದಿ ಆರ್ಯಭಾಷಾ ಶಬ್ದಗಳ ಸಂಬಂಧಿಯಾಗಿವೆಯೆಂಬುದು ನಿಜವಾದರೂ ನೂಲು ತೆಗೆಯುವ ರಾಟೆಯೆಂಬರ್ತದಲ್ಲಿ ವಿದೇಶೀಯವೇ. ''ತಕಲಿ'' (ನೂಲು ತೆಗೆಯುವ ಇನ್ನೊಂದು ಸಾಧನ) ಇದಾದರೆ ಶುದ್ಧ ಭಾರತೀಯ ಪದ. **ತರ್ಕು** ಎಂಬ ಸಂಸ್ಕೃತ ಪದಕ್ಕೆ ನೂಲು ತೆಗೆಯುವ ಸಾಧನ – ಕನ್ನಡದಲ್ಲಿ **ಕದಿರು** ಎಂದರ್ಥ. ಇದು ಗೃಹ್ಯ

ಸೂತ್ರಗಳಷ್ಟು ಪುರಾತನ ಶಬ್ದ. ಬ್ರಾಹ್ಮಣರ ಜನಿವಾರಕ್ಕೆ ನೂಲನ್ನು ತೆಗೆಯುವುದಕ್ಕೆ ಇದನ್ನು ಉಪಯೋಗಿಸುತ್ತಿದ್ದುದನ್ನು ನೋಡಿದ್ದೇನೆ. (ಚತುರ್ವೇದಗಳನ್ನು ಪಾರಾಯಣ ಮಾಡುತ್ತ ತರ್ಕುವಿನಿಂದ ನೂಲು ತೆಗೆದು ಜನಿವಾರ ತಯಾರಿಸಿದರೆ ಅದರ ತೂಕ ಇಡೀ ಪೃಥ್ವಿಯ ತೂಕಕ್ಕಿಂತ ಹೆಚ್ಚಾಗುತ್ತದೆಂದು ಒಂದು ಕಥೆಯನ್ನು ಹೇಳುತ್ತಿದ್ದರು.) ಈ ತರ್ಕುವೇ ಹಿಂದಿಯ ''ತಕಲಿ''.

೧೨೬

**ಕಿಂಕಾಪು, ಕಿನಕಾಬು** ಮೊದಲಾದ ಹೆಸರಿನ ಜರಿ ಚಿತ್ತಾರದ ರೇಶ್ಮೆಯ ವಿಶಿಷ್ಟ ಬಟ್ಟೆ ನಮಗೆ ಸಾಕಷ್ಟು ಪರಿಚಿತ. ಬೇರೆ ಅನೇಕ ವಸ್ತುಗಳ ಹೆಸರುಗಳಂತೆ ಇದು ಕೂಡ ಪಾರಸೀಕ ಭಾಷೆಯಿಂದ ಸ್ವೀಕರಿಸಿದ್ದೆಂಬುದಕ್ಕೂ ಚಕಿತಗೊಳ್ಳಬೇಕಾಗಿಲ್ಲ. ಪಾರಸೀಕದಲ್ಲಿ ಅದರ ಮೂಲ ರೂಪ **ಕಮ್ ಖ್ವಾಬ್** ಅಥವಾ **ಕಮ್ ಖಾಬ್** ಎಂದು ಉರ್ದು ಕೋಶಗಳಲ್ಲಿ ಹೇಳಿದೆ. ಈ ಹೆಸರಿನ ಮೂಲ ಅರ್ಥದಲ್ಲೀಗ ತುಸು ಕೌತುಕವಿರುವುದು. ಕಮ್‌ಖಾಬ್ (ಖ್ವಾಬ್) ಎಂದರೆ ''ನಿದ್ದೆಗೇಡು'' (ಕಮ್= ಕಡಿಮೆ, ಖಾಬ್ = ನಿದ್ದೆ) ಯಾಕೆ? ಬಂಗಾರದ ಎಳೆಗಳಿಂದ ಹೂಬಳ್ಳಿಗಳನ್ನು ನೇಯ್ದ ಈ ಬಟ್ಟೆಯ ಬೆಲೆ ಹೆಚ್ಚು. ಇಂಥಾ ಬಟ್ಟೆ ಹಾಕಿಕೊಂಡು ಮಲಗಿದರೆ ನಿದ್ದೆ ಬರುವುದು ಕಠಕಷ್ಟ! ಹೀಗೆಂದು ಒಂದು ಉರ್ದು ಹಿಂದೀ ಕೋಶದಲ್ಲಿ ಕೊಟ್ಟ ವಿವರಣೆಯಿಂದ ನಾನು ನಿಜಕ್ಕೂ ಚಕಿತನಾದೆ. ಯಾವ ಭಾಷೆಯಲ್ಲಾದರೂ ಇಂಥ ಕಲ್ಪನೆಯಿಂದ ಕೂಡಿದ ಪದಗಳು ವಿರಳವೇ ಇರಬೇಕು.

ಭಾಷೆಗಳಲ್ಲಿ ಕಾಣಿಸುವ ಇನ್ನೊಂದು ವಿಶೇಷವೆಂದರೆ, ಆ ಭಾಷೆಗಳನ್ನಾಡುವ ಪ್ರದೇಶಕ್ಕೆ ಒಂದು ಹೊಸವಿದ್ಯೆ ಅಥವಾ ಉತ್ಪಾದಿತ ಪದಾರ್ಥ ಬಂದರೆ ಅದು ಬಂದ ದೇಶ ಅಥವಾ ಉತ್ಪಾದಕ ವ್ಯಕ್ತಿ ಅಥವಾ ಸಂಸ್ಥೆಯ ಹೆಸರು ಅದಕ್ಕೆ ಬಂದುಬಿಡುವುದು. ಹೀಗೆ ಅರಬರು ಭಾರತೀಯ ಗಣಿತ ಶಾಸ್ತ್ರವನ್ನು ಸ್ವೀಕರಿಸಿದಾಗ ಅದನ್ನು **ಹಿಂದ್‌ಸಾ** ಎಂದೇ ಕರೆದರು. ಮೊದಲು ಗ್ರೀಕರನ್ನು **ಯವನ** (ionians) ಎಂದು ಕರೆಯುತ್ತಿದ್ದ ನಾವು ಮುಂದೆ ಆ ಪದವನ್ನು ಮುಸಲ್ಮಾನರಾದಿಯಾಗಿ ಎಲ್ಲ ವಿದೇಶಿಯರಿಗೆ ಬಳಸಿದೆವು. ತೋಪುಗಳನ್ನು ಯುದ್ಧದಲ್ಲಿ ಬಳಸುವುದರಲ್ಲಿ ಭಾರತೀಯ ಸೈನ್ಯಗಳಿಗೆ ಸಲಹೆಗಾರರಾಗಿ ಬಂದ ಫ್ರೆಂಚರಿಗೆ ಪಾರಸೀಕ ಭಾಷೆಯಲ್ಲಿದ್ದ **ಫರಂಗಿ** ಪದವನ್ನು ತುಸು ವಿಕೃತಗೊಳಿಸಿ ತೋಪುಗಳಿಗೇ **ಫಿರಂಗಿ** ಎಂದೆವು. ಮುಂದೆ ಪಾಶ್ಚಾತ್ಯದೇಶಗಳ ಮೂಲಕ ಬಂದ ಹಲವು ಪದಾರ್ಥಗಳಿಗೆ ''ಫರಂಗಿ'' ಎಂಬ ಉಪಾಧಿ ಪಶ್ಚಿಮ ಕರಾವಳಿಯಲ್ಲಿ ವ್ಯಾಪಕವಾಯಿತು. ''ಫರಂಗಿ'' ಹಣ್ಣು, ''ಪರಂಗಿ'' ಮೆಣಸಿನಕಾಯಿ ಇತ್ಯಾದಿಗಳಲ್ಲದೆ ಮುಖ್ಯವಾಗಿ ಯುರೋಪಿಯನ್ನರ ಮೂಲಕ ಇಲ್ಲಿ ಹಬ್ಬಿದ ಸಿಫಿಲಿಸ್ ರೋಗಕ್ಕೆ ''ಪರಂಗಿ'' ರೋಗ, ''ಪರಂಗಿ'' ಹುಣ್ಣು ಇತ್ಯಾದಿ ಹೆಸರುಗಳು ಬಿದ್ದು ಆ ಮೂಲಕ ಬಿಳಿಯರ ಕೀರ್ತಿಯನ್ನು – ಅಪಕೀರ್ತಿಯನ್ನು – ಶಾಶ್ವತಗೊಳಿಸಿದವು. ತಮಿಳು ತೆಲುಗುಗಳಲ್ಲಿ ಕೂಡ ಈ ಪದ ಸ್ಥಾನ ಪಡೆದಿದೆ. ''ಫ್ರಂಕ್'' (ಫ್ರೆಂಚ್) ಎಂಬುದು ''ಫರಂಗ್'' ಆಗಿ ಹಿಂದಿಯಲ್ಲಿ ಸೇರಿ ಹಣ್ಣುಗಿಣ್ಣಗಲ್ಲದಿದ್ದರೂ ಸಿಫಿಲಿಸ್ ರೋಗಕ್ಕಂತೂ ಆ ಹೆಸರು (ಫರಂಗಿ) ಬಿದ್ದ ಆ ಬಡಪಾಯಿ ದೇಶವನ್ನು ಚಿರಸ್ಮರಣೀಯವಾಗಿ ಮಾಡಿತು.

ಕಳೆದ ಅರ್ಧಶತಮಾನದಲ್ಲಿ ನಮ್ಮ ಭಾಷೆಯಲ್ಲಿ ಬಳಕೆಗೆ ಬಂದ ಎರಡು ಶಬ್ದಗಳು ಯಾವುದೊಂದು ರಂಗದಲ್ಲಿ ಪ್ರವರ್ತಕರಾದವರ ಹೆಸರು ಶಾಶ್ವತವಾಗುವುದಕ್ಕೆ ಉದಾಹರಣೆಗಳಾಗಿವೆ. ಒಂದು **ಗಾಡ್ರೆಜ್**. ''ಗಾಡ್ರೆಜ್'' ಎಂಬುದು ಗುಜರಾತಿನ ಒಂದು ಊರು. ಪಾರ್ಸಿಗಳ ಒಂದು ಅಡ್ಡ ಹೆಸರು ಕೂಡ. ಆ ಹೆಸರಿನ ವಾಣಿಜ್ಯ ಉತ್ಪಾದಕರೊಬ್ಬರು ಹಲವಾರು ಔದ್ಯಮಿಕ ಸರಕುಗಳನ್ನು ತಯಾರಿಸಿ ತಮ್ಮ ಹೆಸರಿನಲ್ಲಿ ಪೇಟೆಗೆ ತಂದರು. ''ಗಾಡ್ರೆಜ್ ಸಾಬೂನು'' ಇತ್ಯಾದಿ ವಾಸ್ತವಿಕವಾಗಿ ಅವರು ಶುದ್ಧ ವನಸ್ಪತಿ ಮೂಲದ ವಸ್ತುಗಳನ್ನು ಬಳಸಿ ಹಿಂದೂ ಮಡಿವಂತರು ನಿರ್ಭಯವಾಗಿ ಉಪಯೋಗಿಸಬಹುದಾದ ಸಾಬೂನನ್ನು ತಯಾರಿಸುವುದರಲ್ಲಿ ಮೊದಲಿಗರಿರಬೇಕು. ಆದರೆ ಯಾಕೋ ಏನೋ ಆ ಸಾಬೂನು ಅವರ ಹೆಸರಲ್ಲಿ ಪ್ರಚಲಿತಕ್ಕೆ ಬಂದರೂ ''ಗಾಡ್ರೆಜ್'' ಎಂದರೇನೇ ಸ್ನಾನದ ಸಾಬೂನೆಂಬಷ್ಟಕ್ಕೆ ಅದು ಚಾಲ್ತಿಯಾಗಲಿಲ್ಲ. ಈಗ **ಗಾಡ್ರೆಜ್** ಎಂದೊಡನೆ ನಾವು ಅರ್ಥಮಾಡಿಕೊಳ್ಳುವುದು (ಗಾದ್ರೆಜ್ ಅಥವಾ ಗಾಡ್ರೆಜ್) **ಉಕ್ಕಿನ ಕಪಾಟು** ಎಂದು. ಉಕ್ಕಿನ ಕಪಾಟನ್ನು ತಯಾರಿಸುವುದರಲ್ಲಿ ಅವರು ಮೊದಲಿಗರಾಗಿದ್ದುದರಿಂದ ಅಂಥ ಕಪಾಟಿಗೆ ಅವರ ಹೆಸರೇ ಬಿದ್ದುಬಿಟ್ಟಿತು. ಯಾವ ಕಂಪನಿಯ ತಯಾರಿಕೆಯಾದರೂ ನಾವೀಗ ಅದನ್ನು ಗಾಡ್ರೆಜ್ ಎಂದೇ ಹೆಸರಿಸುತ್ತೇವೆ. ''ಸಿದ್ಧೇಶ್ವರ ಕಂಪನಿಯವರ ಗಾದ್ರೆಜ್'' (ಕಪಾಟು) ಎಂದು (ಅಸಂಗತವಾಗಿ) ಅನ್ನುವುದನ್ನು ನಾವು ಕೇಳುವುದುಂಟು. ಇನ್ನೊಂದು ಇಂಥ ಶಬ್ದ **ಡಾಲ್ಡಾ**. ನಮ್ಮ ದೇಶದಲ್ಲಿ ''ವನಸ್ಪತಿ ತುಪ್ಪ''ವನ್ನು ತಯಾರಿಸಿ ಜನಪ್ರಿಯಗೊಳಿಸಿದವರಲ್ಲಿ ಹಿಂದುಸ್ಥಾನ್ ಲಿವರ್ ಕಂಪನಿಯವರು ಮೊದಲಿಗರು. ಅವರು ತಮ್ಮ ಈ ಕೃತಕ ತುಪ್ಪಕ್ಕಿಟ್ಟ ಹೆಸರು ''ಡಾಲ್ಡಾ''. ಅದು ಅಂಕಿತನಾಮ. ಆದರೀಗ ಯಾವ ಕಂಪನಿಯವರು ವನಸ್ಪತಿ ತುಪ್ಪ ತಯಾರಿಸಿ ಬೇರೆ ಯಾವುದೇ ಅಂಕಿತ ನಾಮದಲ್ಲಿ ಪೇಟೆಗೆ ತಂದರೂ ಅದನ್ನು ಜನ ಕರೆಯುವುದು ''ಡಾಲ್ಡಾ'' ಎಂದೇ! ಇದು ವಿಶೇಷದ ಸಾಮಾನ್ಯೀಕರಣ. ಪ್ರವರ್ತಕರಿಗೆ ದೊರೆಯುವ ಸನ್ಮಾನ.

''**ತೀರ್ಥರೂಪ**ರಿಗೆ ಶಿರಸಾಷ್ಟಾಂಗ ನಮಸ್ಕಾರಗಳು'' ಎಂಬುದಾಗಿ ಹಿಂದೆ ಮಕ್ಕಳು ತಂದೆಗೆ ಬರೆಯುವ ಪತ್ರಗಳು ಪ್ರಾರಂಭವಾಗುತ್ತಿದ್ದವು. ಬೇರೆ ಹಿರಿಯರಿಗೆ ''**ತೀರ್ಥರೂಪ ಸಮಾನರಾದ**' ಎಂಬ ಒಕ್ಕಣೆ ಸಲ್ಲುತ್ತಿತ್ತು. (ತಾಯಂದಿರಿಗೆ **ಮಾತೃಶ್ರೀ** ಎಂಬ ಒಕ್ಕಣೆಯಿದ್ದು ಅದರ ಅರ್ಥ ಮೇಲ್ಪದರದಲ್ಲಿಯೇ ಸುವ್ಯಕ್ತವಾಗಿದೆ). ಹೀಗೆ ''ತೀರ್ಥರೂಪ'' ಎಂದರೆ ತಂದೆಯೆಂದಾಗುತ್ತದೆ. ನಮಗೆ ಪರಿಚಯವಿರುವ ಮಟ್ಟಿಗೆ **ತೀರ್ಥ** ಎಂದರೆ ದೇವತಾ ಪ್ರತಿಮೆಗಳನ್ನು ಮೀಯಿಸಿದ ನೀರು, ಅಥವಾ ಪವಿತ್ರವೆನಿಸಿದ ನದಿ, ಸರೋವರ ವೆ ಎಪಲಾದವು. ಹೀಗಿರುವಾಗ ತಂದೆ ತೀರ್ಥರೂಪ ಹೇಗಾದ?

**ತೀರ್ಥ** ಶಬ್ದ ಋಗ್ವೇದದಷ್ಟು ಹಳೆಯದು. ಮೂಲತಃ ''ತೃ-ತರಣೇ'' ಅಂದರೆ **ದಾಟುವುದು** ಎಂಬರ್ಥದ ಧಾತುವಿನಿಂದ ಹುಟ್ಟಿದ ಶಬ್ದ ಅದು. ಅದು ದಾರಿ ದಾಟುವುದಾಗಬಹುದು, ನದಿ ಅಥವಾ ಸಮುದ್ರವನ್ನು ದಾಟುವುದಾಗಿರಬಹುದು. ಹೀಗೆ ದಾಟಲು ಅನುಕೂಲವಾದ ಸ್ಥಳ, ವಿಶೇಷವಾಗಿ ನದಿಯ ಕಡವು ತೀರ್ಥವೆನಿಸುತ್ತಿತ್ತು. ಅದರ ಅರ್ಥ ವಿಸ್ತರಿಸಿ ನದಿ ಸರೋವರಗಳಿಗೆ ಇಳಿದು ಸ್ನಾನ ಮಾಡಬಹುದಾದ ಸ್ಥಳ, ಸೋಪಾನಗಳು, ಇವೆಲ್ಲ ತೀರ್ಥವೆನಿಸಿದವು. ಬೇರೆ ದೇಶಗಳಲ್ಲಿಯೂ ನದಿಗಳಿವೆ; ಕಡವುಗಳು, ಉದಾಹರಣೆಗೆ ಇಂಗ್ಲೀಷಿನ Fords ಇವೆ. ಆದರೆ ಅವೆಂದೂ

''ಪವಿತ್ರ''ವೆನಿಸಲಿಲ್ಲ. ನನಗನಿಸುವಂತೆ ನಮ್ಮ ದೇಶದಲ್ಲಿ ಆರ್ಯರ ಅಥವಾ ಅದಕ್ಕಿಂತ ಹಿಂದಿನ ಕಾಲದಿಂದಲೇ ಸ್ನಾನದ ಬಗ್ಗೆ ಒಂದು ತರಹದ ಹುಚ್ಚು (obsession) ಇದ್ದಿರಬೇಕು. ಸ್ನಾನಕ್ಕಿರುವ ಈ ಮಹತ್ವ ಧರ್ಮದಲ್ಲಿ ಸ್ಥಾನ ಪಡೆದು ಅದಕ್ಕೆ ಪಾವಿತ್ರ್ಯ ಬಂತು. ಸ್ನಾನಕ್ಕೆ ಅನುಕೂಲವಾದ ಸ್ಥಾನ ತೀರ್ಥವೆಂದಮೇಲೆ ತೀರ್ಥವೇ ಪವಿತ್ರವೆನಿಸಿತು. ಅದನ್ನೇ ತಿರುವು ಮುರುವು ಮಾಡಿದರೆ ಪವಿತ್ರವಾದದ್ದು ತೀರ್ಥವೆನಿಸುತ್ತದೆ. (ತೀರ್ಥ = ಪವಿತ್ರ, ಪವಿತ್ರ=ತೀರ್ಥ). ಹೀಗೆ ಗುರುಗಳು, ಸ್ವಾಮಿಗಳು ''ತೀರ್ಥಪಾದರು'' ಅವರ ಪಾದ ತೊಳೆದ ನೀರೂ ತೀರ್ಥವಾಯಿತು. ತಂದೆಯೇ ನಮ್ಮ ಪ್ರಥಮ ಗುರು. ಅವನು ''ತೀರ್ಥ'' (ಪವಿತ್ರ, ಗೌರವಾರ್ಹ) ರೂಪ ಅಥವಾ ''ತೀರ್ಥಸ್ವರೂಪ''ವೆನಿಸುವುದು ಸ್ವಾಭಾವಿಕ. ತಂದೆಗೆ ಸಮಾನರಾಗಿರುವವರು ''ತೀರ್ಥರೂಪ ಸಮಾನರು.''

ಈ ರೀತಿ ನಮ್ಮ ದೇಶದಲ್ಲಿ ಎಲ್ಲ ಕಡೆ ಈ ಪದ ಪ್ರಚಲಿತವಾಗಿರಬೇಕಿತ್ತು. ಆದರೆ ನಾನು ಶೋಧಿಸಿದ ಮಟ್ಟಿಗೆ ಇದು ಹಿಂದಿ, ಬಂಗಾಲಿ ಮೊದಲಾದ ಉತ್ತರದ ಭಾಷೆಗಳಲ್ಲಾಗಲಿ, ಸಂಸ್ಕೃತದಲ್ಲೇ ಆಗಲಿ ತಂದೆಗೆ ಅನ್ವಯಿಸುವಂತೆ ಕಾಣಲಿಲ್ಲ. ''ಆರ್ಯ'' ಭಾಷೆಗಳ ಪೈಕಿ ಮರಾಠಿಯಲ್ಲಿ ಮಾತ್ರ ತೀರ್ಥರೂಪ ಅಥವಾ ಸ್ವರೂಪ ತಂದೆಗೆ ಸಲ್ಲುತ್ತದೆ.

ಶಂಕರಾಚಾರ್ಯರು ಸಂನ್ಯಾಸಿಗಳನ್ನು ಬೇರೆ ಬೇರೆ ಶಾಖೆಗಳಾಗಿ ವಿಂಗಡಿಸಿ ಒಂದೊಂದಕ್ಕೂ ಒಂದೊಂದು ಉಪಾಧಿಯನ್ನು ಕೊಟ್ಟರೆಂದು ಇತಿಹಾಸ ಹೇಳುತ್ತದೆ. **ಶಕ್ತಿ, ಭಾರತಿ** ಇತ್ಯಾದಿ. ಅಂಥ ಉಪಾಧಿಗಳಲ್ಲಿ **ತೀರ್ಥ** ಎನ್ನುವುದೂ ಒಂದು. ಉದಾ. ''ಭಾರತೀ ಕೃಷ್ಣತೀರ್ಥ'', ''ಆನಂದ ತೀರ್ಥ'' ಇತ್ಯಾದಿ (ವೈಷ್ಣವ ಸಂನ್ಯಾಸಿಗಳು ಅಧಿಕತರವಾಗಿ **ತೀರ್ಥ** ಎಂಬ ಉಪಾಧಿಯನ್ನು ಧರಿಸುತ್ತಾರೆ).

ಸಂನ್ಯಾಸಿಗಳಿಗೆ ''ತೀರ್ಥ'' ಎಂಬ ಉಪಾಧಿ ಬರಲು ಬೇರೊಂದು ಕಾರಣ ಹೇಳಬಹುದು. ''ತೀರ್ಥ'' ಎಂದರೆ ದಾಟುವಿಕೆ ಎಂದೆನಲ್ಲವೆ? ಸಂಸಾರ ಸಾಗರವನ್ನು ದಾಟಿದವರು ತೀರ್ಥರಲ್ಲದೆ ಮತ್ತೇನು? ಸಂನ್ಯಾಸವೆಂದರೆ ಸಂಸಾರವನ್ನು ದಾಟುವ ಉಪಾಯ ತಾನೆ?

ಇದೇ ತರ್ಕದಿಂದ ಒಂದು ವಿದ್ಯೆಯಲ್ಲಿ ಪೂರ್ಣತೆ ಪಡೆದವನು ತೀರ್ಥನಾಗಬಲ್ಲ. ''ಪಾರಂಗತ'' ಆಚೆ ದಾಟಿದವ=ತೀರ್ಥ. ಗುರುವಿನ ಹತ್ತಿರ ಒಟ್ಟಾಗಿ ಶಾಸ್ತ್ರಾಭ್ಯಾಸ ಮಾಡಿ ಪಾರಂಗತರಾದ ಸಹಪಾಠಿಗಳನ್ನು **ಸತೀರ್ಥ**ರು ಎನ್ನುವುದು ಈ ತರ್ಕದಿಂದ.

೧೨೭

ಜಗತ್ತಿನ ಅತ್ಯಂತ ಜನಪ್ರಿಯ ಹೂ ಯಾವುದೆಂದು ಕೇಳಿದರೆ **ಗುಲಾಬಿ** ಎಂದು ಕಣ್ಮುಚ್ಚಿ ಹೇಳಿಬಿಡಬಹುದು. ಗುಲಾಬಿಯೆಂಬ ಹೆಸರನ್ನು ಬಹುತೇಕ ಭಾರತೀಯ ಭಾಷೆಗಳು ಸ್ವೀಕರಿಸಿವೆ. ಬಂಗಾಲಿಯವರು ಒಕಾರಪ್ರಧಾನವಾದ ಉಚ್ಚಾರವುಳ್ಳವರಾದ್ದರಿಂದ ಅದರ ಹೆಸರನ್ನು **ಗೋಲಾಪ** ಎಂದು ಬದಲಿಸಿಕೊಂಡಿದ್ದಾರೆ, ಅಷ್ಟೇ. ಗುಲಾಬಿಗೆ ಪ್ರಸಿದ್ಧವಾದ ದೇಶ ಇರಾಣ(ಪರ್ಶಿಯ). ಆದ್ದರಿಂದ ಅದರ ಹೆಸರೂ ನಮಗೆ ಪಾರಸೀಕ ಭಾಷೆಯಿಂದ ಬಂದದ್ದು ಆಶ್ಚರ್ಯವಲ್ಲ. 'ಗುಲಾಬಿ'ಯ ವ್ಯುತ್ಪತ್ತಿ ಬಹಳ ನೇರ: **ಗುಲ್** = ಹೂ, **ಆಬ್** = ನೀರು, ಅರ್ಥಾತ್ ನೀರು ಹೂ. ಆದರೆ ಇದು ಕಮಲದಂತೆ

ನೀರಲ್ಲಿ ಹುಟ್ಟುವ ಬಳ್ಳಿಯ ಹೂವಲ್ಲ. ''ಅಬ್'' ಶಬ್ದಕ್ಕೆ ಕಾಂತಿ, ಸೌಂದರ್ಯ ಮೊದಲಾದ ಅರ್ಥಗಳೂ (ನಮ್ಮಲ್ಲಿ ''ನೀರು'' ಶಬ್ದಕ್ಕೆ ಕಾಂತಿ, ಕಳೆ, ಇತ್ಯಾದಿ ಅರ್ಥಗಳು ಬಂದಿಲ್ಲವೆ? ಹಾಗೆ. ಉದಾ-ಅವನ ಮುಖದಲ್ಲಿ ನೀರಿಲ್ಲ) ಉಂಟು. ಕಾಂತಿಯ ಹೂವೆಂದು ಅರ್ಥೈಸಬಹುದು. ಪಾರಸೀಕ ಭಾಷೆಯಲ್ಲಿ ''ಗುಲಾಬ್'' ಎಂಬ ರೂಪವೇ ಗುಲಾಬಿ ಪೊದೆಗೂ, ಹೂವಿಗೂ ಸಲ್ಲುತ್ತದೆ. ''ಗುಲಾಬಿ'' ಎಂದರೆ ಅದಕ್ಕೆ ಸಂಬಂಧಪಟ್ಟ, ಅದರ ಬಣ್ಣವುಳ್ಳ ಇತ್ಯಾದಿ ಅರ್ಥ. ''ಗುಲಾಬ್'' ಪದಕ್ಕೆ ಗುಲಾಬಿ ಪನ್ನೀರೆಂದೂ ಅರ್ಥವಿದೆ. ಗುಲಾಬಿಗೆ ದಕ್ಷಿಣದಲ್ಲಿ ಕನ್ನಡದಲ್ಲಂತೂ ನಡೆಯುವ ಇನ್ನೊಂದು ಹೆಸರು **ರೋಜಾ**. ಇದು ಇಂಗ್ಲೀಷ್ Roseನ ಸಂಬಂಧಿ. ಸಂಬಂಧಿ – ಎಂದೆ. ಯಾಕೆಂದರೆ ಇಂಗ್ಲೀಷಿನ ರೋಸ್ ಬದಲಿಗೆ ''ರೋಜಾ'' ಎಂಬ ರೂಪ ಕನ್ನಡದಲ್ಲಿ ಪ್ರಚಲಿತವಿದೆ. ಬೇರೆ ಕೆಲ ಶಬ್ದಗಳಂತೆ **ರೋಜಾ ಪೋರ್ಚುಗೀಸ್** ಮೂಲಕ ಬಂದಿರಬಹುದು. ಅಲ್ಲಿ Rosa ಎಂಬ ರೂಪವೇ ಇದೆ. ಇಂಗ್ಲೀಷಿನ Rose ಇರಲಿ, ಪೋರ್ಚುಗೀಸ್ Rosa ಇರಲಿ ಅದು ಬಂದದ್ದು ಲ್ಯಾಟಿನ್ Rosaದಿಂದ. ಲ್ಯಾಟಿನ್ನಿಗೆ ಗ್ರೀಕ್ Rhodon (ಗುಲಾಬಿ)ನಿಂದ ಬಂದಿರಬೇಕು ಎಂದು ಶಬ್ದಶಾಸ್ತ್ರಿಗಳ ತರ್ಕ.

ಗುಲಾಬಿ ಹೂ ಕೆಂಪು, ನಸುಗೆಂಪು, ಹಳದಿ, ಬಿಳಿ ಮತ್ತು ಈಗ ಕಸಿಯಿಂದ ಅನೇಕ ಮಿಶ್ರವರ್ಣಗಳಲ್ಲಿ ದೊರೆಯುತ್ತಿದ್ದರೂ ಪ್ರಾಚೀನ ಕಾಲದಲ್ಲಿ ಗುಲಾಬಿ ನಸುಗೆಂಪು (ಪಿಂಕ್ – pink) ವರ್ಣದ್ದೇ ಇರಬೇಕೆಂಬುದಕ್ಕೆ ''ಗುಲಾಬಿ'' ಬಣ್ಣ ಎಂದರೆ ನಸುಗೆಂಪು ಎಂಬುದೇ ಬೇರೆ ಬೇರೆ ಭಾಷೆಗಳಲ್ಲಿ ಪ್ರಸಿದ್ಧವಾಗಿರುವುದು ಸಾಕ್ಷಿ. ಪಾರಸೀಕ, ಉರ್ದು ಭಾಷೆಗಳಲ್ಲಿ ಹೇಗೋ ಹಾಗೆ ಪೋರ್ಚುಗೀಸಿನಲ್ಲಿ, ಫ್ರೆಂಚಿನಲ್ಲಿ, ಇಂಗ್ಲೀಷಿನಲ್ಲಿ, (Rosada, rose) ನಸುಗೆಂಪು ಬಣ್ಣವನ್ನೇ, ಗುಲಾಬಿ ಬಣ್ಣ ಸೂಚಿಸುತ್ತದೆ. ನಮ್ಮ ಜವಾಹರಲಾಲರಿಗೆ ಪ್ರಿಯವಾದ ಕಡುಗೆಂಪು ಗುಲಾಬಿಯನ್ನು ದ್ಯೋತಿಸಬೇಕಾದರೆ ಕೆಂಪು ಗುಲಾಬಿ (Red Rose) ಎಂದು ಕುರಿತಾಗಿ ಹೇಳಬೇಕಾಗುತ್ತದೆ.

ಪಾರಸೀಕ ಭಾಷೆಯ **ಗುಲ್** (ಪುಷ್ಪ)ದಿಂದಾರಂಭವಾಗುವ ವನಸ್ಪತಿಗಳಲ್ಲಿ ನಮಗೆ ತಟ್ಟನೆ ನೆನಪಿಗೆ ಬರುವ ಇನ್ನೊಂದು ಬಗೆಯೆಂದರೆ ರಸ್ತೆಗಳ ಅಂಚುಗಳಲ್ಲಿ ಎಲೆಗಳನ್ನೆಲ್ಲ ಉದುರಿಸಿಕೊಂಡು ಬರೇ ಕೆಂಪು ಹೂಗಳ ಮಯವಾಗಿ ಬೇಸಗೆಯಲ್ಲಿ ಮೆರೆಯುವ **ಗುಲ್-ಮೊಹರ್** ಮರಗಳು. **ಮೊಹರ್** ಎಂದರೆ ಮುದ್ರೆ. ಬಂಗಾರದ ನಾಣ್ಯ – ''ಮಿಶ್ರಿ''. ಒಪ್ಪ ಹಾಕಿದ ಬಂಗಾರದ ನಾಣ್ಯಗಳಂತೆ ಇದರ ಹೂಗಳು ಶೋಭಿಸುವುದರಿಂದ ಈ ಅನ್ವರ್ಥನಾಮ. ಇಂಗ್ಲೀಷಿನಲ್ಲಿ ''ಮೇಫ್ಲವರ್'' (ವೈಶಾಖ ಪುಷ್ಪ) ಎಂದು ಕರೆಯುವ ಈ ಮರಕ್ಕೆ ಈ ದೇಶದಲ್ಲಿ ಈ ಉರ್ದು ಹೆಸರೇ ಹೆಚ್ಚು ಜನಪ್ರಿಯವಾಗಿದೆ.

ನಮ್ಮ ಚಿಕ್ಕಂದಿನಲ್ಲಿ ತುಂಬಾ ಜನಪ್ರಿಯವಾದೊಂದು ನಾಟಕದ ಹೆಸರು **ಗುಲೇಬಕಾವಲಿ** ಎಂದಿತ್ತು. ಮಧ್ಯಯುಗದ ತರಹದ ರೋಮಾನ್ಸ್ ಕಥೆಯನ್ನಾಧರಿಸಿದ ಈ ನಾಟಕದ ನಾಯಿಕೆಯ ಹೆಸರು ''ಗುಲೇಬಕಾವಲಿ'' ಎಂದು ನನ್ನ ನೆನಪು. ಹಿಂದಿಯಲ್ಲಿ, ಉರ್ದುವಿನ **ಗುಲ್-ಬಕಾವಲಿ** ಎಂದು ಕರೆಯುವ ಒಂದು ಹೂವಿನ ಹೆಸರು ಇದು. ಅರಸಿನ ಜಾತಿಯ ಗಿಡದಲ್ಲಿ ಬಿಡುವ ತುಂಬಾ ಪರಿಮಳವುಳ್ಳ ಬಿಳಿ ಹೂವನ್ನು ''ಸುಗಂಧರಾಜ'' ಅಥವಾ ಕರಾವಳಿಯಲ್ಲಿ ''ಸುಳಿ'' ಎನ್ನುತ್ತಾರೆ. ವಿಶೇಷವೆಂದರೆ ಹಿಂದಿ ಮತ್ತು ಉರ್ದುಕೋಶಗಳು ಕೆಲವಲ್ಲಿ ''ಗುಲ್'' ಪದ ಪಾರಸೀಕ ಮತ್ತು ''ಬಕಾವಲಿ'' ಸಂಸ್ಕೃತ

ಎಂದಿದ್ದರೂ ಸಂಸ್ಕೃತದ ಕೋಶಗಳಲ್ಲಿ ''ಬಕಾವಲಿ'' ಕಾಣಿಸುವುದಿಲ್ಲ. ಏನೇ ಇರಲಿ, ಒಂದು ಭಾರತೀಯ ಹೂ ಪಾರಸೀಕ ಭಾಷೆಯೊಡನೆ ಮೇಳೈಸಿರುವುದು ಗಮನಾರ್ಹವಾದದ್ದು.

ಅಂದ ಹಾಗೆ ನಮ್ಮ ''ಕಲಬುರಗಿ'' ಪಟ್ಟಣಕ್ಕೆ ನಿಜಾಮ ರಾಜ್ಯದಲ್ಲಿದ್ದಾಗ ನಿಜಾಮರು ತಮ್ಮ ಪಾರಸೀಕ ಉರ್ದು ರೀತಿಯಲ್ಲಿ **ಗುಲ್ಬರ್ಗಾ** ಎಂದು ಹೆಸರಿಟ್ಟಿದ್ದರಲ್ಲ, ಆ ಹೆಸರಿನ ಅರ್ಥ ಗುಲ್=ಗುಲಾಬಿ+ಬರ್ಗ್=ಎಲೆ ಎಂದು. ಮೂಲತಃ ಕಲ್ಲಿಗೆ ಬಹುಶಃ ಸಂಬಂಧಿಸಿದ ಸ್ಥಳ ನಾಮದ ಈ ಬದಲಾವಣೆ ದಖ್ಖನಿ ಉರ್ದುವಾಲರ ನವಿರಾದ ಅಭಿರುಚಿಯನ್ನು ತೋರಿಸುವುದಿಲ್ಲವೆ ?

ವಿದೇಶಗಳಲ್ಲಿ ಗುಲಾಬಿಗೆಷ್ಟು ಜನಪ್ರಿಯತೆಯೋ ಅಷ್ಟೇ ಮತ್ತು ಅದಕ್ಕೆ ಮಿಗಿಲಾದ ಜನಪ್ರಿಯತೆಯೊಡನೆ ಹಿಂದೂ ಬೌದ್ಧ ಧರ್ಮಗಳಲ್ಲಿ ಹಿರಿಮೆ ಮತ್ತು ಗಹನ ಸಾಂಕೇತಿಕತೆಯನ್ನು ಪಡೆದ ಭಾರತೀಯ ಹೂ **ಕಮಲ**. ಈ ಹೂವಿಗಿರುವ ಹೆಸರುಗಳ ಸರಮಾಲೆಯೇ ಅದರ ಜನಪ್ರಿಯತೆಗೆ ಸಾಕ್ಷಿ. ಆದರೆ ''ಕಮಲ'' ಶಬ್ದದ ಅರ್ಥವೇನು ? ನಮ್ಮ ಪಂಡಿತರು ತಮ್ಮ ಸದಾಸಿದ್ಧವಾದ ಬುದ್ಧಿಯನ್ನು ಬಳಸಿ ''ಕಂ=ನೀರನ್ನು, ಅಲಂಕರೋತಿ=ಚಂದಗಾಣಿಸುತ್ತದೆ. ಆದ್ದರಿಂದ ಅದು ಕಮಲ'' ಎಂದಾರು. ಆದರೆ ವಸ್ತುಗಳ ಹೆಸರುಗಳು ಹೀಗೆ ಕಲ್ಪನಾ ವಿಲಾಸದಿಂದ ಹುಟ್ಟುವುದು ಅಪರೂಪ. ವೈದಿಕ ಸಾಹಿತ್ಯದಲ್ಲಿ ಹೂವಿಗೆ ಹೆಸರಾಗಿ ಕಮಲ ಕಾಣಿಸುವುದಿಲ್ಲವಾದರೂ ತೈತ್ತಿರೀಯ ಸಂಹಿತೆಯಲ್ಲಿ ನಸುಗೆಂಪು, ಅರ್ಥಾತ್ ಗುಲಾಬಿ ಬಣ್ಣಕ್ಕೆ ಕಮಲ ಎಂಬ ಅಭಿಧಾನ ಸಿಕ್ಕುತ್ತದೆ. ಕಮಲ ಎಂದೊಡನೆ ನಮಗೀಗ ಬಿಳಿಯ ತಾವರೆಯೇ ಮೊದಲು ಹೊಳೆಯುವುದಾದರೂ ತೈತ್ತಿರೀಯದ ಮೇಲಿನ ಉದಾಹರಣೆಯಿಂದ ನಸುಗೆಂಪು ತಾವರೆಯೇ ಕಮಲ ಎಂದು ವ್ಯಂಜಿತವಾಗುತ್ತದೆ. ತಾವರೆಯೆಂಬ ಬಹುಶಃ ದ್ರಾವಿಡ ಪದಕೂಡ (ಸಂಸ್ಕೃತ ''ತಾಮರಸ'') ತಾಮ್ರವರ್ಣವನ್ನು ಸೂಚಿಸುತ್ತದೆ. ಬ್ರಹ್ಮನ ಜನ್ಮಸ್ಥಾನ, ಸಕಲ ಸೃಷ್ಟಿಯ ಅಧಿಷ್ಠಾನ, ಲಕ್ಷ್ಮಿಯ ಆವಾಸಸ್ಥಾನ ಎಂಬೆಲ್ಲ ಸಂಕೇತಗಳು ಲೈಂಗಿಕ ಸಂಕೇತಗಳಿದ್ದು ಅವೂ ಕೆಂಬಣ್ಣವನ್ನು ಸಮರ್ಥಿಸುತ್ತವೆಯೇನೋ. ತಾವರೆಗಿರುವ ಹೆಸರುಗಳಲ್ಲಿ **ಪುಂಡ್ರ, ಪುಂಡರೀಕ** ಎಂಬವು ಬಿಳಿದಾವರೆಗೆ ಸಲ್ಲುತ್ತದೆ. ''ಪುಂಡ್ರ'' ಎಂಬುದು ಬಿಳಿಯ ಗುರುತು. (ಶೈವರ ''ತ್ರಿಪುಂಡ್ರ'', ವೈಷ್ಣವರ ''ಊರ್ಧ್ವಪುಂಡ್ರ'' ಎರಡೂ ಬಿಳಿಯ ಧಾರ್ಮಿಕ ಕುರುಹುಗಳಲ್ಲವೆ ?) ಕೋಶಗಳೂ ಪುಂಡರೀಕರವೆಂದರೆ ಬಿಳಿದಾವರೆಯೆಂದೇ ಹೇಳುತ್ತವೆ.

ಕಮಲ ಧಾರ್ಮಿಕ ಮಹತ್ವದ ಹೂವಾಗಿರುವುದು ಭಾರತೀಯರಿಗೆ ಮಾತ್ರವಲ್ಲ. ಇಜಿಪ್ತಿನವರಿಗೂ ಧಾರ್ಮಿಕ ಸಂಕೇತವಾಗಿದ್ದಂತಿತ್ತು. ಇಂಗ್ಲೀಷಿನ Lotus ಗ್ರೀಕ್ ಮೂಲದ್ದಾದರೂ ಆ ಪದಕ್ಕೆ ಆರ್ಯ ಭಾಷೆಗಳಲ್ಲಿ ಜ್ಞಾತಿಗಳಿಲ್ಲ. ಅದು ಸಿಮೆಟಿಕ್ (ಹಿಬ್ರು, ಅರಬ್ಬಿ ಇತ್ಯಾದಿ) ಮೂಲದ್ದೆಂದು ಕೋಶಗಳು ಹೇಳುತ್ತವೆ. ಹೀಗೆ ತಾವರೆಯ ಹಿರಿಮೆಯ ಮೂಲ ಮಧ್ಯಪೂರ್ವಕ್ಕೆ ದಾಟುತ್ತದೆ.

**ಹನೀಮೂನ್** ಪದ ಈಗ ಅನಕ್ಷರಸ್ಥರಿಗೂ ಪರಿಚಿತವಾಗುತ್ತಿದೆ. ಮದುವೆಯಾದ ಮೊದಲ ವಾರಗಳಲ್ಲಿ ಹೊಸ ದಂಪತಿಗಳು ಸಂತೋಷವಾಗಿ ಒಟ್ಟಿಗೆ ಸಂಚಾರ ಹೋಗುವುದು ಹನೀಮೂನ್. ಇದನ್ನು ಶಬ್ದಶಃ ಭಾಷಾಂತರಿಸಿ ನಮ್ಮಲ್ಲಿ **ಮಧುಚಂದ್ರ** ಎಂದು ಬಳಸುವುದುಂಟು. ''ಹನೀಮೂನ್'' ಹಿಂದೆ **ಹನೀಮಂತ್** (Honey month) ಎಂಬ

ರೂಪದಲ್ಲಿತ್ತು. ಅಂದರೆ ''ಸವಿಮಾಸ'' ಅಥವಾ ಸಂಸ್ಕೃತ ಬೇಕಾಗಿದ್ದರೆ, ''ಮಧುಮಾಸ'' (ಜೇನುತಿಂಗಳು). ಇವೆಲ್ಲ ರಸಭರಿತವಾದ ಸಂಗತಿಗಳಾಗಿದ್ದರೂ ''ಹನೀಮೂನ್'' ಎಂಬುದು ರಸಿಕ ದಂಪತಿಗಳ ಜೇನು ಸುರಿಸುವ, ಸವಿಯನ್ನು ದಿನೇ ದಿನೇ ವರ್ಧಿಸುವ ಅನುಭವವನ್ನು ವ್ಯಕ್ತಪಡಿಸದೆ, ಮೆಲ್ಲ ಮೆಲ್ಲನೆ ರಸ ಕಳೆದುಕೊಳ್ಳುವ ಬಾಳನ್ನು ಸೂಚಿಸುತ್ತಿತ್ತೆಂದು ಹೊಸ ಆಕ್ಸ್‌ಫರ್ಡ್ ನಿಘಂಟು ಹೇಳುತ್ತಿರುವುದು ರಸಭಂಗ ಮಾಡುತ್ತದೆ. ಅದು ಬಹುಶಃ ಅಪ್ರಿಯ ಸತ್ಯವನ್ನು ಹೇಳುತ್ತದೆ.

**ಖಾಕಿ** ಪೋಲಿಸರ ದಿರಿಸಾಗಿ ಭಯ ವೈರಗಳನ್ನೂ, ಮಿಲಿಟರಿಯವರ ವೇಷವಾಗಿ ಪ್ರೀತಿಯನ್ನೂ ಏಕಕಾಲದಲ್ಲಿ ಉಂಟು ಮಾಡುವ ಬಣ್ಣವಾಗಿದೆ. ಧೂಳಿನ ಮಂಕು ಕಂದು ಅಥವಾ ಕಡು ಹಸುರಿನ ಬಣ್ಣಗಳಲ್ಲಿ ''ಖಾಕಿ'' ಬಳಕೆಗೆ ಬಂದಿದೆ. ಈ ಶಬ್ದ ಮಾತ್ರ ಇಂಗ್ಲೀಷಿನದಲ್ಲ. ಉರ್ದು ಮೂಲಕ ಪಾಶ್ಚಾತ್ಯರು ತೆಗೆದುಕೊಂಡ ಪಾರಸೀಕ ಪದ ಅದು. ಪಾರಸೀಕದಲ್ಲಿ ಅದಕ್ಕೆ ಮಣ್ಣಿನ ಬಣ್ಣ ಎಂದರ್ಥ. **ಖಾಕ್** ಎಂದರೆ ಧೂಳು. ಆದರೆ ಬಿಳಿಯರು ಬರುವ ಪೂರ್ವದ ಏಶಿಯಾದಲ್ಲಿ ಖಾಕಿ ಉಡುಪು ಸೈನ್ಯ ಅಥವಾ ಪೋಲಿಸ್ ದಳದವರಿಗಿರಲಿಲ್ಲ.

೧೨೮

''ಕಿತ್ತಳೆ'' ಎಂದು ನಾವು ಕರೆಯುವ ಹಣ್ಣು **ನಾರಂಗ, ನಾರಂಗಿ** ಎಂಬ ಇನ್ನೊಂದು ಹೆಸರಿನಿಂದ ಪ್ರಸಿದ್ಧವಾಗಿರುವುದು ಎಲ್ಲರಿಗೂ ಗೊತ್ತು. ಸಾಮಾನ್ಯ ತಿಳಿವಳಿಕೆಯ ಪ್ರಕಾರ ಇದು ಉರ್ದುವಿನಿಂದ ಬಂದದ್ದು. ನಾರಂಗ ಎಂದು ಕಿತ್ತಳೆಗೆ ಪಾರಸೀಕ ಭಾಷೆಯಲ್ಲಿ ಹೆಸರಿರುವುದು ನಿಜ. ಆದರೆ ಅದು ಆ ಭಾಷೆಯದೇ ಮೀಸಲು ಹೆಸರಲ್ಲ. ಯಾಕೆಂದರೆ ಸಂಸ್ಕೃತದಲ್ಲಿ, ಪ್ರಸಿದ್ಧ ಪ್ರಾಚೀನ ಶಸ್ತ್ರವೈದ್ಯನಾದ ಸುಶ್ರುತನ ಸಂಹಿತೆಯಲ್ಲಿ ವೈದ್ಯಕೀಯ ದೃಷ್ಟಿಯಿಂದ ಈ ಹಣ್ಣಿಗೇ ಅದೇ ಹೆಸರು ಬಂದಿದೆ. ನಾರಂಗದ ಬಣ್ಣ ಮತ್ತು ರುಚಿಯನ್ನು ಕುರಿತು ಸಾರ್ವತ್ರಿಕ ತಿಳಿವಳಿಕೆ ಭಾರತದಲ್ಲಿತ್ತೆಂಬುದಕ್ಕೆ ಪಂಪನಷ್ಟು ಹಳೇ ಕವಿ ಇವೆರಡನ್ನೂ (ಬಣ್ಣ ಮತ್ತು ಹಣ್ಣು) ಉಲ್ಲೇಖಿಸುವುದು ಪ್ರಮಾಣವಾಗಿದೆ. ಆದ್ದರಿಂದ ಈ ಹೆಸರಿನ ಮೂಲದ ಪ್ರಶ್ನೆ ಸರಾಗವಲ್ಲ. ಆದರೆ ಕಿತ್ತಳೆ (Citrus) ಜಾತಿಗೆ ಸೇರಿದ ಒಂದು ಹಣ್ಣಿನ ಮೂಲ ಸ್ಥಾನವಂತೂ ಚೀನ ಮತ್ತು ಆಗ್ನೇಯೇಶಿಯ ಎಂದು ಸಸ್ಯಶಾಸ್ತ್ರಿಗಳ ಮತವಾಗಿರುವುದರಿಂದ ಈ ಹೆಸರು ಕೂಡ ಆಗ್ನೇಯೇಶಿಯದ ಯಾವೊಂದು ಪ್ರಾಚೀನ ಭಾಷೆಯದಿರಬಹುದೆಂದು ತರ್ಕಿಸಲು ಆಸ್ಪದವಿದೆ. ಒಂದು ಸಂಗತಿ ವಿಚಾರಣೀಯವಾಗಿದೆ. ಅದೆಂದರೆ ಸಂಸ್ಕೃತದಲ್ಲಿ ''ನಾರಂಗ'' ಪದ, ''ನಾಗ + ರಂಗ''ದ ಸಮಾಹಾರ ರೂಪವೆಂದು ಶಬ್ದಶಾಸ್ತ್ರಿಗಳು ಹೇಳಿದ್ದಾರೆ. ''ನಾಗ'' ಶಬ್ದಕ್ಕೆ ಸಂಸ್ಕೃತದಲ್ಲಿ ಹಲವಾರು ಅರ್ಥಗಳಿದ್ದು ಅವುಗಳಲ್ಲಿ ಕೆಂಪು, ಕೇಸರಿ, ಸಿಂಧೂರ (ಉದಾ-ನಾಗಕೇಶರ) ಬಣ್ಣಗಳೆಂಬರ್ಥವೂ ಸೇರಿದೆ. ''ರಂಗ'' ಎಂದರೆ ಬಣ್ಣ ಎಂಬುದು ಸರ್ವವಿದಿತ. ಹೀಗೆ ನಸು ಹಳದಿ ಮಿಶ್ರಿತ ಕೆಂಪು ಬಣ್ಣದ ಹಣ್ಣು ಎಂಬ ವ್ಯುತ್ಪತ್ತಿ ಸುಸಂಗತವಾಗುತ್ತದೆ. ರಂಗ ಪದ ಸಂಸ್ಕೃತಕ್ಕೂ ಪಾರಸೀಕಕ್ಕೂ ಸಮಾನವೆಂಬುದನ್ನೂ ಸ್ಮರಿಸಬಹುದು.

ಈ ಹಣ್ಣಿನ ಹೆಸರಿನ ಮೂಲದ ಬಗ್ಗೆ ಇರುವ ಸಂದೇಹ ಹೇಗೇ ಇರಲಿ, ಈ ಹೆಸರಿನ ವಿಶ್ವವ್ಯಾಪ್ತಿ ಗಮನಾರ್ಹವಾದದ್ದು. ಇಂಗ್ಲೀಷಿನಲ್ಲಿ ಅದಕ್ಕೆ Orange ಎಂಬ ಹೆಸರಿದೆ ತಾನೆ.

ಈ ಹೆಸರು ಕೂಡ ''ನಾರಂಗ'' ಪದದ ಪ್ರಥಮ ನಕಾರ ಲೋಪವಾಗಿ ರೂಪುಗೊಂಡದ್ದೇ. ಯುರೋಪಿನ ಅನೇಕ ಭಾಷೆಗಳಲ್ಲಿ (ಅರ್ವಾಚೀನ ಲ್ಯಾಟಿನ್ arangia, aurantia, naraneum, ಇಟಾಲಿಯನ್ araneia, ಸ್ಪಾನಿಷ್ naranja ಪೋರ್ಚುಗೀಸ್ larmja) ಇದೇ ಪದ ನಸು ಬದಲಾವಣೆಯೊಡನೆ ಜನಜನಿತವಾಗಿದೆ. ಇವೆಲ್ಲಕ್ಕೂ ಆದಿಮೂಲ ಪಾರಸೀಕ ಭಾಷೆಯ ''ನಾರಂಗ'' ಪದವೇ ಎಂದು ಸಿದ್ಧವಾಗಿದೆ. ನೇರವಾಗಿ ಅದು ಪಾರಸೀಕದಿಂದ ಸ್ವೀಕೃತವಾಗಿರದೆ ಅರಬ್ಬಿ ಮೂಲಕ ದಾಟಿ ಹೋಗಿದ್ದು, ಅರಬ್ಬಿಯಲ್ಲಿ ಅದು **ನಾರಂಜ** ಆಗಿದೆ, ಮೂಲ ಪಾರಸೀಕವೇ.

ಕಿತ್ತಳೆಯಂತೆ ಹಿಂದೂ ಸಾಗರದಿಂದ ಅಟ್ಲಾಂಟಿಕ್‌ವರೆಗೆ ವ್ಯಾಪಿಸಿದ ಇನ್ನೊಂದು ಹೆಸರೆಂದರೆ ಅದೇ ಈಳೆ ಜಾತಿಗೆ ಸೇರಿದ **ಲಿಂಬೆ** (ಅಥವಾ **ನಿಂಬೆ**)ಯದು. ಸಂಸ್ಕೃತದಲ್ಲಿ ಅದು **ನಿಂಬೂ** (ನಿಂಬ = ಬೇವು) ಎನಿಸುತ್ತದೆ. ಅದು ಅರಬ್ಬಿಯಲ್ಲಿ **ಲೀಮಾ** (ನ = ಲ) ಆಗಿ ಪಾಶ್ಚಾತ್ಯ ಭಾಷೆಗಳಿಗೆ ದಾಟಿತು. ಇದೇ ಇಂಗ್ಲೀಷಿನಲ್ಲಿ ಸಣ್ಣ, ಕಡು ಹುಳಿ ರುಚಿಯ lime ಆಗಿಯೂ ದೊಡ್ಡ ಕಡಿಮೆ ಹುಳಿಯಾದ lemon ಆಗಿಯೂ ಹಳೇ ಫ್ರೆಂಚ್ ಮೂಲಕ ಪ್ರವೇಶ ಪಡೆಯಿತು. ಪೋರ್ಚುಗೀಸಿನಲ್ಲಿಯೂ ಸ್ಪಾನಿಶ್ ಭಾಷೆಯಲ್ಲಿಯೂ ಅವೇ ಕ್ರಮವಾಗಿ lima ಮತ್ತು limao ಆಗಿವೆ. ಹುಳಿಲಿಂಬೆ ಗಿಡ linden ಆಗಿದೆ. ಈ ಶಬ್ದವೇ ಹಳೇ ಜರ್ಮನ್ ಮತ್ತು ಹಳೇ ನಾರ್ಸ್ ಭಾಷೆಗಳಲ್ಲಿ ಸ್ವಲ್ಪ ಉಚ್ಚಾರ ಭೇದದಿಂದ ಕಾಣಿಸಿಕೊಳ್ಳುತ್ತದೆ.

ಭಾಷಾಶಾಸ್ತ್ರಜ್ಞ ಪ್ರೊಫೆಸರ್ ಸುನೀತಿಕುಮಾರ ಚಟರ್ಜಿಯವರ ಪ್ರಕಾರ **ಲಿಂಬುಕ್** ಶಬ್ದವೇ ಇವೆಲ್ಲವುಗಳ ಮೂಲವಾಗಿದ್ದು ಅದು ಬಹು ಪ್ರಾಚೀನದಲ್ಲಿ ಆಗ್ನೇಯೇಶಿಯ (ಭಾರತವನ್ನೊಳಗೊಂಡು)ವನ್ನೆಲ್ಲ ವ್ಯಾಪಿಸಿದ್ದ ಆಸ್ಟ್ರಿಕ್ ಜನರ ಭಾಷೆಯದು.

ಈ ಶಬ್ದಗಳ ಪ್ರಸರಣದಿಂದ ಎದ್ದು ಕಾಣುವ ಮತ್ತೊಂದು ವಿಷಯವೆಂದರೆ ಪೂರ್ವ ಪಶ್ಚಿಮಗಳ ನಡುವೆ ಮಧ್ಯವರ್ತಿಗಳಾದ ಅರಬರ ಪಾತ್ರ.

**ಕಿತ್ತಳೆ**ಯೆಂದು ಈ ಲೇಖನವನ್ನು ಪ್ರಾರಂಭಿಸಿದೆ. ಈ ಶಬ್ದವನ್ನು ''ಕಿರಿದು + ಈಳೆ'' ಯೆಂದು ವೈಯಾಕರಣರು ಪದವಿಂಗಡಣೆ ಮಾಡುತ್ತಾರೆ. **ಕಿತ್ತೀಳೆ**ಯೆಂಬುದು ಕಾಲಾಂತರದಲ್ಲಿ ಸವೆದು ಕಿತ್ತಳೆಯಾಯಿತು. ಸಣ್ಣ ಈಳೆಯೆನ್ನುವಾಗ ಈಳೆಯೆಂಬುದು ತೊಳೆ ತೊಳೆಯಾಗಿ ಬಿಡಿಸಲು ಬರುವ ಕಾಯಿ ಅಥವಾ ಹಣ್ಣೆಂದು ಅರ್ಥವಾಗುತ್ತದೆ. ಹೀಗೆ ''ಕಿತ್ತೀಳೆ''ಯಂತೆ (ಪಿರಿದು+ಈಳೆ) ''ದೊಡ್ಡೀಳೆ'', ''ಕಂಚೀಳೆ'' ಇತ್ಯಾದಿಗಳು ರೂಪುಗೊಂಡಿವೆ. ಆದರೆ **ಈಳೆ**ಯ ಮೂಲ ಎಲ್ಲಿ ಎಂಬುದು ದುರೂಹ್ಯವಾಗಿದೆ. ಇದಕ್ಕೆ ತೆಲುಗು (ಈಡೆ) ಹೊರತು ಬೇರೆ ದ್ರಾವಿಡ ಭಾಷೆಗಳಲ್ಲಿ ಜ್ಞಾತಿಪದಗಳು ಸಿಕ್ಕಿಲ್ಲ. ತದ್ವಿಪರೀತವಾಗಿ ಮರಾಠಿಯಲ್ಲಿ ''ಈಡ್'' ಎಂಬ ಡ ಕಾರಾಂತ ರೂಪದಲ್ಲಿ ಅದು ಕಾಣಿಸುತ್ತದೆ. ''ಪೇರೀಳೆ''ಯೆಂಬುದೇ ಸವೆದು ''ಪೇರಳೆ'', ''ಪೇರಲ್'', ''ಪೇರಲು'' (ಸೀಬೆ) ಆಗಿದ್ದರೆ ''ಈಳೆ'' ತೊಳೆತೊಳೆಯಾದ ಕಾಯಿಯೆಂದು ಭಾವಿಸುವುದೂ ಚಿಂತ್ಯವಾಗುತ್ತದೆ. ಕೇವಲ ಹುಳಿ ಸಿಹಿ ಬೆರೆತ ರುಚಿಯ ಫಲವೆಂದಷ್ಟೇ ಊಹಿಸ ಬೇಕಾಗುತ್ತದೆ.

ಹಾಗೆಯೇ ಈ ಜಾತಿಗೆ ಸೇರಿದ ದೊಡ್ಡ ಕಾಯಿಯಾದ **ಕಂಚಿ** ಅಥವಾ **ಕಂಚೀಳೆ**ಯ ಮೂಲವೂ ಸ್ವಾರಸ್ಯವಾದ ಊಹಾಪೋಹಕ್ಕೆ ಎಡೆ ಕೊಡುತ್ತದೆ. ಕಂಚಿ ಎಲ್ಲರಿಗೂ ಪರಿಚಿತ.

ಇದರಲ್ಲಿ ಸಿಹಿ, ಕಡುಹುಳಿ ಜಾತಿಗಳುಂಟು. ಸಿಹಿ ಜಾತಿಯನ್ನು ಕೆಲವು ಪ್ರದೇಶಗಳಲ್ಲಿ ''ಸಕ್ಕರೆ ಕಂಚಿ'' ಎನ್ನುತ್ತಾರೆ. ಹುಳಿ ಜಾತಿ ಉಪ್ಪಿನಕಾಯಿ, ಕಲಸನ್ನ ಮೊದಲಾದವುಗಳಲ್ಲಿ ಉಪಯೋಗ ಬೀಳುತ್ತದೆ. ಇವುಗಳಿಗೆ ಕೆಲವೆಡೆ **ದೊಡ್ಡಳಿ** (= ದೊಡ್ಡ ಈಳೆ) ಎಂದು ಹೆಸರುಂಟು. ಆದರೆ ''ಕಂಚಿ'' ಎಂಬ ಹೆಸರಿನ ಅರ್ಥವೇನು? ಇದಕ್ಕೂ ಇತರ ಭಾಷೆಗಳಲ್ಲಿ ಜ್ಞಾತಿ ಪದಗಳು (ತುಳು ಹೊರತು) ಸಿಗುವುದಿಲ್ಲ. ಒಂದು ಧಾರ್ಷ್ಟ್ಯದ ಊಹೆಯಿದು: ಸಂಸ್ಕೃತದಲ್ಲಿ ''ಕಂಚುಕ'' ಪದವಿದೆ. ಮೈಗೆ ಒತ್ತಾಗಿ ತೊಟ್ಟುಕೊಳ್ಳುವ ಕುಪ್ಪಸದಂಥ ಅಂಗಿ ಅಥವಾ ನಿಲುವಂಗಿಯೆಂಬುದು ಅದರ ಅರ್ಥ. ಈಳೆಯ ಜಾತಿಯ ಹಣ್ಣುಗಳಿಗೆ ಕುಪ್ಪಸದಂಥ ಗಟ್ಟಿಯಾದ ಸಿಪ್ಪೆಯಿರುವುದರಿಂದಲೇ ಅದು ''ಕಂಚಿಯೇ''? ಅಥವಾ ಈ ತರಹದ ಸಿಪ್ಪೆಯನ್ನು ಹೋಲುವುದರಿಂದಲೇ ಕುಪ್ಪಸಕ್ಕೆ **ಕಂಚುಕ** ಮತ್ತು ಅದನ್ನು ತೊಡುವ ಅರಮನೆಯ ಅಧಿಕಾರಿಗೆ **ಕುಂಚುಕಿ**ಯೆಂಬ ಹೆಸರೆ? ಬಹುಶಃ ಮೊದಲಿನದೇ ಸರಿ. ಯಾಕೆಂದರೆ ''ಕಟ್ಟು'' ಎಂಬರ್ಥದ ''ಕಂಚ್'' ಧಾತು ಸಂಸ್ಕೃತದಲ್ಲಿದೆ. ಅದಕ್ಕೆ ಲ್ಯಾಟಿನ್ನಿನಲ್ಲಿ ಜ್ಞಾತಿ ಪದ (Cingere) ಇದೆಯೆಂದು ಮೋನಿಯರ್ ವಿಲಿಯಮ್ಸ್ ದಾಖಲಿಸಿದ್ದಾನೆ. ಮೇಲಾಗಿ ಹಾವಿನ ಪರೆಗೂ ಕಂಚುಕ ಎನ್ನುವುದುಂಟು.

೧೨೯

ಬಯ್ಗಳ ಮಾತುಗಳು ಸ್ವಭಾಷೆಯಲ್ಲಿ ಎಷ್ಟಿದ್ದರೂ ಪರಭಾಷೆಗಳಿಂದ ಸ್ವೀಕರಿಸುವುದು ಒಂದು ಭಾಷಾಪ್ರವೃತ್ತಿ. ಈ ಮನೋವೃತ್ತಿಗೂ ಅಶ್ಲೀಲವೆನಿಸುವ ವಿಷಯಗಳನ್ನು ಉಲ್ಲೇಖಿಸಬೇಕಾದಾಗ ಶಿಷ್ಟರು ಸಂಸ್ಕೃತ ಅಥವಾ ಲ್ಯಾಟಿನ್ ಮೊದಲಾದ ಅಭಿಜಾತ ಭಾಷೆಗಳನ್ನು ಆಶ್ರಯಿಸುವ ಒಲವಿಗೂ ಏನಾದರೂ ಸಂಬಂಧ ಇದೆಯೇ ಎಂಬುದು ಚಿಂತನೀಯ.

ಬೈಗಳ ಅನೇಕ ಮಾತುಗಳನ್ನು ನಾವು ಉರ್ದು ಮತ್ತು ಅದಕ್ಕೆ ಪದಸಂಪತ್ತಿಯನ್ನು ಒದಗಿಸುವ ಅರಬ್ಬಿ, ಪಾರಸೀಕ ಭಾಷೆಗಳಿಂದಲೂ ಸ್ವೀಕರಿಸಿದ್ದೇವೆ. ದುಷ್ಟನನ್ನು (ವಿಶೇಷತಃ ಪೋಲಿಸ್ ಭಾಷೆಯಲ್ಲಿ) **ಬದ್ಮಾಷ್, ಲಫಂಗಾ, ಲುಚ್ಚಾ** ಮೊದಲಾದ ಉಪಾಧಿಗಳಿಂದ ಅರ್ಚಿಸುವುದು ಕಂಡುಬರುತ್ತದೆ. ''ಬದ್ಮಾಶ್'' (ಬದ್+ಮಆಶ್) ಎಂದರೆ ದೇಶೀ ಭಾಷೆಯಲ್ಲಿ ದುರಾಚಾರಿ. ಪಾರಸೀಕ ಭಾಷೆಯಿಂದ ತೆಗೆದುಕೊಂಡ ಈ ಪದಕ್ಕೆ ಅಲ್ಲಿ ಬದ್=ಕೆಟ್ಟ (ಪಾರಸೀಕ)+ಮಆಶ್=ಜೀವನೋಪಾಯ (ಅರಬ್ಬಿ) ಎಂದು ಶಾಬ್ದಿಕ ಅರ್ಥ. ''ಲಫಂಗಾ'' ಅಥವಾ ''ಲಫಂಗ'' – ಇದೂ ಪಾರಸೀಕ ಭಾಷೆಯಿಂದಲೇ ಉರ್ದುವಿಗೆ ಬಂದ ಮಾತು. ದುರ್ಮಾರ್ಗಿ, ವ್ಯಭಿಚಾರಿ, ಲಂಪಟ, ಬದ್‌ಮಾಶ್, ಪುಂಡ ಎಂದು ಉರ್ದುವಿನಲ್ಲಿ ಅದರ ಬಳಕೆ ಇದ್ದರೂ ಮೂಲ ಪಾರಸೀಕದಲ್ಲಿ ಅದಕ್ಕೆ ಬಡಾಯಿಕೊಚ್ಚುವವ, ಬರೇ ವಾಚಾಳಿ ಎಂಬ ಅರ್ಥವಿದೆಯೆಂಬುದಾಗಿ ಡಾ. ಶಂಕರ ಕೆದ್ಲಾಯರ ಗ್ರಂಥದಿಂದ ವೇದ್ಯವಾಗುತ್ತದೆ. ಮರಾಠಿಯಲ್ಲಿ ಕೂಡ ''ಲಫಂಗ''ಕ್ಕೆ ಚಾಣಾಕ್ಷ ಮತ್ತು ಬಾಯ್ಬಡಕ ಎಂಬರ್ಥವೇ ಪ್ರಚಲಿತವಾಗಿದೆ. ಉರ್ದು-ಹಿಂದಿಗಳಲ್ಲಿ ಅದಕ್ಕಿಂತ ನೀಚಾರ್ಥ ಯಾಕೆ ಪ್ರಚಲಿತವಾಯಿತೋ ಹೇಳುವುದು ಕಷ್ಟವಾದರೂ ಪದಗಳು ಭಾಷೆಯಿಂದ ಭಾಷೆಗೆ ಹಾರುವಾಗ ಅರ್ಥಾಂತರ ಹೊಂದುವುದು ಅಪರೂಪವಲ್ಲ.

''ಲುಚ್ಚಾ'' ಎಂಬುದು ಮಾತ್ರ ದೇಶ್ಯವೇ. ಹಿಂದೀ ಮರಾಠಿಗಳಲ್ಲಿ ಅದು ದುರಾಚಾರಿ, ವಂಚಕ, ನೀಚ, ಅಪಹಾರಕ ಇತ್ಯಾದಿ ಅರ್ಥಗಳಲ್ಲಿ ಪ್ರಯೋಗಿಸಲ್ಪಡುತ್ತದೆ. ಬಹುಶಃ ಅದು ಸಂಸ್ಕೃತ **ಲುಂಚ** (ಕುಸಿದುಕೋ) ಎಂಬ ಧಾತುವಿನಿಂದ ಸಿದ್ಧಿಸಿದ್ದು.

ಗಾಂಭೀರ್ಯವಿಲ್ಲದೆ ಬರೇ ಬೇಜವಾಬ್ದಾರಿಯಿಂದ ಮಾತಾಡುವುದಕ್ಕೆ ಗಳಹುವುದೆಂಬ ಶಬ್ದ ಕನ್ನಡದಲ್ಲಿದೆ ತಾನೆ? ಅದಕ್ಕೆ **ಗಪ್ಪ** ಹೊಡೆಯುವುದೆಂದು ಕೂಡ ಉರ್ದುವಿನಿಂದ ಆಮದಾದ ಪದವಿದೆ. ''ಗಪ್'' ಎಂಬ ಪದ ಪಾರಸಿ ಪದವೆಂದು ಉರ್ದು ಕೋಶವೊಂದು ಹೇಳುತ್ತದೆ. ಆದರೆ ಕರಾವಳಿಯಲ್ಲಿ **ಗಪ್ಲಾಸ್** ಅಥವಾ **ಗಪ್ಪಾಸ್** ಎಂಬ ಶಬ್ದ ಹೆಚ್ಚು ಪ್ರಚಲಿತವಾಗಿದೆ. ಇದು ಅರಬ್ಬಿ ಪದವಾದ **ಗಫಲತ್** ಎಂಬುದರ ರೂಪಾಂತರ. ಬೇಜವಾಬ್ದಾರಿ ಟೊಳ್ಳು ಹರಟೆಯೆಂದೇ ಅದರರ್ಥ. ಒಂದು ಸ್ವಾರಸ್ಯವೆಂದರೆ ಇಂಗ್ಲೀಷಿನಲ್ಲಿ ಕೂಡ ೧೯ನೇ ಶತಮಾನದಿಂದ ಇದೇ ಅರ್ಥದ **ಗಫ್** (guff) ಎಂಬ ಶಬ್ದ ಚಲಾವಣೆಗೆ ಬಂದಿದೆ. ಇದು ಗಾಳಿ ಊದುವುದು ಎಂಬರ್ಥದ **ಪಫ್** (puff) ಎಂಬುದರ ಅನುಕರಣವೆಂದು ಆಕ್ಸ್‌ಫರ್ಡ್ ನಿಘಂಟಿನ ಹೇಳಿಕೆ. ಆದರೆ ಟೊಳ್ಳು ಮಾತುಗಳಿಗಿರುವ ಪದಗಳು ಮೂರು ಭಾಷೆಗಳಲ್ಲಿ ಒಂದೇ ಧ್ವನಿಯುಳ್ಳವುಗಳಾಗಿರುವುದು ವಿಶೇಷ.

ಡಾ|| ಭೈರಪ್ಪನವರ ''ವಂಶವೃಕ್ಷ'' ಕಾದಂಬರಿಯಿಂದಾಗಿ **ಶ್ರೋತ್ರಿಯ** ಎಂಬ ಬ್ರಾಹ್ಮಣ ಅಡ್ಡ ಹೆಸರು ಜನಜನಿತವಾಯಿತು. ''ಶ್ರೋತ್ರಿಯ'' ಎಂದರೆ ವಿಧಿವತ್ತಾಗಿ ವೇದಾಭ್ಯಾಸ ಮಾಡಿದ ವೈದಿಕ ಬ್ರಾಹ್ಮಣನೆಂದು ಪರಿಷತ್ತಿನ ಸಂಕ್ಷಿಪ್ತ ನಿಘಂಟು ತಿಳಿಸುತ್ತದೆ. **ಶ್ರುತಿ** ಎಂದರೆ ವೇದಗಳಿಗೆ ಒಂದು ಹೆಸರು (ಇತರ ಅರ್ಥಗಳೊಡನೆ). ಹಾಗೆಯೇ ''ಶ್ರೌತ'' ಎಂದರೆ ವೇದಗಳಿಗೆ ಸಂಬಂಧಿಸಿದ್ದು, ವೇದಗಳಿಂದ ಅನುಮೋದಿಸಲ್ಪಟ್ಟ ಕರ್ಮ. ''ಶ್ರುತ'' ಎಂದರೆ ವಿದ್ಯೆ, ಪಾಂಡಿತ್ಯ; ಹೀಗೆ **ಬಹುಶ್ರುತ** ಎಂದರೆ ತುಂಬಾ ವಿದ್ಯಾವಂತ. ಹಾಗೇನೇ **ಶುಶ್ರೂಷೆ**ಯೆಂದರೆ ಸೇವೆ, ಪರಿಚರ್ಯೆ.

ಇವೆಲ್ಲ ಮತ್ತು ಇನ್ನೂ (''ಶ್ರು'' – ಎಂಬುದನ್ನೊಳಗೊಂಡ) ಅನೇಕ ಪದಗಳು ಪ್ರಾಚೀನ ಭಾರತೀಯರ ವಿದ್ಯೆ, ಜ್ಞಾನ ಮೊದಲಾದವುಗಳ ಕಲ್ಪನೆಯ ಬಗ್ಗೆ ಒಂದು ವಿಶೇಷವನ್ನು ತಿಳಿಯಪಡಿಸುತ್ತವೆ. ''ಶ್ರು'' ಧಾತುವಿಗೆ ಸಂಸ್ಕೃತದಲ್ಲಿ ''ಕೇಳು''ವುದೆಂದು ಅರ್ಥ. ''ಶ್ರುತ'' ಎಂದರೆ ಕೇಳಿದ್ದು. ''ಶ್ರುತಿ'' ಎಂದರೆ ಕೇಳಿಬಂದದ್ದು. ವೇದಗಳು ಆದ್ಯ ಋಷಿಗಳಿಗೆ ಒಂದು ತರದ ಭಾವಾವೇಶದ ಸ್ಥಿತಿಯಲ್ಲಿ ಕೇಳಿಸಿಕೊಂಡವು; ಭಾವಾವೇಶದ ಸ್ಥಿತಿಯಲ್ಲಿ ಅವರು ರಚಿಸಿದ ಕೃತಿಗಳಲ್ಲ. ವೇದದ ಅಕ್ಷರ ಅಕ್ಷರವೂ – ಶಬ್ದಶಬ್ದವೂ ಇದ್ದಕ್ಕಿದ್ದಂತೆ ಪರಮಾತ್ಮನಿಂದ ಅನುಗ್ರಹಿಸಲ್ಪಟ್ಟದ್ದು; ಮತ್ತು ಬದಲಾವಣೆಯಾಗದ ಸತ್ಯವನ್ನು ಹೇಳುವಂಥಾದ್ದು. ಈ ಮಂತ್ರಗಳನ್ನು ಪರಂಪರೆಯಿಂದ ಆ ಮಂತ್ರದ ದ್ರಷ್ಟಾರ (= ಮಂತ್ರಗಳನ್ನು ನೋಡಿದವರು)ರಿಂದ ಬಾಯಿದೆರೆಯಾಗಿ ಉಪದೇಶಿಸಿ ದಾಟಿಸಿಕೊಂಡು ಬಂದದ್ದಾಗಿದೆ. ಅಂದರೆ ಸಾವಿರಾರು ವರ್ಷಗಳಿಂದ ಕಿವಿಯ (ಶ್ರುತಿ) ಮೂಲಕವೆ ಕಲಿಸಿ ಕಲಿತು ಬಂದದ್ದು ಹೊರತು ಓದಿಬಂದದ್ದಲ್ಲ. ನಿಜಕ್ಕೂ ವಿದ್ಯೆಯೆಂಬುದು ಗುರುಮುಖದಿಂದ **ಕೇಳಿ** ಕಲಿಯತಕ್ಕದ್ದು. ವೈದಿಕ ವಿದ್ಯೆಯಿಂದ ಆರಂಭವಾದ ಈ ಪರಂಪರೆ ಅವೈದಿಕ ವಿದ್ಯೆಗಳಿಗೂ ಅನಂತರದ ಕಾಲದಲ್ಲಿ ಅನ್ವಯಿಸಿತು. ''ಶ್ರುತಿ'' ಪದವಿ ವೇದಗಳಿಗೆ ಮಾತ್ರ ಸಿಕ್ಕಿದರೂ ಎಲ್ಲ ವಿದ್ಯೆಯೂ ''ಶ್ರುತ'' (ಕೇಳಿದ್ದು)ವೇ – ಬರೇ ಓದಿನಿಂದ

ಬರತಕ್ಕದ್ದಲ್ಲ. ''ಗುರುವಿಲ್ಲದ ವಿದ್ಯೆ'' ಓದಿ ಪಡೆದ ಜ್ಞಾನ-ಸಿದ್ಧಿಯನ್ನು ಕೊಡುವುದಿಲ್ಲ. ಗುರುವಿನಿಂದ ವೇದಗಳನ್ನಾಗಲಿ, ಇನ್ನಾವುದನ್ನಾಗಲಿ ಕಲಿಯಬೇಕಾದರೆ ''ಗುರು ಶುಶ್ರೂಷೆ'' ಮಾಡಬೇಕು. **ಶುಶ್ರೂಷೆ**ಯೆಂದರೆ ಕೇಳುವ (ಉತ್ಕಟ) ಬಯಕೆ. ಅದು ಬರೇ ''ಗುರುಗಳೇ ನನಗೆ ಹೇಳಿ, ಹೇಳಿ'' ಎಂದು ಗಂಟು ಬೀಳುವುದರಿಂದಲ್ಲ. ಅವರನ್ನು ಸರ್ವವಿಧದಿಂದ ಸೇವಿಸಿ ಪರೀಕ್ಷೆಗೊಳಪಟ್ಟು, ಒಲಿಸಿ ಪಡೆಯತಕ್ಕದ್ದು. ಆದ್ದರಿಂದ ಶುಶ್ರೂಷೆ ಎಂದರೆ ಕೇಳಲು ತರಗತಿಯಲ್ಲಿ ಕಿವಿ ನೆಟ್ಟಗೆ ಮಾಡಿ ಕುಳಿತುಕೊಳ್ಳುವುದು ಮಾತ್ರವಲ್ಲ, ಸೇವೆ, ಮರ್ಜಿ ಹಿಡಿಯುವುದು ಎಲ್ಲ ಒಳಗೊಂಡದ್ದು. ಹೀಗೆ ಬಹಳ ಹಂಬಲದಿಂದ ಪಡೆದದ್ದೇ ನಿಜ ಜ್ಞಾನ. ಜ್ಞಾನವೆಂಬುದು ಗುರು ಶುಶ್ರೂಷೆಯಿಂದಲೇ ಪಡೆಯತಕ್ಕದ್ದೆಂಬ ಭಾವನೆ ವೈದಿಕದಲ್ಲಿ ಮಾತ್ರವಲ್ಲ, ಆಧ್ಯಾತ್ಮಿಕ (ಉದಾ: ಬ್ರಹ್ಮಜ್ಞಾನದ ಸಿದ್ಧಿ) ಮತ್ತು ಲೌಕಿಕ ಜ್ಞಾನದ ವಿಷಯದಲ್ಲಿ ಕೂಡ ಇಂದಿಗೂ ನಡೆದುಬಂದದ್ದು.

ಜ್ಞಾನಕ್ಕೆ, ವಿದ್ಯೆಗೆ ಸಂಬಂಧಿಸಿ ನಡೆದುಬಂದ ಈ ಮಾತು – **ಶುಶ್ರೂಷೆ** – ಮುಂದೆ ಎಲ್ಲ ಬಗೆಯ ಸೇವೆಗೆ ಅನ್ವಯಿಸಿತು. ಅಗಸ್ತ್ಯರನ್ನು ಶುಶ್ರೂಷಿಸಲು ಬಂದದ್ದಾಗಿ ರಾಮ ಋಷಿಗೆ ಹೇಳಿದಾಗ (ರಾಮಾ, ಅರಣ್ಯ, ೧೨, ೮) ಒಟ್ಟು ಅವರಿಗೆ ಗೌರವವೀಯುವುದಷ್ಟೇ ತಾತ್ಪರ್ಯವಾಗಿತ್ತು. ''ಶುಶ್ರೂಷಸ್ವ ಗುರೂನ್'' ಎಂದು ಕಣ್ವಮುನಿ ಶಕುಂತಲೆಗೆ ಹೇಳಿ ಗಂಡನ ಮನೆಗೆ ಕಳಿಸುವಾಗ ಯಾವಾಗಲೂ ಹಿರಿಯರ ಬೇಕು ಬೇಡಗಳನ್ನು ಕೇಳಿ ತಿಳಿದುಕೊಂಡು ಹಿರಿಯರ ಸೇವೆ ಮಾಡು ಎಂಬುದು ಅಭಿಪ್ರಾಯ. ರೋಗಿಗಳ ''ಶುಶ್ರೂಷೆ''ಯಲ್ಲಿ ಅವರನ್ನು ''ಕೇಳ''ತಕ್ಕದ್ದು ಬಹಳ ಇಲ್ಲ. ಮಗುವಿನ ಆರೈಕೆ ಮಾಡುವವಳು ''ಶುಶ್ರೂಷೆ'' ಎನ್ನುವಾಗ ಅದರ ಇಚ್ಛೆಗಳನ್ನು ಕೇಳಿ ತಿಳಿದುಕೊಳ್ಳುವ ಪ್ರಶ್ನೆಯೇ ಇಲ್ಲ. ಮಹಾ ವೈದ್ಯನಾದ ''ಸುಶ್ರುತ''ನ ಅಂಕಿತನಾಮ ಬಹುಶಃ ಅದಲ್ಲ – ಅದು ಅವನ ಬಿರುದು – ಬಹಳ ಕೇಳಿದವನು – ಎಂದು; ಅರ್ಥಾತ್ ಭಾರಿ ಪಂಡಿತ. ''ಬರೆ''ಯುವ (ಲಿಖ್), ''ಓದು''ವ (ಪಠ್) ಕುರಿತ ಪದಗಳು ನಮ್ಮಲ್ಲಿ ತಡವಾಗಿಯೆ ಕಾಣಿಸಿಕೊಂಡವು. ''ಓದು'' ಎಂಬ ಕನ್ನಡ ಪದವಾಗಲಿ, ''ಪಠ್'' ಎಂಬ ಸಂಸ್ಕೃತ ಪದವಾಗಲಿ ಪುಸ್ತಕವನ್ನು ಹಿಡಿದು ಓದುವುದಕ್ಕೆ ಮಾತ್ರವಲ್ಲ, ಬಾಯಿಪಾಠ ಹೇಳುವುದಕ್ಕೂ ಸಲ್ಲುತ್ತವೆ. ''ಶುಕಃ ಪಠತಿ'' ಗಿಳಿ ಓದುತ್ತದೆ. ಗಟ್ಟಿಯಾಗಿ ಹೇಳುವುದಷ್ಟೇ ಇಲ್ಲಿ ಇಂಗಿತ.

ಈ ಅಲಿಖಿತ ಶ್ರುತ ಪರಂಪರೆಯಿಂದಾಗಿ ನಮ್ಮ ದೇಶಕ್ಕೆ ಎಷ್ಟೋ ನಷ್ಟವಾಯಿತು. ಆದರೆ ಮಹಾಭಾರತ, ವೇದಗಳು ಮೊದಲಾದ ಮಹಾಪ್ರಾಚೀನ ಸಾಹಿತ್ಯ ಉಳಿದು ಬರಲೂ ಅದೇ ಕಾರಣವಾಯಿತು. ಶತ್ರುಗಳು ಗ್ರಂಥಾಲಯಗಳನ್ನು ಸುಟ್ಟರು; ಸಾಹಿತ್ಯವನ್ನು ನಾಶಮಾಡಲು ಅವರಿಂದಾಗಲಿಲ್ಲ.

೧೩೦

''**ಪರಾಕು** ಮಾಡದೆ ಪರಾಂಬರಿಸಿ ಎನ್ನಪರಾಧಂಗಳ ಕ್ಷಮಿಸೋ'' ಎಂದು ಪುರಂದಾರದಾಸರು ದೇವರಲ್ಲಿ ಮೊರೆಯಿಟ್ಟಿದ್ದಾರೆ. ಇಲ್ಲಿ ಅರ್ಥ ಸ್ಪಷ್ಟ: ಅಲಕ್ಷ್ಯ, ಅಜಾಗ್ರತೆ, ಉದಾಸೀನ, ಉಪೇಕ್ಷೆ ಇತ್ಯಾದಿ. ಪರಿಷತ್ತಿನ ನಿಘಂಟಿನ ಪ್ರಕಾರ ಇದಕ್ಕೆ ಸಂಸ್ಕೃತ ''ಪರಾಂಚ್'' ವಿಮುಖನಾಗು – ಎಂಬುದು ಮೂಲ. ಈ ಶಬ್ದ ವಿಜಯನಗರ ಸಾಮ್ರಾಜ್ಯದ ಉತ್ಕರ್ಷ ಕಾಲವಾದ ೧೬ನೇ ಶತಮಾನದಲ್ಲಿ ಬಹಳ ಬಳಕೆಗೆ ಬಂದ ಹಾಗೆ ಕಾಣುತ್ತದೆ.

ಕನಕದಾಸರ ಮೋಹನ ತರಂಗಿಣಿ, ಕೃಷ್ಣದೇವರಾಯನ ದಿನಚರಿ, ಶಂಕರ ದಾಸಿಮಯ್ಯ ವಚನ ಮುಂತಾದ ಆಕರಗಳಲ್ಲಿ ಪರಾಕು ಶಬ್ದದ ಪ್ರಯೋಗ ಧಾರಾಳವಾಗಿದೆ. ಅರಸರು ಅಥವಾ ಮಠಾಧಿಪತಿಗಳು ಬರುವಾಗ ''ಪರಾಕು ಹೇಳುತ್ತ'' ಮುಂದಿನಿಂದ ಸಾಗುವ ಕಟ್ಟಿಗೆಯವರೋ ವಂದಿಗಳೋ ''ಇಂಥ ಬಿರುದಾಂಕಿತ ರಾಜರು ಬರುತ್ತಾ ಇದ್ದಾರೆ, **ಭೋಪರಾಕ್**'' ಎನ್ನುತ್ತಿದ್ದರು. ಇದು ಎದುರಲ್ಲಿ ಬರುತ್ತಿರುವವರಿಗೆ ದಾರಿಯಿಂದ ಸರಿದುಕೊಳ್ಳಲು ಎಚ್ಚರಿಕೆಯಾಗಿತ್ತೆಂದು ಗ್ರಹಿಸಿದರೆ ''ಪರಾಂಚ್'' ಎಂಬ ಮೂಲ ಸರಿ ಹೊಂದುತ್ತದೆ. ಹಿಂದಿರುಗಿರಿ! ಸರಿಯಿರಿ! ಮೈಗೆ ತಾಗಬೇಡಿರಿ – ಅಥವಾ ಉರ್ದುವಿನಲ್ಲಿ ಹೇಳುವಂತೆ ''ಖಬರ್‌ದಾರ್'' ಎಂಬ ಎಚ್ಚರಿಕೆ ಅಥವಾ ಜಾಗ್ರತೆಯ ಮಾತು ಅದಾಗಿತ್ತೆನ್ನೋಣ. ಪುರಂದರದಾಸರ ಪ್ರಯೋಗ ದೇವರಿಗೆ ''ನನ್ನನ್ನು ಅಲಕ್ಷ್ಯ ಮಾಡಬೇಡ'' ಎನ್ನುತ್ತದೆ. ಸರಿ.

ಆದರೆ ಕನಕದಾಸರು ಮೋಹನ ತರಂಗಿಣಿಯಲ್ಲಿ ''ರಾಯ **ಪರಾಕೆಂದು** ಕೈವಾರಿಪ ಪಾಠಕಿಯರೊಪ್ಪಿದರು'', ಎನ್ನುವಾಗ ಇಲ್ಲಿನ ''ಚಿತ್ತವೀಯಿರಿ!'' ಎಂಬರ್ಥವನ್ನು ತದ್ವಿರುದ್ಧವಾದ ''ಪರಾಂಚ್''ಗೆ ಹೊಂದಿಸುವುದು ಹೇಗೆ? ಇಲ್ಲಿ ಎದುರು ಬರುವವರು ಅಡ್ಡ ನಿಲ್ಲುವವರು ಯಾರೂ ಇಲ್ಲ. ಆದ್ದರಿಂದ ಈ ಅರ್ಥದಲ್ಲಿ ''ಪರಾಕು'' ಬೇರೆಯೆ ಮೂಲದ್ದಿರಬಹುದೇ? ಹಿಂದಿಯಲ್ಲಿ ಬಂಗಾಲಿಯಲ್ಲಿ **ಪರಖ** ಎಂಬ ಶಬ್ದ ಇದೆ. ಅದರ ಅರ್ಥ ವಿಚಾರ ಮಾಡು, ಪರೀಕ್ಷಿಸು, ಸಾರಾಸಾರ ವಿಚಾರ ಮಾಡು ಎಂದು. ಇದು ''ಪರೀಕ್ಷ್''ದ ಅಪಭ್ರಂಶವೆಂದು ಪರಿಗಣಿಸಲಾಗಿದೆ. ಮೇಲೆ ಉದಾಹರಿಸಿದ ಪ್ರಯೋಗಗಳಿಗೆ ಇದು ಸರಿಹೊಂದುತ್ತದೆ. ಸಾಲಾಗಿ ಮೂರು ಹ್ರಸ್ವಗಳು ಬರುವುದರಿಂದ ಬಿರುದು ಉಗ್ಗಡಿಸುವ ಭಟ್ಟಂಗಿಗಳು ಕೊನೆಯದನ್ನು ಅರ್ಧಾಕ್ಷರ ಮಾಡಿ ನಡುವಿನದನ್ನು ದೀರ್ಘ ಮಾಡಿರಬಹುದಾಗಿದೆ. (ಮರಾಠಿಯವರು ಗಣಿತವೆಂದು ಬರೆದದ್ದನ್ನು ''ಗಣೀತ್'' ಎಂದುಚ್ಚರಿಸುತ್ತಾರೆ. ಭಾರತವನ್ನು ''ಭಾರ್ಅತ್'' ಎಂದು ದೂರದರ್ಶನ ಮಹಾಭಾರತದ ''ಭಟ್ಟಂಗಿ''ಗಳು ಉಗ್ಗಡಿಸುತ್ತಾರೆ.) ''ಪ್ರಭುಗಳು ಪರೀಕ್ಷಿಸಬೇಕು'' ಎನ್ನುವುದನ್ನು ಭಟರು ''ಪರ್ಅಕ್'' ಅಥವಾ ಪರಾಕು ಮಾಡಿರಬಹುದು. ''ಪರಿಕಿಸು'' ಶಬ್ದವೇ ''ಪರಕಿಸು'' ಎಂದು ಉಚ್ಚರಿಸಲ್ಪಡಬಹುದೆಂದು ಜನರ ಮಾತನ್ನು ಲಕ್ಷಗೊಟ್ಟು ಕೇಳಿದರೆ ತಿಳಿಯುತ್ತದೆ.

ರಿಕ್ಷಾ ಎಂಬ ವಾಹನ ನಮಗೀಗ ಸುಪರಿಚಿತ. ಈ ಪದ ನಮಗೆ ಬಂದದ್ದೇನೋ ಇಂಗ್ಲೀಷಿನಿಂದ – ricksha ಅಥವಾ rickshaw, ಅವರು ತೆಗೆದುಕೊಂಡದ್ದು ಜಪಾನಿ ಭಾಷೆಯಿಂದ. ಜಪಾನಿ ಭಾಷೆಯಲ್ಲಿ ಜಿನ್ = ಮನುಷ್ಯ, ರಿಕಿ = ಶಕ್ತಿ, ಷಾ = ವಾಹನ. ಅರ್ಥಾತ್ ನರಶಕ್ತಿವಾಹನ = ಮನುಷ್ಯ ಎಳೆಯುವ ಗಾಡಿ ಅದು. ಇಂದು ಬಹುತರವಾಗಿ ರಿಕ್ಷಾವನ್ನು ಪೆಟ್ರೋಲ್ ಎಂಜಿನ್ನು ಎಳೆಯುತ್ತಿದ್ದರೂ ಯುದ್ಧ ಪೂರ್ವದಲ್ಲಿ ಮದ್ರಾಸ್ ಕಲ್ಕತ್ತಾ ಮೊದಲಾದ ಶಹರುಗಳಿಗೆ ಹೋದವರು ಈ ನರವಾಹನಗಳನ್ನು ಕಂಡಿರಲೇಬೇಕು. ಇಂಗ್ಲೀಷಿನವರು ತಮ್ಮ ಬಾಯಿಗೆ ಒಗ್ಗುವಂತೆ ಸಂಕ್ಷೇಪಿಸಿ ಅದನ್ನು ''ರಿಕ್ಷಾ'' ಮಾಡಿದರು. ಎಲ್ಲ ಭಾಷೆಗಳೂ ಹೀಗೆ ಸಂಕ್ಷೇಪಿಸಲಿಲ್ಲ. ಪೋರ್ಚುಗೀಸಿನಲ್ಲಿ ಅದು ಇಂದಿಗೂ jinriquixa ಎಂದೇ ಇದೆ. – ಜಿನ್‌ರಿಕಿಷಾ – ಜಪಾನಿ ಶಬ್ದದ ಯಥಾ ಸ್ವೀಕಾರ.

ನಾವು ''ಬೆಲ್ಲ'' ಎನ್ನುವುದನ್ನು ಇಂಗ್ಲೀಷಿನಲ್ಲಿ jaggery (ಜಾಗ್ಗರಿ) ಅನ್ನುತ್ತಾರಲ್ಲ.

ಅದು ಆ ಭಾಷೆಗೆ ಪೋರ್ಚುಗೀಸಿನಿಂದ ಹೋದದ್ದು. ಪೋರ್ಚುಗೀಸರು ಅದನ್ನು ಕನ್ನಡ **ಶಕ್ಕರೆ** (ಸಂಸ್ಕೃತ-ಶರ್ಕರಾ)ಯಿಂದ ಎತ್ತಿಕೊಂಡರು. ಮೂಲತಃ ಮೊದಲು ತಾಳಿ ಬೆಲ್ಲಕ್ಕೆ ಈ ಹೆಸರಿಟ್ಟರಂತೆ; ಆ ಮೇಲೆ ಕಬ್ಬಿನ ಬೆಲ್ಲಕ್ಕೂ ಅದನ್ನು ವಿಸ್ತರಿಸಿದರು. ವಾಸ್ತವಿಕವಾಗಿ ಇದು ಕಚ್ಚಾ ಪುಡಿಬೆಲ್ಲ (ಬೆಳ್ಳಗಿನದಲ್ಲ, ಕಂದು=ಬೂರಾ ಛಾಯೆಯದು)ಕ್ಕಿಟ್ಟ ಹೆಸರು; ಆಮೇಲೆ ಸ್ಥೂಲವಾಗಿ ಮುದ್ದೆ ಅಥವಾ ಗಟ್ಟಿ ಬೆಲ್ಲಕ್ಕೂ ಅನ್ವಯಿಸಿತಷ್ಟೆ.

''ಅಗದೀ **ಅವ್ವಲ್** ಮಾಲು ಕೊಡ್ತೇನೆ'' ಎಂದು ಅಂಗಡಿಯವ ಹೇಳುವಾಗ ಅತಿ ಶ್ರೇಷ್ಠ ಪ್ರತಿಯ ಸರಕು ತನ್ನದೆಂಬುದು ಅವನ ಅಭಿಪ್ರಾಯ. ''ಅವ್ವಲ್'' ಅರಬ್ಬಿ ಭಾಷೆಯಿಂದ ಬಂದದ್ದು. ಆ ಭಾಷೆಯಲ್ಲಿ ಕೂಡ ಅತಿಶ್ರೇಷ್ಠ ಎಂಬರ್ಥ ಅದಕ್ಕಿದೆ. ಆದರೆ ಅದರ ಮೂಲಾರ್ಥ ಮೊದಲನೆಯದ್ದು, ಎಂದು. ಎಂದರೆ ಸರ್ವಶ್ರೇಷ್ಠ ತಾನೇ? ಅಂಥಾ ಉತ್ತಮದ್ದು ಬೇಡವೆಂದರೆ ನಿಮಗೆ **ದುಯ್ಯಂ** ಪ್ರತಿಯ ಸರಕು ತೋರಿಸುತ್ತಾನೆ. ''ದುಯ್ಯಂ'' ಪಾರಸೀಕ ''ದುಯಮ್'' (ಸಂ. ''ದ್ವಯ''ಕ್ಕೆ ಜ್ಞಾತಿ) ಪದದಿಂದ ಸ್ವೀಕೃತವಾದದ್ದು. ಉರ್ದು, ಹಿಂದೀ, ಕೋಶಗಳಲ್ಲಿ ಇದು ಕಾಣಬರುವುದಿಲ್ಲ; ಮರಾಠಿಯಲ್ಲಿದೆ. ಬಹುಶಃ ಕನ್ನಡಕ್ಕೆ ಮರಾಠಿಯಿಂದ ಬಾರದೆ ನೇರವಾಗಿ ಪಾರಸೀಕದಿಂದಲೇ ಬಂದಿರಬಹುದು. ಮುಸ್ಲಿಂ ಸುಲ್ತಾನರಿಬ್ಬರ ಆಳಿಕೆಯಲ್ಲಿ ಇಲ್ಲಿ ಪಾರಸೀಕ ಭಾಷೆ ಆಡಳಿತದಲ್ಲಿ ಪ್ರಭಾವಿಯಾಗಿತ್ತಲ್ಲವೆ? ಇದಲ್ಲದೆ **ಸೀಯಂ** (ತೃತೀಯ) ಮತ್ತು **ಚಾರಂ** (ಚತ್ವಾರ) ಎಂಬ ಪಾರಸೀಕ ಪದಗಳು ಆಮದಾಗಿ ಮೈಸೂರು ಆಡಳಿತದಲ್ಲಿ ಸ್ಥಾನಾಪನ್ನವಾಗಿದ್ದವು.

ಆದರೆ ನಮ್ಮ **ಅವಲಕ್ಕಿಯ** ''ಅವಲ್''ಮೇಲಿನದಕ್ಕೆ ಸಂಬಂಧಿಸಿಲ್ಲ. ಅದು ದ್ರಾವಿಡ. **ಅವೆ** ಅಂದರೆ ಒನಕೆಯಿಂದ ಕುಟ್ಟು. ತಮಿಳು, ಮಲೆಯಾಳಿ ಮತ್ತು ತುಳು (ಅಬೆ)ವಿನಲ್ಲಿ ಇರುವ ಈ ಧಾತು ಕನ್ನಡದಲ್ಲಿ ''ಅವಲ್'' ಎಂಬ ರೂಪದಲ್ಲಿ ಶಬ್ದಮಣಿ ದರ್ಪಣದಲ್ಲಿ ದಾಖಲಾಗಿದೆ.

೧೩೧

**ಕಾಯಿಪಲ್ಲೆ** ಅಥವಾ **ಕಾಯಿಪಲ್ಯ** ಎನ್ನುವಾಗ ಕಾಯಿಯ ಅರ್ಥ ಸುಲಭವೇ ಇದೆ. ಆದರೆ **ಪಲ್ಯ** ಅಥವಾ **ಪಲ್ಲೆ** ಎಂದರೆ ಹಸುರೆಲೆ ಅಥವಾ ತೊಪ್ಪಲು (ಸೊಪ್ಪು) ಎಂಬುದು ಸ್ವಲ್ಪ ಮರವೆಯಾದ ಅರ್ಥ. ಆದ್ದರಿಂದಲೇ ಇರಬೇಕು, **ತೊಪ್ಪಲು ಪಲ್ಯ** ಎಂಬ ಏಕಾರ್ಥದ ಜೋಡಿ ಪದ ಬಳಕೆಗೆ ಬಂತು. ಪಲ್ಯ ಅಥವಾ ತರಕಾರಿ ಸೊಪ್ಪು ನಮ್ಮ ಆಹಾರದಲ್ಲಿ ಎಷ್ಟು ಮಹತ್ವ ಪಡೆಯಿತೆಂದರೆ ಕಾಯಿಪಲ್ಯದಿಂದ ಮಾಡಿದ ಖಾದ್ಯ ಅಥವಾ ಮೇಲೋಗರಗಳಿಗೆಲ್ಲ ಪಲ್ಯ ಎಂದೇ ಹೆಸರಾಗಿ ಬಿಟ್ಟಿತು.

ಪಲ್ಯ ಎಂಬ ಪದ ಕಾಯಿಯಂತೆ ದೇಶ್ಯ ಅಲ್ಲವೆಂದೇ ತೋರುತ್ತದೆ. ಅದು ಸಂಸ್ಕೃತದ **ಫಲ, ಪಲಾಶ, ಪಲ್ಲವ** ಮೊದಲಾದ ಪದಗಳಿಗೆ ಮೂಲವಾದ ಭಾರೋಪ್ಯ ಮೂಲದ ಪದದಿಂದ ಉದ್ಭವಿಸಿದಂತಿದೆ. ಅರ್ಥ ''ಚಿಗುರು'' (ಪಲ್ಲವ), **ಪಲಾಶ** (ಹಸುರೆಲೆ-ಕಡುಹಸುರೆಲೆ ತುಂಬಿದ ಮುತ್ತುಗ, ಹೂ ಎಸಳು), **ಪಲ** (ಹುಲ್ಲು) ಇವೆಲ್ಲ **ಪಲ್ಯಕ್ಕೆ** ಸಂಬಂಧಿಸಿವೆ. ಈ ಎಲೆಗಳ ಗುಚ್ಛಕ್ಕೆ ಪಲಾಶ ಇತ್ಯಾದಿಗೆ ಸಮಾನವಾಗಿ ಇಂಗ್ಲೀಷಿನ foliage, ಪೋರ್ಚುಗೀಸ್ folha, ಲ್ಯಾಟಿನ್ folium, ಹಳೇ ಫ್ರೆಂಚ್ foille, ಇತ್ಯಾದಿಗಳಿವೆ. ಪಾರಸೀಕ ಭಾಷೆಯಿಂದ ಉರ್ದು, ಹಿಂದಿಗಳಲ್ಲಿ ಸೇರಿಕೊಂಡಿರುವ **ಸಬ್ಜೀ** (ಹಸುರು ತರಕಾರಿ),

"ತರಕಾರಿ" (ತೊಪ್ಪಲು, ಕಾಯಿ, ಹೂ ಮೊದಲಾದ ಖಾದ್ಯ ವನಸ್ಪತಿ) ಇವುಗಳಿಗೆ ನಮ್ಮ ಕಾಯಿಪಲ್ಯ ಸಮಾನವಾಗಿದೆ.

ಕಾಯಿ ಪಲ್ಯಗಳಿಂದ ಮಾಡಿದ ಮೇಲೋಗರಕ್ಕೆಲ್ಲ "ಪಲ್ಯ" ಎಂದೇ ಹೆಸರಾಗಿದ್ದರೂ ವಿಶೇಷವಾಗಿ ಪಲ್ಯ ಎನ್ನುವುದು ತರಕಾರಿಯನ್ನು ತಾಳಿಸಿ ( = ನೀರಾರುವವರೆಗೂ ಕಾವಲಿಯಲ್ಲಿ ಇಟ್ಟು) ಮಾಡಿದ ವ್ಯಂಜನಕ್ಕೆ ಅನೇಕ ಪ್ರದೇಶಗಳಲ್ಲಿ ಅನ್ವಯಿಸುತ್ತದೆ. ಕೆಲ ಪ್ರದೇಶಗಳಲ್ಲಿ ಇದಕ್ಕೆ **ತಾಳಿದ** ಎಂಬ ಶಬ್ದ ನಡೆಯುತ್ತದೆ. ಕೆಲ ಪ್ರದೇಶಗಳಲ್ಲಿ ಅದಕ್ಕೆ ಒಣ **ಪಲ್ಯ**ವೆಂಬ ಹೆಸರು ಚಾಲ್ತಿಯಲ್ಲಿದೆ. ಬಹುಶಃ ಇದು ಮರಾಠಿಯ **ಸೂಖೀ ಭಾಜಿ**ಗೆ ಸರಿಯಾಗಿ ನಿರ್ಮಿಸಿಕೊಂಡದ್ದು. ಇಲ್ಲಿ ನಾವು **ಹುಳಿ** ಎನ್ನುವುದಕ್ಕೆ **ಪಾತಳ್ ಭಾಜಿ** (ತೆಳ್ಳನ್ನ ಪಲ್ಯ) ಎಂಬುದು ಅವರ ಶಬ್ದ. ಮರಾಠಿಯ ವಿಶಿಷ್ಟ ಉಚ್ಚಾರ ಕ್ರಮದಿಂದಾಗಿ ಇದನ್ನು "ಪಾತಾಳ ಭಾಜಿ" ಎಂದು ಕನ್ನಡಿಗರ ನಾಲಗೆ ಪರಿವರ್ತಿಸಿದೆ! (ಕೆಲವು ಊಟದ ಮನೆಗಳಲ್ಲಿ ಕೊಡುವ ಪಾತಾಳ ಭಾಜಿ ನಿಜಕ್ಕೂ ಪಾತಾಳ ತಲುಪುವಷ್ಟು ತೆಳ್ಳಗಿರುತ್ತದೆ ಅನ್ನಿ!) ಈ **ಭಾಜೀ** ಶಬ್ದ ಮರಾಠಿಯಲ್ಲಿ ಕಾಯಿಪಲ್ಯಗಳಿಗೆ ಅನ್ವಯಿಸುತ್ತದಾದರೂ ವಾಸ್ತವಿಕವಾಗಿ ಅದು ಬೇಯಿಸಿ ಅಥವಾ ಹುರಿದು-ಕರಿದು ತಯಾರಿಸಿದ ತರಕಾರಿಗೇ ಅನ್ವಯಿಸಬೇಕಾದ್ದು. ಹಿಂದಿ, ಬಂಗಾಲಿಗಳಲ್ಲಿ ಹಾಗೆಯೇ ಇದೆ. ಅದು ಸಂಸ್ಕೃತದ "ಭೃಜ್" ( = ಸುಡು, ಹುರಿ, ಕರಿ) ಧಾತುವಿನಿಂದ ಬಂದದ್ದು – ಅರ್ಥಾತ್ "ತಾಳಿದ"ವೇ.

**ಕೂಟಯುದ್ಧ** ಎಂದು ಪರಶಬ್ದಗಳನ್ನೊಲ್ಲದ ಮಡಿವಂತರು ಕರೆಯುವ, ಹೊಡೆದು ಓಡಿಹೋಗುವ, ಯುದ್ಧ ಪದ್ಧತಿ ನಮಗೆ ಹೊಸದೇನೂ ಅಲ್ಲ; ನಮ್ಮ ಛತ್ರಪತಿ ಶಿವಾಜಿ ಈ ಯುದ್ಧ ಪದ್ಧತಿಯಲ್ಲಿ ಅಪ್ರತಿಮನಾಗಿದ್ದ. ಆ ಪದ್ಧತಿಗೆ ಈಗ ಪ್ರಚಲಿತವಾಗಿರುವುದು **ಗೆರಿಲ್ಲಾ** ಯುದ್ಧವೆಂಬ ವಿದೇಶಿ ಪದ. ಇದು ನಮಗೆ ಬಂದದ್ದು ಇಂಗ್ಲೀಷ್ ಮೂಲಕವಾದರೂ ಅದು ಇಂಗ್ಲೀಷಿಗೆ ಬಂದದ್ದು ಸ್ಪಾನಿಶ್ – ಪೋರ್ಚುಗೀಸ್ ಭಾಷೆಗಳಿಂದ. ಇಂಗ್ಲೀಷಿನಲ್ಲಿ, ರಣರಂಗದಲ್ಲಿ ನೇರವಾಗಿ ಮುಖಾಮುಖಿ ಹೋರಾಡದೆ ಅಡಗಿಕೊಂಡಿದ್ದು ಅಕಸ್ಮಾತ್ತಾಗಿ ದಾಳಿ ಮಾಡಿ ಓಡಿಹೋಗಿ ಅಡಗುವ ಪದ್ಧತಿಗೆ ಆ ಹೆಸರು. ಮೂಲ ಸ್ಪಾನಿಶ್ ಮತ್ತು ಪೋರ್ಚುಗೀಸ್ ಭಾಷೆಗಳಲ್ಲಿ zuerra, guerra ಎಂದರೆ ಯುದ್ಧ, ಹೋರಾಟ. ಅದಕ್ಕೇ lla ಎಂಬ ಕ್ಷುದ್ರಾರ್ಥಕ ಪ್ರತ್ಯಯ ಸೇರಿಸಿ ಅವರು ವಿಶಿಷ್ಟ ಹೋರಾಟ ಪದ್ಧತಿಗೆ ಒಂದು ಶಬ್ದ ಮಾಡಿಕೊಂಡರು. ಅಂತೂ ಆಫ್ರಿಕದ ಅರಣ್ಯಗಳಲ್ಲಿರುವ ಗೊರಿಲ್ಲಾಗಳಿಗೂ ಈ ಗೆರಿಲ್ಲಾಗಳಿಗೂ ಏನೂ ಸಂಬಂಧವಿಲ್ಲ. ಅದನ್ನು ಸೂಚಿಸಲೆಂದೇ ಇಂಗ್ಲೀಷಿನಲ್ಲಿ ಪೋರ್ಚುಗೀಸ್ ಸ್ಪೆಲ್ಲಿಂಗಿಗೆ ಸಮೀಪವಾಗಿ guerrilla, guerilla ಎಂಬ ಸ್ಪೆಲ್ಲಿಂಗನ್ನು ಸ್ವೀಕರಿಸಿದ್ದಾರೆ!

ಇಂದಿನ ಇಲೆಕ್ಟ್ರಿಕ್ ಉಪಕರಣಗಳ ಕಾಲದಲ್ಲಿ ಬಿಸಿ ನೀರು ಕಾಯಿಸುವ ಸಲಕರಣೆಯಾದ **ಗೀಜರ್** (geysar) ಎಂಬುದು ಸಾಕಷ್ಟು ಪರಿಚಿತವೇ ಆದ ಹೆಸರು. ಇದು ಐಸ್‌ಲ್ಯಾಂಡಿಕ್ ಭಾಷೆಯ ಶಬ್ದ: ಅದು ನಿಂತು ನಿಂತು ಉಕ್ಕಿ ಆಕಾಶಕ್ಕೆ ಚಿಮ್ಮುವ ನೈಸರ್ಗಿಕ ಬಿಸಿನೀರಿನ ಕಾರಂಜಿಯೊಂದರ ಹೆಸರು. ಆ ಭಾಷೆಯಲ್ಲಿ geysa ಅಂದರೆ "ಉಕ್ಕಿ ಚಿಮ್ಮು" ಎಂದರ್ಥ. ಅದನ್ನೀಗ ಮಾನವ ನಿರ್ಮಿತ ಬಿಸಿನೀರಿನ ಉಪಕರಣಕ್ಕೆ ಬಳಸುತ್ತೇವೆ.

ವಿದೇಶಿ ಆಳಿಕೆ ಅಥವಾ ವ್ಯಾಪಾರದ ಸಂಗಡ ಅವರ ನಾಣ್ಯ, ತೂಕ, ಅಳತೆ

ಮುಂತಾದವೂ ಬಳಕೆಗೆ ಬರುವುದೊಂದು ಸಾಮಾನ್ಯ ಸಂಗತಿ. ಕೆಲವೊಮ್ಮೆ ಈ ಆಮದುಗಳು ಅನಿರೀಕ್ಷಿತ ಸ್ಥಳಗಳಲ್ಲಿ ಕಾಣಿಸಿಕೊಳ್ಳುತ್ತವೆ. **ಕ್ವಿಂಟಲ್ಲಿನ** ಈ ಕಾಲದಲ್ಲಿ ಮರವೆಗೆ ಸಲ್ಲುತ್ತಿರುವ ತೂಕಗಳಲ್ಲಿ **ಮಣ** ಎಂಬುದೊಂದು. ಇದು ನೋಡುವಾಗ ದೇಶೀಯವೆನಿಸುತ್ತದೆ. ವಾಸ್ತವಿಕವಾಗಿ ಅದು ಅರಬ್ಬಿ **ಮನ್** ಎಂಬುದರ ಒಂದು ರೂಪ. ೧೭ನೇ ಶತಮಾನದಷ್ಟು ಹಿಂದೆಯೇ ಸಿದ್ಧನಂಜೇಶನ ''ಗುರು ಚಾರಿತ್ರ'' ಎಂಬ ಧಾರ್ಮಿಕ ಗ್ರಂಥದಲ್ಲಿ ಹತ್ತಿಯ ''ಒಂದು ಮಣವಿನ ಅಂಡಿಗೆ''ಯ ಪ್ರಸ್ತಾಪ ಬರುತ್ತದೆ. ತೆಲುಗು ತಮಿಳುಗಳಲ್ಲಿಯೂ ಅದು ''ಮಣುಗು'', 'ಮಣಂಗು'' ಇತ್ಯಾದಿಯಾಗಿ ಕಾಣಿಸುತ್ತದೆ. ತುಳುವಿನಲ್ಲಿ ''ಮಣವು'', ''ಮಣು'' ಎಂಬೆರಡು ರೂಪಗಳಲ್ಲಿ ಅದರ ಉಚ್ಚಾರವನ್ನು ನಾನು ಕೇಳಿದ್ದೇನೆ. ಕನ್ನಡದಲ್ಲಿ ಕೂಡ ಆ ರೂಪಗಳು ಇದ್ದವೆಂದು ದಾಖಲೆಗಳಿಂದ ತಿಳಿಯುವುದೊಂದು ವಿಶೇಷ.

ಬಹಳ ದಿನಗಳಿಂದ ನನಗೆ ಕುತೂಹಲಕಾರಿಯಾಗಿರುವ ಒಂದು ಶಬ್ದ **ತೆಂಗು**. ಭಾರತೀಯರ ಸಾಂಸ್ಕೃತಿಕ, ಧಾರ್ಮಿಕ ವಿಧಿಗಳಲ್ಲಿ ಪ್ರಧಾನ ಸ್ಥಾನ ಪಡೆದ ಕಲ್ಪವೃಕ್ಷಕ್ಕೆ ಸಮವೆನ್ನಿಸುವ ವೃಕ್ಷದ ಈ ಫಲಕ್ಕೆ ದ್ರಾವಿಡ ಭಾಷೆಗಳಲ್ಲೆಲ್ಲ ಜ್ಞಾತಿ ಪದಗಳು ಇವೆ. ಯಾರೋ ಒಬ್ಬರು ಇದು ತಮಿಳು ತೇನ್ ( = ಜೇನ್ = ಸವಿ) + ಕಾಯಿಯೆಂಬುದರಿಂದ ರೂಪುಗೊಂಡದ್ದೆಂದು ಹೇಳಿದ್ದನ್ನು ಓದಿದ್ದೆ. ಆದರೆ ತಮಿಳು ವಿದ್ವಾಂಸರ ಮೇರೆಗೆ ಇದು ಅಸಾಧ್ಯ. ಮೊನ್ನೆ ಡಾ. ಕಿದಿಯೂರು ಗುರುರಾಜ ಭಾಗವತರ ''ಆಯುರ್ವೇದ ದ್ರವ್ಯ ಗುಣಸಾರ ಸಂಗ್ರಹ''ವನ್ನು ಮುಗುಚಿ ಹಾಕುವಾಗ ತೆಂಗಿನಕಾಯಿಗಿರುವ ಅನೇಕ ಹೆಸರುಗಳಲ್ಲಿ **ದಾಕ್ಷಿಣಾತ್ಯ** ಎಂಬುದೊಂದು ಎಂದು ಕಂಡೆ. ಹಾಗಾದರೆ ತೆಂಕಣ (ದಾಕ್ಷಿಣಾತ್ಯ)ದಿಂದ ಬಂದ ಕಾಯಿಯೇ ತೆಂಗಿನಕಾಯಿಯೆಂದಿರಬಹುದೆ ?

ಅಂದಹಾಗೆ ತೆಂಗಿನಕಾಯಿಗೆ ಇಂಗ್ಲೀಷಿನಲ್ಲಿ coconut ಎಂದು ಹೆಸರಿಟ್ಟಿದ್ದಾರಲ್ಲವೆ ? ಇದು ಪೋರ್ಚುಗೀಸ್ (ಮತ್ತು ಸ್ಪಾನಿಶ್)ನಿಂದ ತೆಗೆದುಕೊಂಡದ್ದು. ಅಲ್ಲಿ ಆ ಹೆಸರನ್ನೇಕೆ ಇಟ್ಟರು ? coco ಎಂದರೆ ಆ ಭಾಷೆಗಳಲ್ಲಿ ಮುಖವಿಕಾರ ಅಥವಾ ಗಂಟು ಮುಖ. ತೆಂಗಿನಕಾಯಿಯಲ್ಲಿರುವ ಮೂರು ''ಕಣ್ಣು''ಗಳಿಂದ ಅದು ವಿಕಾರವಾದ ಮಾನವ ಮುಖವನ್ನು ಹೋಲುತ್ತದೆ. ಆದ್ದರಿಂದ ಆ ಹೆಸರಂತೆ.

೧೩೨

ಹಿಂದೊಮ್ಮೆ (ಪದಾರ್ಥ-೯೯) ಪ್ರಾಚೀನರಲ್ಲಿ ಮನಸ್ಸಿನ ಅಧಿಷ್ಠಾನದ ಬಗ್ಗೆ ಇದ್ದ ಗೊಂದಲವನ್ನು ಸೂಚಿಸುವ ಶಬ್ದಗಳ ಬಗ್ಗೆ ಚರ್ಚಿಸಿದ್ದೆವು. ಇದೇ ಸರಣಿಯಲ್ಲಿ ಕನ್ನಡದ **ಕರುಳು** ಶಬ್ದವನ್ನು ಸೇರಿಸಬಹುದು. ಕರುಳೆಂದರೇನೆಂಬುದನ್ನು ಅವರು ಅರಿತಿರಲಿಲ್ಲ ವೆಂದಲ್ಲ. ''ಕರುಳಾಂತ್ರಮಾಲೆ'' ಎಂದು ಸ್ಪಷ್ಟವಾಗಿಯೇ ನಿಘಂಟು ಹೇಳುತ್ತದೆ. ನಮ್ಮ ಆಹಾರವನ್ನು ಜೀರ್ಣಿಸುವುದರಲ್ಲಿ ಪ್ರಮುಖ ಪಾತ್ರವಹಿಸುವ ಸುದೀರ್ಘವಾದ ಮಾಲೆಯಂಥ ಅಂಗ ಅದೆಂದು ಅವರಿಗೆ ಗೊತ್ತು. ಹೃದಯದಂತೆ ಅದು ನಿರಂತರವೂ ಮಿಡುಕುತ್ತಿರುವುದು ಬಹುಶಃ ಪುರಾತನರ ಗಮನಕ್ಕೆ ಬಂದಿತ್ತು. ಈ ಲಕ್ಷಣವನ್ನು ನೋಡಿಯೇ ಇರಬೇಕು, ಅವರು ನಮ್ಮ ಮನಸ್ಸಿನ ಕರುಣೆಯ ಇರ್ಕೆ ನಮ್ಮ ಕರುಳಿನಲ್ಲಿದೆಯೆಂದು ಭಾವಿಸಿರಬೇಕು. ಹೀಗೆ ''ಕರುಳು'' ಶಬ್ದ ಕರುಣೆ, ಅಂತಃಕರಣ,

ಮಮತೆಯೆಂಬರ್ಥ ಹೊತ್ತು ಸೊಗಸಾದ ದೇಸಿಗೆ ಜನ್ಮವಿತ್ತಿತು. ''ಕರುಳ ಕಲೆ ಪ್ರಕಟಿತವುಂಟೆ?'' ಎಂದು ಬಸವಣ್ಣನವರು ಕೇಳುತ್ತಾರೆ. ಜನ್ನ ಕವಿ ''ಕಣ್ಣರಿಯದೊಡಂ ಕರುಳರಿಯದೇ?'' ಎಂದು ಕಣ್ಣಿಗಿಲ್ಲದ ಪ್ರೀತಿ ಶಕ್ತಿಯನ್ನು ಕರುಳಿಗೆ ಆರೋಪಿಸುತ್ತಾನೆ. ವಿಶೇಷವಾಗಿ ರಕ್ತಸಂಬಂಧದ ಅತೀಂದ್ರಿಯ ಅರಿವು ಕರುಳಿನಲ್ಲಿದೆ. **ಕರುಳಿನ ಕುಡಿ, ಕರುಳ ಬಳ್ಳಿ, ಕರುಳಿನವರು, ಕರುಳ ಹರಿದುಕೊಳ್ಳು** ಮೊದಲಾದವು ಹೊಕ್ಕುಳ ಬಳ್ಳಿಯ ಸಾದೃಶ್ಯದಿಂದ ಸಂತಾನ, ಸಂಬಂಧ ಇತ್ಯಾದಿಗಳನ್ನು ಸೂಚಿಸುತ್ತವೆ. **ಕರುಳು ಕತ್ತರಿಸಿದಂತಾಗುವುದು, ಕರುಳನ್ನು ಇರಿಯುವುದು** ಮನವನ್ನು ಕಲಕುವುದನ್ನು ಸೂಚಿಸುತ್ತವೆ. ಕರುಳು ಶಬ್ದಕ್ಕೆ ನೆರೆಯ ಮಲೆಯಾಳಿ, ಕೊಡವ, ತುಳು, ಭಾಷೆಗಳಲ್ಲಿ ಸಂವಾದಿ ಪದಗಳಿವೆ. ಅವುಗಳಲ್ಲೆಲ್ಲ ಕರುಳಿನ ಕರುಣಾರ್ಥ ಕುಡಿಬಿಟ್ಟಿದೆಯೋ ಇಲ್ಲವೋ ನಾನರಿಯೆ. ಆದರೆ ತುಳುವಿನಲ್ಲಂತೂ ಆ ಅರ್ಥಗಳು ಇವೆ. ಎಲ್ಲದರಲ್ಲಿಯೂ ಹೃದಯ ಎಂಬ ಅರ್ಥ ಇದೆ.

ಸಂಸ್ಕೃತದಲ್ಲಿ ಕರುಳಿಗೆ ''**ಅಂತ್ರ**'', ''**ಆಂತ್ರ**'' ಪದಗಳಿವೆ. ಆದರೆ ಕರುಣೆಗೂ ಅಂತ್ರಕ್ಕೂ ತಳಕು ಆ ಭಾಷೆಯಲ್ಲಿ ಕಾಣದು. ಪರಂತು, ಇಂಗ್ಲೀಷಿಗೆ ಹೋದರೆ ಅಲ್ಲಿ ಈ ಭಾವನೆಗೆ ಪ್ರತಿಶ್ರುತಿ ಸಿಕ್ಕುತ್ತದೆ. Bowels ಎಂದರೆ ಸುಮಾರಾಗಿ ಕರುಳು. ಈ ಶಬ್ದಕ್ಕೆ ಒಂದು ಕಾಲದಲ್ಲಿ ಅಂತರಂಗ, ಮೃದು ಭಾವನೆಗಳು, ಕರುಣೆ ಎಂಬರ್ಥಗಳಿದ್ದವೆಂದು ಆಕ್ಸ್‌ಫರ್ಡ್ ಕೋಶ ದಾಖಲಿಸುತ್ತದೆ. ಆಧುನಿಕ ನುಡಿಕಟ್ಟಿನಲ್ಲಿ ಆ ಅರ್ಥ ಉಳಿದಿಲ್ಲ. ಈಗ ಅದು ಬರೇ ಆಂತ್ರ ಎಂಬ ಉದರಾಂಗವನ್ನು ಮಾತ್ರ ಸೂಚಿಸುತ್ತದೆ.

ನಮ್ಮ ದೇಶದಲ್ಲೇ ಇತರ ಭಾಷೆಗಳಲ್ಲಿ ಹೀಗೆ ಎದೆಯ ಭಾಗದೊಳಗಿನ ಅಂಗಗಳಿಗೆ ಭಾವನಾತ್ಮಕ ವರ್ತನೆಯನ್ನು ಆರೋಪಿಸುವುದು ಇದ್ದೇ ಇದೆ. ಹಿಂದಿಯ **ಕಲೇಜಾ** ತೆಗೆದುಕೊಳ್ಳಿ. ಬಂಗಾಲಿಯಲ್ಲಿ ಇದೇ **ಕಲಿಜಾ** ಎಂದು, ಮರಾಠಿಯಲ್ಲಿ **ಕಾಳಿಜ** ಎಂದು ಬಳಕೆಯಲ್ಲಿದೆ. ೧೭ನೇ ಶತಮಾನದಿಂದ ಕನ್ನಡದಲ್ಲಿಯೂ ನುಸುಳಿ **ಕಲಿಜ, ಕಾಳಿಜ** ಇತ್ಯಾದಿ ರೂಪಗಳಲ್ಲಿ ಸಾಹಿತ್ಯದಲ್ಲಿ ಗೋಚರಿಸುತ್ತದೆ. ಇದು ಒಡಲೊಳಗಿನ ಪಿತ್ತಕೋಶವನ್ನು ನಿರ್ದೇಶಿಸುವ ಪದ; ಆದರೆ ಮೂತ್ರಪಿಂಡ, ಹೃದಯ ಎಂಬರ್ಥಗಳನ್ನು ಅದು (ಬಹುಶಃ ಗಲಿಬಿಲಿಯಿಂದ) ಸೂಚಿಸುತ್ತದೆ. ಅದಕ್ಕೂ ಪ್ರೀತಿ, ದಾಕ್ಷಿಣ್ಯ, ಚಿಂತೆ, ವ್ಯಥೆ ಮೊದಲಾದ ಅರ್ಥಗಳು ಹುಟ್ಟಿಕೊಂಡಿವೆಯೆಂಬುದು ಗಮನಾರ್ಹ. **ಕಲೇಜಾ ಕಾಂಪ್‌ನಾ** (ಪಿತ್ತಕೋಶ ನಡುಗುವುದು – ಭಯ), **ಕಲೇಜಾ ಫಟನಾ** (ಹೃದಯ ಒಡೆಯುವುದು) ಇತ್ಯಾದಿ ನುಡಿಕಟ್ಟುಗಳು ಪಿತ್ತಕೋಶ, ಮೂತ್ರಪಿಂಡಗಳಿಗೆ ನಿಜಕ್ಕೂ ಇಲ್ಲದ ಕ್ರಿಯೆಗಳನ್ನು ಆರೋಪಿಸುತ್ತವೆ. ಅದನ್ನು ಹೃದಯಕ್ಕೆ, ಮನಸ್ಸಿಗೆ ಸಮೀಕರಿಸಿ ''ಕಲೇಜಾ'' ಎಂದರೆ ಧೈರ್ಯ ಎಂಬರ್ಥವೂ ಹುಟ್ಟಿಕೊಂಡಿದೆ. (ನಾವು ಎದೆ ಗಟ್ಟಿ ಮಾಡಿಕೋ ಎನ್ನುವಂತೆ.) ಕಲ್ಮನ ಎನ್ನಲು **ಪತ್ಥರ್ ಕಾ ಕಲೇಜಾ** ಎನ್ನುತ್ತಾರೆ.

ನಮ್ಮ ನೆರೆಯ ಕೊಂಕಣಿಯಲ್ಲಿ ಕರುಳಿಗೆ **ಆಂತ** (ಸಂ. ಆಂತ್ರ) ಎಂದು ಹೆಸರು. ಆ ಭಾಷೆಯಲ್ಲಿಯೂ ''ಆಂತ್'' ಕನ್ನಡದಲ್ಲಿಯಂತೆ ಆಪ್ತತೆ, ದಯೆ, ಕರುಣೆಗಳ ಅಧಿಷ್ಠಾನವಾಗಿ ಪ್ರಯೋಗದಲ್ಲಿದೆ.

ಮತ್ತೆ ಕಡಲಾಚೆಯ ಸಾಮ್ಯ ನಮಗೆ ಎದುರಾಗುತ್ತದೆ. ಪೋರ್ಚುಗೀಸಿನಲ್ಲಿ ಕರುಳಿಗೆ tripas ಎಂದು ಹೆಸರು. ಅದಕ್ಕೂ ಧೈರ್ಯಕ್ಕೂ ಐಕ್ಯವನ್ನು ಆರೋಪಿಸುವ ನುಡಿಕಟ್ಟು ಆ ಭಾಷೆಯಲ್ಲಿದೆ.

ಅಂತೂ ದಯಾ, ದಾಕ್ಷಿಣ್ಯ, ಧೈರ್ಯ ಗುಣಗಳನ್ನು ಒಡಲಿಗೆ ಅದರೊಳಗಿನ ಅಂಗಗಳಿಗೆ ವ್ಯಾಪಕವಾಗಿಯೇ ಪುರಾತನರು ಆರೋಪಿಸಿದ್ದಾರೆ.

೧೩೩

ಒಂದು ನೂರು ರೂಪಾಯಿ **ದಂಡ** ಹಾಕಿದರು ಎನ್ನುತ್ತೇವೆ. ಮಾಡಿದ ಯಾವುದೋ ತಪ್ಪಿಗಾಗಿ ಸರಕಾರ ಅಥವಾ ಯಾವುದೇ ಅಧಿಕಾರ ಹೊಂದಿದ ಅಧಿಕಾರಿ ಇಷ್ಟು ಹಣವನ್ನು ವಸೂಲು ಮಾಡಿ ಅಪರಾಧಿಯನ್ನು ಬಿಟ್ಟ ಎಂಬುದು ಅಭಿಪ್ರಾಯ. ''ದಂಡ'' ಎಂಬ ಪದದ ಮೂಲಾರ್ಥ ಬಡಿಗೆ ಅಥವಾ ಕೋಲು. ಹೀಗೆ ದಂಡ ಎಂದರೆ ದೈಹಿಕ ಶಿಕ್ಷೆಯೇ ಸೈ. ಅಪರಾಧಿಗೆ ಕೊಡುವ ಪೆಟ್ಟೇ ನಿಜವಾಗಿ ದಂಡ; ಹಾಗೆ ಕೊಡುವ ಶಿಕ್ಷೆಯ ಪ್ರಕ್ರಿಯೆ **ದಂಡನೆ**. ''ಮರಣದಂಡನೆ''ಯೆಂದರೆ ಘೋರ ಅಪರಾಧಕ್ಕೆ ಕೊಡುವ ಪರಮ ಶಾರೀರಿಕ ಶಿಕ್ಷೆ. ಅದಕ್ಕೆ ಕಡಿಮೆ ಮಟ್ಟದ ಅಪರಾಧಕ್ಕೆ ಸೆರಮನೆಯ ದಂಡನೆ ಕೊಡಬಹುದು. ಅಥವಾ ಹಿಂದಿನ ಕಾಲದಲ್ಲಿ ಸಾಮಾನ್ಯವಾಗಿದ್ದಂತೆ ಕೊರಡೆಯೇಟು ಕೊಡುವುದೂ ದಂಡನೆಯೇ. ಚಿಲ್ಲರೆ ಅಪರಾಧಗಳಿಗೆ ಇಂಥ ದಂಡನೆಯ ಬದಲಿಗೆ ಆರ್ಥಿಕ ದಂಡನೆ ಕೊಡುವುದು – ಅದರಲ್ಲಿ ಬೆತ್ತದ ಏಟು ಸೇರಿರದಿದ್ದರೂ – ದಂಡನೆಯೇ. ಇದು ವಿಸ್ತರಣೆಯಿಂದ ರೂಪುಗೊಂಡ ಗೌಣಾರ್ಥ. ಇದಲ್ಲದೆ ಬರಿಯ ''ಛೀಮಾರಿ'' ಹಾಕುವುದಕ್ಕೆ **ವಾಗ್ದಂಡ** ಅಥವಾ **ವಾಗ್ದಂಡನೆ** ಎಂದು ಶಾಸ್ತ್ರಗಳು ಹೆಸರಿಟ್ಟಿವೆ. ಕಡೆಗೀಗ ಬಡಿಗೆ ಉಪಯೋಗಿಸುವುದಕ್ಕೆ ''ದಂಡ''ವೆಂಬ ಹೆಸರು ತಪ್ಪಿಯೇ ಹೋಗಿದೆ. ಬಂಧನದಲ್ಲಿಡುವುದು ಕೂಡ ಹಾಗೆಯೆ. ಅವಕ್ಕೆಲ್ಲ ''ಶಿಕ್ಷೆ'' ಎಂಬ ಶಬ್ದ ಬಳಕೆಗೆ ಬಂದಿದೆ.

ಈ ''ದಂಡ'' ಶಬ್ದ ದೇಶದ ಎಲ್ಲ ಕಡೆ ಆರ್ಥಿಕ ದಂಡವೆಂಬ ಅರ್ಥದಲ್ಲಿ ಪ್ರಯೋಗದಲ್ಲಿಲ್ಲ. ದಕ್ಷಿಣ ಕನ್ನಡದಲ್ಲಿ , ಮತ್ತು ನನಗೆ ತಿಳಿದ ಮಟ್ಟಿಗೆ ಕೇರಳದಲ್ಲಿ ಕೂಡ **ಅಪರಾಧ** ಎಂಬ ಶಬ್ದವನ್ನು ಉಪಯೋಗಿಸುತ್ತಾರೆ. ''ನಾಲ್ಕು ರೂಪಾಯಿ ಅಪರಾಧ ಕೊಡಬೇಕಾಯಿತು'' ಎನ್ನುತ್ತಾರೆ. ಅಪರಾಧ ಎಂದರೆ ಎಲ್ಲರಿಗೂ ಗೊತ್ತಿರುವಂತೆ ''ತಪ್ಪು''. ''ರಾಧನ'' ಅಲ್ಲದ್ದು ''ಅಪರಾಧ''. ''ರಾಧ್'' ಧಾತುವಿಗೆ ಸಾಧಿಸು, ಮೆಚ್ಚಿಸು, ಸಮಾಧಾನಪಡಿಸು ಇತ್ಯಾದಿ ಅರ್ಥಗಳು ವೇದಕಾಲದಿಂದ ನಡೆದು ಬಂದುವು. ಮೆಚ್ಚದಿರುವಂಥ ಕೃತ್ಯ ಅಪರಾಧ. ಅಕೃತ್ಯ ಅನ್ನಿ. ಅಕೃತ್ಯಕ್ಕೆ ಕೊಡುವ ಶಿಕ್ಷೆಯೂ ಅಪರಾಧವೆಂಬರ್ಥವನ್ನು ಸಂಪಾದಿಸಿಕೊಂಡಿತು, ಕೆಲ ಪ್ರದೇಶಗಳಲ್ಲಿ ಮಾತ್ರ ಅನ್ನಿ.

ಇನ್ನು ''ಶಿಕ್ಷಾ'' ಎನ್ನುವುದೂ ನೇರವಾಗಿ ದಂಡನೆಯೆಂಬರ್ಥದ ಪದವಲ್ಲ. **ಶಿಕ್ಷೆಗೆ** ಕಲಿಸುವಿಕೆ, ತರಬೇತು ಮಾಡುವಿಕೆ, ಸರಿದಾರಿಯಲ್ಲಿಡಲು ಕೊಡುವ ಉಪದೇಶ, ಅದಕ್ಕಾಗಿ ತೆಗೆದುಕೊಳ್ಳುವ ಕ್ರಮ ಇತ್ಯಾದಿ ಅರ್ಥಗಳು. **ತಿದ್ದು** ಎಂದೂ ಹೇಳಬಹುದು. ತಿದ್ದುವುದಕ್ಕೆ ಕೆಲ ವೇಳೆ ದೇಹದಂಡನೆ ಮೊದಲಾದ ಉಗ್ರಕ್ರಮಗಳನ್ನು ಕೈಕೊಳ್ಳಬೇಕಾಗುತ್ತದೆ. ಆದ್ದರಿಂದ ಅದೂ ಶಿಕ್ಷೆ (ಶಿಕ್ಷಣ ಎಂಬುದು ಚಾಲ್ತಿಯಲ್ಲಿದೆ ತಾನೆ). ಕಡೆಗೀಗ ಈ ಕಡೆಯ ಅರ್ಥವೇ, ದೇಹದಂಡನೆಯೇ (ಕನ್ನಡದಲ್ಲಿ) ಬಲವಾಗಿಬಿಟ್ಟಿದೆಯಷ್ಟೆ.

''ದಂಡ'' ಶಬ್ದ ತನ್ನ ಮೂಲಾರ್ಥವನ್ನುಳಿಸಿಕೊಂಡು ಪ್ರಯೋಗದಲ್ಲಿರುವುದೂ ಕಾಣಸುತ್ತದೆ. ಬ್ರಹ್ಮಚಾರಿ ಅಥವಾ ಸಂನ್ಯಾಸಿಗಳು **ದಂಡ**ವನ್ನು ಹಿಡಿದು ಹೋಗುತ್ತಾರೆ

ಎಂಬಲ್ಲಿ ಅದು ನಿಜವಾಗಿಯೂ ಕೋಲು ಅಥವಾ ಬಡಿಗೆಯೇ. **ದಂಡ ಪ್ರಣಾಮ** ಎಂಬಲ್ಲಿ ದಂಡದ ಹಾಗೆ ನೆಟ್ಟಗೆ ಅಡ್ಡಬಿದ್ದು ಮಾಡುವ ನಮಸ್ಕಾರ. ಇದಕ್ಕಿಂತಲೂ ಚಾಚಿದ ಅರ್ಥ **ದಂಡಧಾರಿ** (ದಂಡಿಸುವ ಅಧಿಕಾರವುಳ್ಳ ಅಧಿಕಾರಿ) ಎಂಬಲ್ಲಿ ಕಾಣಿಸುತ್ತದೆ. **ದಂಡ ನೀತಿ** ಎಂಬುದು ಅಧಿಕಾರ ನಡೆಸುವವರು ಅನುಸರಿಸಬೇಕಾದ ರೀತಿ ನೀತಿ ರಾಜನೀತಿ. ಬೇರೆಲ್ಲ ಉಪಾಯಗಳು ನಡೆಯಲಾರದೆ ಹೋದರೆ ಅಧಿಕಾರ ನಡೆಸುವವರು ಬಳಸುವ ಉಪಾಯವನ್ನೂ ''ದಂಡನೀತಿ'' ಎನ್ನುತ್ತೇವೆ. ಈ ಶಬ್ದಗಳಿಂದೆಲ್ಲ ಧ್ವನಿಸುವ ಸಂಗತಿಯೆಂದರೆ, ಪರರ ಮೇಲೆ ಅಧಿಕಾರ ನಡೆಸುವವರಿಗೆ ದಂಡಿಸುವ ಅಧಿಕಾರ ಇರಲೇಬೇಕು ಎಂಬ ಸಾವಿರಾರು ವರ್ಷಗಳ ಸಾಮಾಜಿಕ ಅನುಭವ. ಈ ನೀತಿ ಯಾವಾಗಲೂ ನೀತಿಯುತವಾಗಿಯೇ ಇರುವುದೆಂಬ ಗ್ಯಾರಂಟಿ ಇಲ್ಲ. ಹೀಗೆ ನೀತಿ ಸಮ್ಮತವಲ್ಲದಿದ್ದರೂ ರಾಜಕಾರ್ಯದಲ್ಲಿ ಕೆಲ ವೇಳೆ ಉಪಯೋಗಿಸಬೇಕಾಗುವ ಉಪಾಯಕ್ಕೆ ಚಾಣಕ್ಯ **ಉಪಾಂಶು ದಂಡ** ಎಂದು ಹೆಸರಿಟ್ಟಿದ್ದಾನೆ. ಅದರ ಅರ್ಥ ವಿಚಾರಣೆಯಿಲ್ಲದೆ ಗುಟ್ಟಾಗಿ ಕೊಲ್ಲಿಸುವುದು ಅಥವಾ ಮರ್ದಿಸುವುದು. ಸರ್ವಾಧಿಕಾರಿಗಳ ಕೈಯಲ್ಲಿ ಈ ''ಉಪಾಂಶುದಂಡ'' ಒಂದು ಭಯಪ್ರದವಾದ ಆಯುಧವಾಗಿರುತ್ತದೆ.

ಹೋಲಿಕೆಗಾಗಿ ಇಂಗ್ಲೀಷಿನ Penalty (ಪೆನಾಲ್ಟಿ)ಯನ್ನು ತೆಗೆದುಕೊಳ್ಳಬಹುದು. ಪ್ರಸ್ತುತವಾಗಿ ಈ ಪದ ಯಾವುದೊಂದು ಕಾನೂನು, ನಿಯಮ ಅಥವಾ ಒಡಂಬಡಿಕೆಯನ್ನು ಮುರಿದಿದ್ದಕ್ಕೆ ಪ್ರತಿಯಾಗಿ ಕೊಡುವ ಶಿಕ್ಷೆ, ವಿಶೇಷವಾದ ಧನದಂಡವನ್ನು ನಿರ್ದೇಶಿಸುತ್ತದೆ. ಆದರೆ ಪ್ರಥಮತಃ ಅದು ಲ್ಯಾಟಿನ್ನಿನ Poena (= ನೋವು = ದೇಹದಂಡನೆ) ಎಂಬ ಶಬ್ದದಿಂದ ಹಳೇ ಫ್ರೆಂಚ್ ಮೂಲಕ ಇಂಗ್ಲೀಷಿನಲ್ಲಿ ಸೇರಿದ್ದು. ಆದರೆ ಸಾಧಾರಣವಾಗಿ ಪ್ರಚಲಿತವಾದ ಇಂಗ್ಲಿಷ್ ಪದ fine (ಫೈನ್) ಲ್ಯಾಟಿನ್ನಿನ finis (ಫಿನಿಸ್ = ಸಮಾಪ್ತಿ)ಯಿಂದ ಬಂದಿದ್ದು. ಅದಕ್ಕೆ ಯಾವುದಾದರೊಂದು ದಾವೆಯ ಕೊನೆಯ ನಿರ್ಣಯಕ್ಕಾಗಿ ಕೊಡುವ ಮೊತ್ತ ಎಂದು ಅರ್ಥ. (ನವಿರು, ಸೂಕ್ಷ್ಮ ಎಂಬರ್ಥದ fine ಬೇರೆ ಮೂಲದ್ದೇ ಪದ) ಅರ್ಥಾತ್ ಅಂತಿಮ ಪರಿಹಾರ ಧನವೇ fine. ಅದೂ ಧನದಂಡ ಎಂದೇ ಇಂದು ಅರ್ಥಕೊಡುತ್ತದೆ.

ಯಾವುದೊಂದು ರುಚಿಕರವಾದ ಪದಾರ್ಥವನ್ನು **ಮಧುರ** ಎನ್ನುತ್ತೇವೆ. ಮಧುರವಾದ ಪಾನಕ ಇತ್ಯಾದಿ. ಅದರ ಅರ್ಥವನ್ನೇ ವಿಸ್ತರಿಸಿ ''ಮಧುರ ಸ್ವರ''ವೆಂದಲ್ಲದೆ ''ಮಧುರವಾದ ತುಟಿ''ಗಳು ಇತ್ಯಾದಿಯಾಗಿ ಮತ್ತು ಆಲಂಕಾರಿಕವಾಗಿ ''ಮಧುರಸ್ಮರಣೆ'' ಮೊದಲಾದ ಅಮೂರ್ತ ಕಲ್ಪನೆಗಳಿಗೂ ಅನ್ವಯಿಸುತ್ತೇವೆ. ಆದರೆ ಈ ಮಧುರದ ಹಿಂದಿನ ಅನಾದಿ ಎನ್ನಬಹುದಾದ ಚರಿತ್ರೆಯನ್ನು ಯೋಚಿಸುವುದಿಲ್ಲ.

**ಮಧುರ**ದಲ್ಲಿ **ಮಧು** ಮತ್ತು ರ ಎಂಬ ಎರಡು ಅಂಗಗಳಿವೆ. ''ರ'' ಎಂಬುದು ಬರೇ ವಿಶೇಷಣ ಪ್ರತ್ಯಯ. ಮಧುವಿನಂತಿರುವುದು ಮಧುರ. ''ಮಧು''ವೆಂದರೆ ಮೂಲತಃ ಜೇನು. ಅನಂತರ ಅದರಿಂದ ಮಾಡಿದ ಮಾದಕ ಪೇಯ. ಜೇನು ಎಂದ ಮೇಲೆ ಸಿಹಿಯಾದದ್ದು; ಆದ್ದರಿಂದ ರುಚಿಯಾದದ್ದು, ಮೆಚ್ಚುವಂಥಾದ್ದು, ಸಂತೋಷಕರವಾದದ್ದು.

ಹೀಗೆನ್ನುವಾಗ **ಮಧು** ಅಥವಾ **ಜೇನು** ಮನುಷ್ಯನಿಗೆ ಪರಿಚಯವಾದ ಅತಿ ಪ್ರಾಚೀನ ಸಿಹಿ ವಸ್ತು ಎಂಬುದನ್ನು ನಾವು ಗಮನಿಸುವುದಿಲ್ಲ. ಮನುಷ್ಯನು ಬಹುಶಃ ಕರಡಿಯಿಂದ ಜೇನು ಕದಿಯುವುದನ್ನು ಕಲಿತ. ಬೇಟೆಯಾಡಿ, ಗಡ್ಡೆ ಗೆಣಸು, ಹಣ್ಣು ಹಂಪಲಿನ ಮೇಲೆ

ಜೀವಿಸುತ್ತಿದ್ದ ಪೂರ್ವಶಿಲಾಯುಗಾವಸ್ಥೆಯಲ್ಲೇ ಅದು ಅವನಿಗೆ ಪರಿಚಿತವಾಗಿರಬೇಕು. ಏಕೆಂದರೆ ನೈಸರ್ಗಿಕ ಪರಿಸರದಲ್ಲೇ ಅದು ಜೇನ್ನೊಣ ಮೊದಲಾದ ಕೀಟಗಳಿಂದ ತಯಾರಿಸಲ್ಪಡುತ್ತದೆ. ಸಂಸ್ಕೃತವಲ್ಲದೆ ಗ್ರೀಕ್ (midu), ಸ್ಲಾವಿಕ್ (medu), ಲಿಥುವೇನಿಯನ್ (midus), ಇಂಗ್ಲೀಷ್ (meodu) ಭಾಷೆಗಳಲ್ಲಿ ಜ್ಞಾತಿಗಳಿರುವ ಈ ಪದ ''ಮಧು'' ಎಂಬ ರೂಪದಲ್ಲಿ ಆದಿ ಭಾರೋಪ್ಯ ಭಾಷೆಯಲ್ಲಿ ಇದ್ದಿರಬೇಕೆಂದು ಊಹಿಸುತ್ತಾರೆಂಬುದು ಆಶ್ಚರ್ಯವಲ್ಲ. ಯಾವುದೇ ತರದ ಬೇಸಾಯವನ್ನು ಅರಿಯದ ಕಾಲದಿಂದ ನಮ್ಮ ಪೂರ್ವಜರಿಗೆ ಈ ಪದಾರ್ಥ ತಿಳಿದಿತ್ತು. ಕಾಲಾಂತರದಲ್ಲಿ ಅದರ ಮದ್ಯವನ್ನು ಅವರು ಮಾಡಿದರು. ವೇದಗಳಲ್ಲಿ ಕೂಡ ಅದರ ಅನೇಕಾರ್ಥ ಪ್ರಯೋಗಗಳಿವೆ. ಹೀಗೆ ''ಮಧುರ'' ಎಂಬುದು ಅನಾದಿಯಾದ ಪದ.

೧೩೪

''**ಖಂಡತುಂಡ**ವಾಗಿ ಮಾತಾಡಿದನು'' ಎನ್ನುವಾಗ ನಮ್ಮ ಅಭಿಪ್ರಾಯ ನಿರ್ದಾಕ್ಷಿಣ್ಯವಾಗಿ ಎಂಬುದು ಸ್ಪಷ್ಟ. ಅಂದರೆ ಈ ಜೋಡಿ ಪದಗಳಲ್ಲಿ ''ಖಂಡ'' ಎಂಬುದರ ಮೂಲ ನಿಶ್ಚಿತಃ ಕಡಿದು ಚೂರು ಮಾಡಿದ್ದು ಎಂದು. ಯಾರಿಗಾದರೂ ಸಿಟ್ಟು ಅಥವಾ ಬೇಜಾರಿಗೆ ಕಾರಣವಾದೀತೆಂಬುದನ್ನು ಲೆಕ್ಕಿಸದೆ ಅಭಿಪ್ರಾಯ ಹೇಳುವುದು. ಇನ್ನೊಬ್ಬನ ಅಭಿಪ್ರಾಯದಲ್ಲಿರುವ ಕೊರತೆಗಳನ್ನು ನಿಷ್ಠುರವಾಗಿ ಎತ್ತಿ ತೋರಿಸುವುದೆಂದರೆ ಅದನ್ನು ಕತ್ತರಿಸಿದಂತೆಯೇ ಅಲ್ಲವೆ? ಆದರೆ **ತುಂಡ** ಎಂದರೇನು? ಪರಿಷತ್ತಿನ ನಿಘಂಟುಕಾರರ ಪ್ರಕಾರ ಅದು **ತುಂಡು** ಎಂಬ ದೇಶ್ಯ ಪದದ್ದೇ ರೂಪ. ಒಂದೇ ಅರ್ಥದ ಎರಡು ಪದಗಳನ್ನು ಜತೆಜತೆಯಾಗಿ ಬಳಸುವುದು ಭಾಷೆಯಲ್ಲಿ ಸಾಮಾನ್ಯ. ಅರ್ಥಕ್ಕೆ ಒತ್ತು ಕೊಡುವ ಸಲುವಾಗಿ ಹೀಗೆ ಮಾಡಲಾಗುತ್ತದೆ. ಆದರೆ ಇಲ್ಲಿ ಹಾಗಾಗಿದೆಯೇ? ಸಂಸ್ಕೃತದಲ್ಲಿ **ತುಂಡ** ಎಂಬ ಅಕಾರಾಂತ ಶಬ್ದವಿದ್ದು ಅದು **ತೋಂಡ್** ಎಂಬ ರೂಪದಲ್ಲಿ ಮರಾಠಿಯಲ್ಲಿದೆ. ಅದರ ಅರ್ಥ ಮೋರೆ, ಬಾಯಿ, ಮುಖ ಇತ್ಯಾದಿ. ಹಿಂದಿಯಲ್ಲಿ **ಮುಹತೋಡ್ ಜವಾಬ್** (ಮುಖ ಕಡಿದು ಉತ್ತರಿಸುವುದು) ಎಂಬ ಪ್ರಯೋಗವಿದೆ. ''ಖಂಡತುಂಡ'' ಎಂಬುದು ಮುಹತೋಡ್‌ಗೆ ಸಂವಾದಿಯಾದ ವಾಗ್ವಿಲಾಸವೆ? ಪರಿಷತ್ ನಿಘಂಟಿನಲ್ಲಿ **ಖಂಡತುಂಡು** ಎಂಬ ಇನ್ನೊಂದು ರೂಪವನ್ನು ಸೋದಾಹರಣವಾಗಿ ಕೊಟ್ಟಿದ್ದಾರೆ. ಇದು ನನ್ನ ಸಂದೇಹವನ್ನು ತೀರ್ಮಾನಿಸುತ್ತದೆಂಬ ಸಮಾಧಾನಕ್ಕೆ ಆಸ್ಪದವಿದೆ. ಪುರಂದರದಾಸರ ''ಖಂಡತುಂಡನೆ ಮಾಡಿ'' ಎಂಬ ಪ್ರಯೋಗ ಇದನ್ನು ಸಮರ್ಥಿಸೀತು. ಆದರೆ ''ಖಂಡತುಂಡ ಜವಾಬು'' ಎಂಬುದು ನನ್ನ ತರ್ಕಕ್ಕೆ ಬೆಂಬಲ ಕೊಡುತ್ತದೆ. **ಖಂಡತುಂಡು, ಖಂಡತುಂಡ** ಇವೆರಡು ಬೇರೆ ಬೇರೆ ತಾತ್ಪರ್ಯದ ಬೇರೆ ಬೇರೆ ಶಬ್ದಗಳೇ ಇರಬಹುದು.

ಕಾಳು ಮೆಣಸಿಗೆ ಇಂಗ್ಲೀಷಿನಲ್ಲಿ Pepper ಎಂದು ಹೆಸರಿರುವುದು ಸರ್ವವಿದಿತ. ಈ ಕೋಡಿನ ಕಾಳು ಯುರೋಪ್ ಮೊದಲಾದ ದೇಶಗಳಿಗೆ ಬಹಳ ಪ್ರಾಚೀನ ಕಾಲದಿಂದ ರಫ್ತಾಗುತ್ತಿದ್ದದ್ದು ಭಾರತದಿಂದ – ಅದೂ ಕರ್ನಾಟಕ ಮತ್ತು ಕೇರಳದ ಕರಾವಳಿಯಿಂದ ಎನ್ನುವುದು ಪ್ರಸಿದ್ಧ. ದಕ್ಷಿಣದ ಭಾಷೆಗಳಲ್ಲೆಲ್ಲ ಮೆಣಸಿಗೆ **ಮಿಳಗು**, **ಮುಳಗು** (ತಮಿಳು-ಮಲೆಯಾಳಿ), **ಮೆಳಸು**, **ಮೆಣಸು** (ಕನ್ನಡ), **ಮುಣ್ಚ**, **ಮೊಣಂಚಿ** (ತುಳು),

ಮಿರಿಯ (ತೆಲುಗು) ಎಂಬ ಪರಸ್ಪರ ಹೋಲಿಕೆಯುಳ್ಳ ಪದಗಳಿವೆಯಲ್ಲದೆ ಈ ಶಬ್ದಗಳಿಗೆ ಸಂವಾದಿಯಾದ **ಮರಿಚ** ಎಂಬುದು ರಾಮಾಯಣದಷ್ಟು ಹಿಂದೆಯೇ (ಅರಣ್ಯಕಾಂಡ, ೩೫, ೨೩) ಸಂಸ್ಕೃತದಲ್ಲಿ ಪ್ರವೇಶಿಸಿದೆ. (ಸೀತಾಪಹರಣಕ್ಕೆ ನೆರವಾಗಲು ಮಾಯಾಮೃಗರೂಪ ಧರಿಸಿದ ಮಾರೀಚನ ಹೆಸರಿಗೂ 'ಮರಿಚ'ಕ್ಕೂ ಸಂಬಂಧವಿರಬಹುದೆ? ಮಾರೀಚನು ಮೆಣಸಿನಂತೆ ತೀಕ್ಷ್ಣನಾಗಿದ್ದನೆಂಬುದರಿಂದ ಆ ಹೆಸರು ಇಟ್ಟಿರಬಹುದೆ? ಎಂಬುದು ಕಗ್ಗಂಟಾದ ಪ್ರಶ್ನೆ. ಅವನು ಮರೀಚಿಯ ಮಗನಾದ್ದರಿಂದ ಆ ಹೆಸರೆಂದು ಹೇಳಲಾಗಿದೆ. ಇದು ಸೂರ್ಯನ ಕಿರಣಗಳಿಗೆ ಸಂಬಂಧಿಸಿದ್ದು. ಆದರೂ ಎರಡೂ ತೀಕ್ಷ್ಣವಾಗಿವೆಯೆಂಬುದು ಕುತೂಹಲಕರ ಹೋಲಿಕೆ).

ಆದರೆ ಈ ಕಾಳು ಪಶ್ಚಿಮ ದೇಶಗಳಿಗೆ ಹೋದಾಗ ಬೇರೆಯೆ ಹೆಸರು ಹೇಗೆ ಬಿತ್ತು? (ಲ್ಯಾಟಿನ್ piper, ಗ್ರೀಕ್ piperi, ಹಳೆ ಸ್ಯಾಕ್ಸನ್ pipari, pepar, ಹಳೇ ಜರ್ಮನ್ pfeffar ಇಂಗ್ಲಿಷ್ pepper) ಇವೆಲ್ಲ ಶಬ್ದಗಳಿಗೆ ಮೂಲ ಸಂಸ್ಕೃತದ **ಪಿಪ್ಪಲೀ** ಎಂದು ಕೋಶಗಳು ಹೇಳುತ್ತವೆ. ''ಪಿಪ್ಪಲೀ'' ಎಂಬ ಹೆಸರು ಸಂಸ್ಕೃತದಲ್ಲಿ ಹಲವು ತೀಕ್ಷ್ಣ ರಸದ ವನಸ್ಪತಿಗಳಿಗೂ ಅವುಗಳಲ್ಲೊಂದರ ಬೇರಿಗೂ ನಡೆಯುತ್ತದೆ. ಹೊಸಗನ್ನಡ **ಹಿಪ್ಪಲಿ**.

ಹೀಗೆ ನಮ್ಮ ಒಂದು ವನಸ್ಪತಿ ವಿದೇಶಕ್ಕೆ ಸಂಸ್ಕೃತದ ಒಂದು ಅನಿಶ್ಚಿತ ಹೆಸರು ಹೊತ್ತುಕೊಂಡು ಹೋಗಿದೆ. ಅಲ್ಲದೆ ಅಲ್ಲಿನ ನುಡಿಕಟ್ಟಿನಲ್ಲಿ ಸೇರಿಕೊಂಡಿದೆ. Peppering ಎಂದರೆ ಮೆಣಸಿನಪುಡಿ ಹಾಕುವುದು, ಯಾವುದಾದರೂ ತಪ್ಪಿಗೆ ತೀಕ್ಷ್ಣವಾದ ಶಿಕ್ಷೆ ಕೊಡುವುದು; ಮತ್ತು ಯುದ್ಧದಲ್ಲಿ ಕ್ಷಿಪಣಿಗಳನ್ನು ಪುಂಖಾನುಪುಂಖವಾಗಿ ಸುರಿಸುವುದು.

ನಮ್ಮಲ್ಲಿ ಕೂಡ **ತಲೆಯ ಮೇಲೆ ಮೆಣಸು ಅರೆಯುವುದು** (ನಿರಂತರವಾಗಿ ಪೀಡಿಸುವುದು), **ಕಣ್ಣಿಗೆ ಮೆಣಸಿನ ಪುಡಿ ಹಾಕುವುದು** (ದಿಕ್ಕು ತಪ್ಪಿಸುವಂತೆ ವಿಸ್ಮಯವಾಗುವುದು), ಇತ್ಯಾದಿ ನುಡಿಕಟ್ಟುಗಳು ಉದ್ಭವಿಸಿವೆ. ''ಮುತ್ತಂ ಮೆಳಸಂ ಕೋದಂತಿರೆ'' (ಮುತ್ತನ್ನೂ ಮೆಣಸನ್ನೂ ಒಂದೇ ಸರದಲ್ಲಿ ಪೋಣಿಸಿದಂತೆ) ಎಂಬ ಪ್ರಾಚೀನ ನುಡಿಕಟ್ಟು ಹೊಂದಿಕೆಯಿಲ್ಲದ ಜೋಡಣೆಯನ್ನು ನಿರ್ದೇಶಿಸುತ್ತದೆ.

ಒಂದು ವಿಶೇಷವೆಂದರೆ ಕರ್ನಾಟಕದ ಕೆಲವು ಪ್ರದೇಶಗಳಲ್ಲಿ ಈಗ ಮೆಣಸು ಎಂದರೆ **ಕೆಂಪು ಮೆಣಸಿನಕಾಯಿ**ಗೇ ಹೆಸರಾಗಿದೆ. ಇದು ದಕ್ಷಿಣ ಅಮೆರಿಕದಿಂದ ಪೋರ್ಚುಗೀಸರು ಇಲ್ಲಿಗೆ ತಂದ ಸಸ್ಯವಾಗಿದ್ದು ದಕ್ಷಿಣ ಭಾರತದವರ ನಾಲಗೆಯ ಮೇಲೆ ಪ್ರಭುತ್ವ ಸಾಧಿಸಿ ಹಿಂದೆ ಕಾಳು ಮೆಣಸನ್ನು ಬಳಸುತ್ತಿದ್ದ ಅಡಿಗೆ ಪದಾರ್ಥಗಳಲ್ಲೆಲ್ಲ ಸ್ಥಾನಾಪನ್ನವಾಗಿದೆ. ಇದಕ್ಕಿರುವ chili, chilli ಎಂಬ ಇಂಗ್ಲೀಷ್ ಹೆಸರು ದಕ್ಷಿಣ ಅಮೆರಿಕದ ಒಂದು ಮೂಲ ನಿವಾಸಿ ಭಾಷೆಯಾದ Aztecನಿಂದ ಸ್ಪಾನಿಶ್ (chile) ಮೂಲಕ ಆಮದಾದ್ದು.

''ಕೃಷ್ಣದೇವರಾಯನ ದಿನಚರಿ''ಯೆಂಬ ಸ್ವಾರಸ್ಯಕರ ಪುಸ್ತಕದಲ್ಲಿ ಕೆಲ ವಿಶೇಷ ಶಬ್ದಗಳು ಬರುತ್ತವೆ. ಉದಾಹರಣೆಗೆ **ತಿಗುಳಾಣ್ಯ, ತುರುಕಾಣ್ಯ** ಇತ್ಯಾದಿ. ಸನ್ನಿವೇಶದಿಂದ ಸ್ಪಷ್ಟವಾಗಿ ತಿಳಿಯುವಂತೆ, ಒಂದು ಜನವರ್ಗದ ಹೆಸರಿಗೆ **ಆಣ್ಯ**ವೆಂಬ ಪ್ರತ್ಯಯ ಸೇರಿಸಿ ಆ ಜನಾಂಗಗಳ ವಾಸ ಅಥವಾ ಆಳ್ವಿಕೆಯ ಪ್ರದೇಶ ಎಂಬರ್ಥ ಬರಿಸುವ ಪದಗಳಿವು. ಕ್ರಮವಾಗಿ ತಮಿಳು ದೇಶ, ತುರುಕ ರಾಜ್ಯ ಎಂಬರ್ಥ ಈ ಪದಗಳಿಗೆ. ಈ ಪದಗಳಿಗೆ ಸಂವಾದಿಯಾಗಿ ಇಂದಿಗೂ **ತೆಲಂಗಾಣಾ** ಚಲಾವಣೆಯಲ್ಲಿದೆ. ಹಿಂದಿನ ಹೈದರಾಬಾದ್ ಸಂಸ್ಥಾನದ ತೆಲುಗು ಪ್ರದೇಶಗಳಿಗೆ ''ತೆಲಂಗಾಣ'' ಎಂಬ ಅಭಿಧಾನ ಇರುವುದು

ನೋಡಿದರೆ "ಆಣ್ಯ" ಎಂಬುದರ ಒಂದು ರೂಪ "ಆಣಾ" ಎಂದು ವಿಶದವಾಗುತ್ತದೆ. ಆದರೆ ಈ "ಆಣಾ" ಎಲ್ಲಿಯದು? ಅದು ಪಾರಸೀಕ ಮೂಲದ್ದೆ ಇರಬೇಕು. ಅದಕ್ಕೆ ಸಂಬಂಧಿಸಿದ್ದು ಎಂಬರ್ಥದಲ್ಲಿ **ಆನಾ** ಪ್ರತ್ಯಯ ಪಾರಸೀಕ ಭಾಷೆಯಲ್ಲಿದೆ. "ಸಾಲಾನಾ" (ವಾರ್ಷಿಕ), "ಮಾಹೆಯಾನಾ" (ಮಾಸಿಕ) ಇತ್ಯಾದಿಗಳು ನೆನಪಿಗೆ ಬರುತ್ತವೆ. ಬಹಮನಿ ಮತ್ತು ಅದರ ತುಣುಕುಗಳಾದ ವಿಜಾಪುರ ಗೋಲ್ಕೊಂಡಾ ಮತ್ತು ಅನಂತರದ ಹೈದರಾಬಾದ್ ಸಂಸ್ಥಾನಗಳು ತಮ್ಮ ಆಡಳಿತದಲ್ಲಿ ಈ ಪ್ರತ್ಯಯವನ್ನು ತಮ್ಮ ಪ್ರದೇಶಗಳಲ್ಲಿ ಬಳಕೆಗೆ ತಂದಿರಬೇಕು. ಪ್ರದೇಶಕ್ಕೆ ಅನ್ವಯಿಸಿದ ಉದಾಹರಣೆ ಉತ್ತರ ತುದಿಯ **ಹರಿಯಾಣಾ** ರಾಜ್ಯದ ಹೆಸರಲ್ಲಿ ಸಿಗುತ್ತದೆ.

೧೩೫

**ಮುಷ್ಟಿ** ಶಬ್ದ ಸಂಸ್ಕೃತವಾದರೂ ಅದರ ಅರ್ಥ ಸರ್ವವಿದಿತ. ಒಂದು **ಹಿಡಿ** ಅಥವಾ ಒಂದು ಹಿಡಿಯೊಳಗೆ ಅಡಗುವಂಥಾದ್ದು: ಕೈ ಬೆರಳುಗಳನ್ನೆಲ್ಲ ಮಡಚಿಕೊಂಡಾಗ ರೂಪುಗೊಳ್ಳುವಂಥಾದ್ದು. ಹೀಗೆ "ಒಂದು ಮುಷ್ಟಿ ಅಕ್ಕಿ ಭಿಕ್ಷೆ ಹಾಕಿ ಕಳಿಸಿದಳು", ಇತ್ಯಾದಿ. ಮುಷ್ಟಿ ತೋರಿಸಿ ಹೆದರಿಸುವುದು, ಮುಷ್ಟಿಯಿಂದ ಗುದ್ದುವುದು, ಇತ್ಯಾದಿ ಕೂಡ. ಹೀಗೆ ಕೃಷ್ಣ ಬಲರಾಮರೊಡನೆ ಮಲ್ಲಯುದ್ಧ ಮಾಡಿದ ಪುಂಡನಿಗೆ ಮುಷ್ಟಿಕನೆಂದೇ ಹೆಸರು. "ಎಲ್ಲ ಅಧಿಕಾರವನ್ನೂ ತನ್ನ ಮುಷ್ಟಿಯೊಳಗಿಟ್ಟುಕೊಂಡಿದ್ದಾನೆ", ಎನ್ನುತ್ತೇವೆ; "ಮುಷ್ಟಿ ಬಿಚ್ಚುವವನಲ್ಲ", ಎನ್ನುತ್ತೇವೆ. ಒಬ್ಬ ಅಧಿಕಾರದಾಹಿ; ಇನ್ನೊಬ್ಬ ಜಿಪುಣ. ಮಲ್ಲಯುದ್ಧ ಮಾಡಿದವ ಮುಷ್ಟಿಕ ಎಂದೆನಲ್ಲ; ಅದೇ ಹೆಸರು **ಅಕ್ಕಸಾಲಿಗ**ನಿಗೂ ಇದೆ. ಸಂಕ್ಷೇಪಿಸಿದ ಗ್ರಂಥಕ್ಕೂ **ಮುಷ್ಟಿ**ಯೆಂಬ ಅಭಿಧಾನವಿದೆ. ಒಂದು ಹಿಡಿಯೊಳಗೆ ಕೂಡುವಷ್ಟು ಚಿಕ್ಕದು ಎಂಬ ಭಾವ. ನಾವೀಗ Digest ಎನ್ನುವುದಕ್ಕೆ ಈ ಪದವನ್ನು ಬಳಸಿದರೆ ಹೇಗೆ? ಎಂದು ನನ್ನ ಯೋಚನೆ.

ಇಷ್ಟೆಲ್ಲ ಮತ್ತು ಇನ್ನೂ ಇದ್ದರೂ ಈ ಶಬ್ದದ ಮೂಲಕ್ಕೆ ಹೋದರೆ ಸ್ವಲ್ಪ ಕೌತುಕವಾಗುತ್ತದೆ. ಯಾಕೆಂದರೆ ಅದು ಸಂಸ್ಕೃತದ ಬಹಳ ಪ್ರಾಚೀನ ಧಾತುವಾದ **ಮುಷ್** ಎಂಬುದರಿಂದ ಹುಟ್ಟಿದ್ದು: ಅದರ ಅರ್ಥ ಋಗ್ವೇದದಲ್ಲೇ ಕದಿ, ಕಸಿದುಕೊಳ್ಳು, ಸೂರೆ ಮಾಡು, ಬಲಾತ್ಕಾರ ಮಾಡು ಇತ್ಯಾದಿ; ಆಮೇಲೆ ಕದ್ದದ್ದನ್ನು ಮುಚ್ಚಿಟ್ಟುಕೊಳ್ಳುವುದೂ ಮುಷ್ಟಿಯಲ್ಲೇ ಅನ್ನಿ. ಇಲಿ **ಮೂಷಿಕ**ವಾದದ್ದು ಅದು ಕದಿಯುವುದರಿಂದಲೋ ಅಡಗಿಕೊಳ್ಳುವುದರಿಂದಲೋ ಹೇಳುವುದು ಕಷ್ಟ; ಹೇಗಾದರೂ ಅಷ್ಟೆ. ಅಕ್ಕಸಾಲಿಗ **ಮುಷ್ಟಿಕ**ನಾಗುವುದು ಬಹುಶಃ ಆತ ಆಭರಣ ಮಾಡಲು ಕೊಟ್ಟ ಚಿನ್ನದಲ್ಲಿ ಒಂದಿಷ್ಟು ಕದಿಯದೇ ಬಿಡ ಎಂಬ ಜಾನಪದ ಪ್ರತೀತಿಯಿಂದಿರಬೇಕು. "ಅಕ್ಕನ ಚಿನ್ನವಾದರೂ ಅಕ್ಕಸಾಲಿಗ ಬಿಡ", ಎಂದು ಗಾದೆಯೇ ಉಂಟಲ್ಲ!

ಕರ್ನಾಟಕದ ಅನೇಕ ಪ್ರದೇಶಗಳಲ್ಲಿ ಅಕ್ಕ ಅಥವಾ ತಂಗಿಯ ಗಂಡನಿಗೂ ಪ್ರತಿಯಾಗಿ ಮೈದುನನಿಗೂ ಚಿಕ್ಕ ತಾಯಿ ಅಥವಾ ದೊಡ್ಡ ತಾಯಿಯ ಮಗನಿಗೂ **ಭಾವ** ಎಂಬ ಸಂಬಂಧವಾಚಕ ಪ್ರಚಲಿತವಾಗಿದೆ. ನಮ್ಮ ಗ್ರಾಮ್ಯ ಉಪಭಾಷೆಗಳಲ್ಲಿಯೂ ನೆರೆಯ ತುಳು, ಕೊಡವ ಭಾಷೆಗಳಲ್ಲಿಯೂ ಇದು **ಬಾವ** ಎಂಬ ರೂಪದಲ್ಲಿ ಬಳಕೆಯಲ್ಲಿದೆ.

ಈ ಶಬ್ದದ ಮೂಲವೆಲ್ಲಿ? ಸಂಸ್ಕೃತದಲ್ಲಿ ''ಭಾವ'' ಶಬ್ದಕ್ಕೆ ಇರುವಿಕೆ, ಆಗುವಿಕೆ, ಮನಸ್ಸಿನ ಇಂಗಿತ ಇತ್ಯಾದಿ ಅರ್ಥಗಳು ಇವೆ ಹೊರತು ಸಂಬಂಧವಾಚಕವಾಗಿ ಹಳೇ ಪ್ರಯೋಗಗಳು ದೊರಕುವುದಿಲ್ಲ. ಸಂಸ್ಕೃತ ನಾಟಕಗಳಲ್ಲಿ **ಭಾವ** ಎಂಬುದು **ಪೂಜ್ಯ** ವ್ಯಕ್ತಿಗಳಿಗೆ ಸಂಬೋಧನೆಯಾಗಿದೆಯಲ್ಲದೆ ಸಂಬಂಧವಾಚಕವಲ್ಲ. ವೈಯಾಕರಣರು ಇದು ಸಂಸ್ಕೃತದ **ಭಾಮ** ಶಬ್ದದ ತದ್ಭವವೆನ್ನುತ್ತಾರೆ. ''ಭಾಮ'' ಶಬ್ದವನ್ನು ಶ್ರೀಮದ್ಭಾಗವತದಲ್ಲಿ ಪ್ರಯೋಗಿಸಿದ್ದಾಗಿ ಮೋನಿಯರ್ ವಿಲಿಯಮ್ಸ್ ಕೋಶ ಹೇಳುತ್ತದೆ. ಇದನ್ನು ಸ್ವೀಕರಿಸುವುದಕ್ಕೆ ಎರಡು ಕಷ್ಟಗಳುಂಟು. ಒಂದು, **ಭಾಮ** ಶಬ್ದದ ಧಾತ್ವರ್ಥ ಕೋಪವೆಂದು – ವೇದದಲ್ಲಿ ಭಾಮಿತ ಎಂದರೆ ಕೆರಳಿದವ; **ಭಾಮಾ** ಎಂದರೆ ಸಿಟ್ಟಿನ ಸ್ವಭಾವದ ಹೆಣ್ಣು. ಎರಡು, ಭಾಗವತ ಪುರಾಣ ತುಲನಾತ್ಮಕವಾಗಿ ಅರ್ವಾಚೀನ. ಕನ್ನಡದಲ್ಲಂತೂ ''ಭಾವ'' ಎಂಬುದು ಸಂಬಂಧವಾಚಕವಾಗಿ ಪಂಪನಷ್ಟು ಹಳೆಯದಾಗಿದೆ. ಆರ್ಯಭಾಷೆಗಳಾದ ಹಿಂದೀ, ಮರಾಠಿಗಳಲ್ಲಿಯೂ ''ಭಾವ'' ಶಬ್ದ ಸಂಬಂಧವಾಚಿಯಲ್ಲ.

ಇದು ಸಂಸ್ಕೃತದ **ಭ್ರಾತೃ – ಭ್ರಾತಾ** ( = ಸೋದರ) ಶಬ್ದದಿಂದ ಹೊರಟದ್ದೆಂದು ನನ್ನ ನಂಬಿಕೆ. ಪ್ರಾಕೃತದಲ್ಲಿ ಅದು **ಭಾವು** ಆಗಿ, ಕೊಂಕಣಿ ಮೊದಲಾದ ಆಧುನಿಕ ಭಾಷೆಗಳಿಗೂ ಬಂದಿದೆ. ಸಂಸ್ಕೃತದ ಅಂತ್ಯ 'ತ' ಕಾರ ಪ್ರಾಕೃತಗಳಲ್ಲಿ ಲೋಪ ಹೊಂದಿ ಅದರೊಳಗಿನ ಸ್ವರ ಮಾತ್ರ ಉಳಿಯುತ್ತದೆ. ಉದಾ: **ಸೀತಾ = ಸಿಯಾ.** ''ಭ್ರಾತೃ'' ಎಂಬುದು ''ಭಾಉ'' ಆಗಿಯೂ ''ಭ್ರಾತಾ'' ಎಂಬ ಪ್ರಥಮಾ ವಿಭಕ್ತಿ ರೂಪ ''**ಭಾಆ**'' ಆಗಿ ಮುಂದೆ **ಭಾವ** ಆಗಿಯೂ ರೂಪುಗೊಂಡು ತುಳು ಕನ್ನಡ ಇತ್ಯಾದಿಗಳಲ್ಲಿ ಚಲಾವಣೆಗೆ ಬಂದಿರಬೇಕು. ಹೆಂಡತಿಯ ಭ್ರಾತನು ಒಂದು ತರದಲ್ಲಿ ತನಗೂ ಸೋದರನಾಗುತ್ತಾನೆ ತಾನೆ? ಸಂಬಂಧ ವಾಚಕಗಳಲ್ಲಿ ಈ ಬಗೆಯ ಆಲೋಚನಾ ಪ್ರಕ್ರಿಯೆ ಭಾಷೆಗಳಲ್ಲಿ ಸಾಮಾನ್ಯ. ಇಂಗ್ಲೀಷಿನಲ್ಲಿ brother-in-law ( = ಭಾವ) ಇದ್ದಂತೆ. ಯಾವುದೋ ಕಾರಣದಿಂದ ''ಭಾಉ'' ಉತ್ತರದ ಆಧುನಿಕ ಭಾಷೆಗಳಲ್ಲಿ ಸೋದರಾರ್ಥದಲ್ಲೇ ಉಳಿದಿದ್ದು ದಕ್ಷಿಣದಲ್ಲಿ ಅದು ವಿವಾಹ ಮೂಲಕ ಸಂಬಂಧಿಗೆ ಅನ್ವಯಿಸಿರಬೇಕು. ಬೌದ್ಧರೋ ಜೈನರೋ ತಂದ ಪ್ರಾಕೃತಗಳಿಂದ ಸ್ವಲ್ಪ ಅರ್ಥ ವ್ಯತ್ಯಾಸದೊಂದಿಗೆ ಇದು ದಕ್ಷಿಣದಲ್ಲಿ ಬಳಕೆಗೆ ಬಂದಿರಬೇಕು. ಅಂತೂ ಭಾವ ಅಂದರೆ (ವಿವಾಹ ಸಂಬಂಧದಿಂದ ದೊರಕಿದ) ಅಣ್ಣ ಅಥವಾ ತಮ್ಮ.

**ಸುದ್ದಿ** ಎಂದರೆ ವರ್ತಮಾನ, ತಿಳಿವಳಿಕೆ ಇತ್ಯಾದಿ. ಇದು ಸಂಸ್ಕೃತ **ಶುದ್ಧಿ** (ದೋಷವಿಲ್ಲದ್ದು) ಎಂಬುದರ ತದ್ಭವವೆಂದು ಕೇಶಿರಾಜ ಹೇಳುತ್ತಾನೆ; ಅವನೇ ವರ್ತಮಾನ ಎಂಬ ಅರ್ಥವನ್ನೂ ಕೊಟ್ಟಿದ್ದಾನೆ. ಆದರೆ ಎಲ್ಲಿಯ ಶುದ್ಧಿ? ಎಲ್ಲಿಯ ಸುದ್ದಿ? ಒಂದು ಶಬ್ದದ ಅರ್ಥ ವಿಸ್ತಾರ ಹೇಗಾಗುತ್ತದೆಂಬುದಕ್ಕೆ ಇದೊಂದು ಉದಾಹರಣೆ. **ಶುಧ್** ಎಂಬ ಧಾತುವಿನಿಂದ ಹುಟ್ಟಿದ ''ಶುದ್ಧಿ''ಗೆ ದೋಷಗಳಿಂದ ವಿಮುಕ್ತಗೊಳಿಸುವುದೆಂದರ್ಥ. ಅದು ಪ್ರಾಥಮಿಕವಾಗಿ ಧಾರ್ಮಿಕ ಪ್ರಮಾದದಿಂದ ಬಿಡುಗಡೆ ಮಾಡುವಿಕೆ. ಅದೇ ವಿಸ್ತರಣೆ ಹೊಂದಿ ನ್ಯಾಯಸ್ಥಾನದಲ್ಲಿ ಅಪರಾಧದಿಂದ ಮುಕ್ತನೆಂದು (ನಿರಪರಾಧಿಯೆಂದು ಕೂಡ) ಸಾರಲ್ಪಡುವುದು ಎಂಬರ್ಥದಲ್ಲಿಯೂ ಧರ್ಮಶಾಸ್ತ್ರದಲ್ಲಿ ಪ್ರಯೋಗವಾಯಿತು. ಅದರೊಡನೆ ತನಗೆ ಮಾಡಿದ ಅಪರಾಧಕ್ಕೆ ಪ್ರತೀಕಾರ ಮಾಡುವುದೂ ''ಶುದ್ಧಿ''ಯಾಯಿತು. ಯಾಕೆಂದರೆ ಅಪರಾಧ ಮಾಡಿದ್ದನ್ನು ಸುಮ್ಮನೆ ಸಹಿಸುವುದು ಪುರಾತನರಲ್ಲಿ ಸ್ವಾಭಿಮಾನಕ್ಕೆ ಕಳಂಕ ಎನಿಸಿತ್ತು. ಆ ಕಳಂಕವನ್ನು ತೊಳೆಯುವುದಕ್ಕೆ ಪ್ರತೀಕಾರ ಮಾಡುವುದು ಅಗತ್ಯ.

ಆದ್ದರಿಂದಲೇ ಹಿಂದೀ ಮೊದಲಾದ ಭಾಷೆಗಳಲ್ಲಿ ಸೇಡು ತೀರಿಸುವುದಕ್ಕೆ **ಪ್ರತಿಶೋಧ** (ಶೋಧ = ಶುದ್ಧ ಮಾಡುವಿಕೆ) ಎಂಬ ಶಬ್ದ ಬಳಕೆಯಲ್ಲಿದೆ. ಹಾಗೆಯೇ ಇನ್ನೊಂದು ದಿಕ್ಕಿನಲ್ಲಿ ಅರ್ಥ ಬೆಳೆದು **ತಿದ್ದುವುದು** ಶುದ್ಧಿಯಾಯಿತು; ತಿದ್ದಿದ್ದು ಅಂದರೆ ನಿರ್ದುಷ್ಟವಾದದ್ದು, ಸರಿಯಾದದ್ದು, **ಸತ್ಯ** ಇವೆಲ್ಲಕ್ಕೂ ಈ ಶಬ್ದ ಅನ್ವಯಿಸಿತು. ಶುದ್ಧವಾದದ್ದು ಸ್ಪಷ್ಟವಾಗಿರುವುದರಿಂದ ಸ್ಪಷ್ಟತೆ ಶುದ್ಧಿಯೆನಿಸಿತು. ಸರಿಯಾದ ತಿಳಿವಳಿಕೆ, ಸರಿಯಾದ ಜ್ಞಾನವಿರುವಿಕೆ ಶುದ್ಧಿಯೆನಿಸಿತು. ಸರಿಯೇ ಎಂದು ಪರೀಕ್ಷಿಸಿಕೊಳ್ಳುವುದೂ ಶುದ್ಧಿಯೇ. ಸರಿಯಾದ ಜ್ಞಾನಕ್ಕೆ ಸರಿಯಾದ ವರ್ತಮಾನಗಳು (ರಾಜರಿಗೆ) ಬೇಕು. ಹೀಗೆ ವರ್ತಮಾನ (ಚಾರರಿಂದ ತಿಳಿದದ್ದು ಅನ್ನಿ) ಶುದ್ಧಿಯಾಯಿತು. ಅದೇ ತದ್ಭವದಲ್ಲಿ ಸುದ್ದಿ. ಒಟ್ಟು ವರ್ತಮಾನ ಎಂದಮೇಲೆ ಅಷ್ಟಿಷ್ಟು ಕಾಲ್ಪನಿಕ ಅಥವಾ ಸುಳ್ಳು ವರ್ತಮಾನವೂ ಇರಬಹುದಾದ್ದರಿಂದ ಸತ್ಯ ಮತ್ತು ಸುಳ್ಳು ವರ್ತಮಾನವೂ ಸುದ್ದಿಯೆ.

ಬೇರೆ ಭಾಷೆಗಳಲ್ಲಿ ಸುದ್ದಿ (ಹಿಂದಿ **ಸುಧಿ, ಸುಧ**) ಪ್ರಜ್ಞೆ, ನೆನಪು (ಸರಿಯಾದದ್ದು) ಇತ್ಯಾದಿ ಅರ್ಥಗಳನ್ನು ಪಡೆದಿದೆ; ಮರಾಠಿಯಲ್ಲಿ ''ಶುದ್ಧೀತ ನಾಹೀ'' ಅಂದರೆ ಮೈಮೇಲೆ ಎಚ್ಚರವಿಲ್ಲ. ''ಶುದ್ಧೀತ ಆಲಾ'' ಎಂದರೆ ಎಚ್ಚರ ತಪ್ಪಿದವನು ಎಚ್ಚರಗೊಂಡ ಎಂದು.

### ೧೩೫ (ಅ)

ಕ್ರೈಸ್ತರ ದೇವಾಲಯ ಅಥವಾ ಪ್ರಾರ್ಥನಾ ಮಂದಿರಕ್ಕೆ ಕನ್ನಡದಲ್ಲಿ ಕೆಲವೆಡೆ **ಚರ್ಚ್** ಎಂಬ, ಕೆಲವೆಡೆ ''**ಇಗರ್ಜಿ**''ಯೆಂಬ ಹೆಸರು ಬಳಕೆಯಲ್ಲಿದೆ. ''ಚರ್ಚು'' ಎಂಬುದು ನೇರವಾಗಿ ಇಂಗ್ಲೀಷಿನಿಂದ ಬಂದದ್ದು. ''ಇಗರ್ಜಿ'' ಎಂಬುದು ಪೋರ್ಚುಗೀಸಿನಿಂದ. ಇವೆರಡರ ಜಾಡು ಹಿಡಿಯಹೋದರೆ ಕೊನೆಗೆ ಅವು ಒಂದೇ ಉಗಮದತ್ತ ನಿರ್ದೇಶಿಸುತ್ತವೆ. ಅದು ಗ್ರೀಕ್ ಪದ – ಕ್ರೈಸ್ತ ಧಾರ್ಮಿಕ ಸಾಹಿತ್ಯ ಮೊದಲು ನಿರ್ಮಿತವಾದ ಭಾಷೆ ಗ್ರೀಕೇ ಆದ್ದರಿಂದ. ಗ್ರೀಕಿನಲ್ಲಿ Kuriakon ಎಂದರೆ ದೇವರ ಮನೆ – ದೇವಗೃಹ (Kurios = ದೇವರು). ಕ-ಗ-ಚ ಧ್ವನಿಗಳು ಒಂದಕ್ಕೊಂದು ಹತ್ತಿರವಾದ್ದರಿಂದ ಕ್ರೈಸ್ತಧರ್ಮ ಯುರೋಪಿನಲ್ಲಿ ಹಬ್ಬುತ್ತ ಬಂದಂತೆ ಈ ದೇವಾಲಯಾರ್ಥಕ ಶಬ್ದ ಆಯಾ ಭಾಷಾಧರ್ಮದಂತೆ ಉಚ್ಚಾರ ವ್ಯತ್ಯಾಸ ಹೊಂದುತ್ತ ಬಂತು. ಇಂಗ್ಲೆಂಡಿನಲ್ಲಿಯೇ ಉತ್ತರಭಾಗ ಮತ್ತು ಸ್ಕಾಟ್‌ಲಂಡಿನಲ್ಲಿ ಅದು **ಕರ್ಕ್** ಎನಿಸಿತು; ಇಂಗ್ಲೀಷಿನ ಪೂರ್ವಜ ಹಳೇ ಸ್ಯಾಕ್ಸನ್ ಭಾಷೆಯಲ್ಲಿ **ಕರ್ಕ** ಆಗಿತ್ತು. ಹಳೇ ಜರ್ಮನ್ನಿನಲ್ಲಿ **ಚಿರಿಃಕ** ಎಂದಾಯಿತು. ಅದರ ಕಕಾರ ದಕ್ಷಿಣದಲ್ಲಿ 'ಗ'ಕಾರಕ್ಕೆ ತಿರುಗಿ ಪೋರ್ಚುಗೀಸಿನಲ್ಲಿ 'ಇಗ್ರೇಜ' (i-greja) ಆಗಿ ನಮ್ಮ ಕರಾವಳಿಯಲ್ಲಿ 'ರ'ಕಾರ ಸ್ಥಾನಪಲ್ಲಟ ಹೊಂದಿ ''**ಇಗರ್ಜಿ**'' ಆಯಿತು. ಕೆಲವೆಡೆ ಅದು ಆಧಾರಕ್ಕೆ ಬಿಂದುವನ್ನು ಸೇರಿಸಿಕೊಂಡು **ಇಂಗ್ರೆಜಿ** (ತುಳು) ಮತ್ತು ಬರೇ 'ಇಗ್ರೇಜಿ' (ತುಳು) ಎಂಬ ರೂಪಗಳಲ್ಲಿಯೂ ಪ್ರಚಲಿತವಾಯಿತು. ಬಂಗಾಲಿಯಲ್ಲಿ, ಹಿಂದಿಯಲ್ಲಿ ಗಿರ್ಜಾ ರೂಪ ಇದೆ. ಇಂಗ್ಲೀಷ್ ಪ್ರಸಾರದಿಂದಾಗಿ ''ಚರ್ಚ್'' ರೂಪ ಸಾರ್ವತ್ರಿಕವಾಗಿದೆ.

ಇತರ ಧರ್ಮಗಳ ದೇವಾಲಯಗಳ ವಿಚಾರ ಸ್ವಲ್ಪ ನೋಡುವಾ. ಮುಸಲ್ಮಾನರ **ಮಶೀದಿ** ಅಥವಾ **ಮಸೀತಿ** ಅಥವಾ **ಮಸೂತಿ** ಇತ್ಯಾದಿ ಇವೆ. ಇವೆಲ್ಲ **ಮಸ್‌ಜಿದ್** ಎಂಬ ಅರಬ್ಬಿ ಶಬ್ದದಿಂದ ನಮ್ಮ ಬಾಯಿಗೆ ಸರಿಯಾಗಿ ಅಪಭ್ರಂಶವಾದ ಪದಗಳು. ಮೂಲ ಅರಬ್ಬಿ

ಶಬ್ದಕ್ಕೆ ಅಡ್ಡಬೀಳುವ ಅರ್ಥಾತ್ ದೀರ್ಘ ದಂಡ ಪ್ರಣಾಮ ಮಾಡುವ ಸ್ಥಳ ಎಂದರ್ಥ (ಡಾ॥ ಶಂಕರ ಕೆದ್ಲಾಯರ 'Foreign Loan Words in Kannada' ). ಮುಸಲ್ಮಾನರು ಯಾವ ಮೂರ್ತಿ ಅಥವಾ ಸಂಕೇತವನ್ನೂ ಆರಾಧಿಸುವುದಿಲ್ಲವಾದ್ದರಿಂದ ಅವರ ಪ್ರಾರ್ಥನಾ ಮಂದಿರಗಳು ಕೇವಲ ನಮಸ್ಕಾರ ಗೃಹಗಳಾಗಿವೆಯೆಂಬುದು ಸ್ವಾಭಾವಿಕ.

ಇತಿಹಾಸಜ್ಞರ ಪ್ರಕಾರ ಹಿಂದೂಗಳಲ್ಲಿ ಮೂರ್ತಿಪೂಜೆ ತುಸು ಈಚೆಗಿನ ಸಂಪ್ರದಾಯವಾಗಿದೆ. ಹೀಗೆ **ದೇವಾಲಯ, ದೇವಸ್ಥಾನ,** (ದೇವ) **ಮಂದಿರ** ಮೊದಲಾದವುಗಳು ನೇರವಾದ ಅರ್ಥವನ್ನೇ ಕೊಡುತ್ತವೆ. ಇದಕ್ಕಿಂತ ಪ್ರಾಚೀನವಾದದ್ದು **ಆಯತನ.** ಇದು ಮೂಲತಃ ಬ್ರಾಹ್ಮಣ, ಉಪನಿಷತ್ತುಗಳಲ್ಲಿ ಮನೆ, ವಿಶ್ರಾಂತಿ ಸ್ಥಳ, ನಿವೇಶನ ಇತ್ಯಾದಿ ಅರ್ಥಗಳಲ್ಲಿ ಪ್ರಯೋಗವಾಗಿದೆ. ಆದರೆ ಅನಂತರದ ಕಾತ್ಯಾಯನ, ಆಶ್ವಲಾಯನ ಸೂತ್ರಗಳ ಕಾಲದಿಂದ ಇದಕ್ಕೆ ದೇವ ಮಂದಿರವೆಂಬ ಅರ್ಥ ಬಂತು. **ಆ-ಯಜನ** ಎಂಬ ಶಬ್ದದಿಂದ ನಿಷ್ಪತ್ತಿ ಹೇಳಲಾದ ಈ ಶಬ್ದಕ್ಕೆ ಯಜ್ಞವೇದಿ ಎಂಬರ್ಥವೂ ಆಮೇಲೆ ದೇವತಾರಾಧನೆಯ ಸ್ಥಳವೆಂಬರ್ಥವೂ ಬರಲಿಕ್ಕೆ ಹಳೇ ಪಾರಸೀಕ ಭಾಷೆಯ ಪ್ರಭಾವ ಕಾರಣವಾಗಿರಬೇಕೆಂದು ಸುನೀತಿಕುಮಾರ ಚಟರ್ಜಿ ಹೇಳುತ್ತಾರೆ. ಯಾಕೆಂದರೆ ಹಳೇ ಪಾರಸೀಕದಲ್ಲಿ **ಆಯದನ** ಎಂದರೆ ಪೂಜಾಗೃಹ. ಅಲ್ಲಿ **ಯದನ** ಎಂದರೆ **ಆರಾಧನೆ** (ಯದ್ = ಪೂಜಿಸು).

ಯಹೂದ್ಯರ ಪೂಜಾಸ್ಥಳಕ್ಕೆ 'ಸಿನಾಗೋಗ್' ಎಂದು ಹೆಸರು. ಇದು ಗ್ರೀಕ್ ಮೂಲದ ಪದ (Synagogue.) ಅದರರ್ಥ **ಒಟ್ಟು** (Syn) **ಕೂಡುವ** (ago = ತಾ) ಸ್ಥಳ. ಧಾರ್ಮಿಕ ಆಚರಣೆಗಳಿಗಾಗಿ, ಧಾರ್ಮಿಕ ಸಭೆಗಳಿಗಾಗಿ ಸೇರುವ ಸ್ಥಳವೇ Synagogue. ಯಹೂದ್ಯರೂ ಮೂರ್ತಿಪೂಜಾ ವಿರೋಧಿಗಳು. ಆದ್ದರಿಂದ ಅವರೂ ಸಾಮೂಹಿಕ ಪ್ರಾರ್ಥನಾ ವಿಧಿಗಳಿಗಷ್ಟೇ ತಮ್ಮೀ ಪವಿತ್ರ ಸ್ಥಳವನ್ನು ಬಳಸುತ್ತಾರೆಂದು ತಿಳಿಯಬಹುದು.

ನಮ್ಮದೇ ದ್ರಾವಿಡದ **ಕೋಯಿಲ್, ಕೋವಿಲ್** (ತಮಿಳು, ಮಲಯಾಳಿ, ತೆಲುಗು, ಕನ್ನಡ) ಆದರೂ ಅಷ್ಟೆ. **ಕೋ** ಅಂದರೆ ದೇವರೂ ಹೌದು, ರಾಜನೂ ಹೌದು. ''ಕೋ''ವಿನ ''ಇಲ್'' ಎಂದರೆ ಮನೆ ದೇವಾಲಯ. ಇದಕ್ಕೆ ಸೋಜಿಗಪಡಬೇಕಿಲ್ಲ. ಕರ್ಕ ಅಥವಾ ಚರ್ಚಿನ ಮೂಲವಾದ ಗ್ರೀಕ್ ಭಾಷೆಯಲ್ಲಿ ಕೂಡ Kurios ಎಂದರೆ ಪ್ರಭು ಅಥವಾ ಒಡೆಯ. ದೇವರೂ ಒಡೆಯ; ಒಡೆಯರ ಒಡೆಯ ಅಷ್ಟೆ. ಸಂಸ್ಕೃತದಲ್ಲಿ ಕೂಡ **ದೇವ** ಎಂಬುದು ಅಧಿಲೋಕದ (ಹೊಳೆಯುವ)ವನೆಂಬುದು ಮೂಲಾರ್ಥವಾದರೂ ಅನಂತರದ ಕಾಲದಲ್ಲಿ ರಾಜರನ್ನು ''ದೇವ'' ಎಂದು ಸಂಬೋಧಿಸುವುದಾಯಿತು. ಯಾವುದೋ ಕಾರಣದಿಂದ ಕನ್ನಡದಲ್ಲಿ ಇಂದು ಕೋಯಿಲ್ ಪದ ಲುಪ್ತವಾಗಿ ಹೋಗಿರುವುದು ದುರ್ದೈವ.

ಜೈನರ ದೇವಸ್ಥಾನಕ್ಕೆ ಬಸದಿ ಎನ್ನುವುದು ರೂಢಿ. ಮೇಲೆಯೆ ತೋರುವಂತೆ ಅದು ''ವಸತಿ'' ಎಂಬ ಸಂಸ್ಕೃತ ಪದದ ತದ್ಭವ. ಇರುವ ತಾಣವೇ ಬಸದಿ. ಜೈನ ಮುನಿಗಳಿಗಿರುವ ಸ್ಥಾನ ಅಥವಾ ಮಠಕ್ಕೂ (ಸವಣ್ಮನೆ) ಇದೇ ಹೆಸರಿತ್ತು. ಬಹುಶಃ ಅದೇ ಮೂಲಾರ್ಥ. ಜೈನಧರ್ಮದಲ್ಲಿ ವಿಗ್ರಹಾರಾಧನೆ ಮತ್ತು ವಿಗ್ರಹಗಳಿಗಾಗಿ ಆಲಯಗಳ ರಚನೆ ಆರಂಭವಾದ ಮೇಲೆ ಪ್ರಧಾನವಾಗಿ ಅದೇ ''ಬಸದಿ''ಯಾಗಿರಬೇಕು. ಒಂದು ವಿಶೇಷವೆಂದರೆ ಜೈನಧರ್ಮದ ಉದ್ಭವ ಸ್ಥಾನವಾದ ಉತ್ತರ ಭಾರತದ ಹಿಂದೀ ಭಾಷೆಯಲ್ಲಿ ''ಬಸ್ತೀ''

(= ವಸತಿ) ಎಂದರೆ ಬರೇ ಜನರು ಗುಂಪಾಗಿ ವಾಸಿಸುವ ಸ್ಥಳ – ನಾವು 'ಕೇರಿ' ಎಂದು ಕನ್ನಡದಲ್ಲಿ ಹೇಳುವಂಥಾದ್ದು ಹೊರತು ಶ್ರಮಣರಾಗಲಿ ಸಂನ್ಯಾಸಿಗಳಾಗಲಿ ವಾಸಿಸುವ ಕಟ್ಟಡವಲ್ಲ. ಬ್ರಾಹ್ಮಣ ಕೇರಿ ಇತ್ಯಾದಿಯಾಗಿ ಕನ್ನಡದಲ್ಲಿ ಹೇಳುವ ಹಾಗೆ ಅವರು ಮುಸ್ಲಿಮರ 'ಬಸ್ತಿ' ಇತ್ಯಾದಿಯಾಗಿ ಹೇಳುತ್ತಾರೆ.

ಬೌದ್ಧರದು **ವಿಹಾರ**. ವಿಹಾರವೆಂದರೆ ವಿಹರಿಸುವ ಸ್ಥಳ. ಅರ್ಥಾತ್ ವಿಶ್ರಾಂತಿ ತೆಗೆದುಕೊಳ್ಳುವ ಪ್ರದೇಶ. ಸಂತೋಷಕ್ಕಾಗಿ ಓಡಾಡುವ ಸ್ಥಳವೂ ಹೌದು. ಬುದ್ಧನ ಕಾಲದಲ್ಲೇ ಆತನಿಗಾಗಿಯೂ ಅವನು ಸಂಘಟಿಸಿದ ಭಿಕ್ಷುಗಳ ಗಡಣಕ್ಕಾಗಿಯೂ ವಾಸಿಸಲು ಶ್ರೀಮಂತ ವೈಶ್ಯರೂ ರಾಜರೂ ದೊಡ್ಡ ಉದ್ಯಾನದಂಥ ಪ್ರದೇಶಗಳನ್ನು ದತ್ತಿ ಬಿಟ್ಟಿದ್ದರು. ಅವು ಭಿಕ್ಷುಗಳ ವಸತಿಗಳಾಗಿ ಬೆಳೆದು ಮುಂದೆ ಅಲ್ಲಿ ತಥಾಗತನ ಮೂರ್ತಿಗಳೂ ಅವಶೇಷಗಳೂ ಸ್ಥಾಪನೆ ಹೊಂದಿ ಒಂದು ತರಹದ ದೇವಮಂದಿರಗಳೇ ಮೊದಲಾದವು ರೂಪಗೊಂಡರೂ ಹಳೇ "ವಿಹಾರ" ಎಂಬ ಹೆಸರು ಉಳಿದುಕೊಂಡಿತು. ಬೌದ್ಧಧರ್ಮದ ಜನಪ್ರಿಯತೆ ಹೆಚ್ಚಿದಂತೆ ಬುದ್ಧನ ಹುಟ್ಟು ನಾಡಿನಲ್ಲಿ ಇಂಥ ವಿಹಾರಗಳ ಸಂಖ್ಯೆ ತುಂಬಾ ಬೆಳೆದುಬಂದು ಇಡೀ ಪ್ರಾಂತಕ್ಕೆ ವಿಹಾರ (ಈಗಿನ ಬಿಹಾರ್) ಎಂಬ ಹೆಸರು ಬಿದ್ದಿರಬೇಕು. ವಿಹಾರಗಳು ಪ್ರಾಥಮಿಕವಾಗಿ ಬೌದ್ಧರ ಮಠಗಳೇ.

ಆದರೆ ಉತ್ತರ ಭಾರತದಲ್ಲಿ ಜನಪ್ರಿಯವಾಗಿರುವ **ಬಿಹಾರಿ** (= ವಿಹಾರಿ) ಎಂಬ ಹೆಸರು ಬುದ್ಧನಿಗೆ ಸಂಬಂಧಿಸಿದ್ದಲ್ಲ, ಕೃಷ್ಣನಿಗೆ ಸಂಬಂಧಿಸಿದ್ದು. ಅವನು **ಕುಂಜವಿಹಾರಿ** – ಕುಂಜಗಳಲ್ಲಿ ( = ಹಾಡಿಗಳಲ್ಲಿ) ರಾಧೆಯೊಡನೆ ವಿಹರಿಸುವುದರಲ್ಲಿ ಸಂತೋಷಪಡುತ್ತಿದ್ದವನು. ಅದು ಬಿಹಾರಿನಲ್ಲಲ್ಲ – ಯಮುನಾತೀರದಲ್ಲಿ.

೧೩೬

**ಪಗಾರ** ಎಂಬ ಶಬ್ದ ಸಂಬಳ, ಕೆಲಸ ಮಾಡುವವರಿಗೆ ನಿಶ್ಚಿತ ಅವಧಿಗಾಗಿ ಗೊತ್ತುಪಡಿಸಿಕೊಂಡ ಪ್ರತಿಫಲ ಕೊಡುವಿಕೆ ಎಂಬರ್ಥದಲ್ಲಿ ವಿಶೇಷತಃ ಉತ್ತರ ಕರ್ನಾಟಕದಲ್ಲಿ ಬಳಕೆಯಲ್ಲಿರುವಂಥಾದ್ದು. ತಿಂಗಳ ಪಗಾರ, ವಾರದ ಪಗಾರ ಇತ್ಯಾದಿ. ಇದು ಕನ್ನಡಕ್ಕೆ ಬಂದದ್ದು ಮರಾಠಿಯಿಂದ ಎಂದು ಪ್ರತೀತಿ. ಮರಾಠಿಯಲ್ಲಿ ಈ ಶಬ್ದ ಇರುವುದು ನಿಜ. ಆದರೆ ಶೋಧಿಸಿದರೆ ಅದರ ಮೂಲ ಪೋರ್ಚುಗೀಸ್. ಅದರಲ್ಲಿ Pagar ಎಂದರೆ ಹಣಸಂದಾಯ, ಸಂಬಳ – Pagar ಎಂದರೆ ಹಣ ಸಲ್ಲಿಸು. ಇಂಗ್ಲೀಷಿನ Pay ಮತ್ತು ಪೋರ್ಚುಗೀಸಿನ ಈ Paga (Pagar) ಎರಡೂ ಲ್ಯಾಟಿನ್ನಿನ Pacare = ಸಮಾಧಾನಪಡಿಸು, ಶಾಂತಗೊಳಿಸು ಎಂಬ ಧಾತುವಿನಿಂದ ಹೊರಟವುಗಳು. ಬಾಕಿಯನ್ನು ತೀರಿಸಿದರೆ ಪಡೆದವನಿಗೆ ಸಮಾಧಾನ ಅಲ್ಲವೆ? ಗೋವೆಯನ್ನು ಪೋರ್ಚುಗೀಸರು ಗೆದ್ದುಗೊಂಡ ಮೇಲೆ ನೆರೆಯ ಕನ್ನಡಕ್ಕೂ ಮರಾಠಿಗೂ ಈ ಶಬ್ದ ಪ್ರತ್ಯೇಕವಾಗಿಯೇ ಹಬ್ಬಿರಬಹುದು. ಪೋರ್ಚುಗೀಸರು 'ಪಗಾರ'ವನ್ನು ನಮಗೆ ಕೊಟ್ಟರೆ ಮೈಸೂರು ಸಂಸ್ಥಾನದ ಮೇಲಿನ ಸುಲ್ತಾನ ಆಡಳಿತ **ತನಖಾ**ವನ್ನು ಕೊಟ್ಟಿತು (ಮರಾಠಿಗೂ ಈ ಶಬ್ದ ಹೋಗಿದೆ). ಇದು ಪಾರಸೀಕ ಭಾಷೆಯ **ತನಖ್ವಾಹ್** (ತಿಂಗಳ ಸಂಬಳ)ದ ಸಂಕ್ಷೇಪಣೆ. ಮುಸ್ಲಿಂ ಆಳಿಕೆಯಲ್ಲಿ ಪಾರಸೀಕ ಭಾಷೆ ಎಲ್ಲೆಡೆ ಆಡಳಿತ ಭಾಷೆಯಾಗಿದ್ದುದರಿಂದ ಭಾರತದ ಅನೇಕ

ಭಾಷೆಗಳಲ್ಲಿ 'ತನಖಾ' ಸ್ಥಾನ ಪಡೆದಿದೆ. ಮೂಲ ನೋಡಿದರೆ ಈ ಶಬ್ದ 'ತನ್' ( = ದೇಹ = ಸಂಸ್ಕೃತ 'ತನು') + 'ಖ್ವಾಹ್' ( = ಅಪೇಕ್ಷೆ, ಅಗತ್ಯ – ದೇಹಧಾರಣೆಗೆ ಅಗತ್ಯವಾದದ್ದು) ಹೀಗೆ ರೂಪುಗೊಂಡದ್ದು. ಇದೇ ಅರ್ಥದಲ್ಲಿ ಅರಬೀ ಮೂಲದಿಂದ ಬಂದ **ತಲಬ್** ಎಂಬ ಪದವೂ ಕನ್ನಡದಲ್ಲಿ ಸೇರಿಕೊಂಡಿದೆ. ಅದೂ ಅವಶ್ಯಕತೆ ಎಂಬರ್ಥದ್ದೇ ಪದ. ಒಂದು ವಿಶೇಷವೆಂದರೆ ಪಾರಸೀಕ 'ಖ್ವಾಹ್' ಮತ್ತು ಅರಬ್ಬಿ 'ತಲಬ್' ಎರಡಕ್ಕೂ ಬಯಕೆ, ಇಚ್ಛೆ, ಅಭಿಲಾಷೆ ಎಂಬರ್ಥಗಳೂ ಇರುವುದು.

ಇಂಗ್ಲೀಷಿನ Salaryಯ ಮೂಲ ಲ್ಯಾಟಿನ್ Salarium ಪದದಲ್ಲಿದೆ. ಅರ್ಥ – **ಉಪ್ಪಿನ ಖರ್ಚು**! ಉಪ್ಪಿನ ಖರ್ಚಿಗಾಗಿ ಒಬ್ಬಾತ ಜೀವ ಸವೆಯಬೇಕಾಗಿತ್ತೇ? ಮೂಲತಃ ಇದು ಸೈನಿಕರಿಗೆ ಸಲ್ಲುವ ಸಂಬಳವಾಗಿತ್ತು. ಉಪ್ಪು ಆಗ ಬಹು ಅಮೂಲ್ಯ ವಸ್ತು. ನಮ್ಮಲ್ಲಿಯೂ "**ಉಪ್ಪು ಮೆಣಸಿನ ಖರ್ಚು** ಸಿಕ್ಕಿದರಾಯಿತು," ಎಂಬ ಮಾತಿದೆ. ಊಟಕ್ಕೆ ಅಗತ್ಯವಾದ ಉಳಿದೆಲ್ಲವನ್ನು ತಾವು ತಾವೇ ಉತ್ಪಾದಿಸಿಕೊಳ್ಳಬಹುದು. ಉಪ್ಪು, ಮೆಣಸು ಬಹುತರ ಪ್ರದೇಶಗಳಲ್ಲಿ ಹಣ ಕೊಟ್ಟೇ ಕೊಳ್ಳಬೇಕಾದ ಪದಾರ್ಥ ಎಂಬುದರಿಂದ Salaryಯನ್ನು ಅರ್ಥಮಾಡಿಕೊಳ್ಳಬಹುದು.

ನಮ್ಮದೇ **ಸಂಬಳ** ಶಬ್ದಕ್ಕೆ **ಶಂಬಲ**ವನ್ನು ಮೂಲವಾಗಿ ಹೇಳುತ್ತಾರೆ. ಅದರ ಮೂಲ ಅರ್ಥ ಪ್ರವಾಸಿಗಳು ದಾರಿಯಲ್ಲಿ ಉಣ್ಣಲು ಒಯ್ಯುವ ಬುತ್ತಿ. ಅರ್ಥಾತ್ ಸಂಬಳವೆಂದರೆ ಬುತ್ತಿ ಖರ್ಚು. 'ಶಂಬಲ' ಶಬ್ದ ಸಂಸ್ಕೃತ ಕೋಶಗಳಲ್ಲಿದ್ದರೂ ಅದಕ್ಕೆ ಸಮರ್ಪಕ ವ್ಯುತ್ಪತ್ತಿ ಇಲ್ಲ.

**ವೇತನ** ( = ಸಂಬಳ) ಎಂಬ ನಮ್ಮ ಶಬ್ದವನ್ನು **ವರ್ತನ**ದ ಒಂದು ರೂಪವೆಂದು ಮೋನಿಯರ್ ವಿಲಿಯಮ್ಸ್ ಸಂಸ್ಕೃತ ಕೋಶ ಭಾವಿಸುತ್ತದೆ. ಚಲಿಸು, ತಿರುಗು ಇತ್ಯಾದಿ ಅರ್ಥ ಕೊಡುವ 'ವೃತ್' ಧಾತುವಿನಿಂದ ಹುಟ್ಟಿದ 'ವರ್ತನ'ಕ್ಕೆ ಇರುವ ಅನೇಕ ಅರ್ಥಗಳಲ್ಲಿ ಬದುಕುವುದು, ಜೀವಿಸುವುದು, ಜೀವನ ಸಾಮಗ್ರಿ, ಬದುಕುವ ಬಗೆ ಇತ್ಯಾದಿ ಅರ್ಥಗಳು ಸೇರಿವೆ. ಅಂತೂ ವೇತನವೆಂದರೂ ಜೀವನೋಪಾಯ, ಬದುಕುವ ಖರ್ಚು.

ಹೇಗೆಂದರೂ ಸಂಬಳದ ಹಿಂದಿರುವ ಅರ್ಥ ಕಲ್ಪನೆಗಳು ಜೀವ ಹಿಡಿದಿರುವಷ್ಟಕ್ಕೆ ಮಿತವಾಗಿದ್ದವು – ಹೆಚ್ಚಿನ ಭಾಷೆಗಳಲ್ಲಿ ಅವು ಧಾರಾಳವನ್ನು ಸೂಚಿಸುತ್ತಿರಲಿಲ್ಲ. ಬೇರೆ ಉಪಾಯವಿಲ್ಲದವರು ಸಂಬಳಕ್ಕೆ ನಿಲ್ಲುತ್ತಿದ್ದರು ಎನ್ನೋಣ!

ಈ ಪತ್ರಕ್ಕೆ ಉತ್ತರ **ಜರೂರು, ಜರೂರಾಗಿ ತಿಳಿಸಬೇಕು** ಇತ್ಯಾದಿ ಪ್ರಯೋಗಗಳಲ್ಲಿ ಜರೂರು ಶಬ್ದ ಕೊಡುವ ಅರ್ಥವೆಂದರೆ ಬೇಗನೆ, ತ್ವರಿತವಾಗಿ ಎಂದು. ಅರಬ್ಬಿ ಭಾಷೆಯಿಂದ ತೆಗೆದುಕೊಂಡ ಈ 'ಜರೂರ್' ಪದಕ್ಕೆ ಮೂಲದಲ್ಲಿರುವ ಅರ್ಥ **ಅಗತ್ಯವಾಗಿ, ಅವಶ್ಯವಾಗಿ** ಎಂದು. ಹಿಂದಿ, ಮರಾಠಿಗಳಲ್ಲಿ ಕೂಡ ಜರೂರ್ ಆವಶ್ಯಕತೆ, ಅನಿವಾರ್ಯತೆಗಳನ್ನೇ ಸೂಚಿಸುತ್ತದೆ. ಆದರೆ ಕನ್ನಡ, ಮಲೆಯಾಳಿ, ತಮಿಳು ಭಾಷೆಗಳಿಗೆ ದಾಟಿದಾಗ ಅದು ಅರ್ಥಚ್ಛಾಯೆಯನ್ನು ತುಂಬಾ ಬದಲಿಸಿಕೊಂಡಿದೆ. ಆವಶ್ಯಕತೆಗಿಂತ ತುರ್ತನ್ನು ಈ ಎಲ್ಲ ಭಾಷೆಗಳಲ್ಲಿ ಅದೀಗ ಸೂಚಿಸುತ್ತದೆ. ಅಗತ್ಯವಾದದ್ದು ಅವಸರದ್ದೂ ತುರ್ತಿನದೂ ಆಗಿರಬೇಕಲ್ಲವೆ? ಇದು ಈ ಅರ್ಥವಿಸ್ತರಣೆಯ ಹಿಂದಿನ ಅಸ್ಪಷ್ಟ ತರ್ಕ.

ಸಂಸ್ಕೃತದಲ್ಲಿ **ಜಾಗ್ರತ್** ಎಂದರೆ ನಿದ್ರೆಯಿಂದ ಎಚ್ಚರಗೊಂಡ ಸ್ಥಿತಿ. (ಜಾಗೃ = ಎಚ್ಚರಗೊಳ್ಳು). ಈ ಜಾಗ್ರತ್ ಶಬ್ದ ಬರೇ ಶಾರೀರಿಕ ನಿದ್ರೆಯ ಅಭಾವವನ್ನು ಮಾತ್ರ

ಸೂಚಿಸದೆ, ಎಚ್ಚರಿಕೆಯ ಸ್ಥಿತಿಯಲ್ಲಿಯೂ ಮೈಮರೆಯದೆ ಬುದ್ಧಿಯನ್ನು ಚುರುಕಾಗಿಟ್ಟು ಕೊಂಡು ಆಗುಹೋಗುಗಳನ್ನು ತೀವ್ರವಾಗಿ ಗಮನಿಸುವುದಕ್ಕೂ ಅನ್ವಯಿಸುತ್ತದೆ. ಎಚ್ಚರಿಕೆಯೆಂಬ ಕನ್ನಡ ಶಬ್ದ ಕೂಡ ಮೊದಲು ನಿದ್ದೆಯಿಲ್ಲದಿರುವುದನ್ನು ಸೂಚಿಸುವುದಾದರೂ ಅನಂತರ ಮೇಲೆ ಹೇಳಿದ ಸ್ಥಿತಿಯನ್ನು ಒಳಗೊಂಡಿತು. ಹೀಗೆ ನಾವು ಮಕ್ಕಳಿಗೆ ಜಾಗ್ರತೆ ಹೇಳುತ್ತೇವೆ. ಶತ್ರುಗಳಿಗೂ **ಎಚ್ಚರಿಕೆ ಕೊಡುತ್ತೇವೆ.** (ಅವರು ಕಿವಿಗೊಡುತ್ತಾರೆಂದಲ್ಲ. ನಮ್ಮ ಧೈರ್ಯ ಹೆಚ್ಚಿಸಿಕೊಳ್ಳಲಿಕ್ಕೆ!) ಇದೆಲ್ಲ 'ಜಾಗೃ' ಧಾತುವಿನ ಮೂಲಾರ್ಥದಿಂದ ತುಸುತಾನೇ ಸರಿದದ್ದು. ಆದರೆ "**ಜಾಗ್ರತೆಯಾಗಿ ಬನ್ನಿ!**" ಎನ್ನುವಾಗ ನಾವು – ಜರೂರಿನ ಅರ್ಥದಿಂದ ಸಾಕಷ್ಟು ದೂರ ಸರಿದ ಹಾಗೆ ಜಾಗ್ರತೆಯ ಮೂಲಾರ್ಥದಿಂದ ಕೂಗಳತೆ ದೂರಕ್ಕೆ ಸಾಗಿದ್ದೇವೆ. ಇಲ್ಲಿಯೂ ಎಚ್ಚರಿಕೆಯನ್ನು ನಾವು ತುರ್ತಿನ ಕಡೆ ತಿರುಗಿಸಿದ್ದೇವೆ. ಎಚ್ಚರಿಕೆಯಿಂದ ನಡೆದರೆ ನೀವು ಬೇಗ ಬೇಗ ಕಾಲು ಹಾಕಿ ತ್ವರಿತವಾಗಿ ಬಂದು ತಲುಪುತ್ತೀರಿ – ಎಂಬ ಕಲ್ಪನೆ.

**ಪಕ್ಕಾ** ಕಳ್ಳ, **ಪಕ್ಕಾ** ಮೋಸಗಾರ ಎನ್ನುವಾಗ 'ಪಕ್ಕಾ' ಶಬ್ದ ಸಂಸ್ಕೃತದ **ಪಕ್ವ** ಶಬ್ದದ ತದ್ಭವ ಎನ್ನುವುದನ್ನು ಮರೆಯಬೇಕಾಗುತ್ತದೆ. "ಪಕ್ವ" ಎಂದರೆ ಕಳಿತು ಹಣ್ಣಾದದ್ದು, ಬೆಂದು ಮೆತ್ತಗಾದದ್ದು. ಇದೇ ಪ್ರಾಕೃತದಲ್ಲಿ 'ಪಕ್ಕ' ಆಗಿ ದೇಶಭಾಷೆಗಳಿಗೆ ಹಿಂದೀ ಮೂಲಕ ಬಂದಾಗ ಆದ, ಅರ್ಥವ್ಯತ್ಯಾಸವನ್ನು ನೋಡಿ! ಇಲ್ಲಿ ಕಳ್ಳತನ, ಮೋಸಗಳಲ್ಲಿ ಸಿದ್ಧಹಸ್ತನಾದವನನ್ನು ತುಂಬಾ ಪಳಗಿದವನೆಂಬ ಅರ್ಥದಲ್ಲಿ **ಪಕ್ಕಾ** ತನವನ್ನು ಅವನಿಗೆ ಆರೋಪಿಸುತ್ತೇವೆ. ತಪ್ಪೇನು ಅನ್ನುತ್ತೀರಾ? **ಪಕ್ವವಾದ ಪಾಂಡಿತ್ಯ** ಎನ್ನುವ ಬದಲು **ಪಕ್ಕಾ ಪಾಂಡಿತ್ಯ** ಎಂದು ನೋಡಿ!

೧೩೭

ದಿವಂಗತ ಜವಾಹರಲಾಲರು **ಆರಾಮ ಹರಾಮ ಹೈ** ಎಂದು ಕರೆ ಕೊಟ್ಟರು. ಈ ವಾಕ್ಯದಲ್ಲಿ **ಹರಾಮ** ಶಬ್ದ ಪರಕೀಯವೆಂದು ಮೇಲ್ನೋಟಕ್ಕೇ ತೋರೀತು. ಹೌದು. "ಹರಾಮ" ಎಂಬ ಅರಬ್ಬಿ ಶಬ್ದಕ್ಕೆ ವ್ಯಭಿಚಾರಿ, ಲಂಪಟ ಎಂಬರ್ಥಗಳೊಡನೆ ದುಡಿಯದೆ ಉಣ್ಣುವ ಮೈಗಳ್ಳ ಎಂಬ ಅರ್ಥವೂ ಇದೆ. ಒಟ್ಟಿನಲ್ಲಿ "ಹರಾಮ" ಎಂದರೆ ಅನಾಚಾರಿ, ಅನಾಚಾರದಲ್ಲಿ ನಿರತನಾದವ. ನೆಹರೂ ಅವರ ಸದಾ ಕಾರ್ಯನಿರತ ಜೀವನದಲ್ಲಿ ಕೆಲಸ ಮಾಡದೆ ಸುಖಪುರುಷನಾಗಿರುವಾತ ಅನಾಚಾರಿ ಎಂಬ ತತ್ವ ಮಾರ್ಗದರ್ಶಕವಾಗಿತ್ತು. ಆದರೆ "ಆರಾಮ" ಶಬ್ದ ನಮಗೆ ವಿದೇಶಿ ಅನಿಸುವುದೇ ಇಲ್ಲ. ಇದು ಶುದ್ಧ ಸಂಸ್ಕೃತವೇ ಅನಿಸುತ್ತದೆ. ವಾಸ್ತವಿಕವಾಗಿ ಇದು ಪಾರಸೀಕ ಶಬ್ದ. ಸುಖ, ಚೈನಿ, ಖುಶಿ, ನಿಶ್ಚಿಂತವಾಗಿರುವುದು ಇತ್ಯಾದಿ ಅರ್ಥಗಳು ಅದಕ್ಕಿವೆ. ನಮ್ಮ **ಆರಾಮ ಕುರ್ಚಿ** ಕೂಡ ಇದರದೇ ಕವಲು. ಅಂದಾಕ್ಷಣ ಸಂಸ್ಕೃತದಲ್ಲಿ ಈ ಶಬ್ದ ಇಲ್ಲವೆಂದಲ್ಲ, ಇದೆ. "ರಮ್" = ಸುಖಪಡು ಎಂಬರ್ಥದ ಸಂಸ್ಕೃತ ಧಾತುವಿನಿಂದ ಹುಟ್ಟಿದ ಆರಾಮ ಶಬ್ದಕ್ಕೆ ಸುಖಕರ, ರಮ್ಯ, ಸುಂದರ ಎಂಬರ್ಥಗಳೊಡನೆ ಹೂದೋಟ, ಆರೋಗ್ಯ, ವಿಶ್ರಾಂತಿ, ಆರಾಮ ಇತ್ಯಾದಿ ಅರ್ಥಗಳಿವೆ. ಆದರಿಂದ ನಮ್ಮ ಮೇಲಿನ ವಾಕ್ಯದಲ್ಲಿ ಬರುವ "ಆರಾಮ" ಶಬ್ದವನ್ನು ಸಂಸ್ಕೃತವೆಂದು **ಸಾಧಿಸುವುದು** ಕಷ್ಟವಲ್ಲ. ಮೂಲತಃ ಸಂಸ್ಕೃತದ ಆರಾಮ ಯಾವ

ಧಾತುವಿನಿಂದ ಹುಟ್ಟಿತೋ ಆ ಧಾತುವಿನ ಸೋದರ ಧಾತು ಪಾರಸೀಕ ಭಾಷೆಗಳಲ್ಲಿಯೂ ಇದೆ. ಎರಡೂ ಅಕ್ಕತಂಗಿಯರಂಥ ಭಾಷೆಗಳಾಗಿರುವುದರಿಂದ ಇಲ್ಲಿ ಸೋಜಿಗವೂ ಇಲ್ಲ. ಆದರೆ ಐತಿಹಾಸಿಕ ಸನ್ನಿವೇಶದಲ್ಲಿ ಈ ಅರ್ಥದಲ್ಲಿ ಆರಾಮ ಶಬ್ದ ನಮಗೆ ಬಂದದ್ದು ಪಾರಸೀಕದಿಂದ ಎಂಬುದಷ್ಟೇ ತಥ್ಯ.

**ದಸ್ತಗಿರಿ** ಶಬ್ದ **ಬಂಧನ** ಎಂಬರ್ಥದಲ್ಲಿ ಸತ್ಯಾಗ್ರಹ ಸಮರ ಕಾಲದಲ್ಲಿ ವೃತ್ತಪತ್ರಿಕೆಗಳಲ್ಲಿ ಬಹಳವಾಗಿ ಪ್ರಯೋಗವಾದದ್ದು. ಇದೂ ಪಾರಸೀಕ ಪದ. **ದಸ್ತ್** ನಮ್ಮ ಸಂಸ್ಕೃತದ ''ಹಸ್ತ''ದ ಜ್ಞಾತಿಪದ. ಕೈ, ಹಿಡಿತ ಎಂದರ್ಥ. (**ದಸ್ಕತ್ತು** [ಸಹಿ] ನಿಜವಾಗಿ **ದಸ್ತ್ + ಖತ್** – ಕೈಬರಹ.) **ಗೀರ್** ಎಂದರೆ ಹಿಡಿಯುವವ. ಆದರೆ ''ದಸ್ತ + ಗೀರ್'' ಒಂದಾದಾಗ ಉರ್ದುವಿನಲ್ಲಿ ಬಂಧನ ಎಂಬರ್ಥ ಪ್ರಧಾನವಲ್ಲ, ಕೈಯಾಸರೆ ಕೊಟ್ಟು ನೆರವಾಗುವಾತ ಎಂದೇ ಅರ್ಥ. ಹೀಗೆ ''ದಸ್ತಗೀರಿ'' ಎಂದರೆ ಸಹಾಯಕತೆ. ''ದಸ್ತಗೀರ್'' ಎಂಬ ಹೆಸರಿನ ಒಬ್ಬ ಮುಸ್ಲಿಂ ಹಿರಿಯ ಕನ್ನಡ ಲೇಖಕರೇ ಇದ್ದಾರೆ. ಆದರೂ ಪೊಲೀಸ್ ಪರಿಭಾಷೆಯಲ್ಲಿ ಆ ಪದಕ್ಕೆ ಕೆಟ್ಟ ಅರ್ಥವೇ ಪ್ರಧಾನವಾಗಲು ಬಂಧನವೂ ಕೈ ಹಿಡಿದು ವಶಪಡಿಸಿಕೊಳ್ಳುವುದೇ ಆಗಿರುವುದು ಕಾರಣ. ಅಲ್ಲದೆ **ಗೀರಃ** ಪದಕ್ಕೆ ಪಾರಸೀಕ ಭಾಷೆಯಲ್ಲಿ ಲೋಹದ ಕೋಳ ಎಂಬರ್ಥವಿರುವುದೂ ಅರ್ಥವ್ಯತ್ಯಾಸಕ್ಕೆ ಕಾರಣವಾಗಿರಬಹುದು. **ಗೀರ್** ಎಂಬುದೂ ಸಂಸ್ಕೃತದ **ಗ್ರಹಣಕ್ಕೆ** ಸಂವಾದಿಯಾದ ಪದವೇ. ''ದಸ್ತಗಿರಿ'' = ಹಸ್ತಗ್ರಹಣ. ಗ್ರಹಣ = ಹಿಡಿಯುವುದು.

ಪೊಲೀಸ್ ಪರಿಭಾಷೆಯಲ್ಲಿ ಈ ದೇಶದಲ್ಲಿ ಶಾಶ್ವತ ಸ್ಥಾನ ಪಡೆದಿರುವ ಇನ್ನೊಂದು ಪದ **ಗೋಳೀಬಾರು**. ಇದು ಕನ್ನಡ ಬಾಯಿಗೆ ಸರಿಯಾಗಿ ರೂಪಾಂತರಗೊಂಡ ಪಾರಸೀಕ ಶಬ್ದ. ಮೂಲದಲ್ಲಿ **ಗೋಲಃ ಬಾರೀ**. ಇಲ್ಲಿನ **ಗೋಲಃ** ಸಂಸ್ಕೃತ **ಗೋಲಕ್ಕೆ** ಸಂಬಂಧಿಯೇ. ದುಂಡಾಗಿರುವಂಥಾದ್ದು – ಭೂಗೋಲದಿಂದ ಹಿಡಿದು ಮಕ್ಕಳಾಟದ ಗೋಲಿಯವರೆಗಿನ ಗುಂಡುಗಳಲ್ಲೆಲ್ಲ ಕಾಣಿಸುವಂಥಾದ್ದು. **ಬಾರ್** ಅಥವಾ **ವಾರ್** ಎಂದರೆ ಆಕ್ರಮಣ, ಧಾಳಿ. ಗುಂಡುಗಳಿಂದ ಆಕ್ರಮಣವೇ ''ಗೋಲಾ(ಲಃ) ಬಾರೀ.''

ಬಂಗಾಲಿಗಳ ಪ್ರೀತಿಯ ಸಿಹಿ ತಿಂಡಿ **ರಸಗುಲ್ಲಕ್ಕೂ** ಅದರ ಆಕಾರದಿಂದಲೇ ಹೆಸರು ಬಂದದ್ದು. ಉತ್ತರ ಕರ್ನಾಟಕದ **ಗೋಳಂಬ** ಎಂಬ ಖಾದ್ಯ, **ಗುಳೋರಿಗೆ** ಎಂಬ ಉಬ್ಬಿದ ಭಕ್ಷ್ಯ ಇವೆಲ್ಲ ಆಕಾರಮೂಲವಾಗಿಯೇ ಹೆಸರು ಪಡೆದಿವೆ.

ಇಲ್ಲಿ ಒಂದು ವಿಷಯಾಂತರ ಮಾಡಬಹುದಾದರೆ, ಈ **ಗೋಲದ** ವ್ಯಾಪಕತೆ ಆಶ್ಚರ್ಯ ಹುಟ್ಟಿಸುವಂತಿದೆ. ಸಂಸ್ಕೃತದಲ್ಲಿ ''ಗೋಲ'' ಇದೆ. ಗುಂಡಗಿರುವ ಪದಾರ್ಥ ಗೋಲ. ಭಾಸ್ಕರಾಚಾರ್ಯರ ''ಗೋಲಾಧ್ಯಾಯ'' ಭೂಮಿಯನ್ನು ಒಂದು ಗೋಲವೆಂದು ಸಾಧಿಸಿ ಆ ಗೋಲದ ವರ್ತನೆಯನ್ನು ವಿವರಿಸುತ್ತದೆ. ಪಾರಸೀಕ ''ಗೋಲಃ'' (ಗೋಲಾ) ಬಗ್ಗೆ ಈಗಾಗಲೇ ಚರ್ಚಿಸಿದೆ. ಚಿಕ್ಕ ಗೋಲವೇ ಗೋಲಿ. ನಮ್ಮ ಮಕ್ಕಳು ಆಡಲು ಬಳಸುವ ''ಗೋಲಿ''ಯ ಹೆಸರು ಬಹುಶಃ ಪಾರಸೀಕದಿಂದಲೇ ಬಂದಿರಬೇಕು. ಗೋಲಕ್ಕೆ ಸಂವಾದಿಯಾಗಿ ಇಂಗ್ಲೀಷ್, ಫ್ರೆಂಚ್, ಸ್ಪಾನಿಶ್ ಭಾಷೆಗಳಲ್ಲಿ **ಗ್ಲೋಬ್**, **ಗ್ಲೋಬೋ** ಪದಗಳಿವೆ. ಇವು ಲ್ಯಾಟಿನ್ನಿನಿಂದ ಬಂದವುಗಳು. ಲ್ಯಾಟಿನ್ನಿನಲ್ಲಿ **ಗ್ಲೋಬಸ್** ಇದೆ. ಅದರ ಮೂಲ ಅರ್ಥ ಚೆಂಡು ಎಂದು. ಗ್ರೀಕಿನಲ್ಲಿ ''ಗ್ಲೋಬಸ್'' ಪದಕ್ಕೆ ಬಿಂದು ಎಂದರ್ಥ. ಇದು ''ಗ್ಲೋಬಸ್'' ಎಂಬ ಲ್ಯಾಟಿನ್ ಪದಕ್ಕೆ ಜ್ಞಾತಿ ಹೌದೋ ಅಲ್ಲವೋ ಹೇಳಲಾಸಲ್ಲ.

ಗ-ಲ ಎಂಬ ವರ್ಣಗಳ ಸಂಯೋಗದಿಂದಾಗುವ ಇಂಡೋ-ಯುರೋಪಿಯನ್ ಪದಗಳ ಮಾತು ಹೀಗಾದರೆ ಸಂಸ್ಕೃತದಲ್ಲೇ ಇರುವ **ಗುಟಿಕಾ** ಮತ್ತು **ಗುಲಿಕಾ**ಗಳನ್ನು ನೋಡಿ. ಔಷಧ ಮೊದಲಾದವುಗಳ "ಗುಳಿಗೆ"ಗೆ ಈ ಹೆಸರು. ಅದಲ್ಲದೆ ದ್ರಾವಿಡ ಭಾಷೆಗಳಲ್ಲಿ ಕೂಡ ಗುಂಡಗಿರುವ ನೀರಿನ ಬುದ್ಬುದಕ್ಕೆ **ಗುಳ್ಳೆ** ಎನ್ನುತ್ತೇವೆ. ಕಜ್ಜಿ ಮೊದಲಾದವುಗಳ ಬೊಕ್ಕೆಯೂ ಗುಳ್ಳೆಯೇ. "ಲ"ದ ಬದಲು "ಳ" ಬಂದದ್ದು ಬಿಟ್ಟರೆ ಗೋಲಕ್ಕೂ ಇದಕ್ಕೂ ವ್ಯತ್ಯಾಸವೇನಿದೆ? ಕನ್ನಡ, ತುಳುಗಳಲ್ಲಿ **ಗುಳ್ಳ** ಎಂಬ ಹೆಸರು ಗುಂಡಗಿನ ತರಕಾರಿಯಾದ ಬದನೆಗೆ ಸಲ್ಲುತ್ತದೆ.

ತೆಲುಗಿನಲ್ಲಿ **ಗುಳ್ಳ** ಎಂದರೆ ದುಂಡಗಿನ ಮೀನು ಚಿಪ್ಪು. **ಗುಡ್ಡೆ** ಎಂಬುದು ತತ್ತಿಗೂ ಕಣ್ಣುಗುಡ್ಡೆಗೂ ಅನ್ವಯಿಸುವ ಕನ್ನಡ ಪದ. ತೆಲುಗಿನಲ್ಲಿ ಇವೇ ಪದಾರ್ಥಗಳಿಗೆ **ಗುಡ್ಡು** ಎಂಬ ಶಬ್ದ ಇದೆ. ದ್ರಾವಿಡ ಭಾಷೆಗಳಲ್ಲಿ ಒಂದಾದ ಕೋಲಾಮಿಯಲ್ಲಿ **ಗುಡ್** ಎಂದರೆ ವೃಷಣ. ಕೊಂಡ ಭಾಷೆಯಲ್ಲಿ **ಗುಡು** ಎಂದರೆ ತತ್ತಿ. ಕನ್ನಡ, ತುಳುಗಳಲ್ಲಿ **ಗುಂಡು** ಇದೆ. ಧ್ವನಿಯಲ್ಲಿ ಇವು ಗೋಲಕ್ಕೆ ಸಮೀಪವಾಗಿಲ್ಲವೇ? "ಗು-ಣ್(ಳ್)-ಡು" ಎಂದು ವರ್ಣವಿಭಜನೆ ಮಾಡಿ ನೋಡಿ. ಚಂದ್ರಸೂರ್ಯರ ಸುತ್ತ ಒಮ್ಮೊಮ್ಮೆ ಕಂಡುಬರುವ ವೃತ್ತಾಕಾರದ ಛಾಯೆಗೆ ಕನ್ನಡದಲ್ಲಿಯೂ ತೆಲುಗಿನಲ್ಲಿಯೂ **ಗುಡಿ** ಎಂಬ ಹೆಸರಿದೆ. (ಗುಡಿ ಕಟ್ಟಿದೆ). ಡ-ಳಗಳು ಒಂದರ ಬದಲು ಇನ್ನೊಂದು ನಿಲ್ಲಬಲ್ಲವು. ಇದನ್ನೆಲ್ಲ ಹೋಲಿಸಿದರೆ ಕೆಲವೊಮ್ಮೆ ಶಬ್ದಗಳನ್ನು ರೂಪಿಸುವಾಗ ಮನುಷ್ಯ ಮನಸ್ಸು ವಿಶಿಷ್ಟವಾದ ಅಲಿಖಿತ ನಿಯಮಗಳನ್ನು ಅನುಸರಿಸುತ್ತಿದೆ ಎಂದೆನಿಸುವುದಿಲ್ಲವೆ?

## ೧೩೮

"ಈ ಕ್ರಮ ರಾಜಕೀಯವಾಗಿ ಪಕ್ಷಕ್ಕೆ ಬಹಳ **ದುಬಾರಿ**ಯಾಯಿತು" ಅಥವಾ "**ದುಬಾರಿ ಬಿತ್ತು**" – ಎನ್ನುತ್ತೇವೆ. ಇದು ಪಾರಸೀಕ ಭಾಷೆಯಿಂದ ಹಿಂದುಸ್ತಾನಿಗೆ ಬಂದ "ದೋ-ಬಾರಾ", "ದು-ಬಾರಿ" ಶಬ್ದದ ಕನ್ನಡ ರೂಪ. ಇದು ಹಿಂದಿ, ಬಂಗಾಲಿ, ಮರಾಠಿಗಳಿಗೂ ದಾಟಿದ ಪದ. ಆದರೆ ಅಲ್ಲೆಲ್ಲ ಇದಕ್ಕೆ "ಇಮ್ಮಡಿ" ಎಂದು ತಾನೆ ಅರ್ಥ. (ದೋ, ದು = ಎರಡು; ಬಾರಾ, ಬಾರೀ = ಸಲ). ಇಂಗ್ಲೀಷ್ – double ಕನ್ನಡದಲ್ಲಿ ಮೂಲದ ಇಮ್ಮಡಿ (ದುಬಾರಿ ಕೆಲಸ = ಎರಡು ಸಲ ಅದೇ ಕೆಲಸ ಮಾಡುವ ಪ್ರಸಂಗಕ್ಕೆ) ಎಂಬರ್ಥದೊಡನೆ **ಇಮ್ಮಡಿ ಬೆಲೆ** ಎಂಬರ್ಥವೂ ಸೇರಿಕೊಂಡಿತು. ಇದಕ್ಕೆ ಬಹುಶಃ ಸಂತೆಯಲ್ಲೋ ಅಂಗಡಿಯಲ್ಲೋ ಬೆಲೆಗಳ ಬಗ್ಗೆ ಚರ್ಚೆ ಮಾಡುವ ವಾದ-ಸಂವಾದದ ಧಾಟಿ ಕಾರಣವಾಗಿರಬೇಕು. ಉದಾಹರಣೆಗೆ, "ಏನಮ್ಮಾ, ಬಹಳ ದುಬಾರಿ ಬೆಲೆ ಹೇಳುತ್ತೀಯಲ್ಲಾ?" (ಒಂದಕ್ಕೆರಡು ಹೇಳುತ್ತೀಯಲ್ಲಾ?). ಉತ್ತರ ಕರ್ನಾಟಕದಲ್ಲಿ "ದುಬಾರಿ"ಯೆಂಬಲ್ಲಿ **ದುಪ್ಪಟ್ಟು** ಎಂದು ಬಳಕೆಯಲ್ಲಿದೆ. (ದು = ಎರಡು + ಪಟ್ಟು = ಮಡಿ). ಕಾಲಾಂತರದಲ್ಲಿ ಈ ದುಬಾರಿ ಬಹಳ ಹೆಚ್ಚು ಎಂಬರ್ಥ ಪಡೆದದ್ದು ಅಸ್ವಾಭಾವಿಕವಲ್ಲ. ಕಡೆಗೆ ವ್ಯಾಪಾರದಲ್ಲಿ ಬೆಲೆಯ ಜಗ್ಗಾಟಕ್ಕೆ ಬಳಸುತ್ತಿದ್ದ ಶಬ್ದ ಒಟ್ಟೇ ತುಟ್ಟಿ ಎಂಬಲ್ಲಿ ತಲುಪಿ, ಬಹಳ ನಷ್ಟದಾಯಕವಾದ ಯಾವುದೇ ವ್ಯವಹಾರಕ್ಕೆ ಅನ್ವಯಿಸಿತು. ಬಹಳ ಬೆಲೆ, ಬಹಳ ತುಟ್ಟಿ, ಬಹಳ ನಷ್ಟಕಾರಕ ಎಂದೆಲ್ಲ ಭಾವಗಳಿಗೆ ಅದು ವಾಹನವಾಯಿತು.

ಹಣದ ಲೆಕ್ಕಕ್ಕೇ ಸೀಮಿತವಾಗದೆ ಒಟ್ಟಿನ ಮೇಲೆ ಯಾವುದೇ ಮಾತು ಅಥವಾ ಕೃತಿಯ ಕೆಟ್ಟ ಪರಿಣಾಮಗಳಿಗೆಲ್ಲ ದುಬಾರಿ ಪದ ನಡೆಯತೊಡಗಿತು. ''ಒಂದು ಲೇವಡಿ ಮಾತು ಅವನಿಗೆ ಬಹಳ ದುಬಾರಿಯಾಗಿಬಿಟ್ಟಿತು.''

ನೆರೆಭಾಷೆಗಳಲ್ಲಿ ಈ ಪದ ಹೀಗೇಕೆ ಬೆಳೆಯಲಿಲ್ಲ ಎಂಬುದಾಗಲಿ, ನಮ್ಮಲ್ಲೇ ಇರುವ **ಇಮ್ಮಡಿ, ದುಪ್ಪಟ್ಟು** ಮೊದಲಾದ ಪದಗಳಿಗೆ ದುಬಾರಿಯ ಅರ್ಥಚ್ಛಾಯೆಗಳು ಏಕೆ ಬರಲಿಲ್ಲ ಎಂಬುದೆಲ್ಲ ಸೋಜಿಗದ ಸಂಗತಿಗಳು.

**ತಾಲೀಮ್** ಎಂಬ ಶಬ್ದ ಮೂಲದಲ್ಲಿ ಅರಬ್ಬಿ. ಕನ್ನಡದಲ್ಲಿ ಅದು ಕುಸ್ತಿ ಅಥವಾ ಆಟಗಳಲ್ಲಿ ಅಂಗಸಾಧನೆ, ತರಬೇತಿ ಎಂಬುದಕ್ಕೆ ಹೆಚ್ಚಾಗಿ ಅನ್ವಯಿಸುತ್ತದೆ. ನಾಟಕಗಳಲ್ಲಿ ಕೂಡ ಇಂಗ್ಲೀಷಿನಲ್ಲಿ practice ಎನ್ನುವಲ್ಲಿ **ತಾಲೀಮು, ರಂಗ ತಾಲೀಮು** ಎನ್ನುವುದುಂಟು. ಬಂಗಾಲಿಯಲ್ಲಿ ''ತಾಲೀಮ್'' ಎನ್ನುವುದು ವಿಶೇಷತಃ ನೃತ್ಯ ತರಬೇತಿಗಂತೆ; ಮರಾಠಿಯಲ್ಲಿ ಕುಸ್ತಿ ಇತ್ಯಾದಿ ತರಬೇತಿಗಳಿಗೆ ''ತಾಲೀಮ್'' ಹೆಚ್ಚಾಗಿ ಪ್ರಯೋಗಿಸಲಾಗುತ್ತದೆಂದು ಶ್ರೀಧರ ಗಣೇಶ ವರ್ಝೆ ಮರಾಠಿ ಕೋಶ ಹೇಳುತ್ತದೆ. ಆದರೆ ಅರಬ್ಬೀ, ಉರ್ದು, ಹಿಂದಿಗಳಲ್ಲೆಲ್ಲ ಈ ಪದಕ್ಕೆ ಸೀಮಿತ ಅರ್ಥವಿರದೆ, ಎಲ್ಲ ತರದ ಶಿಕ್ಷಣ, ತರಬೇತಿ, ವಿದ್ಯಾಭ್ಯಾಸ, ಉಪದೇಶ, ಮಂತ್ರೋಪದೇಶ, ದೀಕ್ಷೆ, ನೃತ್ಯ, ಗೀತಾಭ್ಯಾಸ, ವ್ಯಾಯಾಮಗಳಿಗೆ ಅದು ನಡೆಯುತ್ತದೆ. ಗಾಂಧೀಜಿ ತಮ್ಮ ಆದರ್ಶ ಶಿಕ್ಷಣ ಪದ್ಧತಿಗೆ ''ನಯೀ ತಾಲೀಮ್'' (ನವ ಶಿಕ್ಷಣ) ಎಂದು ಹೆಸರಿಟ್ಟಿದ್ದರು.

**ಜಿಮ್‌ಖಾನಾ** ಕ್ಲಬ್ಬುಗಳು ಭಾರತದಲ್ಲಿ ಎಲ್ಲೆಡೆ ಇವೆ. ನಮ್ಮಲ್ಲಿ ಇದಕ್ಕೆ ಸಾರ್ವಜನಿಕ ಕ್ರೀಡಾಂಗಣ, ಆಟಪಾಟ ಮೊದಲಾದವುಗಳ ತರಬೇತಿಗೆ ಬೇಕಾದ ಸಲಕರಣೆ, ವ್ಯವಸ್ಥೆ ಒದಗಿಸುವ ಸ್ಥಳ ಎಂಬರ್ಥವಿದೆ. (ಹಳೆ ಜನ ''ಗರಡಿ'' ಎನ್ನುತ್ತಾರೆ.) ಇಂಗ್ಲೀಷಿನಲ್ಲಿ ಸೇರಿ ಹೋಗಿರುವ ಈ ಪದದ ಮೂಲ ಹಿಂದೀ **ಗೇಂದ್ ಖಾನಾ** = ಚೆಂಡಿನ (ಚೆಂಡು ಮೊದಲಾದ ಆಟದ ಸಲಕರಣೆಗಳನ್ನಿಡುವ) ಮನೆ. ಈ ಸಮಾಸಪದದಲ್ಲಿ **ಗೇಂದ್** ಹಿಂದೀ (ಸಂಸ್ಕೃತ – ''ಕಂದುಕ''); **ಖಾನಾ** ಪಾರಸೀಕ. ಇಂಗ್ಲೀಷಿಗೆ ಸೇರುವಾಗ ಅಲ್ಲಿ ''ಜಿಮ್ನಾಸ್ಟಿಕ್ಸ್'' (gymnastics) ಎಂಬ ಶಬ್ದದಿಂದ ಅದು ಪ್ರಭಾವಿತವಾಗಿ ಹೊಸ ಅರ್ಥವ್ಯಾಪ್ತಿ ಪಡೆದಿದೆ – ಅಷ್ಟೇ.

ಇನ್ನು ಪಾಶ್ಚಾತ್ಯ **ಜಿಮ್ನಾಸ್ಟಿಕ್ಸ್** ಕೂಡ ಆಟಪಾಟಗಳಲ್ಲಿ ಆಸಕ್ತಿಯುಳ್ಳ ಭಾರತೀಯರಿಗೆಲ್ಲ ಪರಿಚಿತ. ''ಜಿಮ್ನಾಶಿಯಮ್'' ಜಿಮ್ನಾಸ್ಟಿಕ್ಸಿನ ಸೌಕರ್ಯವುಳ್ಳ ಸ್ಥಳ. ಮೂಲ ಗ್ರೀಕ್ gumnazein ಪದಕ್ಕೆ ತರಬೇತಿ ಎಂದರ್ಥ. ''ತಾಲೀಮ್'' ಎಂದಂತೆಯೇ. ಜರ್ಮನ್ ಭಾಷೆಯಲ್ಲಿ ಪ್ರಾಥಮಿಕ ಶಾಲೆಗೂ ''ಜಿಮ್ನಾಶಿಯಮ್'' ಎಂದು ಹೆಸರಿದೆ. ಶಾರೀರಿಕ, ಮಾನಸಿಕ ಸಾಧನೆ, ತರಬೇತಿ, ವ್ಯಾಯಾಮ ಮೊದಲಾದವುಗಳನ್ನು ದೊರಕಿಸುವ ಸ್ಥಳ ಇದು. ಆದರೆ ಗ್ರೀಕಿನ gumnosನ ಮೂಲಾರ್ಥ ಏನು ಗೊತ್ತೇ ? ಬತ್ತಲೆ ಎಂದು. ಪ್ರಾಚೀನ ಗ್ರೀಸಿನಲ್ಲಿ ಆಟಪಾಟಗಳು ಬತ್ತಲೆಯಲ್ಲಿ ನಡೆಯುತ್ತಿದ್ದವು. ಒಲಂಪಿಕ್ ಓಟಗಳನ್ನೂ ಬತ್ತಲೆಯಾಗಿ ಓಡುತ್ತಿದ್ದರು – ಎಂಬುದು ಈಗಿನ ನಮಗೆ ಆಶ್ಚರ್ಯವಾಗಿ ಕಾಣಬಹುದು. ಈ ಆಟಗಳಲ್ಲಿ ಗಂಡಸರಷ್ಟೇ ಪಾಲುಗೊಳ್ಳುತ್ತಿದ್ದರೆನ್ನಿ; ಆದರೆ ಪ್ರೇಕ್ಷಕರಾಗಿ ಹೆಂಗಸರೂ ಬರುತ್ತಿದ್ದರೆಂದು ಮರೆಯಬಾರದು.

ಭಾರತದಲ್ಲಿ ಗ್ರೀಕರು ಕಂಡ ನಗ್ನ ಸಾಧು, ತತ್ವಜ್ಞಾನಿಗಳಿಗೆ gymno-sophist ಎಂಬ

ಹೆಸರಿದೆಯೆಂಬುದು ಸ್ಮರಣೀಯ. Sophist ಎಂದರೆ ಮೂಲಾರ್ಥದಲ್ಲಿ ಬಲ್ಲವ, ಜ್ಞಾನಿ.

೧೩೯

ನನಗೆ ಚೋದ್ಯವೆನಿಸಿದ ಒಂದು ಸಂಗತಿಯೆಂದರೆ ಸಂಸ್ಕೃತದಲ್ಲಿಯೂ ದ್ರಾವಿಡದಲ್ಲಿಯೂ ಮೋರೆಗಿರುವ ಪದಗಳೆಲ್ಲದರ ದ್ವಿಧಾಭಾವ. ನಮ್ಮ ಕೋಶಕಾರರು **ಮುಖ** (face)ಕ್ಕೆ ಕೊಟ್ಟಿರುವ ಸಮಾನ ಪದಗಳೆಂದರೆ **ವಕ್ತ್ರ, ವದನ, ಆನನ, ಲಪನ, ತುಂಡ, ಆಸ್ಯ** ಮತ್ತು **ಮೋರೆ**. ''ಅಭಿನವಾಭಿಧಾನ'' ಕೋಶಕಾರನು ಬಾಯಿಗೆ ''ಕಬಳಿಕೆ'' ಎಂಬ ಪ್ರತ್ಯೇಕ ಶಬ್ದವನ್ನು ಹೇಳಿದ್ದರೂ ವಾಸ್ತವಿಕವಾಗಿ ಮೇಲಿನ ಎಲ್ಲ ಮುಖವಾಚಕ ಶಬ್ದಗಳೂ ಬಾಯಿಗೂ ಅನ್ವಯಿಸುತ್ತವೆ. ಹಾಗೆ ಕೇಳಿದರೆ, ಇವೆಲ್ಲವೂ ಮೂಲತಃ ಬಾಯಿಗೇ ಅನ್ವಯಿಸುವವಾಗಿದ್ದು ಮೋರೆಯೆಂಬುದೇ ವಿಸ್ತೃತ ಅರ್ಥವಾಗಿದೆ. ಒಂದೊಂದೇ ಪದವನ್ನು ತೆಗೆದುಕೊಂಡು ಚರ್ಚಿಸೋಣ.

**ಮುಖ** ಎಂಬುದು ದ್ರಾವಿಡ ಮೂಲದ್ದೇ ಶಬ್ದವಿರಬೇಕೆಂದು ಭಾಷಾಶಾಸ್ತ್ರಜ್ಞರ ತರ್ಕ. ಇದರ ಮೂಲವೆಂದು ಭಾವಿಸಲಾದ **ಮುಕಂ** (ತಮಿಳು) ಪದಕ್ಕೆ ತಮಿಳಿನಲ್ಲಿಯೇ ಮುಖವೆಂದೂ ಬಾಯಿಯೆಂದೂ ಅರ್ಥ ಹೇಳಲಾಗಿದೆ. ಉಳಿದ ಹೆಚ್ಚಿನ ದ್ರಾವಿಡ ಭಾಷೆಗಳಲ್ಲಿ ಬಾಯಿ ಎಂಬರ್ಥ ಹೇಳಿಲ್ಲ ಎಂಬುದು ಬೇರೆ ಮಾತು. ಇದನ್ನು ದ್ರಾವಿಡ ಪದವೆಂದೇ ಒಪ್ಪಿಕೊಂಡರೂ ಋಗ್ವೇದದಲ್ಲಿಯೇ (ಉದಾ : ೧೦ನೇ ಮಂಡಲದ ಪುರುಷ ಸೂಕ್ತದಲ್ಲಿ ''ಬ್ರಾಹ್ಮಣೋಸ್ಯ ಮುಖಮಾಸೀತ್'' – ಬ್ರಾಹ್ಮಣನು ಇವನ ಮುಖವಾಗಿದ್ದನು) ಅದು ಪ್ರಯೋಗವಾಗಿದೆಯೆಂದು ಗಮನಿಸಬೇಕು. ಇಲ್ಲಿ ಮೋರೆ (face) ಎಂಬರ್ಥಕ್ಕಿಂತ ಬಾಯಿ ಎಂಬುದೇ ಹೆಚ್ಚು ಸೂಕ್ತವಾಗಿ ಕಾಣುತ್ತದೆ. ಅಗ್ನಿಮುಖದಲ್ಲಿ ಆಹುತಿ ಕೊಡುವುದು ಇತ್ಯಾದಿ ಪ್ರಯೋಗಗಳು ಮುಖಕ್ಕೆ ಬಾಯಿಯೆಂಬುದು ಪ್ರಧಾನಾರ್ಥವೆಂದು ಸೂಚಿಸುವುದಿಲ್ಲವೆ ? ಒಂದು ವೇಳೆ ಇಂಗ್ಲೀಷಿನ mouth ಎಂಬ ಬಾಯಿಯನ್ನು ಸೂಚಿಸುವ ಪದ ಯಾವುದೋ ರೀತಿಯಲ್ಲಿ ಮುಖಕ್ಕೆ ಜ್ಞಾತಿ ಪದವೆಂದು (ಅದು ಪ್ರಾಚೀನ ಜರ್ಮಾನಿಕ ಭಾಷೆಯಿಂದ ಬಂದಿದೆಯೆಂದು ಭಾಷಾಶಾಸ್ತ್ರಿಗಳು ಹೇಳುತ್ತಾರೆ) ಬಗೆದರೆ ಬಾಯಿಯೆ ಮುಖದ ಮೂಲಾರ್ಥವೆನ್ನಬೇಕಾಗುತ್ತದೆ. ಇನ್ನು **ಮೋರೆ**ಯನ್ನು ದ್ರಾವಿಡ ಭಾಷಾಶಾಸ್ತ್ರಿಗಳು ''ಮುಕಂ''ಕ್ಕೇ ಸಂಬಂಧಿಸಿದ್ದನ್ನುತ್ತಾರೆ.

ಇನ್ನುಳಿದ ಪದಗಳ ಬಗ್ಗೆ ಒಂದೊಂದು ವಾಕ್ಯದಲ್ಲಿ ಮುಗಿಸಬಹುದು. **ವಕ್ತ್ರ** ಎಂಬುದು ''ವಚ್'' (=ಮಾತಾಡು) ಧಾತುವಿನಿಂದ ಹುಟ್ಟಿದ್ದರಿಂದ ಅದು ಬಾಯಿಯನ್ನೇ ಮುಖ್ಯವಾಗಿ ನಿರ್ದೇಶಿಸುತ್ತದೆ. **ವದನ** ಎಂಬುದೂ ''ವದ್'' (=ಮಾತಾಡು) ಧಾತುವಿನಿಂದ ಬಂದಿದ್ದರಿಂದ ಮೇಲಿನ ಮಾತೇ ಅದಕ್ಕೂ ಅನ್ವಯಿಸುತ್ತದೆ. **ಲಪನ** ಕೂಡ (''ವಿಲಾಪ'', ''ಪ್ರಲಾಪ'' ಗಳನ್ನು ಗಮನಿಸಿರಿ) ಮಾತಾಡುವ ಬಾಯಿಯನ್ನೇ ಸೂಚಿಸುತ್ತದೆ. **ಆಸ್ಯ, ಆನನ** ಇವೆರಡೂ ಬಾಯಿ ಮತ್ತು ಮೋರೆಯನ್ನು ವೇದ ಕಾಲದಿಂದಲೇ ನಿರವಿಸುತ್ತವೆ. **ತುಂಡ**ವೂ ಸಂಶಯಾಸ್ಪದ ಮೂಲದ್ದಾಗಿದ್ದು, ಅದಕ್ಕಿರುವ ಹಕ್ಕಿಯ ಕೊಕ್ಕು, ದ್ರಾವಿಡದಲ್ಲಿ ''ಮುನ್'' (ಮುಂದೆ) ಎಂಬ ಬೇರಿನಿಂದ ಹುಟ್ಟಿದ ''ಮೂಂಜಿ'' (ತಮಿಳು) ಮೊದಲಾದ ಅರ್ಥಗಳು ಮತ್ತೆ ಮೋರೆ ಮತ್ತು ಬಾಯಿಯ ಐಕ್ಯವನ್ನು ಸೂಚಿಸುತ್ತವೆ. ಅದೇ ಮೇರೆಗೆ ಹಿಂದಿ

ಮೊದಲಾದ ಭಾಷೆಗಳಲ್ಲಿ ಕೂಡ **ಮುಹ್** ಇತ್ಯಾದಿ ಪದಗಳು ಉಭಯಾರ್ಥಗಳನ್ನು ಕೊಡುತ್ತವೆ. ಮತ್ತು ಇತರ ಜ್ಞಾತಿ ಭಾಷೆಗಳಲ್ಲಿ ಅದಕ್ಕೆ ಸಂವಾದಿಯಾಗಿರುವ ಪದಗಳು ಮೋರೆ (ಬಾಯಿಯ ಸಂಬಂಧವಿಲ್ಲದೆ) ಯನ್ನು ಸೂಚಿಸುವವೆನ್ನಬಹುದು. ತಮಿಳಿನಲ್ಲಿ ''ಮೂಂಜಿ ಪಾರ್'' (ಮೋರೆ ನೋಡು) ಎನ್ನುವುದಿದೆ. ಇದು ಹೊರತು ಇತರ ದ್ರಾವಿಡ ಪದಗಳು ಮೋರೆಗೂ ಬಾಯಿಗೂ ಸೇರಿಯೇ ಸಲ್ಲುತ್ತವೆ.

ಪದಗಳು ನಮ್ಮಲ್ಲಿ ಹೀಗೆ ಅರ್ಥ ಕೊಡುವುದಕ್ಕೆ ಏನು ಕಾರಣ? ಹಿಂದಿಯಲ್ಲಿ ಪ್ರತ್ಯೇಕವಾಗಿ ''ಮೋರೆ''ಯನ್ನು ಸೂಚಿಸಲಿಕ್ಕೆ ಪಾರಸೀಕ **''ಚೇಹರಾ''** (ಇದು ಕನ್ನಡದಲ್ಲಿಯೂ ''ಚೆಹರೆ'' ಎಂದು ಸ್ವೀಕೃತವಾಗಿದೆ). ನನ್ನ ಅಳವಿನಲ್ಲಿರುವ ಇತರ ಯುರೋಪಿಯನ್ ಭಾಷೆಗಳಲ್ಲಿ ಮೋರೆ ಮತ್ತು ಬಾಯಿ ಬೇರೆ ಬೇರೆ ಪದಗಳಿಂದಲೇ ಸೂಚಿತವಾಗುತ್ತವೆ. ಇಂಗ್ಲೀಷಿನಲ್ಲಿ Face ಎಂದರೆ ಮೋರೆ : Mouth = ಬಾಯಿ, ಫ್ರೆಂಚಿನಲ್ಲಿ ಬಾಯಿಗೇ Bouche ಎಂಬ ಬೇರೆ ಪದವಿದೆ. ಪೋರ್ಚುಗೀಸಿನಲ್ಲಿ care ಎಂದರೆ ಮೋರೆ, Boca ಎಂದರೆ ಬಾಯಿ.

ಹಾಗೆಯೇ ಸಂಸ್ಕೃತ **ಆಮ್ರ** ಮತ್ತು ದ್ರಾವಿಡ **ಮಾವು** ನನಗೆ ಸಮಸ್ಯಾತ್ಮಕವಾಗಿ ಕಾಣುತ್ತದೆ. ಸಂಸ್ಕೃತದ ''ಆಮ್ರ'' ಶಬ್ದ ಅದರ ಹುಳಿ ಗುಣದಿಂದ ಹುಟ್ಟಿದ್ದೆಂಬುದರಲ್ಲಿ ಸಂದೇಹವಿಲ್ಲ. ಅದು ಸಂಸ್ಕೃತದ್ದೇ ಆದ ''ಆಮ್ಲ''ದ ಒಂದು ಪ್ರಭೇದವೆಂದು ತರ್ಕಿಸಬಹುದು. ''ಅಮ್ಲ'' ಎಂದರೆ ಹುಳಿ, ಮೊಸರು, ಕೆಲ ಹುಳಿ ಹಣ್ಣುಗಳು. ಅಮ್ಲಕ್ಕೆ ಹುಳಿಯೆಂಬರ್ಥ ಮನಸ್ಮೃತಿಯಷ್ಟು ಹಳೆಯದು. ಅದಕ್ಕೂ ಹಿಂದೆ ಅಪಕ್ವ, ಹಣ್ಣಾಗದ, ಮಾಗದ, ಬೇಯಿಸದ ಮತ್ತು ರೋಗಕ್ಕೆ ಸಂಬಂಧಿಸಿದ ಅರ್ಥಗಳನ್ನು ಕೊಡುವ ''ಆಮ'' ಶಬ್ದವಿದೆ. ವೇದ ಕಾಲದಷ್ಟು ಹಿಂದಿನ ಈ ಶಬ್ದವನ್ನು ಆಮ್ಲ, **ಆಮ್ರ**ಗಳಿಗೆ ಮೂಲವೆಂದು ಸಾಧಿಸುವುದು ಕಷ್ಟ. ಅದಿರಲಿ. ಆಮ್ಲ, ಆಮ್ರಗಳಿಗೆ ಸಂಬಂಧಿಸಿ ಹುಳಿ ಗುಣವುಳ್ಳ ನೆಲ್ಲಿ (ಆಮಲಕ), ಅಮಲಾತಕ, ಅಮಿಲಾತಕ, ಅಮಲಾಂತಕ, ಆಮ್ರಾತಕ (ಅಮಟೆ), ಆಮ್ಲ (ಹುಣಸೆ), ಆಮ್ರ (ಮಾವು), ಆಮ್ಲಕ (ಹುಣಸೆ), ಅಮ್ಲಕಂದ, ಅಮ್ಲಕೇಸರ, ಅಮ್ಲಚೂಡ ಮೊದಲಾದ ಹುಳಿ ಕಾಯಿಗಳೂ ಸಾಕಷ್ಟು ಇವೆ. ಇವುಗಳ ತದ್ಭವಗಳು ಸಂಸ್ಕೃತಜನ್ಯ ಪ್ರಾಕೃತ ಮತ್ತು ಆಧುನಿಕ ಆರ್ಯ ಭಾಷೆಗಳಲ್ಲೆಲ್ಲ ಇವೆ; ಆಮ್ಲ ಶಬ್ದಜನ್ಯವಾದ ಇನ್ನೂ ಅನೇಕ ಹುಳಿಕಾಯಿಗಳ ಹೆಸರುಗಳಿವೆ. ಇವುಗಳಿಗೆ ಹೊಂದಿದ **ಅಮರೂದ್** (ಆಮ್ರಾತಕ) ಎಂಬ ಶಬ್ದ ಪಾರಸೀಕ ಭಾಷೆಗೂ ದಾಟಿದೆ.

ಈಗ, ಮಾವಿಗೆ ದ್ರಾವಿಡ ಭಾಷೆಗಳಲ್ಲಿ ಮಾ, ಮಾಂತಿ, ಮಾಂಕಾಯ್ (ತಮಿಳು-ಮಲೆಯಾಳಿ), ಮಾವು, ಮಾಂ (ಕನ್ನಡ) ಗಳಿವೆ. ಇತರ ದ್ರಾವಿಡ ಭಾಷೆಗಳಲ್ಲಿಯೂ ಇವನ್ನು ನಿಕಟವಾಗಿ ಹೋಲುವ ಪದಗಳಿವೆ. ಮಲಯಿ ಭಾಷೆಗೆ ಇದೇ ಶಬ್ದ ಹೋಗಿ ಅಲ್ಲಿಂದ ಪೋರ್ಚುಗೀಸ್, ಇಂಗ್ಲೀಷ್ ಇತ್ಯಾದಿ ಭಾಷೆಗಳಿಗೂ (mango etc.) ದಾಟಿದೆ. ಸಂಸ್ಕೃತ ''ಮಾಕಂದ'' (ಮಾವಿನ ಮರ) ಕೂಡ ದ್ರಾವಿಡದ್ದು ಎಂಬುದುಂಟು. ಆದರೆ ಮಾವು ಶಬ್ದಕ್ಕೆ ಮೂಲವಾದ ಧಾತು ಯಾವುದಿರಲಿ, ಅದರ ಪ್ರಾಥಮಿಕ ಅರ್ಥವೇನು? ತಮಿಳಿನ ''ಮಾಣ್'' (ಸುಂದರವಾಗು, ಶ್ರೇಷ್ಠವಾಗು) ಧಾತುವಿನಿಂದ ಅದು ಹುಟ್ಟಿರಬಹುದೇ? ದ್ರಾವಿಡ ವ್ಯುತ್ಪತ್ತಿಕೋಶ (Etymological Dictionary) ಹಾಗೆ ಹೇಳುವುದಿಲ್ಲ. ಹಾಗೆಂದು ಅದು ರುಚಿಗೆ ಸಂಬಂಧಿಸಿ ಹುಟ್ಟಿದ ಪದವೆಂದೂ ತೋರುವುದಿಲ್ಲ. ಯಾಕೆಂದರೆ ಹುಳಿ

ಎಂಬರ್ಥಕ್ಕೆ ''ಪುಳಿ'' ಎಂಬ ದ್ರಾವಿಡ ಪದವಿದೆ. ಹುಳಿ ರುಚಿಯುಳ್ಳ ನೆಲ್ಲಿ ಮೊದಲಾದವುಗಳಿಗೆ ದ್ರಾವಿಡದಲ್ಲಿ ಬೇರೆ ಬೇರೆ ಹೆಸರುಗಳಿವೆ.

ನನ್ನದೊಂದು ತುಸು ದುಡುಕಿನ ಊಹೆ ಇದೆ. ಮಾ, ಮಾವು ಮೊದಲಾದ ಪದಗಳು ಆಮ್ರಕ್ಕೆ ಹತ್ತಿರವಾಗಿಲ್ಲವೆ? ಆಮ್ರದ ರೇಫವನ್ನು ಕೈಬಿಟ್ಟರೆ ಆಮ ಉಳಿಯುತ್ತದೆ. ಭಾಷೆಗಳಲ್ಲಿ ಅಪರೂಪವಲ್ಲದ ವರ್ಣಸ್ಥಾನದ ಪಲ್ಲಟ ಪ್ರವೃತ್ತಿಯನ್ನು ಅನ್ವಯಿಸಿದರೆ ''ಆಮ''ದ ಪಲ್ಲಟಿತ ರೂಪ ''ಮಾವ್'' ಆಗುವುದಿಲ್ಲವೆ? ಇದನ್ನು ಸಂಸ್ಕೃತದಿಂದ ದ್ರಾವಿಡವಾಗಲಿ ದ್ರಾವಿಡದಿಂದಲೇ ಸಂಸ್ಕೃತವಾಗಲಿ ಸ್ವೀಕರಿಸಿತೆಂದು ನನ್ನ ಸಾಧನೆಯಲ್ಲ. ಸಂಸ್ಕೃತದಲ್ಲಿ ಕೂಡ ಹುಳಿಯೆಂಬರ್ಥದಲ್ಲಿ ಆಮ್ಲ ಶಬ್ದ ಮನುಸ್ಮೃತಿಯಷ್ಟು ಈಚೆಗಿನ ಕಾಲದಲ್ಲೇ ಪ್ರಚಲಿತಕ್ಕೆ ಬಂದದ್ದಾದರೆ, ಆಮ್ರ, ಮಾವು ಎರಡೂ, ಇವೆರಡೂ ಭಾಷೆಗಳಿಗಿಂತ ಹಿಂದಿನ ಕಿರಾತ (ಆಸ್ಟ್ರಿಕ್) ಅಥವಾ ಇನ್ನಿತರ ಅನಾದಿ ಭಾಷೆಯಿಂದ ದ್ರಾವಿಡಕ್ಕೂ ಸಂಸ್ಕೃತಕ್ಕೂ ಹೋಗಿರಲಾರದೆ? ಅದು ಭಾರತದ್ದೇ? ಅಥವಾ ಮಾವಿನ ತವರೂರೆಂದು ಗೃಹೀತವಾದ ಬೇರಾವ ದೇಶದ ಭಾಷೆಯಿಂದ ಇಲ್ಲಿಗೆ ಬಂದಿರಲಾರದೆ?

೧೪೦

ಹುಡುಗಿ ಪ್ರಬುದ್ಧಳಾಗಿದ್ದಾಳೆ, ಅವನಿಗೀಗ ಬುದ್ಧಿ ಬಂದಿದೆ, ಬೋಧನೆ ಸರಿಯಾಗಿದ್ದರೆ ವಿದ್ಯಾರ್ಥಿಗಳು ಅರ್ಥ ಮಾಡಿಕೊಳ್ಳುತ್ತಾರೆ – ಹೀಗೆಲ್ಲ ನಮ್ಮ ನಿತ್ಯದ ಮಾತಿನಲ್ಲಿ ಶಬ್ದಗಳು ಬರುತ್ತವೆ. ಆದರೆ ಇಂಥ ಪದಗಳ ಹಿಂದೆ ಇರುವ ಕಲ್ಪನೆಗಳನ್ನು ನಾವು ಗಮನಿಸುವುದಿಲ್ಲ. ಪ್ರಬುದ್ಧಳಾಗಿದ್ದಾಳೆ ಎನ್ನುವಾಗ ನಾವು ಅವಳಿಗೆ ಪ್ರಾಯ ಬಂದಿದೆ ಎಂದಷ್ಟೇ ಕಲ್ಪಿಸಿಕೊಳ್ಳುತ್ತೇವೆ. ಬೋಧನೆ ಎನ್ನುವಾಗ ಹೇಳಿಕೊಡುವುದು ಎಂದಷ್ಟೇ ಅಭಿಪ್ರಾಯ ಮಾಡಿಕೊಳ್ಳುತ್ತೇವೆ. ಈ ಮತ್ತು ಇಂಥ ಇನ್ನೂ ಅನೇಕ ಶಬ್ದಗಳು ಸಂಸ್ಕೃತದ ''ಬುಧ್'' ಧಾತುವಿನಿಂದ ಬಂದವುಗಳು. ವೇದಕಾಲದಷ್ಟು ಪ್ರಾಚೀನವಾದ ಈ ಧಾತುವಿಗೆ ಅವೆಸ್ತನ್ ಭಾಷೆಯನ್ನೊಳಗೊಂಡು ಬಹುತರ ಭಾರೋಪ್ಯ ಭಾಷೆಗಳಲ್ಲಿ ಜ್ಞಾತಿಗಳಿವೆ. ಈ ಧಾತುವಿನ ಪ್ರಾಥಮಿಕ ಅರ್ಥ ಎಚ್ಚರಗೊಳ್ಳು, ಎಚ್ಚರು, ನಿದ್ದೆ ತಿಳಿ, ಎಚ್ಚರವಿರು, ಪ್ರಜ್ಞೆಗೆ ಬರು ಎಂಬುದು. ಆ ಎಚ್ಚರ ನಿದ್ದೆಯಿಂದ ಇರಬಹುದು, ಮೂರ್ಛೆಯಿಂದ ಇರಬಹುದು, ಎಚ್ಚರಿಕೆಗೆ ಬಂದವರೆಂದರೆ ತಿಳಿವಳಿಕೆ ಬಂದವರು; ತಿಳಿವಳಿಕೆ ಬರಬೇಕಾದರೆ ಒಂದು ವಯಸ್ಸನ್ನು ತಲುಪಬೇಕು. ಹಾಗಾದವನು (ಅಥವಾ ಅವಳು) ಪ್ರಬುದ್ಧನು/ಳು. ''ಬುದ್ಧಿ'' ಎಂದರೆ ಎಚ್ಚರವೇ. ಬುದ್ಧಿವಂತ ಎಚ್ಚರವುಳ್ಳವ, ಬೋಧನೆ ಎಂದರೆ ವಿದ್ಯಾರ್ಥಿಗೆ ಎಚ್ಚರವನ್ನುಂಟುಮಾಡುವುದು. ಬುದ್ಧ ಎಂದರೆ ಅಜ್ಞಾನ ನಿದ್ರೆಯಿಂದ ಎಚ್ಚರಗೊಂಡವನು. ಈ ಮೂಲ ಕಲ್ಪನೆಯಿಂದ ಲಕ್ಷಿಸು, ಗಮನಿಸು, ಕಲ್ಪಿಸು, ಕಾಣು, ತಿಳಿದುಕೊಳ್ಳು ಇತ್ಯಾದಿಯಾಗಿ ಇಂದು ಸಂಸ್ಕೃತದಲ್ಲಿಯೂ ಇತರ ದೇಶ್ಯಭಾಷೆಗಳಲ್ಲಿಯೂ ಅಸಂಖ್ಯ ಅರ್ಥಭೇದಗಳೂ ಛಾಯಾ ಭೇದಗಳೂ ಚಿಗುರೊಡೆದಿವೆ. ಇವೆಲ್ಲದರ ಹಿಂದೆ ನಿದ್ರೆಯೆಂದರೆ ಅಜ್ಞಾನ, ಎಚ್ಚರವೆಂದರೆ ತಿಳಿವಳಿಕೆಯೆಂಬುದೇ ಮೂಲಭೂತವಾದ ಎಣಿಕೆ.

ಇದರಿಂದ ಉದ್ಭವಿಸಿದ ಕೆಲ ಶಬ್ದಗಳ ಅರ್ಥ ವಿಸ್ತಾರ ನೋಡಿ. ಬುಧ ಎಂದರೆ ವಿದ್ವಾಂಸ, ಜ್ಞಾನಿ, ಜ್ಞಾನಾಭಿಮಾನಿ ಗ್ರಹ ಕೂಡ. ವಿಬುಧ ಎಂದರೆ ದೇವತೆಯೂ ಹೌದು,

ಪಂಡಿತನೂ ಹೌದು. **ಅಬೋಧ** = ಅಜ್ಞಾನ, ಬುದ್ಧನಿಗೆ ಜ್ಞಾನೋದಯ ಯಾವ ಮರದ ಕೆಳಗೆ ಆಯಿತೋ ಅದು **ಬೋಧಿವೃಕ್ಷ. ಬೋಧಿ** ಎಂದರೆ ಬೌದ್ಧ ಜೈನಮತಗಳ ಪ್ರಕಾರ ಪೂರ್ಣ ಜ್ಞಾನ. ಹೂ ಅರಳುವುದು ಕೂಡ ''ಬೋಧ''ವೇ. **''ಪ್ರಬುದ್ಧ ಸ್ವಾರ್ಥ''** ಎಂದೊಂದು ಶಬ್ದವೂ ಸೃಷ್ಟಿಯಾಗಿದೆ. ಅದು ಹುಚ್ಚು ಸ್ವಾರ್ಥವಲ್ಲ; ಸ್ವಾರ್ಥ ಹೌದು, ಆದರೆ ವಿವೇಕವುಳ್ಳದ್ದು. ಎಲ್ಲ ತನಗೇ ಬೇಕು ಎನ್ನುವುದು ಶುದ್ಧ ಸ್ವಾರ್ಥ; ಆದರೆ ಎಲ್ಲ ಒಬ್ಬನಿಗೆ ಸಿಕ್ಕಿದರೆ ಇತರರ ಸ್ವಾರ್ಥ ಅಥವಾ ಹೊಟ್ಟೆಕಿಚ್ಚು ಜಾಗೃತವಾಗಿ ಅವರೆಲ್ಲ ಸೇರಿ ತನ್ನಿಂದ ಎಲ್ಲವನ್ನೂ ಕಸಿದುಕೊಳ್ಳಬಹುದು. ಆದ್ದರಿಂದ ಎಲ್ಲರಿಗೂ ಅಷ್ಟಷ್ಟು ಕೊಟ್ಟು ಹೆಚ್ಚಿನಂಶ ತಾನಿಟ್ಟುಕೊಳ್ಳುವುದು ವಿವೇಕ; ಅದು ''ಪ್ರಬುದ್ಧ'' ಸ್ವಾರ್ಥ. ಒಬ್ಬನಿಗೆ ಹೇಳುವುದು **ಸಂಬೋಧನೆ**. ಯಾಕೆಂದರೆ ಎತ್ತಲೋ ಚಿತ್ತವಿದ್ದವನನ್ನು ತನ್ನ ಕಡೆ ತಿರುಗಿಸಿ (ಎಚ್ಚರಿಸಿ) ಮಾತಾಡುವುದಲ್ಲವೇ ಅದು? **ಬೋಧ ಪ್ರದ** ಎಂದರೆ ನಮ್ಮ ಮನಸ್ಸನ್ನು ಎಚ್ಚರಗೊಳಿಸಿ ತಿಳಿಸುವಂಥಾದ್ದು. **ದುರ್ಬೋಧನೆ**ಯೆಂದರೆ ಕೆಟ್ಟ ಉಪದೇಶ; ಆದರೆ **ದುರ್ಬೋಧ** ಅಂದರೆ ಬೋಧಕ್ಕೆ ಬರಲು, ಅಂದರೆ ತಿಳಿದುಕೊಳ್ಳಲು ಕಷ್ಟವಾದದ್ದು. **ಅಬೋಧ ಬಾಲಕ** ಇನ್ನೂ ಬೋಧ ಬಾರದ ಹುಡುಗ; ಅವನಿಗೆ ಹೇಳಿದ್ದು ತಿಳಿಯುವಷ್ಟು ಬುದ್ಧಿ ಬಲಿತಿಲ್ಲ. **ಪ್ರಬೋಧ** ತಿಳಿವಳಿಕೆ ಕೊಡುವುದು, ತಿಳಿಸಿ ಹೇಳುವುದು, ಜ್ಞಾನ ಕೊಡುವುದು.

ಇಂಗ್ಲೀಷಿನ bid ಸಂಸ್ಕೃತ ''ಬುಧ್'' ಇನ ಜ್ಞಾತಿಯೆಂದು ಭಾಷಾಶಾಸ್ತ್ರಿಗಳು ಹೇಳುತ್ತಾರೆ. ಇದರ ಅರ್ಥ ಅಪ್ಪಣೆ ಕೊಡು ಎಂದು. ಅರ್ಥದಲ್ಲಿ ಇದು ಬೋಧನೆಗೆ ಹತ್ತಿರವಾಗಿದೆ ಅಷ್ಟೆ.

**ಉಪವಾಸ** ಗೊತ್ತಿಲ್ಲದವರು ಯಾರು? ಒಂದಲ್ಲ ಒಂದು ಆಮರಣದಿಂದ ಹಿಡಿದು ಸರಣಿ **ಉಪವಾಸ**ದವರೆಗಿನ ಸುದ್ದಿ ಪತ್ರಿಕೆಗಳಲ್ಲಿ ಬರುತ್ತಲೇ ಇರುತ್ತದೆ. ತಾಸಿಗೆ ಒಬ್ಬರಂತೆ ರಿಲೇ ಅಥವಾ ಸರಪಳಿ ಉಪವಾಸ ಮಾಡುವುದು ಮಾತ್ರ ಬಾಕಿ. ಆದರೆ ಈ ಶಬ್ದದ ಬೇರು ಎಲ್ಲಿ? ''ಉಪ'' ಎಂದರೆ ಸಮೀಪದಲ್ಲಿ + ''ವಾಸ'' ಎಂದರೆ ಇರುವಿಕೆ. ಹತ್ತಿರದಲ್ಲಿರುವುದು, ಕಾಯುತ್ತಿರುವುದು – ತೈತ್ತಿರೀಯ ಸಂಹಿತೆ, ಆರಣ್ಯಕ, ಬ್ರಾಹ್ಮಣಗಳಲ್ಲಿ ಕಾಣಿಸುವುದು ಇದೇ ಅರ್ಥ. ಅನ್ನ, ನೀರು ಬಿಟ್ಟು ಯಾವುದೊಂದು ದೇವತೆಯನ್ನೊಲಿಸಲು ಆ ದೇವತೆಯ ಸಮೀಪದಲ್ಲಿ (ಉಪ) ಕೂತಿರುವುದು ಎಂಬರ್ಥ ಈ ಪದಕ್ಕೆ ಅದೇ ಕಾಲದಲ್ಲಿ ಬಂದಿತ್ತು. ಹೀಗೆ ಬೇರೆಲ್ಲ ಚಿಂತೆ ಬಿಟ್ಟು (ಹೊಟ್ಟೆಯದಲ್ಲವೇ ಎಲ್ಲಕ್ಕಿಂತ ಮುಖ್ಯ ಚಿಂತೆ?) ಪರಮಾತ್ಮನಲ್ಲೇ ಚಿತ್ತವಿಟ್ಟು ಕೂತಿರುವುದಿದು ಪ್ರಧಾನವಾಗಿ ಧಾರ್ಮಿಕ ಆಚರಣೆ; ಒಂದು ತರದ ತಪಸ್ಯೆ. ಏಕಾದಶಿ, ಶಿವರಾತ್ರಿ, ಕೃಷ್ಣಾಷ್ಟಮಿ, ಭೀಷ್ಮ ಪಂಚಕ, ವಿಷ್ಣುಪಂಚಕ, ನವರಾತ್ರಿ ಮೊದಲಾದ ಬೇರೆ ಬೇರೆ ಅವಧಿಗಳ ನಿರಶನ ರೂಪವಾದ ಅನೇಕಾನೇಕ ಉಪವಾಸಗಳು ಹಿಂದೂ ಧರ್ಮದಲ್ಲಿ ಇದ್ದಂತೆ ಇಸ್ಲಾಂ, ಕ್ರೈಸ್ತ ಧರ್ಮಗಳಲ್ಲಿ ಕೂಡ ಉಪವಾಸಗಳಿವೆ. **ಉಪೋಷಣೆ** ಎಂಬ ಇನ್ನೊಂದು ಶಬ್ದವೂ ಇದೇ ಮೂಲದ್ದು, ಇದೇ ತಾತ್ಪರ್ಯದ್ದು.

ರಾಜಕೀಯ ಅಥವಾ ವೈಯಕ್ತಿಕ ಅನ್ಯಾಯವನ್ನು ಪ್ರತಿಭಟಿಸಲು ಆಮರಣ ನಿರಶನ (ನಿರ್ = ಇಲ್ಲ + ಅಶನ = ಊಟ)ದಂಥ ಹಠೋಪಾಯ ಈ ದೇಶದಲ್ಲಿ ಹಿಂದೆ ಇದ್ದಿಲ್ಲವೆಂದಲ್ಲ. ಬಹುತರವಾಗಿ ಬ್ರಾಹ್ಮಣರು ತಮಗಾದ ಅನ್ಯಾಯ ಪರಿಮಾರ್ಜನೆಗಾಗಿ ಅದನ್ನು

ಪ್ರಯೋಗಿಸುತ್ತಿದ್ದುದುಂಟು. ಆದಕ್ಕೆ **ಪ್ರಾಯೋಪವೇಶ** ಎಂದು ಹೆಸರು. ''ಪ್ರಾಯ'' ಎಂದರೆ ಹೋಗುವಿಕೆ, ಅರ್ಥಾತ್ ಸಾವು. ಸಾವು ಬರುವವರೆಗೂ ಅನ್ನ-ನೀರು ಬಿಟ್ಟು ದರ್ಭೆಯ ಶಯ್ಯೆಯ ಮೇಲೆ ಮುಸುಕು ಹಾಕಿ ಅನ್ಯಾಯಗಾರನ ಬಾಗಿಲ ಮುಂದೆ ಮಲಗಿಬಿಡುವುದು. ''ಪ್ರಾಯೋಪವೇಶ'' ಅಥವಾ ''ಪ್ರತ್ಯುಪವೇಶ''. ರಾಮಾಯಣ (ಅಯೋಧ್ಯಾ, ಸರ್ಗ ೧೧೧)ದಲ್ಲಿ ಭರತನು ಅಣ್ಣನನ್ನು ಅರಣ್ಯವಾಸದಿಂದ ಮರಳಿಸಲು ಪ್ರತ್ಯುಪವೇಶಕ್ಕೆ ಸನ್ನದ್ಧನಾದ ಪ್ರಸಂಗ ವರ್ಣಿತವಾಗಿದೆ. ಇದು ಬ್ರಾಹ್ಮಣರು ಕೈಕೊಳ್ಳುವ ವಿಧಾನ, ಕ್ಷತ್ರಿಯೋಚಿತವಲ್ಲವೆಂದು ರಾಮ ಅವನಿಗೆ ಹೇಳುತ್ತಾನೆ. ಗಾಂಧೀಜಿ ಆಮರಣೋಪವಾಸದ (= ಪ್ರಾಯೋಪವೇಶ) ಅಸ್ತ್ರವನ್ನು ವಿದೇಶಿ ಸರ್ಕಾರದ ಮೇಲಲ್ಲದೆ ಸ್ವರಾಜ್ಯ ಸರ್ಕಾರದ ಮೇಲೂ ಪ್ರಯೋಗಿಸಿದ್ದರು.

ಇಂದು ಉಪಯೋಗಿಸುವ ಅನ್ನ ತ್ಯಾಗದ ಉಪಾಯ ಉಪವಾಸವೂ ಅಲ್ಲ, ಪ್ರಾಯೋಪವೇಶವೂ ಅಲ್ಲ; ಅದು ಅನ್ನತ್ಯಾಗದ ನಟನೆ.

ಉಪವಾಸಕ್ಕೆ ಇನ್ನೊಂದು ಹೆಸರು **ಲಂಘನ**. ಇದು ಬಹುತರವಾಗಿ ವೈದ್ಯರ ಸೂಚನೆಯಂತೆ ಮಾಡುವ ತಾತ್ಕಾಲಿಕ ಭೋಜನ ತ್ಯಾಗ. ಸಂಸ್ಕೃತದಲ್ಲಿ ''ಲಂಘ್'' ಎಂದರೆ ಹಾರುವುದು, ಕಡಹಾಯುವುದು. ಮಧ್ಯದಲ್ಲಿ ಒಂದು ದಿನ ಊಟ ಬಿಟ್ಟು ಆಚೆಗೆ ಹಾರಿ ಅದರ ಮರುದಿನದ ಊಟಕ್ಕೆ ಹೋಗಿ ಇಳಿಯುವುದರಿಂದ ಅದು ''ಲಂಘನ''. (ಲಂಘನಕ್ಕೆ ಸರಳವಾದ ಹಾರುವಿಕೆ, ದಾಟುವಿಕೆ, ನಿಯಮ ಕೆಟ್ಟು ನಡೆಯುವಿಕೆ ಇತ್ಯಾದಿ ಅರ್ಥಗಳೂ ಇವೆ).

ನಿರಶನ ಮಾಡಿದ ಮೇಲೆ ಅದನ್ನು ಮುರಿದು ಆಹಾರ ತೆಗೆದುಕೊಳ್ಳುವುದುಂಟಲ್ಲ. ಇದಕ್ಕೆ ಇಂಗ್ಲೀಷಿನಲ್ಲಿ ಸರಳವಾಗಿ break-fast ಉಪವಾಸ (fast) ಮುರಿಯುವುದು (break) ಎಂಬ ಶಬ್ದವಿದೆ. (ಆದರೆ ಅದರಲ್ಲಿ ರಾತ್ರಿ ಕೆಲ ತಾಸು ನಿದ್ದೆಯಲ್ಲಿರುವಾಗ ಆಹಾರ ಬಿಡುವುದೇ fast - ಉಪವಾಸ!) ನಮ್ಮಲ್ಲಿ ಅದನ್ನು **ನಾಷ್ಟಾ** (ಪಾರಸೀಕ – ನಾಶ್ತಾ = ಜಲಪಾನ) ಎಂದು ನಿರ್ದೇಶಿಸುತ್ತೇವೆ – ಹೊಟ್ಟೆ ತುಂಬ ತಿಂದರೂ!

ಉಪವಾಸ ಮುರಿಯುವುದಕ್ಕೆ ಸಂಸ್ಕೃತದಲ್ಲಿ **ಪಾರಣ** ಎಂದು ಹೆಸರು. ''ಪಾರಣ'' ಎಂದರೆ ದಾಟುವುದು. ಉಪವಾಸದ ನದಿಯನ್ನು (ಅಥವಾ ಸಮುದ್ರವನ್ನು!) ದಾಟಿ ಊಟದ ಆಚೇ ದಡ ಮುಟ್ಟುವುದು. ಏಕಾದಶಿ ಉಪವಾಸದ ನಂತರ ದ್ವಾದಶಿಯಂದು ಮಾಡುವ ಮೊದಲನೇ ಊಟ ಅದು. ಇದೆಲ್ಲದರ ಹಿಂದೆ ಇರುವುದು ಧಾರ್ಮಿಕ ಭಾವನೆಗಳು.

ಸ್ವಲ್ಪ ವಿಚಿತ್ರವಾಗಿ ಕಾಣುವುದೆಂದರೆ **ಪಾರಣ** ಮತ್ತು **ಲಂಘನ** ಸುಮಾರು ಒಂದೇ ಅರ್ಥದ ಶಬ್ದಗಳಾಗಿರುವುದು.

೧೪೧

ಆಧುನಿಕ ಯುಗದ ಒಂದು ಪ್ರಮುಖ ಲಕ್ಷಣ ವಾಹನ ಸೌಕರ್ಯಗಳ ವೈಪುಲ್ಯ. ಹೊಸಕಾಲದ ಮೊದಮೊದಲಿನ ವಾಹನ **ಸೈಕಲ್** ಎಂಬ ಇಗ್ಗಾಲಿ. ವಾಸ್ತವವಾಗಿ ಇದು **ಬೈಸಿಕಲ್** bicycle. ಇದೊಂದು ಸಂಕರ ಪದ. ಲ್ಯಾಟಿನ್ **ಬೈ** bi = ಎರಡು, ಜೋಡು + ಗ್ರೀಕ್ **ಕುಕ್ಲೋಸ್** kuklos = ಸೈಕಲ್ = ಚಕ್ರ. ಅಂತೂ ಇಗ್ಗಾಲಿ. ಇದೇ

ಮಾದರಿಯ ಮೂಗಾಲಿ ವಾಹನ **ಟ್ರೈಸಿಕಲ್** : tri = ತ್ರಯೀ = ಮೂರು + ಲ್ಯಾಟಿನ್ tres, ಗ್ರೀಕ್ treis + ಗ್ರೀಕ್ kuklos = ಚಕ್ರ. ಇಗ್ಲಾಲಿಯ ಬೈಸಿಕಲ್ ಎಷ್ಟು ಪ್ರಚುರವಾಯಿತೆಂದರೆ ಬೈಸಿಕಲ್ ಪದ ಜನರ ಬಾಯಿಗೆ ತೀರ ಉದ್ದವೆನಿಸಿ ಅದರ ಪೂರ್ವಪದ (bi) ಬಿದ್ದು ಹೋಗಿ **ಸೈಕಲ್** ಮಾತ್ರ ಉಳಿದುಕೊಂಡಿತು.

ಆನುಷಂಗಿಕವಾಗಿ ಈ ''ಸೈಕಲ್'' ಮೂಲತಃ ಚಕ್ರಾರ್ಥಕವಾಗಿದ್ದರೂ ಚಕ್ರಾಕಾರವಾಗಿ ಪುನಃ ಪುನಃ ಬರುವಂಥಾದ್ದೂ ಇಂಗ್ಲೀಷಿನಲ್ಲಿ ಅದೇ ಶಬ್ದದಿಂದ ನಿರ್ದೇಶಿಸಲ್ಪಡುತ್ತದೆ. ಉದಾ : cycle of events = ಘಟನಾಚಕ್ರ. ಹಾಗೇ ಸೈಕಲ್ ಹೊಡೆಯುವುದಕ್ಕೂ cycling (= ಸೈಕಲಿಸು) ಪದ ಬಳಕೆಯಾಯಿತು. ಈ ಸೈಕಲ್ಲಿನ ಮೂಲ ಗ್ರೀಕ್ ಪದವಾದ kuklos, ಲ್ಯಾಟಿನ್ನಿನ circus, ಇಂಗ್ಲೀಷ್ wheel ಮತ್ತು ಸಂಸ್ಕೃತ ''ಚಕ್ರ'' ಒಂದಕ್ಕೊಂದು ಬಂಧುಗಳು.

ಈಗ **ಕಾರ್** car. ಯಾವ ಹಳ್ಳೀ ಮುಕ್ಕನಿಗೂ ಈ ಶಬ್ದ ಪರಿಚಿತ. ಸ್ವಂತ ಶಕ್ತಿಯಿಂದ ನಡೆಯುವ ನಾಲ್ಕು ಚಕ್ರದ ವಾಹನ – ಎಂದು. ಇದು ಚಾಲಕ ಎಂಜಿನ್ನುಗಳು ಬರುವ ಎಷ್ಟೋ ಹಿಂದಿನ, ಅನಾದಿ ಸಚಕ್ರವಾಹನಕ್ಕೆ ಸಲ್ಲುತ್ತಿದ್ದ ಪದ. ಸಂಸ್ಕೃತ ''ರಥ'' ದಂತೆ; ದೇಶ್ಯ ''ಗಾಡಿ'' ಯಂತೆ. ಕುದುರೆ, ಎತ್ತು ಮೊದಲಾದ ಪ್ರಾಣಿಗಳು ಎಳೆಯುತ್ತಿದ್ದ ಈ ''ಕಾರು'' ಮೊದಲು ಆಧುನಿಕ ಎಂಜಿನ್ ಚಾಲಿತವಾದಾಗ **ಮೋಟಾರ್** ಕಾರೆನಿಸಿಕೊಂಡು ಆ ಮೇಲೆ ಬರೇ ಕಾರಾಗಿ ಉಳಿಯಿತು. ಅದೋ ಇಂಗ್ಲೀಷ್ carry (= ಹೊತ್ತುಕೊಂಡು ಹೋಗು) ಎಂಬುದರಿಂದ ಹುಟ್ಟಿದ ಪದ.

**ಬಸ್** (bus) ಸಂಗತಿ ಇನ್ನೊಂದು ಬಗೆ. ಅದರ ಮೂಲ ರೂಪ (omnisbus) **ಓಮ್ನಿಸ್ ಬಸ್.** ಈ ಶಬ್ದಕ್ಕೆ ಮೂಲತಃ ವಾಹನ ಎಂಬರ್ಥವೇ ಇಲ್ಲ. ಲ್ಯಾಟಿನ್ ಓಮ್ನಿಸ್ omnis ಅಂದರೆ ಎಲ್ಲಾ, ಸರ್ವ. ಅದರ ಚತುರ್ಥಿ ವಿಭಕ್ತಿ ಬಹುವಚನ ರೂಪ omnisbus – ಎಲ್ಲರಿಗಾಗಿ (ಇರುವಂಥಾದ್ದು) ಅಥವಾ ಬಹಳ ಜನರಿಗಾಗಿರುವಂಥಾದ್ದು, ಸರ್ವಗ್ರಾಹಿ. ಅಲ್ಲಿಂದ ಬಹಳ ಜನರನ್ನು ಹೊರುವಂತಾದ್ದು ಎಂಬರ್ಥಕ್ಕೆ ತಿರುಗಿ ಅದು omnis ಪ್ರಕೃತಿಯನ್ನು ಕಳೆದುಕೊಂಡು ಬರೇ ''ಬಸ್'' ಆಗಿ ಉಳಿಯಿತು. ನಮಗಾಗುವಾಗ ಅದರ ಅರ್ಥ ಬಹಳ ಜನರನ್ನು ಕರೆದೊಯ್ಯುವ ಎಂಜಿನ್ ಚಾಲಿತ (ಸಾರ್ವಜನಿಕ) ವಾಹನ ಎಂಬುದಷ್ಟೇ ಆಗಿದ್ದರೂ ಇಂಗ್ಲೀಷಿನಲ್ಲಿ omnibus ಪದಕ್ಕೆ **ಬಹೂದ್ದೇಶ ವಸ್ತು** ಇತ್ಯಾದಿ ಅರ್ಥಗಳು ಚಲಾವಣೆಯಲ್ಲಿವೆ. ಉದಾಹಣೆಗೆ omnibus volume ಅಥವಾ book ಎಂದರೆ ಅನೇಕ ಗ್ರಂಥ, ಕಥೆ, ಕವಿತೆ, ನಾಟಕ ಮೊದಲಾದವುಗಳನ್ನೊಳಗೊಂಡ ಅಗ್ಗದ ಪುಸ್ತಕ. ಬರೇ **ಬಸ್** ಅಂದರೆ ಇಂಗ್ಲೀಷಿನಲ್ಲಿಯೂ ಸಾರ್ವಜನಿಕ ವಾಹನ ಎಂದೇ ಅರ್ಥ ಅನ್ನಿ.

ಹಾಗೆಂದು ಎಲ್ಲ ಯುರೋಪಿಯನ್ ಭಾಷೆಗಳಲ್ಲಿಯೂ ಇವೇ ಪದಗಳು ಈ ವಾಹನ ಗಳಿಗೆ ಸಲ್ಲುತ್ತವೆಯೆಂದಲ್ಲ. ಇಂಗ್ಲೀಷಿನಲ್ಲೇ ಕಾರಿಗೆ automobile (ಅಟೋಮೊಬೈಲ್) ಅಂದರೆ auto (ಗ್ರೀಕ್ autis) = ತಾನೇ mobile (ಲ್ಯಾಟಿನ್ mobilis) = ಚಲಿಸುವಂಥಾದ್ದು ಎನ್ನುವ ಆರ್ಥ್ವರುಂಟು ಹೆಚ್ಚಾಗಿ ಅಮೆರಿಕದಲ್ಲಿ. ಅದೂ ಉತ್ತರ ಪದವನ್ನು ಕಳೆದುಕೊಂಡು ಬರೇ auto ಆಗಿ ಬಿಡುತ್ತದೆ. (ನಮ್ಮಲ್ಲಾದರೆ auto ಎಂದರೆ ತ್ರಿಚಕ್ರ ಎಂಜಿನ್ ಚಾಲಿತ ಸಾರ್ವಜನಿಕವಾಹನ ಎಂದರ್ಥ). ಫ್ರೆಂಚರೂ ರಶಿಯನ್ನರೂ ಬಸ್ಸಿಗೂ ಕೂಡ **ಅಟೋ ಬಸ್** (auto bus) ಎಂದಾರು; ಕಾರಿಗೆ **ಅಟೋಮೋಬೈಲ್** (automobile) ಎಂದಾರು.

ಪೋರ್ಚುಗೀಸರಿಗೆ carro (= **ಕಾರ್**) ಎಂದರೆ ಎಲ್ಲ ತರದ ಗಾಡಿ ಆದೀತು; automouel ಎಂದರೆ ಅಲ್ಲಿ ಮೋಟರ್ ಕಾರ್, ಬೈಸಿಕಲ್ ಅವರಿಗೆ ಸೈಕಲ್ ಅಲ್ಲ bicicieta. ಬಸ್ ಅವರಿಗೆ omnibus ಅಥವಾ auto carro. ಇಂಗ್ಲೀಷಿನಲ್ಲೇ bicycle ಗೆ bike (ಬೈಕ್) ಎಂಬ ಸಂಕ್ಷಿಪ್ತ ರೂಪವಿದೆ. ಅದು ಸಾದಾ ಸೈಕಲ್ಲೂ ಆಗಬಹುದು, ಮೋಟಾರ್ ಸೈಕಲ್ಲೂ ಆಗಬಹುದು. ನಮ್ಮಲ್ಲಿ ಕೂಡ ಇದು ಸಲ್ಲುತ್ತದಾದರೂ ಈಗೀಗ **ಬೈಕು** ಎಂದರೆ ಮೋಟಾರ್ ಸೈಕಲ್ಲಿಗೇ ಹೆಚ್ಚಾಗಿ ಅನ್ವಯಿಸುತ್ತದೆ.

**ಮೋಟಾರ್** (motor) ಶಬ್ದ ಸಾಮಾನ್ಯರಿಗೆ ಪರಿಚಿತವಿರುವ ಮಟ್ಟಿಗೆ ಕಾರು ಬಸ್ಸು ಮುಂತಾದ ವಾಹನ, ಅದೂ ಯಂತ್ರ ಚಾಲಿತ ಸಚಕ್ರ ವಾಹನವನ್ನು ನಿರ್ದೇಶಿಸುತ್ತದೆ. ವಾಸ್ತವವಾಗಿ ಮೋಟಾರಿನ ವ್ಯಾಪ್ತಿ ಇದಕ್ಕೂ ಹೆಚ್ಚೆಂಬುದು ಯಂತ್ರಗಳ ವಿಷಯ ಸ್ವಲ್ಪ ಹೆಚ್ಚು ತಿಳಿವಳಿಕೆಯುಳ್ಳವರಿಗೆ ಗೊತ್ತು. ಲ್ಯಾಟಿನ್ನಿನ motor ಪದಕ್ಕೆ ಮೂಲತಃ ಚಾಲಕ (ಶಕ್ತಿ) ಎಂಬರ್ಥ. ಹೀಗೆ ಯಂತ್ರಗಳನ್ನು ಚಲಿಸುವಂತೆ ಮಾಡುವ ಪ್ರೇರಕ ಯಂತ್ರ motor. ''ಮೋಟಾರ್ ಕಾರ್'' ಎಂಬುದರ ಸಂಕ್ಷೇಪವೇ ಮೋಟಾರ್.

ಈಗ ನಾವು **ವಿಮಾನ**ವೆಂಬ ಬಹು ಪುರಾತನ ಹೆಸರಿನಿಂದ ಕರೆಯುವ ಆಕಾಶಯಾನಕ್ಕೆ ಇಂಗ್ಲೀಷಿನಲ್ಲಿ **ಎರೋಪ್ಲೇನ್** (aero-plane) ಎಂಬ ಹೆಸರುಂಟೆಂದು ಎಲ್ಲರಿಗೂ – ಇಂಗ್ಲಿಷ್ ಬಾರದವರಿಗೂ ಗೊತ್ತು. ಅದೂ ಪೂರ್ವಪದವನ್ನು ಉದುರಿಸಿಕೊಂಡು ಬರೇ ''ಪ್ಲೇನ್'' ಆಗಿ ಉಳಿದಿದೆ. ಎರೋಪ್ಲೇನಿನ aero ಎಂಬ ಪೂರ್ವಪದಕ್ಕೆ ಗಾಳಿಯೆಂದು (ಗ್ರೀಕಿನಲ್ಲಿ) ಅರ್ಥ. plane ಶಬ್ದದ ಮೂಲ ಲ್ಯಾಟಿನ್ – planum = **ಚಪ್ಪಟೆ**. ಗಾಳಿಯಲ್ಲಿ ಹಾರುವುದಕ್ಕೆ ಚಪ್ಪಟೆತನ ಅನುಕೂಲ ತಾನೆ ? ಹೀಗಾಗಿ ನಮ್ಮವರು ಇದನ್ನು ಮೊದಲು **ವಾಯು ವಿಮಾನ** ಎಂದು ಕರೆದದ್ದು ಯುಕ್ತವಾಗಿಯೇ ಇದೆ. ಉರ್ದುವಿನವರು ಅದನ್ನು **ಹವಾಯೀ ಜಹಾಜ್** (ಗಾಳಿ-ಹಡಗು) ಎಂದು ಕರೆದದ್ದು ಸ್ವಾರಸ್ಯವಾಗಿದ್ದಂತೆ, ಭಾಷೆಗಳು ಗೊತ್ತಿದ್ದದ್ದನ್ನಾಧರಿಸಿ ಗೊತ್ತಿಲ್ಲದಕ್ಕೆ ನಾಮಕರಣ ಮಾಡುವ ಇನ್ನೊಂದು ಒಲವಿಗೆ ಉದಾಹರಣೆಯಾಗಿದೆ. ಇದಕ್ಕೆ ಪ್ರೇರಕವಾದದ್ದು ಬಹುಶಃ ವಿಮಾನಕ್ಕಿರುವ ಇನ್ನೊಂದು ಇಂಗ್ಲೀಷ್ ಪದವಾದ **ಏರ್‌ಕ್ರಾಫ್ಟ್** (air craft) ಎಂಬುದು. craft ಶಕ್ತಿ, ಹಡಗು; air - ಗಾಳಿ.

ಈ ಆಧುನಿಕ ವಾಹನಕ್ಕೂ ಬೇರೆ ಬೇರೆ ಯುರೋಪಿಯನ್ ಭಾಷೆಗಳಲ್ಲಿ ಇತರ ಹೆಸರುಗಳಿವೆ. ಫ್ರೆಂಚರು ವಿಮಾನಕ್ಕೆ avion – **ಆವಿಯೋಂ** ಎನ್ನುತ್ತಾರೆ. ಪೋರ್ಚುಗೀಸರೂ ರಶಿಯನ್ನರೂ ಹತ್ತಿರ ಹತ್ತಿರ ಅದೇ ಪದ ಬಳಸುತ್ತಾರೆ. ಇದಕ್ಕೆ ಲ್ಯಾಟಿನ್ ''ಆವಿಸ್'' (avis) ಮೂಲ. **ಆವಿಸ್** ಎಂದರೆ ಹಕ್ಕಿ. ಹಾರುವ ಯಂತ್ರದ ಕಲ್ಪನೆ ಅನಾದಿಯಲ್ಲಿ ಹಕ್ಕಿಗಳಿಂದಲೇ ಪ್ರೇರಿತವಾದದ್ದಲ್ಲವೆ ? ಇಂಡೊನೇಶಿಯಾದ ಸರಕಾರ ತನ್ನ ವಿಮಾನ ಸಾರಿಗೆ ಸಂಸ್ಥೆಯನ್ನು **ಗರುಡ** ಎಂದು ಕರೆಯುವುದು ಇಲ್ಲಿ ಉಲ್ಲೇಖನೀಯ. ಅದು ಈಗ ಇಸ್ಲಾಂ ಧರ್ಮವನ್ನು ಸ್ವೀಕರಿಸಿರುವ ಆ ದೇಶದ ಹಿಂದೂ ಗತಕಾಲಕ್ಕೆ ಸ್ಮಾರಕವಾಗಿದೆ.

ಇನ್ನು **ರೈಲು** ಗಾಡಿಯ ವಿಚಾರ. ಹಳೇ ಮೈಸೂರಲ್ಲಿ ''ರೈಲು'' ಮಾತ್ರವೆಂದೂ ಬೇರೆಡೆ **ಟ್ರೈಯಿನ್** ಎಂದೂ ಕನ್ನಡದಲ್ಲಿ ಸೇರಿ ಹೋದ ಈ ಪದಕ್ಕೆ **ಉಗಿಬಂಡಿ** ಎಂಬ ಅನ್ವರ್ಥ ನಾಮಾಂತರವೂ ಇದೆ. ರೈಲು ಎಂಬುದು ರೈಲುಗಾಡಿ ಚಲಿಸುವ **ಕಂಬಿ** ಅಥವಾ **ಹಳಿ** (rail) ಯ ಇಂಗ್ಲೀಷ್ ಹೆಸರು. ಪೂರ್ಣ ಹೆಸರು rail-way train – ಅರ್ಥ (ಕಬ್ಬಿಣದ) **ಕಂಬಿಯ ಸಾಲು ಬಂಡಿ**. Train ಎಂದರೆ ಎಳೆಯಲ್ಪಡುವ (ಲ್ಯಾಟಿನ್ trahere = ಎಳೆ) ಸಾಲು

(ಬಂಡಿ). ಟ್ರೇಯಿನು ಬಂಡಿಯೇ ಆಗಿರಬೇಕಿಲ್ಲ. ರಾಜ ರಾಣಿಯರ ಮೇಲುದದ ಉದ್ದ ಸೆರಗು ಅವರ ಹಿಂದೆ ನೆಲದ ಮೇಲೆ ಎಳೆಯಲ್ಪಡುವುದು ಟ್ರೆಯಿನೇ. ರೈಲೆಂಬ ಪದ ಮೂಲತಃ regula ಎಂಬ ಲ್ಯಾಟಿನ್ ಶಬ್ದದಿಂದ ಫ್ರೆಂಚ್ ಇತ್ಯಾದಿ ಭಾಷೆಗಳ ಮೂಲಕ ಇಂಗ್ಲೀಷಿಗೆ ಬಂದದ್ದು. Regula ಎಂದರೆ **ನೆಟ್ಟನ್ನ ಕೋಲು** – ಮುಂದೆ **ಕಬ್ಬಿಣದ ಕಂಬಿ**. ಹೀಗೆ ಕಂಬಿಯೇ ಒಂದೆಡೆ ವಾಹನವನ್ನು ಪ್ರತಿನಿಧಿಸಿದರೆ ಇನ್ನೊಂದೆಡೆ ಎಳೆಯಲ್ಪಡುವ (ಡಬ್ಬಿಗಳ) ಸಾಲೇ ವಾಹನವೆನಿಸಿತು. ಭಾಷೆಗಳಲ್ಲಿ ಪದಗಳು ಅಂಶಗಳನ್ನು ಉದುರಿಸುತ್ತ ತಲೆಯನ್ನೋ ಬಾಲವನ್ನೋ ಮಾತ್ರ ಉಳಿಸಿಕೊಳ್ಳುವ ಪ್ರವೃತ್ತಿಗೆ ಈ ಎಲ್ಲ ವಾಹನಗಳು ದೃಷ್ಟಾಂತಗಳಾಗಿವೆ.

೧೪೨

ದಕ್ಷಿಣ ಕನ್ನಡ ಮತ್ತು ಆಸುಪಾಸಿನಲ್ಲಿ **ಹಸುರುವಾಣಿ** ಅಥವಾ **ಹಸರುವಾಣಿ** ಎಂಬ ಪದವೊಂದು ಪ್ರಚಲಿತವಾಗಿದೆ. ಗೇಣಿ ಕಾನೂನು ಜಾರಿಗೆ ಬರುವ ಮೊದಲು ಒಕ್ಕಲು ಜನ ವರ್ಷದ ಮೊದಲ ಬೆಳೆ ಬಂದ ಹೊತ್ತಿನಲ್ಲಿ ತಮ್ಮ ಒಡೆಯನಿಗೆ ತಂದೊಪ್ಪಿಸಬೇಕಾಗಿದ್ದ **ಕಾಯಿಪಲ್ಲೆಗಳ ಕಾಣಿಕೆಗೆ** ಆ ಹೆಸರು. ಗೇಣಿ ಚೀಟಿ(ಕರಾರು) ಯಲ್ಲೇ ಇದು ನಮೂದಾಗಿರುತ್ತಿತ್ತು. ಈಗ **ಗೇಣಿಯೇ** ಇಲ್ಲವೆಂದ ಮೇಲೆ (ಹಸುರು) **ವಾಣಿಯೆಲ್ಲಿ**? ಆದರೂ **ಹಸರುವಾಣಿ** ಶಬ್ದದ ಮೂಲಾರ್ಥ ಏನೆಂಬ ಪ್ರಶ್ನೆ ತಪ್ಪುವುದಿಲ್ಲ. **ಹಸುರು** ಸಂದರ್ಭಕ್ಕೆ ಉಚಿತ; **ಪಸುರ್ ಕಂದಾಯ** ಎಂಬ ಪದವೂ ಶಾಸನಗಳಲ್ಲಿ ಸಿಕ್ಕುತ್ತದೆ. ಆದರೆ **ವಾಣಿ** ಎಂದರೇನು? ನಮಗೆ ಗೊತ್ತಿರುವುದು **ಮಾತೆಂಬ** ಅರ್ಥವುಳ್ಳ ವಾಣಿ. ಅದು ಇಲ್ಲಿ ಹೊಂದುವುದಿಲ್ಲ.

ಮರಾಠಿಯಲ್ಲಿ **ವಾಣ** ಎಂದರೆ ಬ್ರಾಹ್ಮಣರಿಗೆ ನೀಡುವ ಹಣ್ಣು, ಮಿಠಾಯಿ ಮೊದಲಾದವುಗಳ ದಾನ. ಅದು ಸಂಸ್ಕೃತ **ಉಪಾಯನ** – ಪ್ರಾಕೃತ **ಉವಾಣ**ಅದ ಅಪಭ್ರಂಶವೆಂದು ಮರಾಠಿ ನಿರುಕ್ತಕಾರರ ಹೇಳಿಕೆ. ''ಉಪಾಯನ'' ಅಥವಾ ''ವಾಯನ'' ಸಂಸ್ಕೃತದಲ್ಲಿ ಬ್ರಾಹ್ಮಣರಿಗೋ ಮುತ್ತೈದೆಯರಿಗೋ ಕೊಡುವ ಹಣ್ಣುಹಂಪಲು, ಪಕ್ವಾನ್ನ ಮತ್ತು ಇತರ ವಸ್ತುಗಳ ಉಡುಗರೆ. ಈ ವಾಣವೇ ಕರಾವಳಿಯ (ಹಸುರು) 'ವಾಣಿ'. 'ಪಸುರ್ ಕಂದಾಯ' ರಾಜ್ಯಕ್ಕೆ ಸಲ್ಲುವಂಥಾದ್ದು; ಇದು ಭೂಮಾಲಿಕನಿಗೆ ಒಪ್ಪಿಸುವ ಮರ್ಯಾದೆ.

ಮರಾಠಿ ಪ್ರಭಾವ ಮತ್ತು ಸಾಮೀಪ್ಯದಿಂದ, ಉತ್ತರ ಕರ್ನಾಟಕದಲ್ಲಿ ಎಷ್ಟೋ ಪದಗಳೂ ವಾಗ್ಧೋರಣೆಗಳೂ ಮರಾಠಿಯಿಂದ ಕನ್ನಡದಲ್ಲಿ ಸೇರಿಕೊಂಡಿವೆ. ನಮ್ಮ **ಘೋಟಾಳೆ** (ಮರಾಠಿ **ಘೋಟಾಳಾ**) ಒಂದು ಕುತೂಹಲಕರ ಉದಾಹರಣೆ. ಇದು ಹಿಂದಿಯಲ್ಲಿ ಲಕಾರಾಂತವಾಗಿ **ಘೋಟಾಲಾ** ಎಂಬ ರೂಪದಲ್ಲಿ ಕಾಣಿಸುತ್ತದೆ. ಕನ್ನಡದಲ್ಲಿ ಇದರ ಅರ್ಥ ಗೊಂದಲ, ಗಲಾಟೆ, ಗಲಿಬಿಲಿ, ಇಕ್ಕಟ್ಟಿನ ಪ್ರಸಂಗ, ಪೇಚಾಟದ ಪರಿಸ್ಥಿತಿ. **ಘೋಂಟಾಳಾ** ಎಂಬ ರೂಪದಲ್ಲಿಯೂ ಅದು ಮರಾಠಿಯಲ್ಲಿದೆ. ಅದಕ್ಕೆ ಮರಾಠಿಯಲ್ಲಿ ಸುತ್ತುಸುತ್ತು ತಿರುಗುವುದು ಅರ್ಥಾತ್ ಭ್ರಮಣ ಎಂಬ ಅರ್ಥವೂ ಇದೆ. ಆದರೆ ''ಘೋಟಾಳಾ''ದ ವ್ಯುತ್ಪತ್ತಿ ಹೇಗೆಂದು ಕೇಳಿದರೆ ಘೋಟಾಳೆಯೇ! ''ಘೋಟ'' (ಕುದುರೆ)ಕ್ಕಂತೂ ಅದು ಸಂಬಂಧಿಸಿದ್ದಲ್ಲ. ''**ಘಂಟ್** ಪರಿವರ್ತನೇ'' (= ಸುತ್ತಾಡು)

''ಟಲ್, ಟೂಲ್ ವೈಕ್ಲವ್ಯೇ'' (= ಕಷ್ಟಪಡುವುದು) ಎಂಬ ಸಂಸ್ಕೃತ ಧಾತುಗಳಿಂದ ಅದು ಹುಟ್ಟಿರಬಹುದೆಂದು ಹೇಳಿ ಮರಾಠಿ ವ್ಯುತ್ಪತ್ತಿ ಕೋಶಕಾರರು ತಮ್ಮ ನಿರುಕ್ತಿಗೇ ಸಂದೇಹಪಟ್ಟು, ಈ ಶಬ್ದ ದ್ರಾವಿಡ ಅಥವಾ ಆಸ್ಟ್ರೋ ಏಶಿಯಾಟಿಕ್ ಮೂಲದಿಂದ ಬಂದಿರಬಹುದೆಂಬ ಊಹೆಯನ್ನು ತೇಲಿಬಿಟ್ಟಿದ್ದಾರೆ.

ಈ ಗಾಳಿಪಟದ ಬೆಂಬತ್ತುವುದಾದರೆ ಕನ್ನಡ **ಕೋಟಲೆ** ದೃಷ್ಟಿಪಥಕ್ಕೆ ಬರುತ್ತದೆ. ಕಾಟ, ಸಂಕಷ್ಟ, ಉಪದ್ರವ, ತೊಂದರೆ, ಗಲಿಬಿಲಿ, ಹಿಂಸೆ ಇತ್ಯಾದಿ ಅರ್ಥಗಳು ಈ ಶಬ್ದಕ್ಕೆ ಇವೆ. ''ಕೋಟಲಿಗ'' ಎಂದರೆ ಉಪದ್ರವಕಾರಿ. ತಮಿಳಿನಲ್ಲಿ **ಕೋಟ್ಟಾಲೆ,** ತೆಲುಗಿನಲ್ಲಿ **ಕೋಡಾಡು,** ತುಳುವಿನಲ್ಲಿ **ಕೋಟಲೆ** (= ರೋಗ; **ನೀರು ಕೋಟಲೆ** = ಗಣಜಿಲ ರೋಗ) ಇವೆ. **ಕೋರ, ಗೋರ** (= ಗೊಬ್ಬರ ರೋಗ – measles) ಎಂಬ ತುಳು ಪದಗಳು ಕೂಡ ಕೋಟಲೆಯ ಪೂರ್ವಪದದಿಂದ ಬಂದವುಗಳೆಂದು ದ್ರಾವಿಡ ವ್ಯುತ್ಪತ್ತಿ ಕೋಶ (DED) ದಾಖಲಿಸುತ್ತದೆ. 'ಕೋಟಲೆ'ಯ ಕನ್ನಡ ಅರ್ಥಗಳು ತಮಿಳಿನ 'ಕೋಟ್ಟಾಲೆ'ಗೂ ಸಲ್ಲುತ್ತವೆ.

''ಕೋಟಲೆ'' ಮರಾಠಿಯಿಂದ ನಮಗೆ ಬಂದಿರಲಾರದು. ಪಂಪನೇ ಕೋಟಲೆಯನ್ನು ಪ್ರಯೋಗಿಸಿದ್ದಾನೆ. ಕೋಟಲೆ, ಕೋಟ್ಟಾಲೆಗಳಲ್ಲಿನ ಕೋಟು, ಕೋಟ್ಟು **ಕುಡು** (ವಕ್ರ, ಡೊಂಕು) ಧಾತುವಿನಿಂದ ರೂಪುಗೊಂಡಿರಬೇಕು. **ಅಲೆ** ಧಾತು ಪೀಡೆ, ಸುತ್ತಾಟ ಇತ್ಯಾದಿ ಅರ್ಥಗಳನ್ನು ಕೊಡುವುದರಿಂದ ಕೋಟಲೆಗೆ ಪಂಪನ ಕಾಲದಿಂದಲೂ ಬಂದ ಅರ್ಥಕ್ಕೆ ಈ ಪದವಿಂಗಡಣೆ ಸರಿಹೊಂದುತ್ತದೆ. ಕ, ಗ ಗಳು ಸವರ್ಗೀಯವಾಗಿದ್ದು 'ಘ' ಕಾರವು ಪ್ರಥಮಾಕ್ಷರಕ್ಕೆ ಒತ್ತು ಕೊಡುವ ಪ್ರವೃತ್ತಿಯಿಂದ ಉಂಟಾಗಿರಬೇಕು. ಉದಾ : ಕಬ್ಬಿಣ – ಖಬಣ, ಗರ್ಜನೆ – ಘರ್ಜನೆ. ಘೋಟಾಳೆ ಮರಾಠಿಗೆ ಕನ್ನಡದಿಂದ, ಹಿಂದಿಗೆ ಮರಾಠಿಯಿಂದ ಹೋಗಿರಬಹುದು. ಪ್ರಾಕೃತದಲ್ಲಿ ಘೋಟಾಳೆಗೆ ಸಮಾನಪದ ಇಲ್ಲ. ಬಂಗಾಲಿಯಲ್ಲಿಯೂ ಅದು ಕಾಣದು. ಆದ್ದರಿಂದ ಕೋಟಲೆಯೇ ಘೋಟಾಳೆಯೆಂಬುದಕ್ಕೆ ಯುಕ್ತಿವಿರೋಧವಿಲ್ಲ.

ರಾಷ್ಟ್ರೀಯ ಚಳವಳಿ ಕಾಲದಲ್ಲಿ ಹಿಂಸಾತ್ಮಕ ಕ್ರಾಂತಿವಾದಿಗಳನ್ನು **ಜನ್ಮಟಾಪು** ಶಿಕ್ಷೆಗೆ ಗುರಿಪಡಿಸಿದ ಸುದ್ದಿಗಳನ್ನು ಓದುತ್ತಿದ್ದವು. ಇದರರ್ಥ **ಆಜೀವ ಸೆರೆಮನೆ** ವಾಸಕ್ಕಾಗಿ **ದ್ವೀಪಾಂತರಕ್ಕೆ** (ಆಗ ಅಂಡಮಾನ ದ್ವೀಪಗಳಿಗೆ) ಕಳಿಸಿದುದು ಎಂಬುದಾಗಿತ್ತು. ಇದೂ ಮರಾಠಿಯಿಂದ ನಮಗೆ ಬಂದದ್ದು. ಅಲ್ಲಿ **ಟಾಪು** ಎಂದರೆ ದ್ವೀಪ. ಈ ಪದ ಹಿಂದೀ, ಬಂಗಾಲಿ ಭಾಷೆಗಳಲ್ಲಿಯೂ ಇದೆ. ಅದು ಪ್ರಾಕೃತ ಭಾಷೆಯ **ಟಪ್ಪೂ** ಪದದ ಎರವಲು.

ಕಾಗದಗಳನ್ನು ಒಂದಕ್ಕೊಂದು ತಗಲಿಸಲು ಉಪಯೋಗಿಸುವ **ಪಿನ್** (pin) ಕನ್ನಡೀಕೃತವಾಗಿ ಗುಂಡುಸೂಜಿ ಎನ್ನಿಸಿದರೆ ಉತ್ತರ ಕರ್ನಾಟಕದಲ್ಲಿ ಅದು **ಟಾಚಣಿ** ಅಥವಾ **ಟಾಂಚಣಿ** ಎನಿಸುತ್ತದೆ. ಇದೂ ಮರಾಠಿ ಪದ. ಈ ಶಬ್ದದ ಮೂಲಕ್ಕೆ ಹೋದರೆ, ಅದಕ್ಕೆ **ಸೂಜಿ** ಎಂಬ ಅರ್ಥವಿಲ್ಲ; ಲಘುವಾದ ಹೊಲಿಗೆ ಹಾಕುವುದು, ಗುರುತು ಮಾಡಿಕೊಳ್ಳುವುದು, ಟಿಪ್ಪಣಿ ಬರೆದುಕೊಳ್ಳುವುದು ಇತ್ಯಾದಿ ಅರ್ಥಗಳು ''ಟಾಂಚಣೇ'' ಧಾತುವಿಗಿದೆ. ಹಿಂದಿಯಲ್ಲಿ **ಟಾಂಕ್, ಟಾಂಚ್** ಬಂಗಾಲಿಯಲ್ಲಿ **ಟಂಕಿತ** ಎಂಬವುಗಳೂ ಸುಮಾರು ಇದೇ ಅರ್ಥಕೊಡುತ್ತವೆ. ಕನ್ನಡದಲ್ಲಿಯೂ ಲಘುವಾದ ಹೊಲಿಗೆಗೆ **ಟಾಕಿ ಹಾಕುವುದು** ಎನ್ನುವುದುಂಟು. ಹೀಗೆ ''ಟಾಚಣಿ''ಯಿಂದ ವಿದಿತವಾಗುವ ಒಂದಂಶವೆಂದರೆ, ಹಿಂದೆ ಕಾಗದದ ದಾಖಲೆಗಳನ್ನು ಒಂದಕ್ಕೊಂದು ಜೋಡಿಸಲು ಮೂಲೆಯಲ್ಲೋ

ಬದಿಯಲ್ಲೋ ಹಗುರಾಗಿ ಹೊಲಿಗೆ ಹಾಕಿಡುತ್ತಿದ್ದರಲ್ಲದೆ ಸೂಜಿ ಚುಚ್ಚಿಡುತ್ತಿದ್ದಿಲ್ಲ. ಮುಂದೆ ಗಂಡುಸೂಜಿ ಆಮದಾದ ಮೇಲೆ ಅದಕ್ಕೂ ಹಳೇ ''ಟಾಚಣೀ''ಯದೇ ನಾಮಪದ ರೂಪವನ್ನು ಅನ್ವಯಿಸಿದರಷ್ಟೇ. ಗುಂಡಾದ ತಲೆಯಿರುವುದರಿಂದ ಅದು ಗುಂಡುಸೂಜಿ.

೧೪೩

ಮನುಷ್ಯನೊಡನೆ ಸಂಬಂಧ ಸ್ಥಾಪಿಸಿದ ಪ್ರಾಣಿಗಳಲ್ಲಿ **ನಾಯಿ** ಮೊಟ್ಟ ಮೊದಲಿನದಾಗಿರಬೇಕು. ಸುಮಾರು ಹನ್ನೆರಡು ಸಾವಿರ ವರ್ಷಗಳಿಂದ ಅದು ಮನುಷ್ಯಾಶ್ರಯದಲ್ಲಿದೆ. ಗುಹಾವಾಸಿ ಮಾನವನು ಚೆಲ್ಲಿ ಕೊಟ್ಟ ಎಲುಬು, ಮಾಂಸದ ತುಣುಕುಗಳ ಆಸೆಯಿಂದ ಬಂದು ಕಾಲಾಂತರದಲ್ಲಿ ಪಳಗಿದ **ತೋಳನೇ** ನಾಯಿಯೆಂದು ಪ್ರಾಣಿಶಾಸ್ತ್ರಿಗಳು ತರ್ಕಿಸುತ್ತಾರೆ. ಅದರ ಕೃತಜ್ಞತೆ, ಸ್ವಾಮಿಭಕ್ತಿಯ ಪರಾಕಾಷ್ಠೆ ಮೊದಲಾದ ಗುಣಗಳನ್ನು ದೃಷ್ಟಾಂತಿಸುವ ಕಥೆಗಳು ಅಸಂಖ್ಯ. ''ಮನುಷ್ಯನ ಪರಮ ಮಿತ್ರ'' ಎಂಬ ಉಪಾಧಿಯೂ ಅದಕ್ಕಿದೆ.

ಆದರೂ ಮನುಷ್ಯನ ಭಾಷೆಗಳಲ್ಲಿ ಅದನ್ನು ಮೆಚ್ಚುವುದಕ್ಕಿಂತಲೂ ತುಚ್ಛೀಕರಿಸುವ ನುಡಿಕಟ್ಟುಗಳು ತುಂಬಾ ಹೆಚ್ಚೆಂಬುದು ಮನುಷ್ಯ ಜಾತಿಯ ಕೃತಘ್ನ ಸ್ವಭಾವಕ್ಕೆ ಹಿಡಿದ ಕನ್ನಡಿಯೆನ್ನಬೇಕೋ ಮತ್ತೇನು ಹೇಳಬೇಕೋ ತಿಳಿಯುವುದಿಲ್ಲ.

ಕನ್ನಡದಲ್ಲೇ ನೋಡಿ. ಹೀನ, ನೀಚ ವರ್ಗಕ್ಕೆ ಸೇರಿಸಬಹುದಾದ್ದಕ್ಕೆ ಹಿಂದೆ ನಾಯಿ ಎಂಬ ಉಪಾಧಿ ಸೇರಿಸುತ್ತೇವೆ. ನಿದರ್ಶನಕ್ಕೆ **ನಾಯಿ-ತುಳಸಿ** ಎಂದರೆ ತುಳಸಿಯಂತೆಯೇ ಕಡುವಾಸನೆಯ, ಆದರೆ ಕಾಡುಜಾತಿಯ ಒಂದು ಸಸ್ಯ. (ಮಲೇರಿಯಾಕ್ಕೆ ಒಳ್ಳೆ ಕಷಾಯ ಇದರಿಂದ ತಯಾರಿಸಬಹುದೆಂದು ಹಲ ವರ್ಷ ಹಿಂದೆ ಪ್ರಕಟವಾಗಿತ್ತು.) ಹಾಗೆಯೆ **ನಾಯಿ-ನೇರಳೆ** ಇದೆ. ಇಂಗ್ಲೀಷಿನಲ್ಲಿಯೂ dog berry ಇದೆ, dog violet ಕೂಡ ಇದೆ – ಒಂದು ಕೀಳು ಹೂವಿನ ಹೆಸರು ಅದು. **ನಾಯ ಕಗ್ಗಲಿ, ನಾಯತ್ತಿ, ನಾಯಹತ್ತಿ, ನಾಯಿಕಳ್ಳಿ, ನಾಯಿ ಬೆಂಡೆ** – ಎಷ್ಟು ಬೇಕು ನಿಮಗೆ ? **ನಾಯಿ-ಡಿಂಗರ** ಎಂದರೆ ತೀರ ನೀಚ ಮನುಷ್ಯ. **ನಾಯಿಗಣ್ಣು** ಎಂದರೆ ನಿರ್ಲಜ್ಜ ಕಾಮುಕದೃಷ್ಟಿ. **ನಾಯಿ ಜನ್ಮ** ಎಂದರೆ ಹೀನ ಜಾತಿ. **ನಾಯಿ ಸಂತೆ** ಎಂದರೆ ತೀರ ಜಾಸ್ತಿ ಬೆಳೆಬಂದು ಪೇಟೆಯಲ್ಲಿ ಅತಿ ಅಗ್ಗವಾಗಿ ಯಾವುದೇ ಪದಾರ್ಥ ಸಿಗುವಿಕೆ. (**ಹೊಲೆ-ಅಗ್ಗ** ಎಂಬ ಪದವೂ ಇದಕ್ಕುಂಟು). ಮರಿ ಇಡುವುದರಲ್ಲಿ ನಾಯಿಗಿಂತಲೂ ಹೇ-ಹಂದಿ ಹೆಚ್ಚು; ಆದರೂ ''ನಾಯಿ-ಸಂತೆ'' ಎನ್ನುತ್ತೇವಲ್ಲದೆ ಹಂದಿ-ಸಂತೆಯೆಂದಲ್ಲ ! **ನಾಯಿ ಬದುಕು** ಕನ್ನಡದಲ್ಲಿದೆ ಮಾತ್ರವಲ್ಲದೆ ಇಂಗ್ಲೀಷಿನಲ್ಲಿಯೂ ಅದೇ ಅರ್ಥದ a dog's life ಇದೆ. ಸಾಲದ್ದಕ್ಕೆ ಅಲ್ಲಿ dying a dog's death **(ನಾಯಿ ಸಾವು)** ಕೂಡ ಇದೆ. ನಮ್ಮಲ್ಲಿಯಂತೆ ನಾಯಿ ಅಲ್ಲಿ ಮೈಲಿಗೆಯಲ್ಲವಲ್ಲ. ಆದರೂ ಆ ಭಾಷೆಯಲ್ಲಿ ಅಶುದ್ಧ ಲ್ಯಾಟಿನ್ ಭಾಷೆಗೆ dog Latin ಎಂದು ಹೆಸರು ಕೊಟ್ಟಿದ್ದಾರೆ.

ಕರಾರಿಲ್ಲದ ಉಪಕಾರ ಮಾಡುತ್ತಿರುವುದಕ್ಕೆ ನಾಯಿಗೆ ಇದು ಪ್ರತಿಫಲವೇ ?

ಪ್ರಾಚೀನ ಕಾಲದಿಂದ ಮನುಷ್ಯ ತನಗೆ ಹೆಸರಿಟ್ಟುಕೊಳ್ಳುವಲ್ಲಿ ಪ್ರಾಣಿಗಳ ಹೆಸರುಗಳನ್ನುಪಯೋಗಿಸಿದ್ದಾನೆ. ಅವು ಅವನ ಅಥವಾ ಆ ಜನ ಪಂಗಡದ

ಜೀವನಾದರ್ಶಗಳನ್ನು ಪ್ರತಿಬಿಂಬಿಸುತ್ತವೆಂದು ನಾವು ಭಾವಿಸಬಹುದು. ನಾಯಿಯ ಬಗ್ಗೆ ಮನುಷ್ಯನ (ದುರ್-) ಅಭಿಪ್ರಾಯಗಳನ್ನು ನೋಡಿದರೆ ಯಾರಿಗಾದರೂ ನಾಯಿಯ ಹೆಸರು ಇದ್ದೀತೇ ಎಂದು ಸಂಶಯವಾಗುತ್ತದೆ. ಆದರೆ ನಮ್ಮ ಪ್ರಾಚೀನ ಪುರಾಣ ಸಾಹಿತ್ಯ ನೋಡಿದರೆ ನಾಯಿಗೆ ಆ ಜನ ಅಷ್ಟು ಕೀಳು ಸ್ಥಾನ ಇತ್ತಿರಲಿಲ್ಲ. ಚ್ಯವನ ಋಷಿಯ ಮೊಮ್ಮಗನ ಹೆಸರು **ಶುನಕ** (= ನಾಯಿ) ಎಂದಿತ್ತು; ಅವನ ಮಗ **ಶೌನಕ**. ಇಬ್ಬರೂ ಮಹರ್ಷಿಗಳೇ. ಅದಕ್ಕಿಂತ ಹಿಂದೆ ಹೋದರೆ ವೇದದ ಮಂತ್ರ ದ್ರಷ್ಟಾರ ಋಷಿಯಾದ ದೇವರಾತನ ಮೂಲ ಹೆಸರು **ಶುನಃಶೇಪ**; ಹಾಗೆಂದರೆ **ನಾಯಿಬಾಲ** ಅಥವಾ **ನಾಯಿಯ ಶಿಶ್ನ**. ಇದು ಕೀಳು ಜಾತಿಯವರಿಗೆ ಅಥವಾ ನಮ್ಮ ಪ್ರಾಚೀನರಿಗೆ ಮಾತ್ರ ಮೀಸಲಾದದ್ದಲ್ಲ; **ಕಲೀಬ್** (Calib) ಎಂಬ ಹೀಬ್ರೂ ಹೆಸರಿನ ಅರ್ಥ ನಾಯಿ ಅಥವಾ ಧೈರ್ಯಶಾಲಿ ಎಂದು. ಹಿಬ್ರೂಜನ ಇಲ್ಲಿ ನಾಯಿಗೆ ಧೀರಗುಣ ಕೊಟ್ಟಿದ್ದಾರೆ.

ಪ್ರಾಣಿಗಳ ಬಗ್ಗೆ ಪ್ರಾಚೀನ ಭಾವನೆಗಳು ಈಗ ನೋಡಿದರೆ ಸೋಜಿಗ ಉಂಟು ಮಾಡಬಹುದು. **ತೋಳನ** ಬಗ್ಗೆ ನಮಗಿಂದು ಒಂದು ಬಗೆಯ ಭಯಮಿಶ್ರಿತ ದ್ವೇಷವಿದೆ. ಹೆಂಗಸರನ್ನು ಮರುಳು ಮಾಡಿ ಭೋಗಿಸಿ ಕೈಬಿಡುವವರನ್ನು wolf (ತೋಳ) ಎಂದು ಇಂಗ್ಲೀಷಿನಲ್ಲಿ ಕರೆಯುವುದುಂಟು. ಆದರೆ ಯುರೋಪಿನ ಹಲವಾರು ಭಾಷೆಗಳಲ್ಲಿ ತೋಳನೆಂಬರ್ಥದ ಹೆಸರುಗಳು ಬಹಳ ಕಾಲದಿಂದ ಇವೆ. ಉದಾಹರಣೆಗೆ ಹಿಟ್ಲರನ ಹೆಸರಿನೊಡನೆ ಸಂಬದ್ಧವಾದ **ಅಡಾಲ್ಫ್** (Adolph) ಎಂಬ ಪದದ ಅರ್ಥ ತೋಳ. ಜರ್ಮಾನಿಕ್ ಮೂಲದ ಈ ಪದಕ್ಕೆ ಸಂವಾದಿ ಹೆಸರುಗಳು ಫ್ರೆಂಚ್, ಇಟಾಲಿಯನ್, ಸ್ಪಾನಿಷ್, ಪ್ರಾಚೀನ ಇಂಗ್ಲೀಷ್‌ಗಳಲ್ಲಿ ಮನುಷ್ಯರ ಹೆಸರುಗಳಾಗಿ ಸಿಗುತ್ತವೆ. ಫ್ರೆಂಚ್, ಇಟಾಲಿಯನ್ ಮತ್ತು ಬೇರೆ ಕೆಲವು ಯುರೋಪಿಯನ್ ಭಾಷೆಗಳಲ್ಲಿ ಹೊಳೆಯುವ ತೋಳ ಎಂಬರ್ಥದ **ಬರ್ಡೋಲ್ಫ್** (Bardolph) ಎಂಬ ವೈಯಕ್ತಿಕ ಹೆಸರುಗಳಿವೆ. ನಮ್ಮವರೂ ಇದರಲ್ಲಿ ಬೇರೆಯಾಗಿದ್ದಿಲ್ಲ. **ವೃಕ** ಎಂದರೆ ಸಂಸ್ಕೃತದಲ್ಲಿ **ತೋಳ**, ಆ ಹೆಸರಿನ ಪಾಂಚಾಲ ರಾಜಪುತ್ರನೊಬ್ಬ ಮಹಾಭಾರತದಲ್ಲಿ ಕಾಣಸಿಗುತ್ತಾನೆ. **ವೃಕದೇವಿ** ಎಂಬುದು ವಸುದೇವನ ಹೆಂಡಂದಿರಲ್ಲೊಬ್ಬಳ ಹೆಸರು. ಭೀಮನಿಗಂತೂ **ವೃಕೋದರ** (= ತೋಳನ **ಹೊಟ್ಟೆ**) ಎಂಬುದು ಅಪರನಾಮ. ಪ್ರಾಚೀನರು ತೋಳನನ್ನು ಧೈರ್ಯಶೌರ್ಯಗಳಿಗೆ ಆದರ್ಶವಾಗಿ ಗ್ರಹಿಸಿದ್ದರೆಂದು ಇದರಿಂದ ಪ್ರತೀತವಾಗುತ್ತದೆ.

**ಕಾಡುಹಂದಿ**ಯೆಂಬರ್ಥದ **ವರಾಹ** ನಮ್ಮಲ್ಲಿ ವಿಷ್ಣುವಿನ ಅವತಾರವೆಂಬದರಿಂದ ಕೆಲವರ ಹೆಸರಾಗಿದೆ. ಆದರೆ ಇತರ ಭಾಷೆಗಳಲ್ಲಿ 'ವರಾಹ'ಕ್ಕೆ ಮನುಷ್ಯರ ಹೆಸರಿನ ಸ್ಥಾನ ಸಿಕ್ಕಿದೆ. **'ಅವರಿಲ್'** (Averil), **ಎವರಾರ್ಡ್** (Everard) ಎಂಬ ಹೆಸರುಗಳು ಕಾಡುಹಂದಿಯೆಂಬರ್ಥ ಕೊಡುವವು.

**ಕರಡಿ** ಏನು ಸುಂದರ ಪ್ರಾಣಿ? ಆದರೆ ಅದರ ಹೆಸರೂ ನಮ್ಮಲ್ಲಿಯೂ ಯುರೋಪಿನಲ್ಲಿಯೂ ಜನಪ್ರಿಯವಾಗಿತ್ತೆಂದು ಹೆಸರುಗಳಿಂದ ಗೊತ್ತಾಗುತ್ತದೆ. **ಋಕ್ಷ** (ಕರಡಿ) ಎಂಬ ಹೆಸರಿನ ಇಬ್ಬಿಬ್ಬರು ರಾಜರು ಮಹಾಭಾರತದಲ್ಲಿ ಬರುತ್ತಾರೆ. ಯುರೋಪಿನ ಅನೇಕ ಭಾಷಾ ಪ್ರದೇಶಗಳಲ್ಲಿರುವ Bernard (= ಬಲಿಷ್ಠ ಕರಡಿ), arthur (ಕರಡಿ ಅಥವಾ ಶಿಲೆ) ಎಂಬ ಹೆಸರುಗಳನ್ನು ಉಲ್ಲೇಖಿಸಬಹುದು. ಹೆಂಗಸರಿಗೆ **ಕೂಡ ಪುಟ್ಟ** ಕರಡಿ (ಹೆಣ್ಣು) ಎಂಬರ್ಥದ **ಉರ್ಸುಲಾ** (Ursula) ಎಂಬ ಹೆಸರಿತ್ತು.

ಹುಲಿ, ಸಿಂಹ ಮೊದಲಾದವುಗಳ ಹೆಸರು ನಮ್ಮಲ್ಲಿ ಮನುಷ್ಯರಿಗೆ ಸಂದದ್ದುಂಟು. ಅವು ಶೌರ್ಯದ ಪ್ರತೀಕಗಳೆಂದು ಸ್ವೀಕೃತವಾಗಿಯೆ ಇವೆಯಲ್ಲ. ಯುರೋಪಿನಲ್ಲಿ **ಲಿಯೊನಾರ್ಡ್** Leonard (ಸಿಂಹ), **ಲಿಯೊನೆಲ್** Lionel ಪುಟ್ಟ ಸಿಂಹ ಇತ್ಯಾದಿ ಹೆಸರುಗಳಿದ್ದರೆ ನಮ್ಮಲ್ಲಿ ಪುಲಿಕೇಶಿಗಳಿದ್ದಿಲ್ಲವೆ? ಆದರೆ ಹಾವುಗಳೊ? ನಮ್ಮಲ್ಲಿ **ನಾಗಮ್ಮ**ಗಳಿದ್ದಾರೆ (ಸರ್ಪಿಣಿಯರಿಲ್ಲ – ಅನ್ನಿ). ಯುರೋಪಿನಲ್ಲಿ **ಬೇಲಿಂದಾ** (Belinda) ಎಂಬ ಸ್ತ್ರೀನಾಮದ ಉತ್ತರ ಪದಕ್ಕೆ ಹಾವೆಂದೇ ಅರ್ಥ. ಬೈಬಲ್ಲಿನಲ್ಲಿ ಹಾವು ಪಾಪ ಪ್ರಚೋದಕ ಜೀವಿ. ಅದು ಮೊದಲು ಪಾಪಪ್ರಚೋದನೆ ಮಾಡುವುದು ಹೆಣ್ಣಿನಲ್ಲಿ. ಆದ್ದರಿಂದ ಹೆಣ್ಣಿಗೆ ಹಾವಿನ ಹೆಸರಿಡಲು ಏನಡ್ಡಿ?

೧೪೪

ಒಂದು ಭಾಷೆಯಿಂದ ಇನ್ನೊಂದರ ಮೇಲೆ ಆಗುವ ಪ್ರಭಾವಗಳಿಗೆ ಮೇರೆಯೇ ಇಲ್ಲ ಎನಿಸುತ್ತದೆ. ಶಬ್ದಗಳು ಇದ್ದ ಹಾಗೆಯೇ ಅಥವಾ ತುಸು ರೂಪ ಬದಲಾಯಿಸಿಕೊಂಡು ಕೆಲ ವೇಳೆ ಆ ಕಲ್ಪನೆಯನ್ನು ವ್ಯಕ್ತಪಡಿಸುವ ಪದಗಳು ಆ ಭಾಷೆಯಲ್ಲಿ ಇದ್ದರೆ ಕೂಡ ಸೇರಿಕೊಳ್ಳುವುದಂತೂ ಸಾಮಾನ್ಯ. ಇದಕ್ಕಿಂತ, ಅಪ್ರತ್ಯಕ್ಷವಾಗಿ, ಅಜ್ಞಾತವಾಗಿ ಅಭಿವ್ಯಕ್ತಿಯ ರೀತಿಗಳಲ್ಲಿ ಕೂಡ – ಪರಭಾಷೆಗಳು ಪ್ರಭಾವ ಬೀರುತ್ತವೆ. ಈ ಶತಮಾನದಲ್ಲಿ ಇಂಗ್ಲೀಷ್ ಶಿಕ್ಷಣ ವ್ಯಾಪಕವಾದ ನಂತರ ಕನ್ನಡದ ವಾಕ್ಯರಚನೆಯ ವಿಧಾನಗಳೇ ಬದಲಾಗುತ್ತ ಬಂದದ್ದು ಗೋಚರಕ್ಕೆ ಬರುತ್ತದೆ. ಅದು ಈ ಲೇಖನದ ವಿಷಯವಲ್ಲ. ಇಲ್ಲಿ ಕೆಲವೊಂದು ಪ್ರಯೋಗ ರೀತಿಗಳ ಕಳ್ಳ ಹೆಜ್ಜೆಗಳನ್ನು ಗುರುತಿಸಹೊರಟಿದ್ದೇನೆ.

''**ಒಮ್ಮೆಲೇ** ಸಿಟ್ಟಿಗೆದ್ದ'' ಎನ್ನುತ್ತೇವಲ್ಲ; 'ಒಮ್ಮೆಲೇ' ಎಂದರೆ ನಿಜವಾಗಿ ಒಂದೇ ಸಲ ಎಂದಲ್ಲವೇ ಅರ್ಥ? ಆದರೆ ಇಲ್ಲಿ ಉದ್ದೇಶಿಸಿದ ಅರ್ಥ ಅಕಸ್ಮಾತ್ತಾಗಿ ಎಂಬುದು. ಅದನ್ನು ಶೋಧಿಸಿದರೆ, ಉರ್ದುವಿನಲ್ಲಿ ಕಾಣಿಸುವ ಪಾರಸೀಕ ಶಬ್ದವಾದ **ಇಕ್‌ಬಾರಗೀ** ಎಂಬಲ್ಲಿಗೆ ತಲುಪುತ್ತೇವೆ. ಅಲ್ಲಿ ಅದು ಅಕಸ್ಮಾತ್, ಅನಿರೀಕ್ಷಿತವಾಗಿ, ಸಹಸಾ, ಏಕಾಏಕಿ ಇತ್ಯಾದಿ ಅರ್ಥಗಳಲ್ಲಿ ನಡೆಯುತ್ತದೆ. ಅದನ್ನು ಒಂದು ತರಹದಲ್ಲಿ ಅನುವಾದ ಮಾಡಿ 'ಒಮ್ಮೆಲೇ' (ಇಕ್ = ಏಕ) ಎಂಬ ಶಬ್ದವನ್ನು ಸೃಷ್ಟಿಸಿದ್ದಾಗಿದೆ. ಅದರಲ್ಲಿ ಕೂಡ 'ಬಾರಗೀ' ಎಂಬುದು ಎಷ್ಟು ಮಟ್ಟಿಗೆ ಬಾರಿ, ಸಲ ಎಂಬರ್ಥ ಹೊಂದಿದೆಯೋ ಸಂಶಯವೇ. (**ಬಾರ್** ಇಗೆ ಉರ್ದೂ ಹಿಂದೀ ಕೋಶಗಳಲ್ಲಿ ಸಲ ಎಂಬರ್ಥ ಕಾಣಿಸದು). ಸಲ ಎಂಬುದು ಹಿಂದಿಯ 'ಬಾರ್ (ಸಂಸ್ಕೃತದ 'ವಾರಂ') ಶಬ್ದದ ಅರ್ಥ. ಇನ್ನು ಒಮ್ಮೆಲೇ ಎಂಬರ್ಥದಲ್ಲಿ **ಒಮ್ಮಿಂದೊಮ್ಮೆ** ಎಂದೂ ಹೇಳುತ್ತೇವಲ್ಲ. ಅದು ಪಾರಸೀಕ ಉರ್ದು 'ಯಕಾಯಕ್' (ಏಕಾಏಕಿ)ನ ಅನುವಾದ. ಅಕಸ್ಮಾತ್ ಎಂಬ ಅರ್ಥಕೊಡಲು ಒಮ್ಮೆ ಎಂಬ ಪದದ ಉಪಯೋಗವನ್ನು ನಮ್ಮ ಪುರಾತನರು ಮಾಡಿಯೇ ಇಲ್ಲವೆಂದಲ್ಲ **ಒರ್ಮೊದಲ್** ಎಂಬ ಶಬ್ದ ರನ್ನ ಕವಿಯ ಕಾಲದಲ್ಲೇ ಪ್ರಯೋಗದಲ್ಲಿತ್ತು. ಆದರೆ ಮೇಲೆ ತೋರಿಸಿದ್ದು ಮಾತ್ರ ದೇಶಿ ಅಲ್ಲ, ಅಷ್ಟೇ.

'ಅವನ **ಸಮಾಚಾರ** ತೆಗೆದುಕೊಳ್ಳುತ್ತೇನೆ' ಎಂದರೆ ಅವನು ಮಾಡಿದ್ದಕ್ಕೆ ತಕ್ಕ ಶಿಕ್ಷೆ (ಕಾನೂನಿನ ಪ್ರಕಾರವೋ ಗೈರ್ ಕಾನೂನಿನ ರೀತಿಯಲ್ಲೋ) ಕೊಡುತ್ತೇನೆ ಎಂದು

ತಾತ್ಪರ್ಯ. ಇದು ಕೂಡ ಉರ್ದು **ಖಬರ್ ಲೇನಾ** (ಖಬರ್ = (ಅರಬ್ಬಿ) ಸುದ್ದಿ, ಸಮಾಚಾರ) ಎಂಬುದರ ಅನುವಾದವೇ ಇರಬೇಕು. ಆದರೆ ಅಲ್ಲಿ ಈ ಪದಪುಂಜದ ಅರ್ಥ ಒಳ್ಳೇ ಮತ್ತು ಕೆಟ್ಟ ಎರಡೂ ಇರಾದೆಗಳನ್ನು ಸೂಚಿಸುತ್ತದೆ – ಸಹಾಯ ಮಾಡುವುದು, ಶಿಕ್ಷೆ ಕೊಡುವುದು ಎರಡಕ್ಕೂ 'ಖಬರ್ ಲೇನಾ' ಸಲ್ಲುತ್ತದೆ. **ವಿಚಾರಿಸಿಕೊಳ್ಳುತ್ತೇನೆ** ಎನ್ನುವುದೂ ಮೇಲಿನ ಉರ್ದು ವಾಗ್ಧೋರಣೆಯ ಪ್ರಭಾವದಲ್ಲೇ ರೂಪುಗೊಂಡದ್ದೆಂದು ತೋರುತ್ತದೆ.

'ಪಶುಗಳು ತಮ್ಮ ಕರ್ಮಗಳಿಗೆ **ಉತ್ತರದಾಯಿ**ಗಳಲ್ಲ' ಎಂದು ಆಧುನಿಕ ಕನ್ನಡದಲ್ಲಿ ಪ್ರಯೋಗ ಕಾಣಿಸುತ್ತದೆ. 'ಉತ್ತರದಾಯಿ' ಶುದ್ಧ ಸಂಸ್ಕೃತವೇ ನಿಜ. ಉತ್ತರ ಕೊಡುವವನು ಎಂದು ಅದರ ಅರ್ಥ. ಹಿಂದಿನ ಕಾಲದ ಸಂಸ್ಕೃತದಲ್ಲಿ 'ಉತ್ತರದಾಯಕ' ಶಬ್ದ ಇದೆ. ಆದರೆ ಅದು ಮೇಲೆ ಉದ್ಧರಿಸಿದ ವಾಕ್ಯದಲ್ಲಿನ 'ಉತ್ತರದಾಯಿ'ಗೆ ಸಮಾನವಾದದ್ದಲ್ಲ. ಸಂಸ್ಕೃತದಲ್ಲಿ ಅದರ ಅರ್ಥ **ಎದುರಾಡುವವನು** – ಎಂದು. 'ಉತ್ತರಕುತ್ತರ ವಿತ್ತೆದುರಾಡದೆ' ಎಂದು ಸಂಚಿಯ ಹೊನ್ನಮ್ಮ ಹದಿಬದೆಗೆ ಉಪದೇಶ ಮಾಡುತ್ತಾಳೆ. ಆದರೆ ಆಧುನಿಕ 'ಉತ್ತರದಾಯಿ'ಗೆ ಹೊಣೆಗಾರ, ಆದ ಪ್ರಮಾದಕ್ಕೆ ಜವಾಬ್ದಾರ ಎಂದು ತಾನೆ ಅರ್ಥ. ಇಂದಿನ ಉತ್ತರದಾಯಿ ಉರ್ದುವಿನಲ್ಲಿರುವ **ಜವಾಬ್‌ದಾರ್** ಅಥವಾ **ಜವಾಬ್-ದೇಹ್** ಇಲ್ಲವೆ ಇಂಗ್ಲೀಷಿನ answerable ಅಥವಾ responsible ಗೆ ಪ್ರತಿಯಾಗಿ ಮಾಡಿಕೊಂಡ ಪದ. (ಜವಾಬ್ (ಅರಬ್ಬಿ) = ಉತ್ತರ; ದಾರ್ (ಪಾರಸೀಕ) =ಧಾರ=ಹೊತ್ತವ, ಅಥವಾ ದೇಹ್ (ಪಾರಸೀಕ) =ದಾಯಿ=ಕೊಡುವವ). 'ಜವಾಬ್ದಾರ್' ಎಂಬ ವಿದೇಶಿ ಶಬ್ದದ ಬದಲು ಭಾರತೀಯ ಶಬ್ದವನ್ನು ಟಂಕಿಸಿದಂತಾಯಿತೇ ಹೊರತು ಅದರ ತಾತ್ಪರ್ಯ ಮೂಲ ಸಂಸ್ಕೃತದಿಂದ ಹೊರಗಿನದೇ ಸೈ.

ಆಧುನಿಕ ಉತ್ತರ ಕರ್ನಾಟಕದ ಕನ್ನಡದಲ್ಲಿ **ಹಾರಿಕೆಯ ಸುದ್ದಿ** (=ಗಟ್ಟಿ ಆಧಾರವಿಲ್ಲದ, ಹೇಗೋ ಹಬ್ಬಿದ ಅಥವಾ ಬೇಕೆಂದೇ ಹಬ್ಬಿಸಿದ ವರ್ತಮಾನ) ಎಂಬ ಪ್ರಯೋಗವಿದೆ. ಇದು **ಉಡತೀ ಖಬರ್** (= ಹಾರುವ ಸುದ್ದಿ) ಎಂಬ ಉರ್ದು ಪ್ರಯೋಗದ ಪ್ರತಿಬಿಂಬವೇ ಇರಬೇಕು.

'ನಾಲ್ಕು ಜನ **ಬೊಟ್ಟು** (=ಬೆರಳು) **ತೋರಿಸುವಂತಿರಬಾರದು**' ಎನ್ನುವ ಉಪದೇಶದ ''ಬೊಟ್ಟು (ಬೆಟ್ಟು, ಬಟ್ಟು, ಬೆರಳು) ತೋರಿಸುವಿಕೆ''ಯನ್ನು ಉರ್ದು ಪಾರಸೀಕ **ಅಂಗುಶ್ತ್-ನುಮಾ** (ಅಂಗುಶ್ತ್ = ಅಂಗುಲಿ, · ಬೆರಳು, ಬೆಟ್ಟು + ತೋರಿಸುವುದು) ಅನುವಾದಿಸಿಕೊಂಡಿದ್ದಾಗಿದೆ. ಇಲ್ಲಿ ಬೆರಳು ತೋರಿಸುವುದು ನಿಂದಾವ್ಯಂಜಕವಾಗಿದೆ. ಈ ಕಲ್ಪನೆ ಭಾರತಕ್ಕೆ ಹೊರತಾದದ್ದಲ್ಲ. ತೋರು ಬೆರಳಿಗೆ ಸಂಸ್ಕೃತ ಪದವಾದ 'ತರ್ಜನೀ' ಎಂಬುದು ನಿಂದೆ ಸೂಚಿಸಲು ತೋರು ಬೆರಳಿನ ಉಪಯೋಗದ ದ್ಯೋತಕವಾಗಿದೆ. ಆದರೆ ನಮ್ಮ ಈಗಿನ ಬೊಟ್ಟು ಅಥವಾ ಬೆರಳು ತೋರಿಸುವಿಕೆ ಬಹುಶಃ ಮರಾಠಿ ಮೂಲಕ ಉರ್ದು ಪ್ರಭಾವದ ಫಲವೆಂದು ನನ್ನ ವಾದ.

ಶತಮಾನದ ಮೂರನೇ ದಶಕದ ಪತ್ರಿಕಾ ಬರವಣಿಗೆಯಲ್ಲಿ 'ರಾಜಕೀಯ **ಅಗ್ನಿಭಕ್ಷಕ**' ಎಂಬ ಪದ ಬಳಕೆಗೆ ಬಂದಿತ್ತು. (ಬೇರೆ ಕಡೆ ಇವನನ್ನೇ **ಬೆಂಕಿ ನವಾಬ** ಎನ್ನುತ್ತಿದ್ದುದೂ ಉಂಟು). ರಾಜಕೀಯ ಪ್ರಚಾರದಲ್ಲಿ ಅತ್ಯುಗ್ರ ಭಾಷೆಯನ್ನು ಉಪಯೋಗಿಸುವ (ನಮ್ಮ 'ಬೆಂಕಿ ಕಾರುವವ')ವನಿಗೆ ಇಂಗ್ಲೀಷಿನಲ್ಲಿ fire-eater ಎಂಬ ಪದಗಳನ್ನು ಬಳಸುತ್ತಾರೆ. 'ಅಗ್ನಿ

ಭಕ್ಷಕ' ಆದರ ತತ್ ಪ್ರತಿ ಭಾಷಾಂತರ. (ಮೂಲತಃ fire-eaterನು ಬೆಂಕಿ ನುಂಗುವವನಂತೆ ತೋರಿಸಿಕೊಳ್ಳುವ ಜಾದೂಗಾರ.)

ಕೆಲವೊಮ್ಮೆ ವಿದೇಶಿ ಭಾಷೆಯ ಪದಗಳು ನಮ್ಮವೇ ಎಂದು ಭ್ರಮೆ ಹುಟ್ಟಿಸುವಂತಿರುತ್ತದೆ. ಉದಾಹರಣೆಗೆ **ಕರಾರುವಾಕ್ಕು** ಇದರ 'ವಾಕ್ಕು' ಸಂಸ್ಕೃತ **ವಾಕ್** (= ಮಾತು) ಎಂದು ಭ್ರಮಿಸಬಹುದು. ಖಚಿತ ಮಾತು ಎಂದು ತಾತ್ಪರ್ಯ. ಆದರೆ ವಸ್ತು ಸ್ಥಿತಿ ಹಾಗಿಲ್ಲ. ಇದು ಇಡಿಯಾಗಿ ಅರಬ್ಬಿ ಮೂಲದ ಉರ್ದು ಪದ – **ಕರಾರ್ – ವಾಕಈ**. ಅರ್ಥ ವಾಸ್ತವಿಕ ಅಥವಾ ನಿಶ್ಚಿತ ರೂಪದಲ್ಲಿ ಎಂಬುದಾಗಿ.

ಹೀಗೆ ಪದಗಳ ಮೂಲದಲ್ಲಿ ಆಯಾ ದೇಶ-ಭಾಷೆಗಳ ವಿಶಿಷ್ಟ ಭಾವನೆಗಳ ಪ್ರತಿಬಿಂಬ ಇದ್ದರೂ, ಹಿಂದೆ ಈ ಲೇಖಮಾಲೆಯಲ್ಲಿ ಉಲ್ಲೇಖಿಸಿರುವಂತೆ, ಕೆಲವೊಮ್ಮೆ ಒಂದಕ್ಕೊಂದು ಸಾಂಸ್ಕೃತಿಕವಾಗಿ ಭಿನ್ನವಾಗಿರುವ ಭಾಷೆಗಳಲ್ಲಿ ಕೂಡ ಆಶ್ಚರ್ಯಕರವಾದ ಕಲ್ಪನಾ ಸಾಮ್ಯ ಇರುವುದು ಗೋಚರವಾಗುತ್ತದೆ. ಉದಾಹರಣೆಗಾಗಿ ನಮ್ಮ **ಓ ದೇವರೇ!** ಆಶ್ಚರ್ಯ, ಅದ್ಭುತಗಳನ್ನು ವ್ಯಕ್ತಿಪಡಿಸುವ ಉದ್ಗಾರವಾಗಿ ಇದನ್ನು ಉಪಯೋಗಿಸುತ್ತೇವೆ. ಪಶ್ಚಿಮಕ್ಕೆ ತಿರುಗಿದರೆ ಇಂಗ್ಲೀಷಿನಲ್ಲಿ Oh God ಕೂಡ ಇಂಥದೇ ಸನ್ನಿವೇಶದಲ್ಲಿ ಉದ್ಗಾರವಾಚಕವಾಗಿ ಬಳಸಲ್ಪಡುತ್ತದೆ. ಹಾಗೆಯೇ ಅರಬ್ಬಿ ಮೂಲದ ಉರ್ದು **ಅಲ್ಲಾ ಹೋ ಅಕಬರ್** ಇದನ್ನು ರಣಘೋಷಣೆಯಾಗಿ ಪ್ರಯೋಗಿಸುತ್ತಿದ್ದುದು ನಮಗೆ ಕೇಳಿ ಗೊತ್ತು. ಇದನ್ನು ಆಶ್ಚರ್ಯವಾಚಕವಾಗಿ ಬಳಸುವುದೂ ಇದೆ. ನೇರ ಅರ್ಥ '**ದೇವರು ದೊಡ್ಡವನು!**' ಎಂದು.

ಸ್ವಲ್ಪ ಅಸಂಬದ್ಧ ಸೇರಿಸಬಹುದಾದರೆ 'ಮಹಾನಾಲ್ವರ' ಸಮ್ಮೇಳನದಲ್ಲಿ ನಿರೀಶ್ವರವಾದಿ ಸ್ಟಾಲಿನ್ನರು 'oh God!' ಎಂಬ ಉದ್ಗಾರವನ್ನು ಬಳಸಿದರೆಂದು ಯುದ್ಧಾಂತ್ಯದಲ್ಲಿ ವರದಿಯಾಗಿತ್ತು. ನಾಸ್ತಿಕರನ್ನೂ ದೇವರು ಬಿಡ!

## ೧೪೫

''**ನೀರಿನಲ್ಲಿ ಹೋಮ** ಮಾಡಿದ ಹಾಗೆ'' ಎನ್ನುವುದು ನಿರರ್ಥಕ ಪರಿಶ್ರಮವನ್ನು ಆಲಂಕಾರಿಕವಾಗಿ ವರ್ಣಿಸುವ ವಿಧಾನ. ಹೋಮ ಮಾಡುವುದು ಬೆಂಕಿಯಲ್ಲಿ; ಆಗ ಹೋಮದ್ರವ್ಯಗಳು ಸುಟ್ಟು ದೇವತೆಗಳಿಗೆ ತಲುಪುತ್ತವೆ. ನೀರಲ್ಲಿ ಮಾಡಿದರೆ ಅದು ವ್ಯರ್ಥ. ಇದರದೇ ಇನ್ನೊಂದು ರೂಪ **ಬೂದಿಯಲ್ಲಿ ಹೋಮ** ಎನ್ನುವುದು. ''ಮುಕುಂದಮಾಲಾ''ದಂಥ ಪ್ರಾಚೀನ ಸ್ತೋತ್ರದಲ್ಲಿ ''ಸರ್ವಂ **ಹುತಂ ಭಸ್ಮನಿ**'' (ಬೂದಿಯಲ್ಲಿ ಹೋಮವಾಯಿತು), ಎಂಬ ಮಾತು ಬರುತ್ತದೆ. ಈ ನುಡಿಕಟ್ಟನ್ನು ಇಂದು ಎಲ್ಲ ವರ್ಗಗಳವರೂ ಬಳಸುತ್ತಾರೆ. ಆದರೆ ಇದು ವೈದಿಕ ಪರಂಪರೆಗೆ ಸೇರಿದ್ದೆಂಬುದು ತುಸು ಮಾತ್ರ ಯೋಚಿಸಿದರೆ ತಿಳಿಯುವ ವಿಚಾರ. ಈ ಪರಂಪರೆಗೆ ಸೇರದ ಜನ ಇದೇ ಭಾಷೆಯಲ್ಲಿ ''**ಹೊಳೇಲಿ ಹುಣಸೇ ಹಣ್ಣು ತೊಳೆದಂಗೆ**'' ಎನ್ನುತ್ತಾರೆ. ಭಾಷಾರೂಢಿಗಳಲ್ಲಿ ಸಾಂಸ್ಕೃತಿಕ ಭೇದಗಳು ವ್ಯಕ್ತವಾಗುವ ಪರಿ ಇದು. ಇಲ್ಲಿ ಕೂಡ ಭೌಗೋಲಿಕ ಪರಿಸರ ಹಾಗೂ ಆಹಾರಕ್ರಮಗಳು ಪ್ರತಿಬಿಂಬಿತವಾಗುತ್ತವೆ. ಹತ್ತಿರ ಹೊಳೆ ಇಲ್ಲದವರಾಗಲಿ ಆಹಾರದಲ್ಲಿ ಹುಣಸೇ ಹಣ್ಣು ಬಳಸದ ಬಂಗಾಲಿಗಳಂಥ ಜನಾಂಗಗಳಾಗಲಿ ಹೊಳೆಯಲ್ಲಿ

ಹಣ್ಣು ತೊಳೆಯುವ ಕಲ್ಪನೆ ಮಾಡಲು ಸಾಧ್ಯವಿಲ್ಲ.

**ಇತಿಶ್ರೀ** ಹೇಳುವ ಮಾತು ಇದೇ ಈಗ ನಾನು ಓದುತ್ತಿರುವ ಪ್ರಮುಖ ಕೊಡಗು ವರ್ಗದ ಲೇಖಕರೊಬ್ಬರ ಹೊಸ ಗ್ರಂಥದಲ್ಲಿ ಬರುತ್ತದೆ. **ಮುಗಿತಾಯ** ಎಂಬರ್ಥದ ಈ ವಾಗ್ರೂಢಿ ವಿಶಿಷ್ಟ ಬ್ರಾಹ್ಮಣ ಹಿನ್ನೆಲೆಯದು. ಯಾವುದೇ ಧಾರ್ಮಿಕ ಸ್ತೋತ್ರ, ಪುರಾಣ ಇತ್ಯಾದಿ ಸಾಹಿತ್ಯವನ್ನು ಬರೆಯುವಾಗ ಅಥವಾ ಓದುವಾಗ ಒಂದು ಅಧ್ಯಾಯವೋ ಗ್ರಂಥವೋ ಕೊನೆಗೊಳ್ಳುವ ನಿಟ್ಟಿನಲ್ಲಿ ''ಇತಿ ಶ್ರೀಮದ್ರಾಮಾಯಣೇ ಸುಂದರಕಾಂಡೇ ಪಂಚಮಃ ಸರ್ಗಃ'' ಇತ್ಯಾದಿಯಾಗಿ ಕೊನೆಗೊಳಿಸುವುದು ರೂಢಿ. ಆದ್ದರಿಂದ **ಕೊನೆಗೊಳಿಸುವುದು ಇತಿಶ್ರೀ** ಎನಿಸಿತು. ಅದು ತನ್ನ ಕ್ಷೇತ್ರವನ್ನು ವಿಸ್ತಾರ ಮಾಡಿಕೊಂಡು ''ಆಸ್ತಿಯನ್ನು **ಮೂರು ವರ್ಷಗಳಲ್ಲಿ ಇತಿಶ್ರೀ** ಮಾಡಿದ'', ಇತ್ಯಾದಿಯಾಗಿ ಲೌಕಿಕ ವಿಷಯಗಳಿಗೂ ವ್ಯಂಗ್ಯವಾಗಿ ಅನ್ವಯವಾಗುತ್ತಿದೆ. ಇದರಂತೆಯೇ ಮೊದಲಿಂದ ಕೊನೆಯವರೆಗೆ ಎಂಬರ್ಥದಲ್ಲಿ **ಅಥದಿಂದ ಇತಿಯವರೆಗೆ** ಎನ್ನುವುದು ರೂಢವಾಗಿದೆ. ಗ್ರಂಥಾರಂಭದಲ್ಲಿ **ಅಥ** ಎನ್ನುವುದೂ ಗ್ರಂಥಾವಸಾನದಲ್ಲಿ **ಇತಿ** .... ಎನ್ನುವುದು ಸಂಸ್ಕೃತದಲ್ಲಿ ರೂಢಿ. (**ಅಥ** = ಇನ್ನುಮುಂದೆ; **ಇತಿ** = ಹೀಗೆಂದು). ಹೀಗೆಯೆ ಯಜ್ಞಪೂಜಾ ಕರ್ಮಗಳಿಗೆ ಸಂಬಂಧಿಸಿದ **ಅಧ್ವರ್ಯು** (= ಯಜ್ಞಗಳಲ್ಲಿ ವೇದಿಕೆ, ಅಗ್ನಿಕುಂಡ ಮೊದಲಾದವುಗಳನ್ನು ಕಟ್ಟುವ ಮೊದಲಾದ ಕೆಲಸಗಳ ವ್ಯವಸ್ಥಾಪಕ ಪುರೋಹಿತ) ಪದ. ಯಾವುದೇ ಕಾರ್ಯದಲ್ಲಿ ಮುಂದೆಬಿದ್ದು ವ್ಯವಸ್ಥೆ ಮಾಡುವವರೆಲ್ಲ ಈಗ ಅಧ್ವರ್ಯುಗಳೆಂದು ಕರೆಸಿಕೊಳ್ಳುತ್ತಾರೆ. (ಅಧ್ವರ = ಯಜ್ಞ). ಹೀಗೆಯೆ, **ಮಂಗಳ ಹಾಡುವುದು, ಷೋಡಶೋಪಚಾರ** (ದೇವರ ಪೂಜೆಯಲ್ಲಿ ಮಾಡುವ ೧೬ ವಿಧಿಗಳು; ಈ ಪದವನ್ನೀಗ ಬೈಯುವುದಕ್ಕೂ ವ್ಯಂಗ್ಯವಾಗಿ ಅನ್ವಯಿಸುತ್ತೇವೆ) ಇತ್ಯಾದಿ ಪದಗಳು ವೈದಿಕಾಚಾರದಿಂದ ಅವೈದಿಕ ಸನ್ನಿವೇಶಗಳಿಗೆ ವಲಸೆ ಹೋಗಿವೆ.

ಹೀಗೆ, ಕೆಲವೊಂದು ವಾಗ್ಧೋರಣೆಗಳು ಸಂಸ್ಕೃತಿ ಪರಿಸರಗಳ ಉತ್ಪತ್ತಿಗಳಾಗಿದ್ದರೆ ಕೆಲವೊಂದು ಮಾತುಗಳು ವಿಶ್ವವ್ಯಾಪಿ ಪ್ರತಿಧ್ವನಿಗಳನ್ನು ಹೊಂದಿವೆ. ನಾವು ಉಪಯೋಗವಿಲ್ಲದ, ಕೇಳುವವರಿಲ್ಲದ ಮೊರೆಗೆ **ಅರಣ್ಯರುದಿತ, ಅರಣ್ಯರೋದನ** (ಕಾಡಿನಲ್ಲಿ ಅಳುವುದು) ಎನ್ನುತ್ತೇವಲ್ಲ, ಇದು ಸಂಸ್ಕೃತದಲ್ಲಿ ಪಂಚತಂತ್ರದಷ್ಟು ಪುರಾತನ. ಭಾರತದ ಅನೇಕ ಭಾಷೆಗಳಲ್ಲಿ ಇದು ನೇರವಾಗಿ ಇಲ್ಲವೇ ಅನುವಾದ ರೂಪದಲ್ಲಿ ಸ್ವೀಕೃತವಾಗಿದೆ. ಇದೇ ನುಡಿಕಟ್ಟು ಒಂದು ಮಹಾಖಂಡದಾಚೆಗೆ ಇಂಗ್ಲೀಷಿನಲ್ಲಿ a cry in the wilderness ಎಂಬುದಾಗಿ ಕೇಳಿಬರುತ್ತದೆ. ಇದು ಪ್ರತಿಧ್ವನಿಯಲ್ಲ. ಅನುಭವ ಸಾಮ್ಯದಿಂದ ಹುಟ್ಟಿದ ಸಮಧ್ವನಿ. ಯಾಕೆಂದರೆ ಬೈಬಲ್ಲಿನ ಹೊಸ ಒಡಂಬಡಿಕೆಯಷ್ಟು ಹಿಂದೆಯೇ ಪಶ್ಚಿಮದಲ್ಲಿ ಈ ನುಡಿಕಟ್ಟು ಕಾಣಿಸುತ್ತದೆ. ಅರಣ್ಯಕ್ಕೆ ಸಂಬಂಧಿಸಿ ನಮ್ಮಲ್ಲಿ ಬಳಕೆಗೆ ಬಂದಿರುವ ಇನ್ನೊಂದು ವಾಗ್ಧೋರಣೆ (ಬಹಳ ಕಾಲದ ಕಷ್ಟಪರಂಪರೆ ಎಂಬರ್ಥದಲ್ಲಿ) **ಅರಣ್ಯವಾಸ** ಅಥವಾ **ವನವಾಸ**. ಇದು ಸ್ಪಷ್ಟವಾಗಿಯೇ ರಾಮಾಯಣ ಮಹಾಭಾರತಗಳಲ್ಲಿ ರಾಮನಿಗೂ ಪಾಂಡವರಿಗೂ ಒದಗಿದ ಸಂಕಟದ ಸಾರ್ವತ್ರೀಕರಣ. ಆದರೆ ತಡೆಯಿರಿ : ಇಂಗ್ಲೀಷಿನಲ್ಲಿ ಯಾವುದೇ ರಾಜಕೀಯ ಪಕ್ಷ ಅಧಿಕಾರ ಕಳೆದುಕೊಂಡು ಪ್ರಭಾವ ಹೀನವಾಗುವುದಕ್ಕೆ in the wilderness (ಅರಣ್ಯವಾಸ ಅನುಭವಿಸುವುದು) ಎನ್ನುತ್ತಾರೆ. ರಾಮಾಯಣ ಕಥೆಯ ಪ್ರಭಾವವಿಲ್ಲದೆಯೇ ಅಲ್ಲಿ ಈ ನುಡಿಕಟ್ಟು ಹುಟ್ಟಿದೆ. ಅರಣ್ಯಗಳು (ಮರಳುಗಾಡೂ

''ಅರಣ್ಯ''ವೇ) ಸರ್ವವ್ಯಾಪಿಗಳು. ಅವುಗಳ ಅಸ್ತಿತ್ವ ಭಾಷೆಗಳಲ್ಲಿ ವ್ಯಕ್ತವಾಗುವುದೂ ಹೆಚ್ಚು ವೇಳೆ ಒಂದೇ ತರಹ ಎನ್ನೋಣವೇ ? ಹಾಗೆಯೆ ಆಳುವವರು ಶತ್ರುಗಳಿಂದ ಸೋತರೆ ಅಡವಿಯಲ್ಲಿ ಅಡಗಿಕೊಳ್ಳುವುದೂ ಸಾರ್ವತ್ರಿಕವೆ ?

**ಕಚ್ಚೆಹರುಕ, ಕಚ್ಚೆಹರುಕಿ** ಎನ್ನುವುದು ಲಂಪಟ ಗಂಡು ಹೆಣ್ಣುಗಳನ್ನು ವ್ಯಂಗ್ಯವಾಗಿ ನಿರ್ದೇಶಿಸುವ ನುಡಿಕಟ್ಟುಗಳು. (ಈ ಹರುಕತನದ ಮಾತುಗಳ ಅರ್ಥ ವಿವರಿಸಲು ಮಕ್ಕಳೇನಾದರೂ ಕೇಳಿದರೆ ಹಿರಿಯರು ಪೇಚಿಗೆ ಸಿಲುಕುವಷ್ಟು ಅಶ್ಲೀಲವಾದ ನುಡಿಕಟ್ಟು ಇದು). ಹಿಂದುಗಳೇನೋ ಕಚ್ಚೆಹಾಕಿ ಧೋತರ – ಸೀರೆ ಉಡುವವರು ಅಥವಾ ಲುಂಗಿ ಉಡುವುದಾದರೆ ಒಳಗೆ ಲಂಗೋಟಿ (= ಕಚ್ಚೆ) ಹಾಕಿಕೊಳ್ಳುವವರು. ಆದರೆ ಮುಸ್ಲಿಂ ಆಢ್ಯ ಜನರು ಈ ವೇಷ ವಿಶೇಷವನ್ನು ಹಾಕಿಕೊಳ್ಳುವವರಲ್ಲ. ಅವರಲ್ಲಿ ಕೂಡ ಲಂಪಟರೂ ವ್ಯಭಿಚಾರಿಗಳೂ ಇದ್ದಾರಲ್ಲ. ಅವರು ಇಂಥವರನ್ನು ಹೇಗೆ ವ್ಯಂಜಿಸುತ್ತಾರೆ? **ಇಜಾರ್ ಬಂದ್‌ಕಾ ಢೀಲಾ** – ಇಜಾರಿನ (ಇದು ಪಾರಸೀಕ ಪದ) ಲಾಡಿ ಸಡಿಲಾಗಿರುವವನು ಎಂದು – ಇದರ ಅರ್ಥ. ಮುಸ್ಲಿಮರು ಇಜಾರು ಧರಿಸುವವರಾದ್ದರಿಂದ ಅವರಲ್ಲಿನ ಲಂಪಟರು ಸಡಿಲು ಕಚ್ಚೆಯವರಲ್ಲ, ಸಡಿಲು ಇಜಾರಿನವರು. ಇಂಥ ವ್ಯಂಗ್ಯ ಮಾತುಗಳು ಸಾಂಸ್ಕೃತಿಕ ಪರಿಸರಕ್ಕನುಗುಣವಾದ ವೈಶಿಷ್ಟ್ಯಗಳೊಡನೆ ಮಾತ್ರವಲ್ಲ, ವೃತ್ತಿ ಹಿನ್ನೆಲೆಯ ಮುದ್ರೆ ಹೊತ್ತುಕೊಂಡು ಕೂಡ ನಿರಂತರವಾಗಿ ಹುಲುಸು ಮೆದುಳುಗಳಿಂದ ಸೃಷ್ಟಿಯಾಗುತ್ತಲೇ ಇರುತ್ತವೆಯೆಂದು ತೋರುತ್ತದೆ. ಅಂಚೆ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದವರೊಬ್ಬರು ಕಚ್ಚೆ ಹಾಕಿಕೊಳ್ಳದೆ ಸೀರೆ ಉಡುವ ಸ್ತ್ರೀಯರನ್ನು **ಬುಕ್‌ಪೋಸ್ಟ್** ಎಂದು ಹೇಳುತ್ತಿದ್ದುದನ್ನು ನಾನು ಕೇಳಿದ್ದೇನೆ. ಬುಕ್ ಪೋಸ್ಟುಗಳನ್ನು ಅಂಟುಹಾಕಿ ಭದ್ರಪಡಿಸುವಂತಿಲ್ಲವೆಂದು ಹೇಳಿದರೆ ವ್ಯಂಗ್ಯದ ಅರ್ಥ ಸ್ಪಷ್ಟವಾಗುತ್ತದೆ. ಯಾರೂ ಎತ್ತಿ ಹಣಕಿ ಓದಬಹುದು !

ವ್ಯಂಗ್ಯದ ವಿಷಯ ಹಾಗಿರಲಿ. ನೇರ ಮಾತುಗಳಲ್ಲಿ ಕೂಡ ಮಾನವನ ವೃತ್ತಿಗಳಿಗೆ ಸಂಬಂಧಿಸಿದ ಭಾಷೆಗಳು ಸಂಪದ್ಭರಿತವಾದ ಉದಾಹರಣೆಗಳಿಗೆ ಲೆಕ್ಕವಿಲ್ಲ. ''**ಓತಪ್ರೋತ**ವಾಗಿ ಹಬ್ಬಿತ್ತು'' ಎನ್ನುವಾಗ ನಾವು ನೇಯ್ಗೆ ವೃತ್ತಿಯ ಪರಿಭಾಷೆಯನ್ನು ಬಳಸುತ್ತೇವೆ ಎನ್ನುವ ಪರಿವೆ ನಮಗಿರುವುದಿಲ್ಲ. **ಓತ + ಪ್ರೋತ = ಹಾಸು + ಹೊಕ್ಕು** = ನೇಯ್ಗೆಯಲ್ಲಿ ಉದ್ದಕ್ಕೆ ಮತ್ತು ಅಡ್ಡಕ್ಕೆ ಹೆಣೆದ ನೂಲೆಳೆಗಳು. ''ಪ್ರಬಂಧ **ಕಮ್ಮಟ** ಏರ್ಪಡಿಸಿದ್ದರು'' ಎಂದು ಪ್ರಬಂಧ ಬರೆಯುವ ಕಲೆಯಲ್ಲಿ ತರಬೇತಿ ಕೊಡುವ ವರ್ಗದ ಬಗ್ಗೆ ಹೇಳುವಾಗ **ಕಮ್ಮಾರ ಸಾಲೆ** (= ಕಮ್ಮಟ) ಕೆಲಸವನ್ನು ಬರವಣಿಗೆ ತರಬೇತಿಗೆ ಅನ್ವಯಿಸುತ್ತೇವೆ. ''**ಫಲಕಾರಿ**ಯಾಗಲಿಲ್ಲ'' ಎನ್ನುವಲ್ಲಿ ಕೃಷಿ ಅಥವಾ ತೋಟಗಾರಿಕೆಯಿಂದ ಶಬ್ದವನ್ನು ಸ್ವೀಕರಿಸಿದ್ದೇವೆ. ಹೆಂಡತಿಯನ್ನು **ಕ್ಷೇತ್ರ** ಎಂದು ಕರೆಯುವಾಗಲೂ ಕೃಷಿ ವ್ಯಾಪಾರದಿಂದ ಪದವನ್ನು ತೆಗೆದುಕೊಂಡಿದ್ದೇವೆ. ಕ್ಷೇತ್ರ = ಹೊಲ, ಗದ್ದೆ. ಹೆಂಡತಿ, ಗದ್ದೆ ಎರಡೂ ''ಬೀಜ'' ಬಿತ್ತುವ ಸ್ಥಾನಗಳು ! **ರಾಜಕೀಯ ರಂಗ** ಎನ್ನುವಾಗ ನೃತ್ಯ, ನಾಟಕ ಮೊದಲಾದ ಮನೋರಂಜನಾ ಸ್ಥಳಗಳಿಗಿರುವ ಹೆಸರನ್ನು ರಾಜಕೀಯ ಕ್ರಿಯೆಯ ಕಾಲ್ಪನಿಕ ಕ್ಷೇತ್ರಕ್ಕೆ ಅನ್ವಯಿಸುತ್ತೇವೆ; ಪರೋಕ್ಷವಾಗಿ ರಾಜಕೀಯದಲ್ಲಿ ಕೂಡ ಒಂದಿಷ್ಟು ನಾಟಕತನ ಇರುವ ಸಂಗತಿಯನ್ನೂ ಧ್ವನಿಸುತ್ತೇವೆ. ಇಂಗ್ಲೀಷಿನಲ್ಲಿ ಕೂಡ **ರಂಗ** ಎಂಬರ್ಥದ stage ಪದ ಲಕ್ಷಣಾವೃತ್ತಿಯಿಂದ ಇತರ ಕಾರ್ಯಕ್ಷೇತ್ರಗಳಿಗೆ ಉಪಯೋಗಿಸಲ್ಪಡುತ್ತದೆ.

ಕೆಲವೊಮ್ಮೆ ಶಬ್ದಗಳ ಜಾಡು ಸಿಕ್ಕಿದರೂ ಅವು ಎಲ್ಲಿಗೆ ನಮ್ಮನ್ನು ಒಯ್ಯುವವೆಂದು

ಹೇಳುವುದು ಸುಲಭವಾಗುವುದಿಲ್ಲ. ರವೀಂದ್ರರ **ಶಾಂತಿನಿಕೇತನ**ದಿಂದಾಗಿ **ನಿಕೇತನ** (= ವಸತಿ) ಶಬ್ದ ಸುಪರಿಚಿತವಾಗಿದೆ. ನಿಕೇತನಕ್ಕೆ ಈ ಹೆಸರು ಹೇಗೆ ಬಂತು? **ಕೇತನ**, **ನಿಕೇತನ** ಶಬ್ದಗಳ ಮುಖ್ಯ ಅರ್ಥ ಹೆಗ್ಗುರುತು, ಬಾವುಟ ಎಂದು. ಅಲ್ಲಿಂದ ಮನೆ, ವಾಸಸ್ಥಾನ ಎಂಬ ಅರ್ಥಕ್ಕೆ ಅದು ಹೇಗೆ ತಿರುಗಿತು? ಸಾಕಷ್ಟು (ಮಹಾಭಾರತದಷ್ಟು) ಪುರಾತನವಾದ ಈ ಪದಾರ್ಥದಿಂದ ನಾವು ಏನನ್ನು ನಿಗಮಿಸಬೇಕು? ದೂರದೂರ ಮನೆಗಳಿದ್ದ ಕಾಲದಲ್ಲಿ ಮನೆಗಳಿಗೂ ವಿಶಿಷ್ಟ ಗುರುತು ಅಥವಾ ಬಾವುಟವನ್ನು ಎದ್ದು ಕಾಣುವಂತೆ ಹಚ್ಚುತ್ತಿದ್ದರೆ? ಅರಮನೆಗಳಿಗೂ ದೇವಾಲಯಗಳಿಗೂ ರಥಗಳಿಗೂ ವಿಶಿಷ್ಟ ಗುರುತಿನ **ಕೇತನ**ಗಳನ್ನು ಹಚ್ಚುತ್ತಿದ್ದರೆಂಬುದು ಖಂಡಿತ. ಸಾಮಾನ್ಯ ಮನೆಗಳಿಗೂ ಹಚ್ಚುತ್ತಿದ್ದರೆ? ಅಥವಾ ಹಿರಿಮನೆಗಳಿಗೆ ಹಚ್ಚುತ್ತಿದ್ದು, ಇದರಿಂದ ಅವುಗಳಿಗೆ ನಿಕೇತನವೆಂಬ ಹೆಸರು ವ್ಯಾಪಕವಾದ ಮೇಲೆ ಸಾಮಾನ್ಯ ಮನೆಗಳಿಗೆ ಅದೇ ಹೆಸರು ಬಳಕೆಗೆ ಬಂತೇ?

೧೪೬

ಭಾಷೆಯಿಂದ ಭಾಷೆಗೆ ಶಬ್ದಗಳು ಎರವಲು ಹೋದಾಗ ಬಹುತರವಾಗಿ ಅವುಗಳನ್ನು ಗುರುತಿಸಲು ಸಾಧ್ಯವಾಗುತ್ತದೆ. ಆದರೆ ಕೆಲವೊಮ್ಮೆ ಈ ಕೆಲಸ ದುಷ್ಕರ. ಉದಾಹರಣೆಗೆ ತಮಿಳಿನಲ್ಲಿ **ಅವೈ** ಎಂಬ ಪದ ಇದೆ. ಇದರ ಅರ್ಥ **ಸಭೆ**. ಆಗಲಿ, ಅದಕ್ಕೇನು ಎನ್ನುತ್ತೀರಿ? ಆದರೆ ಅದು **ಸಭಾ** ಶಬ್ದದ್ದೇ ತದ್ಭವ ಎಂದು ಹೇಳಿದರೆ ಮಾತ್ರ ನಂಬುವುದು ಕಷ್ಟವಾಗುತ್ತದೆ. ಇದಕ್ಕೆ ಕಾರಣ ತಮಿಳು ಭಾಷೆಯಲ್ಲಿ ಸಂಸ್ಕೃತದ 'ಸ' ಕಾರವೂ ಇಲ್ಲ; 'ಭ' ಕಾರವೂ ಇಲ್ಲ. ಆದ್ದರಿಂದ ಎರವಲು ಪದವನ್ನು ತಮ್ಮ ವರ್ಣಪದ್ಧತಿಗೆ ಒಗ್ಗುವಂತೆ ಅವರು ಬದಲಾವಣೆ ಮಾಡಿಕೊಂಡರು. 'ಸ' ಕಾರವನ್ನು ಕೈಬಿಟ್ಟರು; ಅದರಲ್ಲಿನ 'ಅ' ಎಂಬ ಸ್ವರವನ್ನು ಮಾತ್ರ ಉಳಿಸಿಕೊಂಡರು. 'ಭಾ' ತಮಿಳಿನಲ್ಲಿ ಕನ್ನಡದಲ್ಲಿನಂತೆ 'ಭೆ' ಆಗಿ, 'ಭ' ತಮಿಳಿನಲ್ಲಿಲ್ಲದ್ದರಿಂದ ಅದನ್ನು ಹತ್ತಿರದ 'ವ' ಕಾರಕ್ಕೆ ತಿರುಗಿಸಿಕೊಂಡರು. (ಭ-ವಗಳ ಅದಲು ಬದಲು ತಮಿಳಿನಲ್ಲಿ ಮಾತ್ರವಲ್ಲ, ಬಂಗಾಲಿಯಲ್ಲೂ ಆಗುತ್ತದೆ. ಅವರು 'ಅಭಿಮನ್ಯು'ವನ್ನು 'ಅವಿಮನ್ಯು' ಎಂದು ಬರೆಯುವುದುಂಟು). ಈ 'ಸ' ಕಾರದ ಅಭಾವದಿಂದಾಗಿ ತಮಿಳರು **ಸಂಧಿ** ಪದವನ್ನು **ಅಂತಿ**ಯಾಗಿ ಮಾಡಿಕೊಂಡು 'ಅಂದಿ' ಯೆಂದು ಓದುತ್ತಾರೆ. **ಸಹಸ್ರ** ಎಂಬುದು **ಆಯಿರ** ಆಗುತ್ತದೆ. (ಹೀಗೆ ಚತುಸ್ಸಹಸ್ರ ಎಂಬುದು ತಮಿಳಿನಲ್ಲಿ **ನಾಲಾಯಿರ** ಆಗುತ್ತದೆ. "ನಾಲಾಯಿರ ಪ್ರಬಂಧ" ಎಂಬ ಪವಿತ್ರ ಗ್ರಂಥ ತಮಿಳಿನಲ್ಲಿದೆ). ತಮಿಳಿನಲ್ಲಿ 'ಷ' ಕೂಡ ಇಲ್ಲ. ಆದ್ದರಿಂದ 'ಆಷಾಢ' **ಆಟಿ** ಆಗಿಬಿಡುತ್ತದೆ. (ಈ ಪದ ತುಳುವಿನಲ್ಲಿ ಕೂಡ ಅದೇ ಅರ್ಥದಲ್ಲಿದೆ.) ಉತ್ತರ ಕನ್ನಡಿಗರು ಉಪಾಕರ್ಮ (ಜನಿವಾರ ಹಾಕುವ ಹಬ್ಬ)ವನ್ನು **ಶ್ರಾವಣಿ** ಎನ್ನುತ್ತಾರೆ. (ಅದು ಶ್ರವಣ ನಕ್ಷತ್ರವುಳ್ಳ ಪೂರ್ಣಿಮೆಯಂದು ನಡೆಯುತ್ತದೆ.) ತಮಿಳರು ಅದನ್ನು **ಆವಣಿ** ಎನ್ನುತ್ತಾರೆ. ತಮಿಳಿನಷ್ಟು ಕಡಿಮೆ ವರ್ಣಗಳು ತುಳುವಿನಲ್ಲಿಲ್ಲ. ಆದರೂ ಕೆಲ ಅಕ್ಷರಗಳು ತುಳು, ಅಥವಾ ಒಟ್ಟೇ ದ್ರಾವಿಡ ನಾಲಗೆಗೆ ಒಗ್ಗುವುದಿಲ್ಲ. ಆದ್ದರಿಂದ **ಫಾಲ್ಗುನ** ತುಳುವಿನಲ್ಲಿ **ಪಗ್ಗು** ಆಗಿಬಿಡುತ್ತದೆ, **ವೈಶಾಖ – ಬೇಶ, ಶ್ರಾವಣ – ಸೋಣ, ಮಾಘ – ಮಾಗಿ** ಅಥವಾ **ಮಾಯಿ** ಆಗಿಬಿಡುತ್ತವೆ. ಭಾರತದ ಹೊರಗಿನ ಭಾಷೆಗಳಲ್ಲಂತೂ ಕೇಳುವುದೇ ಬೇಡ. **ಧ್ಯಾನ** ಜಪಾನಿ

ಭಾಷೆಯಲ್ಲಿ **ಝೆನ್** (zen) ಎಂದು ಪಲ್ಲಟ ಹೊಂದುತ್ತದಲ್ಲ. ಚೀನಿ ಭಾಷೆಯಲ್ಲಿ ಕೂಡ ಸಂಸ್ಕೃತದ ಅನೇಕ ಪದಗಳು ಗುರುತಿಸಲಾರದಷ್ಟು ಬದಲಾಗುತ್ತದೆ. ತಮಿಳಿಗೆ ಮತ್ತೆ ತಿರುಗುವುದಾದರೆ ಸಂಸ್ಕೃತ **ಕಾವ್ಯ** ಅಲ್ಲಿ **ಕಾಪ್ಪಿಯಮ್** ಆಗುವುದು ಒಂದು ಸ್ವಾರಸ್ಯ. (ದಿವಂಗತ ಗೋವಿಂದ ಪೈಗಳು ನಮ್ಮ ಕಾವ್ಯ ಅನೇಕ ವೇಳೆ 'ಕಾಪ್ಯ' ಎಂದು ತಮ್ಮನ್ನು ಸೇರಿಸಿಕೊಂಡು ತಮಾಷೆ ಮಾಡುತ್ತಿದ್ದರು. 'ಕಾಪ್ಯ' ಎಂದರೆ ಕಪಿಚೇಷ್ಟೆ). ಕೆಲವೇಳೆ ಭಾಷಾ ನಿಯಮಗಳು ಶಬ್ದಗಳನ್ನು ತುಂಬಾ ಬದಲಾಯಿಸುವುದುಂಟು. ತಮಿಳಿನಲ್ಲಿ ರ, ಲ ಇವೆರಡೂ ಇವೆ; ಆದರೆ ಅವು ಶಬ್ದದಲ್ಲಿ ಮೊದಲಲ್ಲಿ ಇರತಕ್ಕದ್ದಲ್ಲ. ಆದ್ದರಿಂದ ಅವಕ್ಕೊಂದು ಸ್ವರದ ಊರೆಗೋಲು ಕೊಟ್ಟು **ಅರಾಮನ್** (ರಾಮ) **ಉಲಕು** (ಲೋಕ) ಎಂದು ಬದಲಾಯಿಸಿಕೊಳ್ಳುತ್ತಾರೆ. ಸಂಸ್ಕೃತದ ಕ್ಲಿಷ್ಟ ಒತ್ತಕ್ಷರಗಳನ್ನು ಸರಳೀಕರಿಸುವ ಒಲವಿನಿಂದಾಗಿ ಈ ತದ್ಭವಗಳು ಇನ್ನಷ್ಟು ದಿಕ್ಕು ತಪ್ಪಿಸುತ್ತವೆ. ಸಂಸ್ಕೃತ **ಬ್ರಾಹ್ಮಣನೇ** ತಮಿಳು **ಪಾರ್ಪ** (ಕನ್ನಡ-ಪಾರ್ವ) ಆಗಿದ್ದಾನೆಂದು ಸುನೀತಿಕುಮಾರ ಚಟರ್ಜಿ ಹೇಳುತ್ತಾರೆ. ಆದರೆ ''ಪಾರ್ವ'' ಎಂಬುದು ದ್ರಾವಿಡ **ಪಾರ್** (ಕಾಣು) ಎಂಬುದರಿಂದ ಹುಟ್ಟಿತೇ ಸಂಸ್ಕೃತದಿಂದಲೇ ಬಂತೇ ಎಂಬುದು ಗಲಿಬಿಲಿಯ ಪ್ರಶ್ನೆಯಾಗಿ ಬಿಡುತ್ತದೆ.

ಸಂಸ್ಕೃತವೇನು ಪರಭಾಷೆಗಳಿಂದ ಪದಗಳನ್ನು ಸೇರಿಸಿಕೊಳ್ಳುವುದರಲ್ಲಿ ಹಿಂದಿಲ್ಲ. ಅದಕ್ಕೂ ಇಂಗ್ಲೀಷಿನ ಹಾಗೆ ಶಬ್ದಗಳ ವಿಷಯದಲ್ಲಿ ಅಗಾಧ ಹಸಿವು. ಅದೂ ಕೂಡ ಪರಭಾಷಿಕ ಶಬ್ದಗಳನ್ನು ತನ್ನ ನಾಲಗೆಯ ನೇರಕ್ಕೆ ತಿರುಚಿಕೊಂಡು, ಕೆಲವೊಮ್ಮೆ ಪತ್ತೆಯೇ ಹತ್ತದಂತೆ ಶಬ್ದಗಳನ್ನು ತೆಗೆದುಕೊಳ್ಳುತ್ತದೆ. ಕಿಟ್ಟೆಲ್ ಕೋಶದಲ್ಲಿಯೂ ದ್ರಾವಿಡ ಭಾಷಾ ತುಲನಾತ್ಮಕ ಕೋಶದಲ್ಲಿಯೂ ಇಂಥ ಶಬ್ದಗಳನ್ನು ಹೆಕ್ಕಿ, ಊಹಿಸಿ, ಕೊಡಲಾಗಿದೆ. ಉದಾಹರಣೆಗೆ ಸಂಸ್ಕೃತದ **ತೋಯ** (= ನೀರು) ದ್ರಾವಿಡದ **ತುಯ್** (ಒದ್ದೆಯಾಗು) ಎಂಬುದರಿಂದ ಹುಟ್ಟಿರಬಹುದೆಂದು ಸುಲಭವಾಗಿ ನಮಗೆ ಹೊಳೆಯುವುದಿಲ್ಲ. ''ನೀರಜ'', ''ನೀರದ'' ಮೊದಲಾದ ಶಬ್ದಗಳನ್ನು ಸಂಸ್ಕೃತದಲ್ಲಿ ಹುಟ್ಟಿಸಿದ **ನೀರ** ಶಬ್ದ ದ್ರಾವಿಡ **ನೀರ್** ಇನಿಂದ ಹುಟ್ಟಿತೆಂಬುದು ಸುಮಾರು ಖಚಿತ.

ಒಂದು ಭಾಷೆಯಿಂದ ಶಬ್ದ ಸ್ವೀಕರಿಸಿದಾಗ ಆ ಇನ್ನೊಂದು ಭಾಷೆ ಅದರ ಮೂಲಾರ್ಥಕ್ಕಿಂತ ಸಾಕಷ್ಟು ಭಿನ್ನ ಅಥವಾ ವಿಶೇಷಿತ ಅರ್ಥದಲ್ಲಿ ಬಳಕೆಗೆ ತರುವುದುಂಟು. **ಆಯಾ** ಎಂಬ ಶಬ್ದ ಆಸ್ಪತ್ರೆಗಳನ್ನು ಕಂಡವರಿಗೆಲ್ಲ ಪರಿಚಿತ. 'ನರ್ಸ್'ಗಳಿಗಿಂತ ಕೆಳಮಟ್ಟದ ಪರಿಚಾರಿಕೆ ''ಆಯಾ''. ಈ ಶಬ್ದ ನಮಗೆ ಈ ಅರ್ಥದಲ್ಲಿ ಇಂಗ್ಲೀಷಿನಿಂದ ಬಂದದ್ದು. ಅವರು ತೆಗೆದುಕೊಂಡದ್ದು ಪೋರ್ಚುಗೀಸಿನಿಂದ. ಅಲ್ಲಿ ಆ ಶಬ್ದಕ್ಕೆ (aia) **ದಾದಿ** ಅಥವಾ ನರ್ಸ್ ಎಂದೂ ಮಕ್ಕಳನ್ನು ಆರೈಕೆ ಮಾಡುವುದರೊಡನೆ ಅವುಗಳಿಗೆ ಶಿಕ್ಷಣ ಕೊಡುವ ''ಗವರ್ನೆಸ್'' ಎಂದೂ ಅರ್ಥ. ನಮ್ಮಲ್ಲಿ ಬರೀ **ಪರಿಚಾರಿಕೆ**ಯೆಂಬ ಅರ್ಥದಲ್ಲಿ ಮಾತ್ರ ಚಲಾವಣೆಯಲ್ಲಿದೆ. ನೆರೆಯ ಸ್ಪಾನಿಶ್ ಭಾಷೆಗೂ ಆ ಶಬ್ದ ಹೋಗಿದೆ. ಅಲ್ಲಿ **ಪರಿಚಾರಿಕೆ**ಯೆಂಬ ಅರ್ಥವೇ ಇಲ್ಲ ಎಂದು ಕೋಶಗಳಿಂದ ತಿಳಿಯುತ್ತದೆ. ಅಲ್ಲಿ ಅವಳು ಗವರ್ನೆಸ್, ಪಾಠ ಹೇಳಿಕೊಡುವವಳು, ಮನೆ ಮಾಸ್ತರಣಿ, ಮಾತ್ರ. ಇಷ್ಟಕ್ಕೂ ಮೀರಿ ಈ ಶಬ್ದ ಹೊರಟದ್ದು ಭಾರತದಿಂದಲೇ. ಉರ್ದು ಕೋಶಗಳೂ ಅದು ಪಾರಸೀಕ ಶಬ್ದವೆನ್ನುತ್ತವೆ. ಪಾರಸೀಕದಲ್ಲಿ ಅವಳು ಮಕ್ಕಳಿಗೆ ಹಾಲು ಕುಡಿಸುವುದೇ ಮೊದಲಾದ ಸೇವೆಗಳನ್ನು ಮಾಡುವ ದಾದಿ. ಅಥವಾ ಉರ್ದುವಿನಲ್ಲಿ ಅದೇ ಅರ್ಥದಲ್ಲಿ **ಆಯಾ**ವನ್ನು

ಬಳಸುತ್ತಾರೆ ಎನ್ನಬಹುದು. ಯುರೋಪಿಯನ್ನರು ಸಂಸಾರ ಸಮೇತ ಇಲ್ಲಿ ನೆಲೆಸಿದಾಗ ಇಲ್ಲಿ ಅಗ್ಗವಾಗಿ ಕೆಲಸಕ್ಕೆ ಸಿಗುವ ಇಂಥ ಪರಿಚಾರಿಕೆಯನ್ನು ನೇಮಿಸಿಕೊಳ್ಳುತ್ತಿದ್ದರು. ಅವರಿಗಿರುವ ಉರ್ದು ಅಭಿದಾನವನ್ನೇ ಸ್ವೀಕರಿಸಿ ಪೋರ್ಚುಗೀಸ್ ಭಾಷೆಯಲ್ಲಿ ಅದನ್ನು ಸೇರಿಸಿಕೊಂಡರು. ಇತರ ಯುರೋಪಿಯನ್ ಭಾಷೆಗಳು ಸ್ವಲ್ಪ ಹೆಚ್ಚು ಕಡಿಮೆ ಅರ್ಥದಲ್ಲಿ ಅದನ್ನು ಸ್ವೀಕರಿಸಿಕೊಂಡವು. ಹೀಗೆ ಆಕ್ಸ್‌ಫರ್ಡ್ ಇಂಗ್ಲೀಷ್ ಡಿಕ್ಷನರಿಯಲ್ಲಿ ಇದು ಆಂಗ್ಲೊ-ಇಂಡಿಯನ್ ಪದವೆಂದು ನಮೂದಿಸಿದೆ.

**ನರ್ಸ್** (nurse) ಎಂಬ ಇಂಗ್ಲಿಷ್ ಶಬ್ದವನ್ನು ನಾವು ಸ್ವೀಕರಿಸಿದ್ದೇವಲ್ಲ. ಬಹುತರವಾಗಿ ಆಸ್ಪತ್ರೆಯಲ್ಲಿ ಅಥವಾ ಖಾಸಗಿಯಲ್ಲಿ ರೋಗಿಗಳ ಪರಿಚಾರಿಕೆಯರಾಗಿರುವ ತರಬೇತಿ ಹೊಂದಿದ ಹೆಣ್ಣು ಮಕ್ಕಳಿಗೆ ಅಭಿದಾನವಾಗಿ ನಾವೀಗ ಅದನ್ನು ಪ್ರಯೋಗಿಸುತ್ತೇವೆ. ಇಂಗ್ಲೀಷಿನಲ್ಲಿ nurse ಧಾತುವಿಗೆ ''ಮೊಲೆಯೂಡಿಸಿ ಸಾಕು'' ಎಂಬ ಪ್ರಧಾನ ಅರ್ಥವಿದ್ದು nutrier ಎಂಬ ಲ್ಯಾಟಿನ್ ಧಾತುವಿನಿಂದ (= ಆಹಾರ ಕೊಟ್ಟು ಸಾಕು) ಅದು ಹುಟ್ಟಿದೆ. ಹೀಗೆ ಇಂಗ್ಲೀಷಿನಲ್ಲಿ wet nurse ಎಂಬ ಪದವಿದೆ. ತಾಯಿಗೆ ಬದಲಾಗಿ ಮಕ್ಕಳಿಗೆ ಮೊಲೆಯೂಡಿಸುವ ದಾದಿಗೆ ಆ ಹೆಸರು. ಯೌವನ ಕೆಡಬಾರದೆಂಬುದಕ್ಕಾಗಿ ಶ್ರೀಮಂತ ಮಹಿಳೆಯರು ಇಂಥ ದಾದಿಯರನ್ನಿಟ್ಟುಕೊಳ್ಳುವ ಪದ್ಧತಿ ಭಾರತದಲ್ಲಿಯೂ ಇತ್ತು. ರಾಜಪುತ್ರರನ್ನು ತುಚ್ಛೀಕರಿಸುತ್ತ, ದಾಸಿಯರ ಮೊಲೆಯನ್ನುಂಡು ಬೆಳೆದವರಾದ ನೀವು ಕ್ಷುಲ್ಲಕತನವನ್ನು ಅಲ್ಲಿಂದಲೇ ಮೈಗೂಡಿಸಿಕೊಂಡಿದ್ದೀರೆಂದು ಕವಿಗಳು ಹೇಳಿದ್ದುಂಟು.

ಇನ್ನು ನಮ್ಮದೇ ಪದವಾದ **ದಾದಿಯ** ಮೂಲ ಶೋಧಿಸಹೋದರೆ ಅದು ಸಂಸ್ಕೃತದ ಧಾತ್ರಿಯಿಂದ ಹೊರಟದ್ದು ಗೋಚರವಾಗುತ್ತದೆ. ಪ್ರಧಾನವಾಗಿ ಇದರರ್ಥ ರಕ್ಷಕಿ, ಸಾಕುವಾಕೆ ಎನ್ನುವುದರೊಡನೆ, **ಮೊಲೆ ಕೊಡುವ ದಾಸಿ**, ಸೂಲಗಿತ್ತಿ ಇತ್ಯಾದಿ ಅರ್ಥಗಳೂ ಅದಕ್ಕಿವೆ. ಕೆಲ ನಿರುಕ್ತಿಕಾರರು ಅದನ್ನು 'ಧೇ' (= [ಮೊಲೆ] ಚೀಪು) ಧಾತುವಿಗೂ ಒಯ್ದು ಮುಟ್ಟಿಸುತ್ತಾರೆ. ಮೊಲೆ ಕೊಡುವವಳೆಂದು ಇದರ ತಾತ್ಪರ್ಯವಾಗುತ್ತದೆ. ಅದರಿಂದಲೇ **ಧೇನು** (ಹಾಲು ಕೊಡುವಂಥಾ ಆಕಳು) ಎಂಬ ಶಬ್ದ ಉಂಟಾದ್ದು.

ಒಂದು ಕುತೂಹಲದ ವಿಷಯವೆಂದರೆ ನಟನಿಗೆ **ಧಾತ್ರೀಪುತ್ರ** (ದಾದಿಯ ಮಗ) ಎಂಬ ಹೆಸರಿರುವುದು. ಅರಮನೆಯ ದಾದಿಯರ ಮಕ್ಕಳು ಆ ಕಾಲದಲ್ಲಿ ನಟರಾಗುತ್ತಿದ್ದರೆಂದು ಇದರಿಂದ ತರ್ಕಿಸಬಹುದೇನೋ.

೧೪೭

**ನಾತೆ** ಎಂಬ ಶಬ್ದವೊಂದು ಉತ್ತರ ಕರ್ನಾಟಕದಲ್ಲಿ ಬಳಕೆಯಲ್ಲಿದೆ. ಈಚೆಗೆ ಅದರ ಉಪಯೋಗ ಸ್ವಲ್ಪ ಕಡಿಮೆಯಾಗಿದ್ದರೂ ಮೊನ್ನೆ ನರಗುಂದದ ಜಿಲ್ಲಾ ಸಮ್ಮೇಳನಾಧ್ಯಕ್ಷತೆ ವಹಿಸಿದ್ದ ಶ್ರೀ ಎನ್ಕೆಯವರ ಭಾಷಣದಲ್ಲಿ ಅದು ತಲೆ ಹಾಕದೆ ಇರಲಿಲ್ಲ. ''ಹಿರಿಯನ ನಾತೇದಲ್ಲಿ'' ಎಂದು ಅವರು ಕೆಲ ಸಲಹೆಗಳನ್ನು ಕೊಟ್ಟರು. ಈ ಶಬ್ದ ಸಹಜವಾಗಿ ಮರಾಠಿಯಿಂದ ನಮಗೆ ಬಂದದ್ದೆಂಬುದು ಎನ್ಕೆಯವರ ಪ್ರಯೋಗದಿಂದಲೇ ತರ್ಕಿಸಬರುವಂತಿದೆ. ಮರಾಠಿಯಲ್ಲಿ **ನಾತೇಂ** ಎಂದರೆ (ರಕ್ತ) ಸಂಬಂಧ; **ನಾತೇದಾರ್** – ಸಂಬಂಧಿಕ; **ನಾತೂ** ಎಂದರೆ ಮೊಮ್ಮಗ. ಹಿಂದಿಯಲ್ಲಿ ಕೂಡ **ನಾತಾ** ರಕ್ತ ಸಂಬಂಧ,

**ನಾತೀ, ನಾತಿನ್** ಎಂದರೆ ಕ್ರಮವಾಗಿ ಮಗಳ ಮಗ, ಮೊಮ್ಮಗಳು. ಬಂಗಾಲಿಯಲ್ಲಿ ಕೂಡ **ನಾತೀ** ಮೊಮ್ಮಗ.

ಈ ಶಬ್ದವನ್ನು ಎತ್ತಿಕೊಳ್ಳಲು ಕಾರಣ ಅದರ ಪುರಾತನ ''ನಾತೆಯೇ''. ಇದಕ್ಕೆ ಮೂಲವಾದ ಸಂಸ್ಕೃತದ ''ನಪ್ತಾ'', ''ನಪಾತ್'' ಪದಗಳು ಋಗ್ವೇದದಷ್ಟು ಹಿಂದೆ ಹೋಗುತ್ತವೆ. ಮಾತ್ರವಲ್ಲ, ಭಾರೋಪ್ಯ ಭಾಷಾ ಕುಲದಲ್ಲಿ ಹಳೆಯ ಪಾರಸೀಕ (ನಪಾತ್), (ಆಧುನಿಕ ಪಾರಸೀಕದಲ್ಲಿ ''ನವಾಸಃ''), ಲ್ಯಾಟಿನ್ (nepot) ಇತ್ಯಾದಿ ಭಾಷೆಗಳಲ್ಲಿ ಅಲ್ಲದೆ ಪ್ರಾಚೀನ ಅವೆಸ್ತನ್, ಗ್ರೀಕ್, ಆಂಗ್ಲೋಸ್ಯಾಕ್ಸನ್, ಜರ್ಮನ್ ಮೊದಲಾದವುಗಳಲ್ಲಿ ಕೂಡ ಇದರಿಂದ ಜನಿಸಿದ ಪದಗಳುಂಟು. ಮಕ್ಕಳು, ಸೋದರಳಿಯಂದಿರು, ಮೊಮ್ಮಕ್ಕಳಾದಿಯಾಗಿ ರಕ್ತ ಸಂಬಂಧಿ, ವಂಶೋದ್ಭೂತರನ್ನು ಅದು ಒಳಗೊಳ್ಳುತ್ತದೆ. ಇಂಗ್ಲೀಷಿನ nephew (ಸೋದರಳಿಯ ಅಥವಾ ಅಣ್ಣ-ತಮ್ಮಂದಿರ ಮಗ) ಇವರ ಪರಿಧಿಯಲ್ಲಿ ಸೇರಿದ್ದಾನೆ. ಹೀಗೆ ಅದು ಆರ್ಯ ಪ್ರಪಂಚದ ಪ್ರಾಚೀನತಮ ಸಂಬಂಧ ವಾಚಕಗಳಲ್ಲೊಂದಾಗಿದೆ.

ಈ ಪದದ ಯೌರೋಪ್ಯ ಶಾಖೆ ಆಧುನಿಕ ರಾಜಕೀಯಕ್ಕೆ nepotism ಎಂಬ ಪದವನ್ನು ಪ್ರದಾನ ಮಾಡಿದ್ದು ಕುತೂಹಲದಾಯಕ ವಿಷಯ. ತಮ್ಮ ಬಂಧು ಬಾಂಧವರಿಗೆ ನೌಕರಿ, ಅಧಿಕಾರ ಮೊದಲಾದವುಗಳನ್ನು ಕೊಡುವ ಪ್ರವೃತ್ತಿ **ನೆಪಾಟಿಸಂ**. ಹೀಗೆ, ಅದು ಸರಿಯಾಗಿ ಇಂಗ್ಲಿಷ್ ಬಾರದವರೂ ''ಕೇಳಿಬಲ್ಲೆ'' ಎನ್ನಬಹುದಾದ ಶಬ್ದ. ಅದರ ಕತೆಯೂ ಸ್ವಾರಸ್ಯ. ಕ್ರೈಸ್ತ ಧರ್ಮದ ಪರಮೋಚ್ಚ ಪುರೋಹಿತರಾದ ಪೋಪರು ಈಗಿನಷ್ಟು ಶುದ್ಧ ಚರಿತ್ರರಾಗಿಲ್ಲದಿದ್ದ ಮಧ್ಯಯುಗದಲ್ಲಿ ಅವರು ತಮಗೆ ಹುಟ್ಟಿದ ಅವೈಧ ಪುತ್ರರಿಗೆ ಪದಾಧಿಕಾರಗಳನ್ನು ದಯಪಾಲಿಸುತ್ತಿದ್ದರು. ಸೌಜನ್ಯದ ಸಲುವಾಗಿ ಇಂಥ ಮಕ್ಕಳಿಗೆ nephews ''ನಪ್ತರು'' ಎನ್ನುತ್ತಿದ್ದರಂತೆ. ಹೀಗಾಗಿ ಈ ಪ್ರವೃತ್ತಿಗೆ nepotism ಎಂಬ ಹೆಸರು ಬಿತ್ತು. ಹೀಗೆ nepotism ಸುಮಾರು ಐನೂರು ವರ್ಷಗಳ ಚರಿತ್ರೆಗೆ ಭಾಗಿಯಾಗಿದೆ! ಈಗಿನ ಕಲಿಯುಗದವರು ಅದನ್ನು ಆಚರಿಸಿದರೇನು ಪಾಪ! ಅದರರ್ಥ ಬಂಧು ಪಕ್ಷಪಾತ.

ಸಂಸ್ಕೃತದಲ್ಲಿ ಉತ್ತ ಗದ್ದೆಗೆ **ಕೇದಾರ** ಎಂಬ ಹೆಸರಿದೆ. ಮನು, ಮಹಾಭಾರತಗಳಲ್ಲಿ ಈ ಪದ ಪ್ರಯೋಗವಾಗಿದೆಯಾದ್ದರಿಂದ ಸಾಕಷ್ಟು ಹಳೆಯದು. ಆದರೆ ಮೋನಿಯರ್ ವಿಲಿಯಮ್ಸ್ ಕೋಶ ಇದಕ್ಕೆ ನಿಷ್ಪತ್ತಿ ಕೊಡುವುದಿಲ್ಲ. ಇದು ಹೇಗೆ ಹುಟ್ಟಿರಬಹುದು? ಕನ್ನಡದಲ್ಲಿ (ಭತ್ತದ) ಗದ್ದೆಗೆ **ಕೆಯ್** ಎಂಬ ಶಬ್ದ ಇತ್ತು. ಈಗ ಇದು ಹೆಚ್ಚು ಬಳಕೆಯಲ್ಲಿ ಇಲ್ಲವಾದರೂ ತುಳುವಿನಲ್ಲಿ ಬೆಳೆದು ನಿಂತ ಭತ್ತದ ಪೈರಿಗೆ ಆ ಹೆಸರಿದೆ. ತಮಿಳು ಆದಿಯಾಗಿ ಅನೇಕ ದಕ್ಷಿಣೋತ್ತರ ದ್ರಾವಿಡ ಭಾಷೆಗಳಲ್ಲಿ ಇದಕ್ಕೆ ಸಂವಾದಿ ಪದಗಳಿವೆ. ಅತ್ತ ಸಂಸ್ಕೃತದಲ್ಲಿ **ದಾರ** ಎಂಬ ಪದ ಕೂಡ ಉತ್ತ ಗದ್ದೆ ಎಂಬರ್ಥ ಕೊಡುತ್ತದೆಂದು ಆಪಟೆ ಸಂಸ್ಕೃತ-ಇಂಗ್ಲಿಷ್ ಕೋಶ ಹೇಳುತ್ತದೆ. ನಮ್ಮ ನೆರೆಯ ಪಾರಸೀಕ ಭಾಷೆಯಲ್ಲಿ **ಜಾರ್** ಎಂದರೆ ಕೃಷಿ ಮಾಡಿದ ಭೂಮಿ, ತೋಟ, ಮೈದಾನ. (ಉದಾ : ಗುಲ್‌ಜಾರ್ ಎಂದರೆ ಹೂದೋಟ). ನನಗನಿಸುವುದೆಂದರೆ, **ಕೇದಾರ** ಎಂಬುದು ಒಂದೇ ಅರ್ಥದ ದ್ರಾವಿಡ **ಕೆಯ್** ಮತ್ತು ಸಂಸ್ಕೃತ **ದಾರ** ಸೇರಿದ ದ್ವಂದ್ವ ಪದ ಇರಬೇಕು. ಇಂಥ ಜೋಡಿ ಪದಗಳು ಭಾಷೆಗಳಲ್ಲಿ ಸಾಮಾನ್ಯ. ಕಿಟ್ಟೆಲ್ ದ್ರಾವಿಡ ಜನ್ಯ ಸಂಸ್ಕೃತ ಪದಗಳೆಂದು ಕೊಟ್ಟ ಪಟ್ಟಿಯಲ್ಲಿ ಈ ಶಬ್ದ ಸೇರಿಲ್ಲವೆಂದು ನಾ ಬಲ್ಲೆ. ಇದೊಂದು ಗಾಳಿ ಪಟ ಮಾತ್ರ; ಆದರೆ ನೆಲ ಬಿಟ್ಟು ಏಳಬಲ್ಲ ಗಾಳಿಪಟ.

ಸಂಗೀತ ವಾದ್ಯಗಳು ಅನಾದಿ ಕಾಲದಿಂದಲೂ ದೇಶದಿಂದ ದೇಶಕ್ಕೆ ವಲಸೆ ಹೋಗಿವೆ. ನಮ್ಮದೇ ನೆನಪಿನೊಳಗಿನ ಕಾಲದಲ್ಲಿ ಪಾಶ್ಚಾತ್ಯ **ಗಿತಾರ್** (guitar) ನಮ್ಮ ತರುಣರಲ್ಲಿ ಜನಪ್ರಿಯವಾಗುತ್ತಿದೆ. ೧೯ನೇ ಶತಮಾನದ ಆದಿಯಲ್ಲಿ ಬಾಲು ಸ್ವಾಮಿ ದೀಕ್ಷಿತರು ಪಾಶ್ಚಾತ್ಯ ಪಿಟೀಲನ್ನು ಕರ್ನಾಟಕ ಸಂಗೀತಕ್ಕೆ ಪಳಗಿಸಿದರು. ಈಗ ಗಿತಾರಿನ ಮಾತು ಬಂದಾಗ ನಮ್ಮದೇ **ಸಿತಾರ್** ಎಲ್ಲಿಂದ ಬಂತು ? ಎಂಬ ಪ್ರಶ್ನೆ ತಲೆ ಕೊರೆಯತೊಡಗಿತು. ಹಾಗೆಯೆ ಗಿತಾರಿಗೂ ಸಿತಾರಿಗೂ ಏನಾದರೂ ಸಂಬಂಧವುಂಟೆ ? ಎಂಬ ಪೃಚ್ಛೆ ಕೂಡ ಎದ್ದಿತು. ಸಂಗೀತವಾದ್ಯದ ಇತಿಹಾಸಜ್ಞರ ಪ್ರಕಾರ ಸಿತಾರಿನ ಪೂರ್ವ ರೂಪ ಮಧ್ಯ ಏಶಿಯದಲ್ಲಿ ತಲೆದೋರಿರಬೇಕು. ಕಾಶ್ಮೀರದಲ್ಲಿ ಅದನ್ನು ಹೋಲುವ **ಸೆಯ್‌ತಾರ್** (saitar) ಇಂದಿಗೂ ಜನಪದ ಸಂಗೀತದಲ್ಲಿ ಬಳಕೆಯಾಗುತ್ತಿದೆಯಂತೆ. ಆದರೆ ಸಿತಾರ್ ಇಂದಿನ ರೂಪಕ್ಕೆ ಬಂದದ್ದು ಅಕಬರನ ಕಾಲದಲ್ಲಿ, ಕವಿ ಅಮೀರ್ ಖುಸ್ರುವಿನ ಕೈಯಲ್ಲಿ, ೧೬ನೇ ಶತಮಾನದಲ್ಲಿ. ಹೆಸರು ಪಾರಸೀಕ – **ಸೆಹ್-ತಾರ್** ಈ ಪದಕ್ಕೆ ಮೂರು ತಂತಿ ಎಂದರ್ಥವೆಂದು ಕೆಲವರೂ, ಏಳು ತಂತಿಯೆಂದು ಕೆಲವರೂ ವ್ಯುತ್ಪತ್ತಿ ಹೇಳುತ್ತಾರೆ. ಮೂಲತಃ ಮೂರೇ ತಂತಿಯಿದ್ದ ಈ ವಾದ್ಯ ಕಡೆಗೆ ಏಳು ತಂತಿಗಳನ್ನು ಪಡೆಯಿತು. ಪದ ಪಾರಸೀಕವಾದರೂ ವಾದ್ಯ ರೂಪುಗೊಂಡದ್ದು ಭಾರತದಲ್ಲಿ. (ಮುಸ್ಲಿಂ ಅರಸುಗಳು ಪಾರಸೀಕವನ್ನೇ ಅಧಿಕೃತ ಭಾಷೆಯಾಗಿ ಉಪಯೋಗಿಸಿದರು). ಆದರೆ **ಗಿತಾರ್** ಆದರೋ ಗ್ರೀಕ್ kithara ಶಬ್ದದಿಂದ ಹೊರಟು ಅರಬರ ಮೂಲಕ ಸ್ಪೇನಿಗೆ ಬಂದು ಅಲ್ಲಿ guitara ಎನಿಸಿ, ಫ್ರೆಂಚ್ ಮೂಲಕ ಇಂಗ್ಲೀಷಿಗೆ ೧೭ನೇ ಶತಮಾನದಲ್ಲಿ ಬಂತು. ಹೀಗೆ ಗಿತಾರ್, ಸಿತಾರ್ ಶಬ್ದಗಳ ಹೋಲಿಕೆ ಮೇಲು ನೋಟದ್ದು ಮಾತ್ರ.

ಇಂದು ಭಾರತದಲ್ಲಿ **ಪಿಟೀಲು** (fiddle) ಅಥವಾ **ವಯೋಲಿನ್** (violin) ದಕ್ಷಿಣೋತ್ತರ ಎರಡೂ ಸಂಗೀತ ಪದ್ಧತಿಗಳಲ್ಲಿ ಬೇರೂರಿದೆ. ಅದರ ಮೂಲ ಕಲ್ಪನೆ ಭಾರತೀಯವೇ. **ರಾವಣ ಹಸ್ತ ವೀಣಾ** ಎಂಬ ಪ್ರಾಚೀನ ಭಾರತೀಯ ತಂತ್ರೀವಾದ್ಯದ ಒಂದು ರೂಪಾಂತರ ಇದು; ಇರಾಣ, ಅರೇಬಿಯಗಳ ಮೂಲಕ ಪಾಶ್ಚಾತ್ಯ ದೇಶಗಳನ್ನು ಅದು ತಲುಪಿತೆಂದೂ ಅರೇಬಿಯದಲ್ಲಿ ಅದೇ **ರಬಾಬ್** ಎನಿಸಿದ್ದೆಂದೂ ಹೇಳಲಾಗಿದೆ. ಆದರೆ **ವಯೋಲಿನ್** ಎಂಬುದು ಭಾರತೀಯ ಶಬ್ದವಲ್ಲ. ಇದೇ ವರ್ಗದ ''ವಯೋಲಾ''ದ ಸಂಕ್ಷಿಪ್ತ ರೂಪ ಇದೆಂದೂ ಆ ಶಬ್ದಕ್ಕೆ ಮೂಲತಃ ಲ್ಯಾಟಿನ್ನಿನ Vitulari (ಆನಂದಿಸು) ಎಂಬ ಧಾತುವೇ ಆಧಾರವಿರಬೇಕೆಂದೂ ಶಬ್ದ ಶಾಸ್ತ್ರಜ್ಞರ ನಂಬಿಕೆ. ಬಲು ಸುಂದರ. ''ಫಿಡ್ಲ್'' (fiddle - ಪಿಟೀಲು) ಎಂಬ ವಾಯೋಲಿನ್ನಿನ ಇನ್ನೊಂದು ಹೆಸರಿಗೆ ಈಗ ನೀಚಾರ್ಥ ಗಂಟು ಬಿದ್ದಿದೆ. ಆದರೆ ಆ ಶಬ್ದವೂ ಮೂಲತಃ vitulaದ್ದೇ ಅಪಭ್ರಂಶ. ಅದರ ಪ್ರಯಾಣ ಮಾತ್ರ ಜರ್ಮಾನಿಕ್ ಭಾಷೆಗಳ ಮೂಲಕ ಆಗಿದ್ದು, ಲ್ಯಾಟಿನ್ನಿನ V ಅಲ್ಲಿ f ಆದದ್ದಷ್ಟೇ ಈ ರೂಪಭೇದಕ್ಕೆ ಕಾರಣ. **ಭೋಜ**(ನ) ಎಂಬ ಪದ ತುಳುವಿನಲ್ಲಿ **ಬೊಜ್ಜ** ಆದಾಗ ಅದಕ್ಕೆ ಕೀಳು ಅರ್ಥ ಬಂದ ಹಾಗೆ. ''ಬೊಜ್ಜ'' ಎಂದರೆ ಉತ್ತರ ಕ್ರಿಯೆಯ ಊಟ !

೧೪೪

''ಸ್ವಲ್ಪ ಆ ಸ್ವಿಚ್ ಆರಿಸಿರಿ'', ಎಂದು ನನ್ನವಳು ಬೇರೇನೋ ಮಾಡುತ್ತಿದ್ದವಳು

ಹೇಳಿದಳು. ಹಾಗೆ ಮಾಡಿದ ಮೇಲೆ ಈ ಸ್ವಲ್ಪದ ಬಗ್ಗೆ ನನಗೆ ಯೋಚನೆ ಹಿಡಿಯಿತು. ''ಸ್ವಲ್ಪ ಅವರನ್ನ ಕರೀರಿ'', ''**ಒಂತುಸಾ** ಬಾಯಿ ಮುಚ್ಚಿಕೊಳ್ತೀರಾ'', ''**ಒಂಚೂರು** ಇತ್ಲಾಗೆ ಬನ್ನಿ'' ಇತ್ಯಾದಿಗಳಲ್ಲಿ ''ಸ್ವಲ್ಪ'', ''ತುಸು'', ''ಒಂಚೂರು'', ''ಒಂದಿಷ್ಟು'' ಇತ್ಯಾದಿಗಳು ಅಲ್ಪವನ್ನು ಸೂಚಿಸುತ್ತವೆಯೇ ? ಹಿಂದಿ-ಉರ್ದುವಿನಲ್ಲಿ ಕೂಡಾ **ಜರಾ** ಎಂಬ ಅವ್ಯಯಕ್ಕೆ ಹೀಗೆ ಪ್ರಯೋಗ ಇದೆ. ''ಸ್ವಲ್ಪ ಕರಿಯೋದು'' ಸಾಧ್ಯವೇ ? ಕರೆಯುವುದಾದರೆ ಪೂರಾ ಕರೆಯಬೇಕು. ''ಸ್ವಲ್ಪ ಬರೋದು'' ಅಕ್ಷರಶಃ ಅಸಾಧ್ಯ. ಸ್ವಲ್ಪ ಹೊತ್ತು ಎಂದು ಕೆಲ ಸಂದರ್ಭಗಳಲ್ಲಿ ತಾತ್ಪರ್ಯವಾಗಿರಬಹುದು. ಸರ್ವತ್ರ ಹಾಗಾಗದು.

ತುಸು ವಿಚಾರಿಸಿದ ಮೇಲೆ, ಈ ''ತುಸು'' ವನ್ನು ನಾವು ಪ್ರಯೋಗಿಸುವ ಸಂದರ್ಭಗಳನ್ನು ನೋಡಿ, ಅದು **ದಯವಿಟ್ಟು** ಅಥವಾ ಇಂಗ್ಲೀಷಿನ Please ಎಂಬರ್ಥದಲ್ಲಿ ಅಲ್ಲವೇ ನಿಲ್ಲುವುದು ಎಂದು ಹೊಳೆಯಿತು. ಸಾಧಾರಣ ಸೌಜನ್ಯ ಪ್ರದರ್ಶಿಸಲು ''ದಯವಿಟ್ಟು'' ತುಸು ಹೆಚ್ಚೇ ಅಲ್ಲವೆ ? ಹೆಂಡತಿ ಗಂಡನಿಗೆ ಅಥವಾ ಅವನು ಅವಳಿಗೆ ''ದಯವಿಟ್ಟು'' ಎನ್ನುವುದು ಅತಿವಿನಯ ಮತ್ತು ವ್ಯಂಗ್ಯವನ್ನು ಸೂಚಿಸಿದಂತಾಗುತ್ತದೆ. ಇಂಗ್ಲೀಷಿನ please ಇದೆಲ್ಲಕ್ಕೂ ನಡೆಯುತ್ತದೆ. ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಕೃತಕ ಸೌಜನ್ಯದ ಅಂಶ ಹೆಚ್ಚು. ನೆರೆಮನೆಯವರನ್ನು ನಿಮ್ಮಲ್ಲಿರುವ ಫೋನಿಗೆ ಕರೆಯಬೇಕಾದರೆ ''ಸ್ವಲ್ಪ ಕರೀತೀರಾ ?'' ಅಂದರೆ ಸಲಿಗೆಯನ್ನು ಸಂಗಡಲೇ ಇದೊಂದು ಉಪಕಾರ ಎನ್ನುವ ಭಾವನೆಯನ್ನು ಏಕಕಾಲದಲ್ಲಿ ಪ್ರದರ್ಶಿಸಿದಂತಾಗುತ್ತದೆ. ಅದಕ್ಕೂ ಹೆಚ್ಚಿನ ಉಪಕಾರವನ್ನು ಆಶಿಸುವಾಗ ನಾವೂ ''ದಯವಿಟ್ಟು'' (ಹಿಂದಿಯಲ್ಲಿ **ಕೃಪಯಾ** ಅಥವಾ **ಮೆಹರ್‌ಬಾನೀ ಕರಕೇ**) ಎನ್ನಬೇಕಾಗುತ್ತದೆ.

ಸಂಸ್ಕೃತಿ ಭಿನ್ನತೆ ಶಿಷ್ಟಾಚಾರದ ಭಿನ್ನತೆಗಳನ್ನು ಉಂಟುಮಾಡುತ್ತದೆ. ಇಂಗ್ಲೀಷಿನಲ್ಲಿ ಗಂಡ-ಹೆಂಡಿರ ನಡುವೆಯೂ ಸ್ನೇಹಿತರ ನಡುವೆಯೂ Please ಬಳಸಿ ಬಳಸಿ ಸವಕಲಾಗಿದೆ. ಚಿಕ್ಕ ಪುಟ್ಟ ಕೇಳಿಕೆಗಳಿಗೆ ಉಪಯೋಗಿಸುವ ''ಸ್ವಲ್ಪ'' ವನ್ನು ಇಂಗ್ಲೀಷಿನಲ್ಲಿ a little ಎಂದು ಭಾರತೀಯರು ಎಲ್ಲಾದರೂ ಬಳಸುತ್ತಾರೋ ಏನೋ. ಇಂಗ್ಲೀಷರು ಬಳಸರು. ಇಂಗ್ಲೀಷಿನಲ್ಲಿ a littleಗಿಂತ ಸರಳವಾದ do ಪ್ರಯೋಗಿಸುವುದುಂಟು. do come for the marriage (ಮದುವೆಗೆ ಮುದ್ದಾಂ ಬನ್ನಿ). ಆದರೆ ಅರ್ಥದಲ್ಲಿ ಇದು ''ಸ್ವಲ್ಪ''ಕ್ಕಿಂತ ಮಾತ್ರವಲ್ಲ, please ಗಿಂತಲೂ ಭಾರ. ಭಾರತೀಯನಾಗಿ ನಾನು ''ಸ್ವಲ್ಪ''ದ ನವಿರನ್ನು ಮೆಚ್ಚುತ್ತೇನೆ.

**ಚೆನ್ನಾಗಿ, ಒಳಿತಾಗಿ** ಕನ್ನಡದ ಸುಂದರ ಪದಗಳು. ಚೆಲುವಾಗಿ, ಹಿತಕರವಾಗಿ ಎಂಬ ಅರ್ಥವನ್ನು ಅವು ಮೂಲತಃ ಕೊಡುತ್ತವೆ. ''ಚೆನ್ನಾಗಿ'' ಸಿಂಗರಿಸಿಕೊಳ್ಳುತ್ತೇವೆ. ''ಒಳಿತಾಗಿ'' ನುಡಿಯುತ್ತೇವೆ. ಆದರೆ ನೀವು ನಿಮ್ಮ ಮಗನನ್ನು ಚೆನ್ನಾಗಿ ಚಚ್ಚಬಹುದು; ಅದಕ್ಕಾಗಿ ನಿಮ್ಮ ಹೆಂಡತಿ ನಿಮ್ಮನ್ನು ಒಳಿತಾಗಿ ಜರೆಯಬಹುದು; ಮಾಸ್ತರರು ವಿದ್ಯಾರ್ಥಿಗೆ ಒಳಿತಾಗಿ ಬುದ್ಧಿ ಹೇಳಬಹುದು. ಇಲ್ಲಿ ನಾವು ಈ ಪದಗಳಿಗೆ ತದ್ವಿರುದ್ಧವಲ್ಲದಿದ್ದರೂ ಸ್ವಲ್ಪ ವಿರುದ್ಧ ಅರ್ಥವನ್ನೇ ಕೊಡುತ್ತೇವೆ. ಚಿಕ್ಕವಾದರೂ ಬಲು ಪರಿಣಾಮಕಾರಿ ಪದಗಳಾಗಿ ಲಕ್ಷಣಾವೃತ್ತಿಯಿಂದ ಅವು ವರ್ತಿಸುತ್ತವೆ. ಇಂಗ್ಲೀಷಿನಲ್ಲಾದರೆ ಇದಕ್ಕೆ ಸಮಾನಾಗಿ good (= ಒಳಿತು, ಚೆನ್ನು) ಕೆಲಸಕ್ಕೆ ಬರುತ್ತದೆ. ನೀವು ಅಲ್ಲಿಯೂ ನಿಮ್ಮ ಮಗನಿಗೆ a good beating ಕೊಡಬಲ್ಲಿರಿ. ಇಲ್ಲಿ ಕನ್ನಡದಲ್ಲಿ ಹೇಗೋ ಹಾಗೆ ಇಂಗ್ಲೀಷಿನಲ್ಲಿಯೂ ಒಳಿತು (good)

ಬಹಳ, ತೀಕ್ಷ್ಣ ಇತ್ಯಾದಿ ಅರ್ಥಗಳನ್ನು ಸಂಪಾದಿಸಿದೆ.

ಇವೆರಡು ವಿವೇಚನೆಗಳು ಮನುಷ್ಯ ಜನಾಂಗಗಳ ಭಾವ ಸಾಮ್ಯ ಮತ್ತು ಭಾವ ವೈರುಧ್ಯಗಳನ್ನು ಬೆಳಗುತ್ತವೆ.

ಆದರೆ ''ತುಸು'', ''ಚೂರು'' ಇತ್ಯಾದಿಗಳ ಈ ಅರ್ಥಚ್ಛಾಯೆಯನ್ನು ನಮ್ಮ ಬೃಹತ್ ಪರಿಷತ್ ಕೋಶವೂ ಲಕ್ಷಿಸಿಲ್ಲ; ''ಒಳಿತಾಗಿ''ಯರನ್ನು ಮಾತ್ರ ಗಮನಿಸಿದೆ.

ಒಂದು ಜೆಕ್ ಕಾದಂಬರಿಯಲ್ಲಿ ೫೦ ಲಕ್ಷ ವರ್ಷಗಳ ಮೇಲೆ ಹುಟ್ಟಬೇಕಾಗಿದ್ದ ಮಗು ಪ್ರಸ್ತುತದಲ್ಲೇ ಹುಟ್ಟುತ್ತದೆ. ಅದಕ್ಕೆ ಅಕ್ಷರ, ಉಚ್ಚಾರ ಕಲಿಸಿ, ಭಾರೀ ಶಬ್ದ ಕೋಶವೊಂದನ್ನು ಕೊಟ್ಟದ್ದಾಯಿತು. ಅದು ಬಿಟ್ಟೂಬಿಡದೆ ಸ್ವಲ್ಪ ಕಾಲದಲ್ಲೇ ಅದನ್ನು ಓದಿ ಮುಗಿಸಿ, ನಿಮ್ಮ ಭಾಷೆ ತೀರ ಅತಾರ್ಕಿಕ ಎಂದು ಟೀಕಿಸಿತು. ಹೌದು, ನಮ್ಮ ಭಾಷೆಗಳು ತುಂಬಾ ತರ್ಕವಿರುದ್ಧವಾಗಿದೆ.

ಈಗ ನೋಡಿ. **ಮುನ್** – ಎಂದರೆ ಎದುರಿಗೆ, **ಹಿಂ** – ಎಂದರೆ ಬೆನ್ನುಗಡೆ. ಈ ಶಬ್ದಗಳನ್ನು ದೇಶಕ್ಕೆ ಹೇಗೋ ಹಾಗೆ ಕಾಲಕ್ಕೂ ಅನ್ವಯಿಸಿ ಪ್ರಯೋಗಿಸುತ್ತೇವೆ. ದೇಶ ವಿಷಯದಲ್ಲಿ ನೀವು ನನ್ನ **ಮುಂದಿದ್ದೀರಿ.** ಅಂದರೆ ಎದುರಿಗೆ ನಿಂತಿದ್ದೀರಿ. ನಾನು ನಿಮ್ಮ **ಹಿಂದಿದ್ದೇನೆ.** ಇದು ಪ್ರತ್ಯಕ್ಷ.

ಆದರೆ ಕಾಲಕ್ಕೆ ಬಂದರೆ ನನ್ನ ತಲೆ ತಿರುಗತೊಡಗುತ್ತದೆ. ನನ್ನ **ಮುಂದೆ** ಇರುವುದು ಏನು ? ನನ್ನ ಭವಿಷ್ಯತ್ತು. ನಾನು ಮುಂದೆ ಹೆಜ್ಜೆ ಇಟ್ಟಂತೆ ಭವಿಷ್ಯದೊಳಗೆ ಪ್ರವೇಶಿಸುತ್ತಲೇ ಇರುತ್ತೇನೆ. ನನ್ನ ಭೂತ ನನ್ನ ಹಿಂದೆ ಇದೆ; ಅದನ್ನು ನಾನು ಬಿಟ್ಟು ಬಿಟ್ಟು ಭವಿಷ್ಯಕ್ಕೆ ಸಾಗುತ್ತಿದ್ದೇನೆ. ಸರಿ ತಾನೇ ? ಆದರೆ ಉತ್ತರ ಕರ್ನಾಟಕದ ಯಾವುದೇ ಸರಕಾರಿ ಕಚೇರಿಗೆ ಹೋಗಿ ಒಂದು ಕೆಲಸದ ವಿಷಯ ವಿಚಾರಿಸಿ : ''**ಹಿಂದಾಗಡೆ** ಬರ್ರಿ'' ಎಂದುತ್ತರ ಬರುತ್ತದೆ. ನಿರ್ದಿಷ್ಟ ಗಂಟೆ ಮಿನಿಟು ಹೇಳಿರದಿದ್ದರೂ ಅವರು ಸೂಚಿಸುತ್ತಿರುವುದು ಭವಿಷ್ಯತ್ತು ಎಂಬುದಂತೂ ಖಂಡಿತವಲ್ಲವೆ ? ಇದೀಗ ನಮ್ಮ ಮುಂದಿದ್ದ ಭವಿಷ್ಯತ್ತು ಸರ್ರನೆ ಹಿಂದುಗಡೆ ಹೇಗೆ ಹೋಯಿತು ? ಅದೇ ಮನುಷ್ಯ ಬೇರೆ ಸಮಯದಲ್ಲಿ **ಮುಂದಿನ** ದಿನಗಳು ಒಳ್ಳೇ ದಿನಗಳಲ್ಲ ಎಂದು ಭವಿಷ್ಯತ್ತಿನ ಬಗ್ಗೆ ಅನಾದಿಯಿಂದ ಬಂದಿರುವ ನಿರಾಶೆಯನ್ನು ವ್ಯಕ್ತಪಡಿಸಬಹುದು. ಆಗ ''ಹಿಂದೆ'' ಸೇರಿಕೊಂಡಿದ್ದ ಭವಿಷ್ಯತ್ತು ಮತ್ತೆ ''ಮುಂದಿ'' ನಿಂದ ಕಾಣಿಸಿಕೊಳ್ಳುತ್ತದೆ. ನನ್ನ ತರ್ಕಶಾಸ್ತ್ರ ''ಹಿಂದಿಲ್ಲಾ ಸ್ವಾಮಿ ಮುಂದಿಲ್ಲಾ'' ಎಂದು ಕೈ ಚೆಲ್ಲುತ್ತದೆ.

ಹಿಂದೆ ಮುಂದೆ ಹಿಂದು ಮುಂದಾದದ್ದು ಹೋಗಲಿ. **ಆಗ**ವನ್ನು ತೆಗೆದುಕೊಳ್ಳಿ ಇದು ಭೂತಕಾಲವನ್ನು ನಿರ್ದೇಶಿಸುತ್ತದೆ ಎನ್ನುತ್ತೀರಾ ? ಹೌದು, ''ಆಗ ಬಂದಿದ್ದೆ, **ಈಗ** ಹೊರಟಿದ್ದೇನೆ'' ಆದರೆ ನಮ್ಮ ಸರ್ವಜ್ಞ ಕವಿ ''ಆಗ ಬಾ ಈಗ ಬಾ ಹೋಗಿ ಬಾ ಎನ್ನದೆ'' ಅರ್ಥಿಗಳಿಗೆ ಭಿಕ್ಷೆ ಕೊಡಬೇಕೆಂದು ಅಪ್ಪಣೆ ಕೊಡಿಸುತ್ತಾನಲ್ಲ, ಆಗ ಈ ''ಆಗ'' ''ಹಿಂದುಗಡೆ''ಯ ಹಾಗೆ ಭವಿಷ್ಯತ್ತನ್ನೆ ಅಲ್ಲವೆ ಸೂಚಿಸುವುದು ?

ಇಂಗ್ಲೀಷಿನಲ್ಲಿ ಕೂಡ ಇದೇ ಪಾಡು I stand before you ನಿಮ್ಮ ಮುಂದಿರುವ ದೇಶವನ್ನು ಕುರಿಯುತ್ತದೆ. ಹಾಗೆಯೆ There is ample time before you ಎನ್ನುವಾಗ ನಿಮ್ಮ ಮುಂದಿರುವ ಅದು ಧಾರಾಳ ಭವಿಷ್ಯತ್ತನ್ನು ಸೂಚಿಸುತ್ತದೆ. ಆದರೆ before I came here ಎನ್ನುವಾಗ before ಭವಿಷ್ಯತ್ತಿನ ಕೈ ಬಿಟ್ಟು ಭೂತವನ್ನು ನಿರ್ದೇಶಿಸುತ್ತದೆ.

ನಿಜಕ್ಕೂ ಭಾಷೆ ತೀರ ತರ್ಕಶೂನ್ಯ most illogical ಆಗಿದೆ. ಮತ್ತೆ ನಾವು ಈ ಸಂದೇಹಾಸ್ಪದ ಉಪಕರಣದಿಂದ ನಮ್ಮ ತರ್ಕಶಾಸ್ತ್ರವನ್ನು ಕಟ್ಟಿ ಅದು ಬಹು ಭದ್ರ ಕಟ್ಟಡವೆಂದು ಭಾವಿಸುತ್ತೇವಲ್ಲ !

೧೪೯

**ಒಂದು** ಎಂಬುದೊಂದು ಸಂಖ್ಯಾವಾಚಕ; ಪ್ರಥಮ ಸಂಖ್ಯಾವಾಚಕ ಎಂದು ನಾವು ಬಲ್ಲೆವು. ಆದರೆ **ಒಂದು** ಮತ್ತು **ಆರು** ಎಂಬ ಸಂಖ್ಯಾವಾಚಕಗಳು ಸಂಖ್ಯಾ ನಿರ್ದೇಶನವನ್ನಲ್ಲದೆ ಬೇರೆ ಕೆಲಸಗಳನ್ನೂ ಮಾಡುವುದನ್ನು ನಾವು ಸಹಸಾ ಗಮನಿಸುವುದಿಲ್ಲ.

''ಅದರಲ್ಲಿ **ಒಂದು** ಅಪೂರ್ವ ಸೌಂದರ್ಯವಿದೆ'' ಎನ್ನುವಾಗ ನಾವು ಒಂದೆಂಬ ಸಂಖ್ಯೆಯನ್ನು ಉದ್ದೇಶಿಸುತ್ತೇವೆಯೆ ? ''**ಒಂದೂರಿತ್ತು**'', ''**ಒಂದಾನೊಂದು** ಕಾಲದಲ್ಲಿ'' ಎಂಬಲ್ಲಿ ''ಒಂದು'' ಏನನ್ನು ಕುರಿಯುತ್ತದೆ ? ''**ಒಂದು** ಕೆಲಸ ಮಾಡಿ'' ಎನ್ನುವುದರ ತಾತ್ಪರ್ಯವೇನು ? ಈ ಸಂದರ್ಭಗಳಲ್ಲೆಲ್ಲ ''ಒಂದು'' ಎಂದಾಗ ಯಾವುದೋ ಅನಿರ್ದಿಷ್ಟ, ಅನಿರ್ವಚನೀಯ ಗುಣವನ್ನು ನಾವು ಉದ್ದೇಶಿಸಿರುತ್ತೇವೆ. ನವವಿವಾಹಿತ ದಂಪತಿಗಳಲ್ಲಿ ಗಂಡ ಅಸ್ಥಾನ ಅಕಾಲಗಳಲ್ಲಿ ತೋರಿಸುವ ಅತಿರೇಕ ಪ್ರೀತಿಯಿಂದ ಮುನಿದ ಹೆಣ್ಣು, **ನೀವೊಬ್ಬರು !** ಎನ್ನುತ್ತಾಳೆ. ಅದರಲ್ಲಿ ಒಂದಿಷ್ಟು ಹುಸಿಕೋಪ, ಒಂದಿಷ್ಟು ನಿಜಕೋಪ ಬೆರೆತಿರಬಹುದು. ಅವನು ಹಿಂದೆ ಅರ್ಧವೋ ಎರಡೋ ಆಗಿದ್ದವ ಈಗ ಒಬ್ಬನಾಗಿದ್ದಾನೆಂದು ಅವಳ ಅರ್ಥವಲ್ಲ. **ಕೆಲವೊಮ್ಮೆ, ಕೆಲವೊಂದು** ಇತ್ಯಾದಿಗಳಲ್ಲಿ ಕೂಡ ಒಂದು ಸಂಖ್ಯೆಯನ್ನಲ್ಲ, ಅನಿರ್ದಿಷ್ಟವಾದ ಗುಣವನ್ನು ಅಭಿಪ್ರಾಯಿಸುತ್ತೇವೆ.

ಒಂದರ ಈ ತರದ ಉಪಯೋಗ ದೇಶಾತೀತ ಭಾಷಾತೀತ ಲಕ್ಷಣವೆಂದು ತೋರುತ್ತದೆ. ಹಿಂದಿಯಲ್ಲಿ **ಬಹುತೇಕ** ಇದೆ. **ಬಹುತ್ + ಏಕ್** ಪದಗಳ ಸಂಯೋಗವುಳ್ಳ ಇದು ಕೂಡ ಅನಿರ್ದಿಷ್ಟ ಎಂಬರ್ಥದಲ್ಲಿ ಬಳಕೆಯಾಗುತ್ತದೆ. ಹಿಂದಿಯಲ್ಲಿ **ದೋ-ಏಕ** (= ಎರಡೊಂದು) ಎಂಬುದು ಅನಿರ್ದಿಷ್ಟವಾದ ಚಿಕ್ಕ ಸಂಖ್ಯೆಯನ್ನು ಸೂಚಿಸುತ್ತದೆ. ಅತ್ತ ಇಂಗ್ಲೀಷ್‌ನಲ್ಲಿ "a" ಎಂಬುದು ಇದೇ ಕೆಲಸ ಮಾಡುತ್ತದೆ. Full many a bloom ಎಂಬುದು ಹಿಂದಿಯ ''ಬಹುತೇಕ''ದಂತೆ ಏಕಕಾಲದಲ್ಲಿ ಹಲವನ್ನೂ ಒಂದನ್ನೂ ಕೂಡಿಸಿ ''ಎಷ್ಟೋ'' ಎಂಬ ಅನಿಶ್ಚಿತ ಸಂಖ್ಯೆಯನ್ನು ನಿರ್ದೇಶಿಸುತ್ತದೆ. ಆದರೆ ಇಲ್ಲಿ ಒಂದು ಅಂತರವನ್ನು ಗಮನಿಸಬೇಕು. ಇಲ್ಲಿ A ಮಾಡಿದ ಕೆಲಸವನ್ನು One ಮಾಡಲಾರದು. ಆ ಭಾಷೆಯಲ್ಲಿ A ಮತ್ತು The ಎಂಬ ಆರ್ಟಿಕಲ್ಲು (article)ಗಳು ಬೇರೆ ತರದಲ್ಲಿ ವರ್ತಿಸುತ್ತವೆ. ಅವುಗಳ ಚರ್ಚೆ ಇಲ್ಲಿ ಪ್ರಸ್ತುತವಲ್ಲ.

ಈ ''ಒಂದು'' ಅನಿರ್ದಿಷ್ಟ ಸಂಖ್ಯೆಯನ್ನು ಮಾತ್ರವಲ್ಲ, ಅನಿರ್ದಿಷ್ಟ ರಾಶಿಯನ್ನೂ ಸೂಚಿಸುವುದುಂಟು. ''**ಎಷ್ಟೊಂದು** ಅನ್ನ ಹಾಕಿಬಿಟ್ಟೆಯಲ್ಲ !'' ''**ಅಷ್ಟೊಂದು** ಕಷ್ಟ ಯಾಕೆ ತೆಗೆದುಕೊಳ್ಳಬೇಕು ?'' ''**ಒಂದಿಷ್ಟು** ಊಟ ಹಾಕಿಯಮ್ಮ !'' ಇವೆಲ್ಲ ಸಂಖ್ಯಾರ್ಥಕ ಪ್ರಯೋಗಗಳಲ್ಲ.

ಕೆಲ ಮಟ್ಟಿಗೆ ಈ ''ಒಂದು'' ಕನ್ನಡದಲ್ಲಿ ಇಂಗ್ಲಿಷ್ ಪ್ರಭಾವದಿಂದ ಪ್ರಸಾರ ಪಡೆದಿದೆಯೆಂದು ನನಗೆ ತೋರುತ್ತದೆ. ''ಇದು ಕುರಿ'', ''ಇವನು ಮನುಷ್ಯ'', ''ಇವಳು

ಹುಡುಗಿ'' ಎಂದು ಹಿಂದೆ ಹೇಳುತ್ತಿದ್ದ ನಾವು ಈಗ, ''ಇದೊಂದು ಕುರಿ'', ''ಇವನೊಬ್ಬ ಮನುಷ್ಯ'', ''ಇವಳೊಬ್ಬ ಹುಡುಗಿ'' ಇತ್ಯಾದಿಯಾಗಿ ಹೇಳುತ್ತಿದ್ದೇವೆ. ಇದು ಇಂಗ್ಲೀಷಿನ aಯ ಪ್ರಭಾವ. ಇಂಗ್ಲೀಷಿನಲ್ಲಿ ನಾಮಪದದ ಹಿಂದೆ ಏಕವಚನದಲ್ಲಿ A ಅಥವಾ The ಬೇಕೇ ಬೇಕೆಂಬುದು ಅಲ್ಲಿನ ವಾಗ್ರೂಢಿ. He is man ಎಂದು ಅಲ್ಲಿ ಹೇಳಲಾಗದು. He is a man ಎಂದೇ ಹೇಳತಕ್ಕದ್ದು. ನಮ್ಮಲ್ಲಿ ಅದು (a = ಒಂದು) ಅನಿವಾರ್ಯವಾಗಿದ್ದಿಲ್ಲ. ಆದರೆ ಈಗ ಮೆಲ್ಲಗೆ ಆಗತೊಡಗಿದೆ, ಇಂಗ್ಲೀಷನ್ನು ನಮ್ಮ ವಿದ್ಯಾವಂತರು ಮಾತೃಭಾಷೆಗಿಂತ ಹೆಚ್ಚು ಶ್ರದ್ಧೆಯಿಂದ ಕಲಿತು ಆಮೇಲೆ ಕನ್ನಡದಲ್ಲಿ ಬರೆಯತೊಡಗಿದಾಗ ಇಂಗ್ಲೀಷಿನ ಕೆಲ ಭಾಷಾ ರೂಢಿಗಳನ್ನು ಕನ್ನಡಕ್ಕೆ ಆಮದು ಮಾಡಿಕೊಂಡರು. ಹೀಗೆ ಆಮದಾದದ್ದು a = ಒಂದು ಮಾತ್ರವಲ್ಲ. ಮೂತ್ರ ಶಂಕೆಗೆ ಹೋಗುವುದಕ್ಕೆ ''**ಒಂದಕ್ಕೆ ಹೋಗು**'' ಎನ್ನುವುದೂ ಇಂಗ್ಲೀಷಿನ ಥೇಟ್ ಅನುವಾದ. ಇಂಗ್ಲೀಷಿನಲ್ಲಿ ಮೂತ್ರ ಶಂಕೆಯನ್ನು The first call of nature (ನಿಸರ್ಗದ ಮೊದಲ ಕರೆ) ಎಂದೂ ಮಲಶಂಕೆಯನ್ನು The second call (ಎರಡನೆಯ ಕರೆ) ಎಂದೂ ಕರೆಯುವ ಶಿಷ್ಟರೂಢಿ ಕನ್ನಡಕ್ಕೆ ಇದ್ದಕ್ಕಿದ್ದಂತೆ ಬಂದುಬಿಟ್ಟಿತು. ಅನವಶ್ಯಕ ನಿಜ; ಆದರೆ ಇತಿಹಾಸದ ವಿರುದ್ಧ ದಂಗೆಯೇಳಲಾಗುವುದಿಲ್ಲ.

ಸಂಖ್ಯಾವಾಚಕಗಳಲ್ಲಿ ''ಒಂದು'' ಅಲ್ಪತ್ವಸೂಚಕ ಅನಿರ್ದಿಷ್ಟಾರ್ಥವನ್ನು ಸಂಪಾದಿಸಿದಂತೆ (ಉದಾ: ಒಂದಿಷ್ಟು, ಒಂದಿನಿಸು) **ಆರು** ಬಹ್ವರ್ಥಕ ಅನಿರ್ದಿಷ್ಟಾರ್ಥವನ್ನು ಸಂಪಾದಿಸಿದೆ. **ಒಂದಾರು ಭುಜವಾಗು** ಎಂದು ಸುಮಾರು ೧೭ನೇ ಶತಮಾನದಲ್ಲಿ ಸಂಗ್ರಹಿಸಲ್ಪಟ್ಟ ಕಾಲಜ್ಞಾನದ ವಚನ ಸಂಗ್ರಹದಲ್ಲಿ ಪ್ರಯೋಗವಿದೆಯೆಂದು ಸಾಹಿತ್ಯ ಪರಿಷತ್ತಿನ ಬೃಹತ್ ನಿಘಂಟಿನಲ್ಲಿ ಉದಾಹರಿಸಲಾಗಿದೆ. ಅಂದರೆ ಬಹಳ ಹೆಗಲುಗಳಾದಂತೆ ತಂತಾನೆ ಬಲಿಷ್ಠತ್ವದ ಭಾವನೆಯುಂಟಾಗಿ, ಅರ್ಥಾತ್ ಮನವುಬ್ಬಿ ಎಂದು ತಾತ್ಪರ್ಯ. ಈಗಲೂ **ಹತ್ತಾರು, ನೂರಾರು, ಸಾವಿರಾರು** ಎಂದು ಸಂಖ್ಯೆಗಳೊಡನೆಯೂ **ಕೆಲವಾರು, ಹಲವಾರು** ಎಂಬಲ್ಲಿ ಸಂಖ್ಯಾರಹಿತವಾಗಿಯೂ ''ಆರು'' ಎಂಬ ಸಂಖ್ಯೆಯನ್ನು ಬಹಳಾರ್ಥಕ ಅನಿರ್ದಿಷ್ಟ ರಾಶಿಯನ್ನು ಸೂಚಿಸಲು ಬಳಸುತ್ತೇವೆ. ನನಗೆ ತಿಳಿದ ಮಟ್ಟಿಗೆ ಇಂಗ್ಲೀಷಿನಲ್ಲಾಗಲಿ ಹಿಂದಿಯಲ್ಲಾಗಲಿ ''ಆರು'' ಈ ತರಹದಲ್ಲಿ ಬಳಕೆಯಾಗುವುದಿಲ್ಲ.

''ಆರು'' ಎಂಬ ಸಂಖ್ಯಾವಾಚಕಕ್ಕೆ, ಒಂದಕ್ಕೆ ತಗಲಿದ ಹಾಗೆ, ಅನಿಶ್ಚಯಾರ್ಥ ಹೇಗೆ ತಗಲಿಕೊಂಡಿತು ? ಇಲ್ಲಿ ನನ್ನದೊಂದು ವಿತರ್ಕ : ಮನುಷ್ಯನ ಕೈಗೆ ಐದು ಬೆರಳುಗಳಿರುವ ನಿಸರ್ಗದ ಆಕಸ್ಮಿಕದಿಂದಾಗಿ ''ಹತ್ತು'' (5 × 2) ನಮ್ಮ ಸಂಖ್ಯಾಮಾನವಾಯಿತೆಂದು ವೈಜ್ಞಾನಿಕ ಊಹೆಯಿದೆ. ಸಂಖ್ಯೆಗಳನ್ನು ಎಣಿಸುವುದಕ್ಕೆ ಬೆರಳುಗಳನ್ನು ಉಪಯೋಗಿಸುತ್ತೇವಲ್ಲವೆ ? ಹೀಗೆ ಎಣಿಸುವಾಗ ಐದರೊಡನೆ ಒಂದು ಕೈಮುಗಿದು ಇನ್ನೊಂದು ಕೈಯ ಎಣಿಕೆ ಆರಕ್ಕೆ ಸಂಕ್ರಮಿಸುತ್ತದೆ. ಈ ಕಾರಣದಿಂದ ಆರು ಕೂಡ (ಬಹುತ್ವ ಸೂಚಕ) ಅನಿಶ್ಚಿತಾರ್ಥವನ್ನು ಅಂಟಿಸಿಕೊಂಡಿರಬೇಕು. ಹುಚ್ಚು ಊಹೆಯೆನ್ನುವಿರಲ್ಲವೆ ? ತಥಾಸ್ತು ! ಹತ್ತರ ಬಗೆಗಿನ ಊಹೆಯಷ್ಟೇ ಹುಚ್ಚು ಇದೂ !

ಸಂಖ್ಯೆಗೆ ಮೀರಿದ ಅರ್ಥಕ್ಕೆ ಚಾಚಿದ ಇನ್ನೊಂದು ಸಂಖ್ಯಾವಾಚಕ **ಒಂಬತ್ತು**. ಕನ್ನಡದಲ್ಲಿ ''**ಒಂದಕ್ಕೆ ಒಂಬತ್ತಾಯಿತು**'' ಎಂಬ ವಾಗ್ರೂಢಿಯೊಂದಿದೆ. (''**ಒಂದೂವರೆಯಾಯಿತು**'' ಎಂಬ ಇನ್ನೊಂದು ರೂಢಿಯೂ ಉಂಟು). ಇಲ್ಲಿ ''ಒಂಬತ್ತು'' (ಮತ್ತು ''ಒಂದೂವರೆ'') ಬಹುಳಾರ್ಥಕವಲ್ಲ. ''**ತುಂಬಾ ಗೋಜಲಾಯಿತು**'' (complicated = ಸಂಕೀರ್ಣ) ಎಂಬುದು

ಅಭಿಪ್ರಾಯ. ಇಲ್ಲಿ ಕೂಡ ಒಂಭತ್ತು ಗೋಜಲುತನವನ್ನು ಯಾಕೆ ಪ್ರತಿನಿಧಿಸುತ್ತದೆ ? ನನಗೆ ಗೊತ್ತಿಲ್ಲ. ಬಹುಶಃ ಒಂದು ತೊಂದರೆ ಇದ್ದದ್ದು ಒಂಬತ್ತು ತೊಂದರೆಗೇರಿತು ಎಂದು ಕಲ್ಪನೆ. ಆದರೆ ಒಂಬತ್ತೇ ಏಕೆ ?

೧೫೦

ಮಳೆಗಾಲ ಬಂದರೆ ನಾವು ಕೊಡೆಗಳನ್ನು ಹೊರ ತೆಗೆಯುತ್ತೇವೆ ಅಥವಾ ಕೊಳ್ಳುತ್ತೇವೆ. ಆದರೆ **ಕೊಡೆ** ಎಂಬ ಪದದ ಹುಟ್ಟು ಹೇಗೆ ? ತಮಿಳು, ಮಲೆಯಾಳಿ, ತುಳು, ತೆಲುಗು, ತೊದ ಮೊದಲಾದ ದ್ರಾವಿಡ ಭಾಷೆಗಳಲ್ಲಿ ಇದಕ್ಕೆ ಜ್ಞಾತಿಗಳಿದ್ದರೂ ಇವು ಯಾವ ತಾಯಿ ಬೇರಿನಿಂದ ಚಿಗಿತವೆಂದು ಹೇಳುವುದು ಕಷ್ಟ. ತುಳುವಿನ ''ಕೊಡಪು'' (= ಹೆಪ್ಪು ಸರಿಯಾಗಿ ಆಗದೆ ಹಾಲಿನಲ್ಲಿನ ನೀರಿನ ಅಂಶವೆಲ್ಲ ಕೆಳಗೆ ಬೇರೆ ನಿಂತು ಬಿಳಿಯ ಕೆನೆ ಮೊದಲಾದದ್ದೆಲ್ಲ ಮೇಲ್ಭಾಗದಲ್ಲಿ ಕಟ್ಟಿ ನಿಲ್ಲುವುದು) ಎಂಬ ಪದ ನೋಡಿದರೆ ಬಹುಶಃ ''ಮೇಲೆದ್ದು ಹರಡು'' ಅಥವಾ ಮುಚ್ಚು ಎಂಬ ತಾತ್ಪರ್ಯದ ಯಾವುದೋ ಧಾತುವಿನಿಂದ ''ಕೊಡೆ'' ಉತ್ಪತ್ತಿಯಾಗಿರಬೇಕೆನಿಸುತ್ತದೆ. ಸಂಸ್ಕೃತದ ''ಉತ್-ಕುಟ (= ಕೊಡೆ)'' ಶಬ್ದದಲ್ಲಿನ ''ಉತ್'' ಉಪಸರ್ಗವನ್ನು (= ಮೇಲೆ) ನೋಡಿದರೆ ಈ ಊಹೆಗೆ ಒತ್ತು ಸಿಗುತ್ತದೆ. ಕೊಡೆಯೆಂಬರ್ಥದ ಇನ್ನೊಂದು ಹಳೇ ಕನ್ನಡ ಶಬ್ದ **ತಳೆ** ಮೇಲೆದ್ದು ಚಿಗುರಿ ಹರಡು ಎಂಬರ್ಥದ ಧಾತುವಿನಿಂದ ಹೊರಟಿದ್ದೆಂದು ತುಲನಾತ್ಮಕ ದ್ರಾವಿಡ ನಿಘಂಟಿನಿಂದ (ಎಮಿನೋ ಮತ್ತು ಬರೋ) ತಿಳಿಯುತ್ತದೆ.

ಆದರೆ ನಾವು ಇಲ್ಲಿ ಚರ್ಚಿಸಬೇಕೆಂದು ಈ ನಿರುಕ್ತ ಶಾಸ್ತ್ರೀಯ ಪ್ರಶ್ನೆಯನ್ನಲ್ಲ; ಕೊಡೆಯೆಂಬ ಅರ್ಥದ ಬೇರೆ ಬೇರೆ ಭಾಷೆಗಳಲ್ಲಿನ ಪದಗಳು ಅವು ಉಪಯೋಗವಾಗುವುದು ಬಿಸಿಲಿನ ವಿರುದ್ಧವೋ ಮಳೆಯ ವಿರುದ್ಧವೋ ಎಂಬ ಸಂದಿಗ್ಧವನ್ನುಂಟುಮಾಡುವುದರ ಸೋಜಿಗವನ್ನು. ಉದಾಹರಣೆಗೆ ''ಕೊಡೆಯೆಂಬರ್ ಆತಪತ್ರಮನ್'' ಎಂಬ ಲಕ್ಷ್ಮೀಶನ ಶ್ಲೇಷೆಯನ್ನು ನೋಡಿ. ಸಂಸ್ಕೃತದಲ್ಲಿ **ಆತಪತ್ರ** ಎಂಬುದು ಕೊಡೆಗಿರುವ ಒಂದು ಪದ. ''ಆತಪ'' ಎಂದರೆ ಬಿಸಿಲು; ''ತ್ರ'' ಎಂಬುದು ಕಾಪಾಡು ಎಂಬರ್ಥದ ಪ್ರತ್ಯಯ. ಅರ್ಥಾತ್ ಬಿಸಿಲಿನಿಂದ ನಿಮ್ಮನ್ನು ರಕ್ಷಿಸುವುದು ಕೊಡೆಯ ಕೆಲಸ; ಮಳೆಯಿಂದಲ್ಲ. **ಛತ್ರ** ಎಂಬ ಇನ್ನೊಂದು ಸಂಸ್ಕೃತ ಪದ ಮಳೆಯಿಂದಲೋ ಬಿಸಿಲಿಂದಲೋ ಎಂದು ಹೇಳುವುದಿಲ್ಲ; ಒಟ್ಟಾರೆ ''ಮರೆ ಮಾಡು'' ಎಂಬರ್ಥದ (ಛದ್ = ಮರೆ ಮಾಡು, ಮುಚ್ಚು, ರಕ್ಷಣೆ ಅಥವಾ ಆಶ್ರಯ ಕೊಡು) ಧಾತುವಿನಿಂದ ಅದು ಹುಟ್ಟಿದೆ. ಎರಡೂ ತುಂಬಾ ಪ್ರಾಚೀನ ಪದಗಳು. ಭಾರೋಪ್ಯ ವರ್ಗದ ಇತರ ಭಾಷೆಗಳ ಸಮಾನಾರ್ಥಕ ಪದಗಳನ್ನು ನೋಡೋಣ. ಇಂಗ್ಲೀಷಿನ Umbrella ಇಟಾಲಿಯನ್ ಭಾಷೆಯ Ombrellaದ ಕೈಗಡವಂತೆ. Ombra (= ಲ್ಯಾಟಿನ್ Umbra) = ನೆರಳು. ನಮ್ಮ ನೆರೆಯ ಪಾರಸೀಕದಲ್ಲಿ ಕೊಡೆಗೆ **ಸಾಯಬಾನ್** ಅಥವಾ **ಸಾಯ್‌ಬಾನ್** ಎಂಬ ಪದವಿದೆ. **ಸಾಯ** ಅಂದರೆ ಸಂಸ್ಕೃತ **ಛಾಯಾ** (= ನೆರಳು)ಗೆ ತಂಗಿ. ಅದರಲ್ಲಿಯೂ ಬಿಸಿಲಿಂದ ರಕ್ಷಣೆ ಕೊಡುವುದೇ ಕೊಡೆಯೆಂದು ಸೂಚಿತವಾಗುತ್ತದೆ. ಇಂಗ್ಲೀಷ್, ಸ್ಪಾನಿಶ್ ಮೊದಲಾದ ಭಾಷೆಗಳಲ್ಲಿರುವ ಕೊಡೆಯೆಂಬರ್ಥದ Parasol ಕೂಡ ಬಿಸಿಲಿನಿಂದಲೇ ನಿಮ್ಮನ್ನು ಕಾಪಾಡುತ್ತದೆ. Sol = ಸೂರ್ಯ, ಬಿಸಿಲು. Para = ರಕ್ಷಿಸುವ.

ಆದರೆ ಫ್ರೆಂಚರು ಮಳೆಗೇ ಕೊಡೆ ಹಿಡಿಯುತ್ತಾರೆ. ಅವರ Paraplule ನಲ್ಲಿ Plule ಎಂದರೆ ಮಳೆ. ಸ್ಪಾನಿಶ್‌ನಲ್ಲಿ Parasol ಇದ್ದರೂ ಮಳೆಗೂ ಹಿಡಿಯುವಂಥ Paraguas ಕೂಡ ಇದೆ; aguas = ಮಳೆ. ಪೋರ್ಚುಗೀಸಿನ guarda chua ಶಬ್ದದಲ್ಲಿ ಮೊದಲಿನ ಭಾಗ ಕಾಪಾಡುವ ಎಂಬರ್ಥವನ್ನೂ ಎರಡನೇ ಭಾಗ (Chua) ಮಳೆಯನ್ನೂ ನಿರ್ದೇಶಿಸುತ್ತವೆ.

ನಮ್ಮ ''ಕೊಡೆ''ಯಾಗಲಿ ''ತಳೆ''ಯಾಗಲಿ ತಾನು ಬಿಸಿಲಿಗೆ ಹಿಡಿಯುವಂಥಾದ್ದೋ ಮಳೆಗೋ ಎಂದು ಸ್ಪಷ್ಟಪಡಿಸುವುದಿಲ್ಲ. ಛತ್ರದ ಹಾಗೆಯೇ. ಆದರೆ ಸಂಸ್ಕೃತ ಕೋಶಗಳಲ್ಲಿ ಮಳೆಗೇ ಹಿಡಿಯುವ **ಜಲತ್ರಾ** ಎಂಬೊಂದು ಕೊಡೆಯ ಹೆಸರಿದೆ. ನೀರಿನಿಂದ ರಕ್ಷಿಸುವಂಥಾದ್ದು ಎಂದು ಅದರ ಅರ್ಥ. ಇದು ಬರೇ ಕೋಶಕಾರರ ಸೃಷ್ಟಿಯೇ ಇರಬಹುದು. ಕಾವ್ಯಗಳಲ್ಲಿ ಪ್ರಯೋಗವಿದ್ದಂತೆ ಕಾಣದು. ಯಾವ ಕೋಶವೂ ''ಜಲತ್ರಾ''ದ ಸಾಹಿತ್ಯಕ ಪ್ರಯೋಗವನ್ನು ಎತ್ತಿ ತೋರಿಸಿಲ್ಲ. ಸಾಹಿತ್ಯದಲ್ಲಿ ''ಆತಪತ್ರ'', ''ಛತ್ರ''ಗಳೇ ಹೆಚ್ಚು ಪ್ರಚಲಿತ.

ಕೊಡೆಗಳು ರಾಜ್ಯಾಧಿಕಾರ, ಸಾಮಾಜಿಕ ಅಂತಸ್ತು ಮೊದಲಾದವುಗಳ ಚಿಹ್ನೆಗಳಾಗಿದ್ದವು. ''ಶ್ವೇತಚ್ಛತ್ರ'', ''ಸಿತಾತಪತ್ರ'' ಮೊದಲಾದ ಪದಗಳೂ ಶುದ್ಧ ಕನ್ನಡದ ''ಬೆಳ್ಗೊಡೆ'' (= ಬಿಳಿ ಕೊಡೆ) ಪದವೂ ಯಾವಾಗಲೂ ರಾಜರಿಗೆ ಸಂಬಂಧಿಸಿಯೇ ಸಾಹಿತ್ಯದಲ್ಲಿ ಕಾಣಬರುತ್ತದೆ. ಅದನ್ನು ಹಿಡಿಯುವ ಅಧಿಕಾರ ರಾಜರಿಗೆ ಮಾತ್ರ. ಅವರು ಹೋದಲ್ಲೆಲ್ಲ ಅದನ್ನು ಒಯ್ಯುವ ''ಛತ್ರಧರ'' ಸೇವಕರೂ ಇದ್ದರು. ಆದರೆ ಆ ಕಾಲ ಹಿಂದೂ ರಾಜರೊಡನೆಯೆ ಹೋಯಿತು. ಸಾಮಾನ್ಯರೂ (ಕಪ್ಪು ಬಟ್ಟೆಯ) ಕೊಡೆ ಹಿಡಿಯತೊಡಗಿದರು. ಹಳೇ ಕೊಡೆಗಳ ಮೇಲೆ ಬಿಳಿಯ ಬಟ್ಟೆಯ ಹೊದಿಕೆ ಹೊದಿಸಿ ಉಪಯೋಗಿಸುವುದು ಕಾಣಿಸತೊಡಗಿತು. ಅವರೂ ರಾಜ್ಯವಿಲ್ಲದೆ ಶ್ವೇತಚ್ಛತ್ರಧಾರಿಗಳು !

**ಬೀಸಣಿಗೆ** ಕೂಡ ರಾಜರಿಗೆ ಮಾತ್ರವಲ್ಲದಿದ್ದರೂ ಆಢ್ಯರಿಗಂತೂ ಅವಶ್ಯವಾಗಿತ್ತು. ''ಛತ್ರ ಚಾಮರ ವ್ಯಜನ'' ಎಂಬ ರಾಜ ಚಿಹ್ನೆಗಳಲ್ಲಿ **ವ್ಯಜನ** ಎಂದರೆ ಬೀಸಣಿಗೆ. ಬೀಸಣಿಗೆಯ ಮೂಲದ ಬಗ್ಗೆ ಹೆಚ್ಚು ಪರದಾಡಬೇಕಾಗಿಲ್ಲ. ಅದು (ಗಾಳಿ) ಬೀಸುವ ಸಾಧನ. **ಬೀಸು** ಎಂಬ ದ್ರಾವಿಡ ಧಾತು (ತಮಿಳು; ವೀಚು) ರಭಸದಿಂದ ಚಲಿಸು, ಚಲಿಸುವಂತೆ ಮಾಡು ಎಂಬರ್ಥ ಹೊಂದಿದೆ. ಗಾಳಿಯನ್ನಲ್ಲದೆ ಕಲ್ಲನ್ನೂ ಬೀಸಿ ಒಗೆಯಬಹುದು. **ಅಣಿಗೆ** ಸಾಧನ ಎಂಬರ್ಥದ ಪ್ರತ್ಯಯ : ''ಬಾಚಣಿಗೆ'', ''ಅಡ್ಡಣಿಗೆ'' ಇತ್ಯಾದಿ ಉದಾಹರಣೆಗಳಿವೆ. ಸಂಸ್ಕೃತದಲ್ಲಿ ''ವ್ಯಜನ'' (= ಬೀಸಣಿಗೆ) ಆರ್ಯ ಭಾಷಾ ಮೂಲದ್ದಲ್ಲ ಎಂಬ ಭಾಷಾಶಾಸ್ತ್ರಜ್ಞರ ಹೇಳಿಕೆ ಸುಸಂಗತವಾಗಿ ಕಾಣಿಸುತ್ತದೆ. ಯಾಕೆಂದರೆ ಸಂಸ್ಕೃತದ **ವೀಜ್, ವ್ಯಜ್** ಧಾತುಗಳಿಂದ ''ವ್ಯಜನ'' ಹುಟ್ಟಿತೆಂಬುದು ಪಂಡಿತರ ಹೇಳಿಕೆಯಾದರೂ ಆ ಧಾತುವೇ ದ್ರಾವಿಡ ''ವೀಚು'' ಧಾತುವಿನಿಂದ ಸ್ವೀಕೃತವೆಂದು ಅನಿಸುತ್ತದೆ. ಸಂಸ್ಕೃತದಲ್ಲಿ ಮಹಾಭಾರತದಷ್ಟು ಹಳೆಯದಾದರೂ ''ವ್ಯಜನ''ಕ್ಕೆ ಮನಂಬುಗುವ ನಿಷ್ಪತ್ತಿ ಸಿಗುವುದಿಲ್ಲ.

ಬೀಸಣಿಗೆಗಿರುವ ಇಂಗ್ಲೀಷ್ ಶಬ್ದ fan ಎಂಬುದು ಈಗ ಸರ್ವರಿಗೂ ತಿಳಿದದ್ದೇ. ಅದನ್ನು ಇಲ್ಲಿ ಚರ್ಚಿಸಲು ತೆಗೆದುಕೊಂಡ ಕಾರಣವೆಂದರೆ, ಆ ಶಬ್ದದ ಜಾಡು ಹಿಡಿದು ಹೋದಾಗ ನಾವು ಕೊನೆಗೆ ತಲುಪುವುದು ಲ್ಯಾಟಿನ್ Vannusಗೆ. Vannus ಎಂದರೆ ಗಾಳಿ ಬೀಸಿಕೊಳ್ಳುವ ಸಾಧನವಲ್ಲ; ಕಾಳಿನಿಂದ ಕಸವನ್ನು ತೂರುವುದಕ್ಕಾಗಿ ಗಾಳಿ ಹಾಕುವ ಸಾಧನ – ಅರ್ಥಾತ್ ರೈತರ ಒಂದು ಉಪಕರಣ. ಕೃಷಿಯುಗದ ಅನೇಕ ಪದಗಳು

ಔದ್ಯೋಗಿಕ ಯುಗಕ್ಕೂ ದಾಟಿ ಬಂದಿವೆಯಲ್ಲವೆ ?

ಬೀಸಣಿಗೆಯನ್ನು ಬೆಳ್ಳಿಯಿಂದ, ಅಡಿಕೆಯ ಹಾಳೆಯಿಂದ, ಶ್ರೀಮಂತರು ಲಾಮಂಚದಿಂದ, ಇತರ ವಸ್ತುಗಳಿಂದ ಮಾಡುತ್ತಿದ್ದರೂ ಬಹುತರವಾಗಿ ಬಳಕೆಯಲ್ಲಿದ್ದದ್ದು ತಾಳೆಯ ಓಲೆಯಿಂದ ಮಾಡಿದ ಬೀಸಣಿಕೆಯೆಂಬುದು ಸಂಸ್ಕೃತದಲ್ಲಿ ಬೀಸಣಿಗೆಗಿರುವ ಇನ್ನೊಂದು ಪದವಾದ **ತಾಲವೃಂತ** ಅಥವಾ **ತಾಡವೃಂತ** ಎಂಬ ಪದದಿಂದ ತಿಳಿಯುತ್ತದೆ. ಮಹಾಭಾರತ ಕಾಲದಲ್ಲೇ ತಾಳೆ ಗರಿಯ ಬೀಸಣಿಗೆ ಬಳಕೆಯಲ್ಲಿತ್ತು.

೧೫೧

''ನಿನ್ನ ಪ್ರವರ ಎಲ್ಲ ಬಿಚ್ಚಿಬಿಟ್ಟೇನು !'' ಎಂಬೊಂದು ಮಾತು, ಹೆಚ್ಚಾಗಿ ಹಳೇ ಮೈಸೂರು ಪ್ರದೇಶದಲ್ಲಿ ಪ್ರಚಲಿತವಾಗಿದೆ. ಅದರ ತಾತ್ಪರ್ಯ, ನಿನ್ನ ಪೂರ್ವ ಚರಿತ್ರೆಯನ್ನೆಲ್ಲ ಬಹಿರಂಗವಾಗಿ ಬಿಡಿಸಿ ಮಾನ ಕಳೆದೇನು ಅಂತ. ಆದರೆ ಈ ''ಪ್ರವರ'' ಎಂದರೇನು ? ಶಬ್ದಕ್ಕೆ ಅನೇಕಾರ್ಥಗಳಿವೆ. ''ವರ'' ಎಂದರೆ ಶ್ರೇಷ್ಠ. ''ಪ್ರವರ'' ಎಂದರೆ ತುಂಬಾ ಶ್ರೇಷ್ಠ. ''ಪಂಡಿತ ಪ್ರವರ'' ಮುಂತಾಗಿ. ಈ ಶಬ್ದಕ್ಕಿರುವ ಅನೇಕ ಅರ್ಥಗಳ ಗೊಡವೆ ಬಿಟ್ಟು ಪ್ರಸ್ತುತವನ್ನು ಚರ್ಚಿಸೋಣ. ಜನಿವಾರವುಳ್ಳ ಮೂರು ವರ್ಣ (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ)ಗಳು ತಮ್ಮ ಕುಲಗಳನ್ನು ''ಗೋತ್ರ''ಗಳಿಂದ ಗುರುತಿಸುವುದು ಸರ್ವವಿದಿತ. ಪ್ರತಿಯೊಂದು ಗೋತ್ರದ ಮೂಲದಲ್ಲಿ ಒಬ್ಬ ಋಷಿ ಇರುತ್ತಾನೆ. ಅಂಗಿರಸ, ವಿಶ್ವಾಮಿತ್ರ, ವಸಿಷ್ಠ ಇತ್ಯಾದಿ. ಈ ಋಷಿಗಳಷ್ಟೇ ಅಲ್ಲದೆ ಆಯಾ ಋಷಿ ಕುಲಕ್ಕೆ ಸಂಬಂಧಿಸಿದಂತೆ ಬೇರೆ ಬೇರೆ ಕವಲುಗಳಿದ್ದು ಅವುಗಳನ್ನು ''ಪ್ರವರ''ಗಳಿಂದ ಗುರುತಿಸುತ್ತಾರೆ. ಉದಾಹರಣೆಗೆ, ನನ್ನ ಕುಲ ಮೂಲತಃ ಆಂಗಿರಸ (ಋಷಿಯ) ಗೋತ್ರಕ್ಕೆ ಸೇರಿದ್ದು. ಅದರಲ್ಲಿರುವ ಅನೇಕ ಕವಲುಗಳನ್ನು ಪ್ರವರ ಋಷಿಗಳ ವಂಶಾವಳಿಯಿಂದ ಗುರುತಿಸಲಾಗುತ್ತದೆ. ನಮ್ಮ ವಂಶವನ್ನು ''ಆಂಗಿರಸ ಬೃಹಸ್ಪತಿ ಭಾರದ್ವಾಜ'' ಎಂಬ ಮೂವರು ಋಷಿಗಳ ಬಳಿಯಿಂದ ಗುರುತಿಸಲಾಗುತ್ತದೆ. ಹೀಗೆ ನಾನು ನನ್ನ ವಂಶವನ್ನು ''ಆಂಗಿರಸ – ಬಾರ್ಹಸ್ಪತ್ಯ – ಭಾರದ್ವಾಜ ತ್ರಯಾರ್ಷೇಯ ಪ್ರವರಾನ್ವಿತ'' ಎಂದು ಹೇಳಿಕೊಳ್ಳುತ್ತೇನೆ. (''ತ್ರಯಾರ್ಷೇಯ'' ಎಂದರೆ ಮೂರು ಋಷಿಗಳಿಂದ ಬಂದದ್ದು.) ಹೀಗೆ ನನ್ನ ಪ್ರವರ ಬಿಚ್ಚುವುದಾಗಿ ದಬಾಯಿಸಿದರೆ ನನ್ನ ಸ್ವಂತ ಚರಿತ್ರೆಯನ್ನಷ್ಟೆ ಅಲ್ಲ, ನನ್ನ ಪೂರ್ವಜರ ಎಲ್ಲ ಅಕಲ್ಯಾಣ ಚರಿತ್ರೆಯನ್ನೂ ಬೆಳಕಿಗೆ ಹಿಡಿಯುವುದಾಗಿ ಅರ್ಥ. ಈ ಬೆದರಿಕೆ ನನ್ನ ಗೋತ್ರ ಋಷಿಗಳನ್ನು ಕುರಿಯದಿದ್ದರೂ ನನ್ನಪ್ಪ-ಅಜ್ಜ ಮೊದಲಾದವರನ್ನು ಒಳಗೊಳ್ಳಬಹುದು; ಅದಿಲ್ಲವಾದರೂ ನನ್ನ ಪೂರ್ವಚರಿತ್ರೆಯನ್ನಂತೂ ಹೊರಗೆ ತೆಗೆದು ಮಾನ ಕಳೆಯಬಹುದು. ಪ್ರವರ = ವಂಶಾವಳಿ.

* * *

ಕ್ರೂರಸ್ವಭಾವ, ಅಥವಾ ರೀತಿ ನೀತಿಗಳನ್ನು ಬಿಟ್ಟು ಅನಾಗರಿಕ ಅಥವಾ ಉದ್ಧಟತನದಿಂದ ನಡೆದುಕೊಳ್ಳುವವರನ್ನು ''ಕಿರಾತ'', ''ರಾಕ್ಷಸ'', ''ದೈತ್ಯ'' ಎಂದೆಲ್ಲ ವಿಶೇಷಿಸುತ್ತೇವೆ. ಈ ಹೆಸರು ಹೊತ್ತವರೆಲ್ಲ ಪುರಾತನ ಕಾಲದಲ್ಲಿ ಈ ದೇಶದಲ್ಲಿ ವಸತಿ ಮಾಡಿದ್ದ ಜನಾಂಗಗಳೆಂಬುದು ಸಾಮಾನ್ಯವಾಗಿ ಗೊತ್ತಿದ್ದ ವಿಷಯ. ಇವರಲ್ಲಿ ''ಕಿರಾತ''ರು

– ಬಹುಶಃ-ಹಿಮಾಲಯದ ಗುಡ್ಡಗಾಡುಗಳಲ್ಲಿ ವಾಸಿಸುತ್ತಿದ್ದ ಜನಾಂಗ. ಯಾಕೆಂದರೆ ಶಿವನು ಕಿರಾತ ವೇಷದಲ್ಲಿ ಬಂದು ಅರ್ಜುನನೊಡನೆ ಸೆಣಸಾಡಿ, ಪರಾಕ್ರಮಕ್ಕೆ ಮೆಚ್ಚಿ ಅವನಿಗೆ ಪಾಶುಪತಾಸ್ತ್ರ ಕೊಟ್ಟನೆಂದು ಮಹಾಭಾರತ ಉಲ್ಲೇಖಿಸುತ್ತದೆ. ಬೇಟೆಯಾಡಿ ಬದುಕುತ್ತಲಿದ್ದ ಕಿರಾತರು ಈ ದೇಶದಲ್ಲಿ ಆರ್ಯರಿಗಿಂತ ಮುಂಚೆ ವಿಸ್ತಾರವಾಗಿ ಹಬ್ಬಿದ್ದು ನಮ್ಮ ಭಾಷೆಗಳಿಗೆ ಸಾವಿರಾರು ಶಬ್ದಗಳನ್ನು ಕೊಟ್ಟವರೆಂದು ಭಾಷಾಶಾಸ್ತ್ರಿ ಸುನೀತಿಕುಮಾರ ಚಟರ್ಜಿಯವರು ಹೇಳಿದ್ದಾರೆ. ಬಹುಶಃ ಆಧುನಿಕ ಜನಾಂಗ ಶಾಸ್ತ್ರಜ್ಞರು ''ಆಸ್ಟ್ರಿಕ್'' ಎಂದು ಕರೆಯುವ ಜನಾಂಗ ಇದಾಗಿರಬೇಕು. ಒತ್ತುತ್ತ ಬಂದ ಆರ್ಯ ಜನಾಂಗದ ಮುಂದೆ ನಿಲ್ಲಲಾರದೆ ಇವರು ಗುಡ್ಡಗಾಡು ಸೇರಿ ಅನಾಗರಿಕರೆನಿಸಿದರು; ಅವರೀಗ ನಮಗೆ ತುಚ್ಛೀಕಾರ ವ್ಯಕ್ತಪಡಿಸುವ ಶಬ್ದವಾಗಿ ಉಳಿದಿದ್ದಾರೆ. ಯುದ್ಧಗಳಲ್ಲಿ ಸೋತವರಿಗೆ ಏನಾಗುತ್ತದೆಂಬುದಕ್ಕೆ ಇದೊಂದು ಉದಾಹರಣೆ.

* * *

ಇಂದು ನಾವು ''ದೈತ್ಯ''ರು, ''ದಾನವ''ರು, ''ರಾಕ್ಷಸ''ರು ಎಲ್ಲ ಒಂದೇ ಎಂದು ಭಾವಿಸುತ್ತೇವೆ. ಆದರೆ ಕ್ರಿಸ್ತಶಕ ಆರನೇ ಶತಮಾನದ ಅಮರಕೋಶ ಅಸುರ, ದೈತ್ಯ, ದಾನವರನ್ನೆಲ್ಲ ಒಂದೇ ರಾಶಿಯಲ್ಲಿ ಸೇರಿಸಿದರೂ ರಾಕ್ಷಸರನ್ನು ಬೇರೆಯಾಗಿಟ್ಟಿದೆ. ವೇದಗಳಲ್ಲಿ ''ರಕ್ಷಸ್ಸು'' (ರಕ್ಷಃ)ಗಳು ಬರುತ್ತಾರೆ. ''ರಾಕ್ಷಸ''ರು ಐತರೇಯ ಬ್ರಾಹ್ಮಣದ ಕಾಲದಿಂದ ಕಾಣಿಸಿಕೊಳ್ಳುತ್ತಾರೆ. ರಕ್ಷಸ್ಸುಗಳು ಅಮರಕೋಶದಲ್ಲಿ ಯಕ್ಷ, ಗಂಧರ್ವ, ಕಿನ್ನರ ಮೊದಲಾದ ಹಿಮಾಲಯದ ಜನಾಂಗಗಳೊಡನೆ ಹೇಳಲ್ಪಟ್ಟಿರುವುದರಿಂದ ಅವರು ಆರ್ಯರೇ ಆಗಿರಬೇಕಾದ ದೈತ್ಯ, ದಾನವರಿಗಿಂತ ಬೇರೆಯೇ ಇರಬೇಕು. ವೇದದಲ್ಲಿ ರಕ್ಷೋಘ್ನ ಮಂತ್ರವೊಂದಿದೆ. (ರಕ್ಷೋಘ್ನ ಎಂದರೆ ರಕ್ಷಸ್ಸುಗಳನ್ನು ಕೊಲ್ಲುವ) ಇವರು ಮಂಗೋಲಿಯನ್ ಮೂಲದವರಿರಬೇಕು. ಇವರ ಬಳಗಕ್ಕೆ ಸೇರಿದ ರಾಕ್ಷಸರು ಗಂಗಾನದಿಯಿಂದ ದಕ್ಷಿಣಕ್ಕೆ ವ್ಯಾಪಿಸಿ ಆರ್ಯರ ವಿಸ್ತರಣೆಗೆ ಅಡ್ಡಿಯಾಗಿದ್ದರು. ದೇವತೆಗಳನ್ನು ಸೋಲಿಸಿ ಇವರ ನಾಯಕನಾದ ರಾವಣ ಹಾವಳಿಯೆನ್ನೆಬ್ಬಿಸಿದ್ದನೆಂದು ರಾಮಾಯಣದ ಕಥೆ. ಆದರೆ ಇವರು ಖಂಡಿತ ''ದಾನವ''ರಲ್ಲ. ಯಾಕೆಂದರೆ ರಾವಣನಿಂದ ಭಯಗ್ರಸ್ತರಾಗಿದ್ದವರಲ್ಲಿ ದಾನವರೂ ಸೇರಿದ್ದರೆಂದು ರಾಮಾಯಣದ ಯುದ್ಧಕಾಂಡದಲ್ಲಿ ಒಂದಕ್ಕಿಂತ ಹೆಚ್ಚುಸಲ ಹೇಳಿದೆ. ಅವನ ಸೋಲನ್ನು ಬಯಸುತ್ತಿದ್ದವರಲ್ಲಿ ದಾನವರೂ ಸೇರಿದ್ದರು. ದೇವ, ಅಸುರ, ದೈತ್ಯ, ದಾನವರೆಲ್ಲ ಮೂಲದಲ್ಲಿ ಕಶ್ಯಪ ಋಷಿಯ ಬೇರೆ ಬೇರೆ ಹೆಂಡಂದಿರ ಮಕ್ಕಳು – ಪರಸ್ಪರ ಶತ್ರುಗಳು. ಇವರಲ್ಲಿ ''ದೈತ್ಯ''ರನ್ನು ಕುವೆಂಪು ಅವರು ದೌರ್ಜನ್ಯದಿಂದ ಉದ್ಧರಿಸಿ ಬಿಟ್ಟಿದ್ದಾರೆ. ಮಹಾಗಾತ್ರದ ಮಹಾಶಕ್ತಿಯ ಜನ ಮತ್ತು ಅವರ ಮಹತ್ವ ಎಂಬರ್ಥದಲ್ಲಿ ''ದೈತ್ಯ''ವನ್ನು ಚಾಲ್ತಿಗೆ ತಂದಿದ್ದಾರೆ. ಹೀಗೆ ''ದೈತ್ಯ ಶಕ್ತಿ'', ''ದೈತ್ಯ ಪ್ರತಿಭೆ'' – ಸಾಮಾನ್ಯರಿಗೆ ಸಿಲುಕದ್ದು. ಇಂಗ್ಲೀಷಿನ gaint – ಗ್ರೀಕ್ ಪುರಾಣದ ಮಹಾಗಾತ್ರದ ಮಾನವ. ಆ ಪದಕ್ಕೆ ದೈತ್ಯವನ್ನು ಸಮೀಕರಿಸಿದ್ದಾರೆ.

ಅಂದಹಾಗೆ, ಮೊನ್ನೆ ಒಂದು ಗ್ರಂಥದಲ್ಲಿ Asura Sites – ಅಸುರ ವಸತಿಗಳು ಎಂಬ ಉಲ್ಲೇಖ ನೋಡಿದೆ. (Monastery and Guild by Himanshu P Ray) ಛೋಟಾ ನಾಗಪುರದ ಗುಡ್ಡ ಪ್ರದೇಶದಲ್ಲಿ ''ಅಸುರ'' ಅವಶೇಷಗಳು ಸಿಕ್ಕಿವೆ. ಇಟ್ಟಿಗೆಯ ಕಟ್ಟಡಗಳ ಭಗ್ನಾವಶೇಷಗಳಿಂದ ಕೂಡಿದ ಈ ಗತಕಾಲದ – ಸಾತವಾಹನರ ಕಾಲಕ್ಕೂ ಹಿಂದೆ –

ಸ್ಥಾನಗಳ ಬಳಿ ಕಬ್ಬಿಣದ ಗಣಿ ಮತ್ತು ಕುಲುಮೆಗಳ ಕುರುಹುಗಳಿವೆಯಂತೆ. ಎರಡು ಸಾವಿರ ವರ್ಷಗಳಿಗಿಂತಲೂ ಪೂರ್ವದಲ್ಲಿ ಕಬ್ಬಿಣದ ಭಟ್ಟಿಗಳನ್ನು ಈ ದೇಶಕ್ಕೆ ತಂದವರನ್ನು ''ಅಸುರ''ರೆಂದು ಕರೆಯುತ್ತಿದ್ದರೆ? ಮಹಾಭಾರತ ಕಾಲದಲ್ಲಿ (ಸುಮಾರು ೩,೪೦೦ ವರ್ಷಗಳ ಹಿಂದೆ) ಕಬ್ಬಿಣದ ಬಳಕೆ ಇದ್ದಿಲ್ಲವೆಂದು ಹಸ್ತಿನಾಪುರದ ಉತ್ಖನನಗಳು ತೋರಿಸಿವೆ. ಈ ಅಸುರರೂ ಇಂದಿನ ಇರಾಣದಲ್ಲಿದ್ದ ನಮ್ಮ ದೇವತೆಗಳ ಶತ್ರುಗಳಾದ ಅಸುರರು ಬೇರೆಯೇ ಏನು ?

೧೫೨

''ಸುಪ್ರಭಾತ'' ಎಂಬ ಬೆಳಗಿನ ಶುಭಾಶಂಸೆ ನಿತ್ಯರೂಢಿಯಲ್ಲಿ ಅಷ್ಟಾಗಿ ಇಲ್ಲದಿದ್ದರೂ ಇಂದು ವೆಂಕಟೇಶ ಸುಪ್ರಭಾತ ಮೊದಲ್ಗೊಂಡು ಎಲ್ಲ ಮಹಾ ಮತ್ತು ಕ್ಷುದ್ರ ದೇವತೆಗಳನ್ನು ಬೆಳಗಿನ ಪ್ರಾರ್ಥನೆಗೆ ಎಚ್ಚರಿಸಲು ಕ್ಯಾಸೆಟ್ಟೀಕೃತ ಸುಪ್ರಭಾತ ಸ್ತೋತ್ರಗಳು ಹುಟ್ಟಿಕೊಂಡಿರುವುದರಿಂದ ಎಲ್ಲರಿಗೂ ಆ ಶಬ್ದ ಪರಿಚಿತವಾಗಿದೆ. ಈ ಶಬ್ದ ರಾಮಾಯಣದಷ್ಟು ಹಳೆಯದು; ಅನಂತರದ ಸಂಸ್ಕೃತ ಕಾವ್ಯಗಳಲ್ಲಿಯೂ ಅದು ಕಾಣಿಸುತ್ತದೆ. ಶಬ್ದದ ಅರ್ಥ, ಸು = ಒಳ್ಳೆಯ, ಶುಭ, ಸುಂದರ; ಪ್ರಭಾತ = ಮುಂಬೆಳಗು. ಜನರು ಇನ್ನೂ ''ಮೂಡಲ ಮನೆಯಾ ಮುತ್ತಿನನೀರಿನೆರಕsವಾ ಹೊಯ್ದಾ'' ಸೌಂದರ್ಯವನ್ನು ಕಂಡು ಸವಿಯುವಷ್ಟು ಬೇಗ ಏಳುತ್ತಿದ್ದ ಕಾಲದಲ್ಲಿ ಸುಂದರ, ಸುಭಗ ಪ್ರಾತಃಕಾಲವನ್ನು ಸೂಚಿಸುವ ''ಸುಪ್ರಭಾತ'' ಶಬ್ದ ಹುಟ್ಟಿತು. ಆಮೇಲೆ ಅದೇ ಆಶೀರ್ವಕ್ರಿಯಾರ್ಥ (ಆಶೀರ್ವಾದ, ನಮಸ್ಕಾರ)ದಲ್ಲಿ ''ಇಂದಿನ ಬೆಳಗು ನಿನಗೆ ಮಂಗಳಕರ, ಶುಭದಾಯಕವಾಗಲಿ, ಒಳಿತು ಮಾಡಲಿ,'' ಎಂಬಂತೆ ಪ್ರಯೋಗವಾಗ ತೊಡಗಿತೆಂದು ತರ್ಕಿಸಬೇಕು. ವಾಮನ ಪುರಾಣದಲ್ಲಿ ಬೆಳಗಿನ ಪ್ರಾರ್ಥನೆಯಾಗಿ ''ಸುಪ್ರಭಾತ''ದ ಉಲ್ಲೇಖ ಬರುತ್ತದೆ. ನನ್ನ ಊಹೆಯ ಪ್ರಕಾರ ಸುಪ್ರಭಾತ ಸಂಪ್ರದಾಯ ಅರಮನೆಗಳಲ್ಲಿ ಆರಂಭವಾಗಿ ದೇವಮಂದಿರಗಳಿಗೆ ಸಂಕ್ರಮಿಸಿರಬೇಕು. ಅರಸನನ್ನು ಎಬ್ಬಿಸಲು ಮಂಗಳ ವಾದ್ಯ ಪ್ರಶಂಸೆ ಶುಭಾಶಂಸೆಗಳೊಡನೆ ವಂದಿಮಾಗಧರು ಹೋಗುವ ಪ್ರಥೆ ರಾಮಾಯಣದಲ್ಲೇ ಇದೆ. (ಅಯೋಧ್ಯಾ ಕಾಂಡದಲ್ಲಿ ರಾಮ ಅಗಲಿಹೋದ ನಂತರ ಹೀಗೆ ಬೆಳಗಾತ ದಶರಥನನ್ನು ಎಬ್ಬಿಸಹೋದ ವಂದಿಗಳು ದಶರಥ ತೀರಿಹೋದದ್ದನ್ನು ಮೊದಲು ಕಂಡುಹಿಡಿದರು). ಅರಮನೆಗಳ ಅನೇಕ ಸಂಪ್ರದಾಯಗಳು ದೇವಮಂದಿರಗಳಲ್ಲಿ ಪ್ರತಿಧ್ವನಿಸಿದ್ದು ನನ್ನ ಗಮನಕ್ಕೆ ಬಂದಿದೆ.

ಗತಕಾಲದ ಮನುಷ್ಯನಿಗೆ ಅಂಧಕಾರ ರಾತ್ರಿಯ ನಂತರ ಬೆಳಕು ಹರಿಯುವುದೇ ಮಹಾ ಸಂಭ್ರಮವಾಗಿತ್ತು. ಆ ಸಮಯದಲ್ಲಿ ಶುಭದ ಆಶೀರ್ವಚನ ಅಥವಾ ಕುರುಹು ಕಂಡರೆ ಅಂದಿನ ದಿನ ಶುಭಕರವಾಗುವುದೆಂದೇ ನಿಶ್ಚಯ. ಆಗ ಒಳ್ಳೆಯವರನ್ನು ನೆನೆಯಬೇಕು. ''ಹೊತ್ತಾರೆ ನಾನೆದ್ದು ಯಾರ್ಯಾರ ನೆನೆಯಲಿ ?'' ಎಂದು ಪ್ರಶ್ನೆ ಹಾಕಿಕೊಂಡು ಭೂಮಿ ತಾಯಿ ಮೊದಲ್ಗೊಂಡು ಗೋಮಾತೆಯವರೆಗೆ ಹಿತವರನ್ನು ಗರತಿ ನೆನೆದುಕೊಳ್ಳುತ್ತಿದ್ದಳು.

ಇಂಥದೇ ಇನ್ನೊಂದು ಸಂಪ್ರದಾಯ ಹಿತವರು ಬಂದರೆ ''ಸ್ವಾಗತ'' ಅಥವಾ ''ಸುಸ್ವಾಗತ''ವನ್ನು ಕೋರುವುದು. ಇದೂ ರಾಮಾಯಣದಲ್ಲೇ ಹಲವು ಬಾರಿ ಒದಗುವ ಸನ್ನಿವೇಶ. ಮಹಾಭಾರತದಲ್ಲಿ ಕೂಡ. ಸು = ಚೆನ್ನಾಗಿ, ಸಂತೋಷಕರವಾಗಿ + ಆಗತ =

ಬಂದದ್ದಾಯಿತು – ಎಂದು ತಾತ್ಪರ್ಯ. ''ಸುಸ್ವಾಗತ'' ಎಂದರೆ ಸು-ಸು- ಬಹಳ ಬಹಳ ಸಂತೋಷವಾಯಿತು. ನೀವು ಬಂದದ್ದು ಅಂದ ಹಾಗೆ. ಹಿರಿಯರು, ಅಪರೂಪದ ಬಂಧುಗಳು, ಅತಿಥಿಗಳು ಬಂದರೆ ಅವರಿಗೆ ಸ್ವಾಗತ ಕೋರುವುದು ಶಿಷ್ಟಾಚಾರ.

ಈ ಎರಡು ಶಬ್ದಗಳನ್ನು ಇಲ್ಲಿ ಚರ್ಚಿಸಲು ಒಂದು ಕಾರಣವೆಂದರೆ ಈ ಸಂಪ್ರದಾಯದ ಸಾರ್ವತ್ರಿಕತೆಯನ್ನು ಬೊಟ್ಟು ಮಾಡುವುದು ಎಪ್ಪತ್ತು ರೇಖಾಂಶಗಳಾಚೆಗೆ ಯುರೋಪಿನ ಜನರು ಹೆಚ್ಚು ಕಡಿಮೆ ಇವೇ ಮಾತುಗಳಿಂದ ಇವೇ ಸನ್ನಿವೇಶಗಳನ್ನು ಎದುರಿಸುತ್ತಾರೆ. ಬೆಳಿಗ್ಗೆ ಮಿತ್ರರೋ ಬಂಧುಗಳೋ ಎದುರಿಗೆ ಸಿಕ್ಕಿದರೆ ಇಂಗ್ಲೀಷ್ ಜನರು good-morning (= ಅಕ್ಷರಶಃ good + ಸು + morning – ಪ್ರಭಾತ) ಎಂದು ಹೇಳುತ್ತಾರೆ. ಫ್ರೆಂಚರೂ ಪೋರ್ಚುಗೀಸರೂ ಪ್ರಭಾತಕ್ಕೂ ಹಗಲಿಗೂ ಹೆಚ್ಚು ಭೇದ ಮಾಡದೆ ವಂದಿಸುತ್ತಾರೆ. ಫ್ರೆಂಚರು bonjour (bon = ಒಳ್ಳೆ + jour = ಬೆಳಕು, ಹಗಲು, ದಿನ) ಎಂದರೆ, ಸ್ಪಾನಿಷರು buenos (ಒಳ್ಳೇ) dias (= ಹಗಲು, ದಿನ) ಎನ್ನುತ್ತಾರೆ.

''ಸ್ವಾಗತ'', ''ಸುಸ್ವಾಗತ''ದ ಮಾತೂ ಅಷ್ಟೇ. ಯಾವುದೇ ಮದುವೆ ಚಪ್ಪರಕ್ಕೆ ಹೋದರೆ ನಿಮಗೆ ಮೊದಲು ಎದುರಾಗುವುದು welcome ಬರೆದ ಫಲಕ. ಈ ಇಂಗ್ಲೀಷ್ ಪದದ ಅರ್ಥವೂ ಅಕ್ಷರಶಃ ''ಸ್ವಾಗತ'' – (well - ಸು, ಒಳ್ಳೆ, ಸುಖದಾಯಕ + come = ಬರವು, ಆಗತ) ಇದು ಹಳೇ ಇಂಗ್ಲೀಷಿನ wileumaದ ಅಪಭ್ರಂಶವೆಂದು ಆಕ್ಸ್‌ಫರ್ಡ್ ಕೋಶ ಹೇಳುತ್ತದೆ. ನಾವು ಬಯಸಿದ್ದೇ ನಿಮ್ಮ ಆಗಮನವನ್ನು ಎಂದು ಅದರ ಅರ್ಥ. ಹಳೇ ಇಂಗ್ಲೀಷ್ ಎಂದ ಮೇಲೆ ಅದು ಸುಮಾರು ೫೦೦ ವರ್ಷ ಹಳೇ ಸಂಪ್ರದಾಯ. ಫ್ರೆಂಚಿನಲ್ಲಿ bienvenu (bien = ಸಂತೋಷ + venir = ಆಗಮನ); ಪೋರ್ಚುಗೀಸಿನಲ್ಲಿ ben (ಸುಖಕರ) vindo (= ಆಗಮನ), ಸ್ಪಾನಿಶ್‌ನಲ್ಲಿ bienvenido (ಅರ್ಥ ಮೇಲಿನಂತೆಯೇ).

ನಮ್ಮ ಉರ್ದು ಬಂಧುಗಳು ಸುಪ್ರಭಾತಕ್ಕೆ ಸುಬಹ್-ಬ-ಖೈರ್ (ಸುಬಹ್ = ಪ್ರಭಾತ + ಖೈರ್ = ಒಳ್ಳೆದು) ಎನ್ನುತ್ತಾರಂತೆ. ಇದು ಪಾರಸೀಕ ನುಡಿ. ಸ್ವಾಗತ ಎನ್ನುವುದಕ್ಕೆ ''ಖುಶ್ – ಆಮದೀನ್'' (ಖುಶಿ ಕೊಡುವ ಆಗಮನ) ಎಂಬ ಪಾರಸೀಕ ಪದಗಳನ್ನು ಅಥವಾ ''ಖೈರ್ ಮಕದಮ್'' ಎಂಬ ಪಾರಸೀಕ ಅರಬಿ ಸಮಸ್ತ ಪದವನ್ನು ಬಳಸುತ್ತಾರೆ. ಅರ್ಥ ಅದೇ.

ಎಷ್ಟೆಷ್ಟು ದೂರದೂರದ ಮಾನವರು ಎಷ್ಟು ಸಮಾನವಾಗಿ ಆಲೋಚಿಸುತ್ತಾರೆ, ಎಷ್ಟು ಸಮಾನವಾಗಿ ಮಾತು ನಿರ್ಮಿಸಿಕೊಳ್ಳುತ್ತಾರೆ, ಮತ್ತು ಎಷ್ಟು ನಿರ್-ಅರ್ಥಕವಾಗಿ ಹೋರಾಡುತ್ತಾರೆ!

* * *

''ಬೊಮ್ಮನ ಹಳ್ಳಿಯ ಕಿಂದರಿ ಜೋಗಿ''ಯ ಕಥೆ ಮೂಲತಃ ಜರ್ಮನಿಯದಾದರೂ ಆ ''ಕಿಂದರಿ'' ಮಾತ್ರ ಭಾರತದ್ದೇ. ಅದು ಸಂಸ್ಕೃತದ ''ಕಿನ್ನರಿ''. ಕಿನ್ನರ ಎಂಬುದು ಹಿಮಾಲಯದ ''ಕಾಲ್ಪನಿಕ'' ಜೀವಿಯಿರಬೇಕೆಂದು ಪಾಶ್ಚಾತ್ಯ ಊಹೆಯಾಗಿದ್ದರೂ ಅದು ಹಿಮಾಲಯದ ಒಂದು ಪಾರ್ವತೀಯ ಜನಾಂಗವೇ ಇರಬೇಕು. ಯಾಕೆಂದರೆ ಅಮರಕೋಶದಲ್ಲಿ ಯಕ್ಷ, ರಕ್ಷಸ್, ಗಂಧರ್ವ, ಕಿನ್ನರ, ಪಿಶಾಚ, ಗುಹ್ಯಕ, ಸಿದ್ಧ, ಭೂತ ಎಂಬ ಅರೆ-ದೇವತೆ (''ದೇವಯೋನಿ'')ಗಳ ಸುದ್ದಿ ಇದೆ. ಇವರಲ್ಲಿ ಗುಹ್ಯಕ (ಬಹುಶಃ ಇಂದಿನ ಗುರ್ಖಾ), ಭೂತ (ಬಹುಶಃ ಭೋಟಿಯಾ) ಇಂದಿಗೂ ಅಲ್ಲಿದ್ದಾರೆ. ''ಕಿನ್ನರ''

ಎಂಬ ಜನಾಂಗವೂ ಉತ್ತರ ಪ್ರದೇಶದ ಹಿಮಾಲಯದ ತಪ್ಪಲುಗಳಲ್ಲಿ ಇದೆ. ಅವರದೇ ಒಂದು ಜಿಲ್ಲೆ ಕೂಡ ಅಲ್ಲಿ ಇದೆ. ಈ ಜನರಿಗೆ ಸಂಗೀತ ಗಂಧರ್ವರಂತೆ ಬಲು ಪ್ರಿಯವೆಂದೂ ಪೌರಾಣಿಕ ಉಲ್ಲೇಖ ಇದೆ. ಅವರ ತಂತೀ ವಾದ್ಯವೇ ''ಕಿನ್ನರಿ''. ಅದೇ ಕುವೆಂಪು ''ಕಿಂದರಿ''. ಕಾಳಿದಾಸ ರಘುವಂಶ, ಕುಮಾರ ಸಂಭವ ಕಾವ್ಯಗಳಲ್ಲಿ ಈ ಜನರನ್ನು ''ಅಶ್ವಮುಖಿ'' ಎನ್ನುತ್ತಾನೆ. ರಾಮಾಯಣದಲ್ಲಿ ಕೂಡ ಕಿನ್ನರರು ಬರುತ್ತಾರೆ. ಶ್ರೌತ ಸೂತ್ರಗಳಲ್ಲಿ ಇವರು ಕಾಣಿಸುತ್ತಾರೆಂದು ಮೋನಿಯರ್ ವಿಲಿಯಮ್ಸ್ ಹೇಳುತ್ತಾರೆ. ಅವರ ಮೈ ಮನುಷ್ಯರ ಹಾಗೆ ಮುಖ ಕುದುರೆಯ ಹಾಗೆ ಎಂದು ಹೇಳಿಕೆ. ಇದನ್ನೆಲ್ಲ ಇಲ್ಲಿ ಹೇಳಲು ಕಾರಣವೇನೆಂದರೆ ಗ್ರೀಕ್ ಪುರಾಣ ಕಥೆಗಳಲ್ಲಿ Centuar ಎಂಬ ಇದೇ ಲಕ್ಷಣದ ಒಂದು ಜನದ ಉಲ್ಲೇಖವಿದೆ. ಒಂದು ನಕ್ಷತ್ರ ಪುಂಜಕ್ಕೂ ಈ ಹೆಸರಿಟ್ಟಿದ್ದಾರೆ. (Alpha Centuar). ಈ ಶಬ್ದ ಗ್ರೀಕಿನಲ್ಲಿ C ಯಿಂದಲ್ಲ, K ಯಿಂದಾರಂಭವಾಗುತ್ತದೆ. ಅರ್ಥಾತ್ ಅದು ''ಕೆಂತುವಾರ್'' ಆಗುತ್ತದೆ. ಇದು ಕಿನ್ನರಕ್ಕೆ ಧ್ವನಿಯಲ್ಲಿ ಎಷ್ಟು ಹತ್ತಿರವಾಗಿದೆಯೆಂದರೆ ಇವು ಒಂದರಿಂದ ಒಂದು ಹುಟ್ಟಿರಬೇಕೆಂದು ತರ್ಕಿಸುವುದು ಅನಿವಾರ್ಯವಾಗುತ್ತದೆ. ಆದರೂ ಕೋಶಕಾರ ಮೋನಿಯರ್ ವಿಲಿಯಮ್ಸ್ ಆಗಲಿ ಕಥಾಸರಿತ್ಸಾಗರ ಸಂಪಾದಕ ಟಾನಿಯಾಗಲಿ ಈ ಸಂಬಂಧವನ್ನು ಚರ್ಚಿಸದಿರುವುದು ಸೋಜಿಗ. Centuar ಗ್ರೀಕ್ ಮೂಲ ಎಲ್ಲಿಯದೆಂದು ಗೊತ್ತಿಲ್ಲವೆಂದು ಆಕ್ಸ್‌ಫರ್ಡ್ ಕೋಶ ಹೇಳುತ್ತದೆ. ಸಂಸ್ಕೃತದಲ್ಲಿ ''ಕಿನ್ನರ''ಕ್ಕೆ ಕಿಂ-ನರ ಅಂದರೆ ಒಂದು ತರಹದ ನರ ಎಂಬ ವ್ಯುತ್ಪತ್ತಿ ಇದೆ. ಆದ್ದರಿಂದ ನಮ್ಮ ಕಿನ್ನರನೇ ಗ್ರೀಕಿನ Centuar ಎಂಬಲ್ಲಿ ನನಗೆ ಸಂಶಯ ಇಲ್ಲ.

೧೫೩

ಜಗತ್ತಿನ ಮಹಾಧರ್ಮಗಳಿಗೆಲ್ಲ ಆಧಾರಭೂತವಾದ ಅವವುಗಳ ಪುಸ್ತಕಗಳಿವೆ. ಉದಾಹರಣೆಗೆ ಕ್ರೈಸ್ತರಿಗೆ ಬೈಬಲ್ (Bible) ಇದೆ. ಅದರಲ್ಲಿ ಯಹೂದ್ಯರಿಗೂ ಕ್ರೈಸ್ತರಿಗೂ ಸಮಾನವಾದ ''ಹಳೇ ಒಡಂಬಡಿಕೆ'' (Old Testament) ಮತ್ತು ಕ್ರೈಸ್ತರಿಗೆ ಮಾತ್ರ ಪವಿತ್ರವಾದ ''ಹೊಸ ಒಡಂಬಡಿಕೆ'' (New Testament) ಸೇರಿವೆ. ಆದರೆ ಬೈಬಲ್ ಎಂಬ ಪದ ಮೂಲತಃ ಗ್ರೀಕಿನದು. ಆ ಭಾಷೆಯಲ್ಲಿ ಬಿಬ್ಲಿಯಾ (Biblia) ಎಂದರೆ ಪುಸ್ತಕಗಳು; ಅದಕ್ಕೆ ಮೂಲ (Biblos) ಕಾಗದಗಳು. ಯುರೋಪಿನಲ್ಲಿ ಕ್ರೈಸ್ತ ಧರ್ಮಪ್ರಚಾರ ಆಗ ಪಂಡಿತ ಭಾಷೆಯಾಗಿದ್ದ ಗ್ರೀಕ್ ಭಾಷೆಯಲ್ಲಿ ಮೊದಲು ಪ್ರಾರಂಭವಾಗಿ ಮೂಲ ಹಿಬ್ರೂ ಭಾಷೆಯಲ್ಲಿದ್ದ ಹಳೇ ಒಡಂಬಡಿಕೆ ಮೊದಲಾದ ಲಿಖಿತ ಸಾಹಿತ್ಯವನ್ನು ಗ್ರೀಕಿಗೆ ಅನುವಾದಿಸಿದ್ದರಿಂದ ಗ್ರೀಕ್ ಹೆಸರು ಈ ಕ್ರೈಸ್ತ ಧರ್ಮ ಗ್ರಂಥಕ್ಕೆ ಬಂತು. ಗ್ರೀಕ್ ಆಗ ಯಹೂದ್ಯರ ಮಧ್ಯಪೂರ್ವ ಪ್ರದೇಶಕ್ಕೂ ಅಧಿಕೃತ ಭಾಷೆಯಾಗಿತ್ತು. ಈ ಹೆಸರು ಲ್ಯಾಟಿನ್ನಿಗೆ ಬಂದು ಉಳಿದೆಲ್ಲ ಭಾಷೆಗಳಿಗೆ ಹಬ್ಬಿತು.

ಇಸ್ಲಾಂ ಧರ್ಮದ ಆಧಾರ ಗ್ರಂಥ ಪ್ರವಾದಿ ಮಹಮ್ಮದರ ವಚನಗಳನ್ನೊಳಗೊಂಡ ಅರಬೀ ಭಾಷೆಯ ಕುರಾನ್ (ಅಲ್‌ಕುರಾನ್). ನಮ್ಮ ಋಷಿಗಳಿಗೆ ಹೇಗೋ ಹಾಗೆ ಮಹಮ್ಮದರಿಗೂ ದೈವೀ ಸ್ಫೂರ್ತಿಯಿಂದ ಹೊಳೆದು ಉಚ್ಚಾರಿತವಾದ ವಚನಗಳನ್ನು ಅವರ ನಿಕಟವರ್ತಿಗಳು ಬರೆದಿಟ್ಟುಕೊಂಡರು. ''ಕುರಾನ್'' ಶಬ್ದದ ಅರ್ಥ ಮಾತ್ರ ಓದಿದ್ದು,

ಓದು, ಪಠಿತ ಎಂದು (reading). ಓದಿದ್ದು ಎಂದ ಮೇಲೆ ಲಿಖಿತವೊಂದು ಇರಲೇ ಬೇಕಲ್ಲ. ಯಾವುದೇ ಧರ್ಮದ ಲಿಖಿತ ಆದಿ ಗ್ರಂಥಕ್ಕೆ ಪ್ರವಾದಿ ಮಹಮ್ಮದರು ಬಹಳ ಮಹತ್ವ ಕೊಟ್ಟಿದ್ದರಂತೆ. ಇಸ್ಲಾಂ ಧರ್ಮ ''ಗ್ರಂಥದ'' ಅಥವಾ ''ಪುಸ್ತಕದ'' ಧರ್ಮಾನುಯಾಯಿ ಗಳಿಗೆ ಧಾರ್ಮಿಕ ಸ್ವಾತಂತ್ರ್ಯದ ಹಕ್ಕನ್ನು ದಯಪಾಲಿಸಿದ್ದರು. ಆಧಾರ ಗ್ರಂಥವಿಲ್ಲದ ಪುಡಿ ಧರ್ಮಗಳಿಗೆ ಅವರು ಈ ಸೌಲತ್ತು ಕೊಟ್ಟಿಲ್ಲವೆಂದು ಹೇಳಲಾಗಿದೆ. ಇಂಡೋನೇಶಿಯಾದ ಬಾಲಿ (Bali) ದ್ವೀಪದಲ್ಲಿ ಪ್ರಾಚೀನ ಹಿಂದೂ ಧರ್ಮವನ್ನು ಉಳಿಸಿಕೊಂಡು ಬಂದಿದ್ದ ಜನರಿಗೆ ಧಾರ್ಮಿಕ ಸ್ವಾತಂತ್ರ್ಯ ನೀಡುವ ಪ್ರಶ್ನೆ ಬಂದಾಗ ಆ ದೇಶದ ಇಸ್ಲಾಮಿ ಧರ್ಮಾಧಿಕಾರಿಗಳು ಬಾಲಿ ನಿವಾಸಿಗಳ ''ಪುಸ್ತಕ'' ಯಾವುದೆಂದು ಕೇಳಿದರಂತೆ. ಇವರಿಗೆ ಹೇಳಲಾಗದ್ದರಿಂದ ಅಲ್ಲಿ (ಆಗ) ಹಿಂದುಗಳಿಗೆ ಅಂಗೀಕಾರ ಸಿಗಲಿಲ್ಲವೆಂದು ವರದಿಯಾಗಿತ್ತು.

ಹಿಂದುಗಳ ಆದಿ-ಮೂಲ ಧರ್ಮಗ್ರಂಥ ವೇದಗಳು. ಋಕ್, ಯಜುಸ್, ಸಾಮವೆಂಬ ಮೂರು ವೇದಗಳು ಆಧಾರ. ವೇದಗಳ ತುದಿಗೆ ಬರುವ ಉಪನಿಷತ್ತುಗಳೆಂಬ ತಾತ್ವಿಕ ಭಾಗಗಳೂ ವೇದಗಳಲ್ಲಿ ಅಡಕವೆಂದು ಸನಾತನಿ ಹಿಂದುಗಳು ಹೇಳಿದರೂ ಕೆಲ ಪಂಥಗಳು ವೇದ ಸಂಹಿತೆಗಳು ಮಾತ್ರವೇ ಪ್ರಮಾಣ ಎನ್ನುತ್ತವೆ. ಆದರೆ ವೇದ ಎಂದರೇನು? ವಿದ್ (= ತಿಳಿ, ಅರಿ) ಧಾತುವಿನಿಂದ ಹುಟ್ಟಿದ ''ವೇದ'' ಪದದ ಅರ್ಥ ಅರಿವು, ಜ್ಞಾನವೆಂದು. ಇವು ಕೂಡ ಋಷಿಗಳಿಗೆ ಸಮಾಧಿಸ್ಥಿತಿಯಲ್ಲಿ ಹೊಳೆದ ಛಂದೋಬದ್ಧ (ಕೆಲವು ಗದ್ಯಕೂಡ) ಜ್ಞಾನವಾಕ್ಯಗಳು. ಇವು ಬಹುಕಾಲ ಗುರುಶಿಷ್ಯ ಪರಂಪರೆಯಲ್ಲಿ ಬಾಯಲ್ಲಿಯೇ ಉಳಿದು ಲಿಖಿತ ರೂಪಕ್ಕೆ ಇಳಿದದ್ದು ತಡವಾಗಿ ವೇದವ್ಯಾಸರಿಂದ. ''ಗ್ರಂಥ'', ''ಗ್ರಂಥಿ'' ಎಂಬ ಪದಗಳು ಋಗ್ವೇದದಲ್ಲಿಯೇ ಕಾಣಿಸಿದರೂ ಅವು ಲಿಖಿತ ಎಂಬರ್ಥ ಕೊಡುತ್ತವೋ ಎಂಬುದು ಖಚಿತವಿಲ್ಲ. ಗ್ರಂಥ ಶಬ್ದಕ್ಕೆ ಕಟ್ಟಿದ್ದು, ಜೋಡಿಸಿದ್ದು, ಹೆಣೆದದ್ದು, ಗಂಟು ಹಾಕಿದ್ದು ಇತ್ಯಾದಿ ಅರ್ಥಗಳಿವೆ. ಪುಸ್ತಕ ಎಂಬರ್ಥದಲ್ಲಿ ''ಗ್ರಂಥ'' ಎಂಬುದು ಬಹುಶಃ ಭೂರ್ಜ ಪತ್ರ ಅಥವಾ ತಾಡಪತ್ರಗಳ ಮೇಲೆ ಮಾತುಗಳನ್ನು ಬರಹಕ್ಕಿಳಿಸಿ ಅವುಗಳನ್ನು ಜೋಡಿಸಿ ಗಂಟು ಕಟ್ಟುತ್ತಿದ್ದುದರಿಂದ ಬಂದ ಹೆಸರಾಗಿರಬಹುದು. ಇವೆಲ್ಲವೂ ಗ್ರಥ್ (= ಕಟ್ಟು, ಜೋಡಿಸು, ಹೊಂದಿಸು ಇತ್ಯಾದಿ) ಧಾತುವಿನಿಂದ ಹುಟ್ಟಿದವುಗಳು.

ಅದೇನಿದ್ದರೂ ಸೀಖ್ ಧರ್ಮದ ಗುರುಗಳು ಸಂಗ್ರಹಿಸಿ ಜೋಡಿಸಿದ ಅವರ ಧರ್ಮಕ್ಕೆ ಆಧಾರವಾದ ಗ್ರಂಥಕ್ಕೆ ಗ್ರಂಥಸಾಹಿಬ್ ಎಂದೇ ಹೆಸರಿಟ್ಟಿದ್ದಾರೆ. ಸೀಖರು ಅದನ್ನೇ ಸಕಲ ರಾಜೋಪಚಾರಗಳಿಂದ ಪೂಜಿಸುತ್ತಾರೆ.

ಭಗವಾನ್ ಬುದ್ಧ ಆಗಿ ಹೋಗಿ ಕೆಲ ಕಾಲಾನಂತರ ಬೌದ್ಧ ಧರ್ಮಕ್ಕೆ ಆಧಾರಭೂತವಾದ ಸಾಹಿತ್ಯವನ್ನು ಸಂಗ್ರಹಿಸಿ ಬೌದ್ಧ ಧರ್ಮಾಚಾರ್ಯರು ಅಧಿಕೃತವಾಗಿ ಪ್ರಕಟಿಸಿದರು. ಅವುಗಳಲ್ಲಿ ಮೂರು ಭಾಗಗಳು. ಅವುಗಳಿಗೆ ತ್ರಿ-ಪಿಟಕಗಳೆಂದು ಹೆಸರಿಟ್ಟರು. ತ್ರಿ = ಮೂರು, ಪಿಟಕ = ಬುಟ್ಟಿ ಅಥವಾ ಪೆಟ್ಟಿಗೆ. ಆಗಲೇ ಲೇಖನ ಕಲೆ ಸಾರ್ವತ್ರಿಕ ವಾಗಿದ್ದುದರಿಂದ ಅವೆಲ್ಲ ಲಿಖಿತಕ್ಕೆ ಬಂದು ಶೇಖರಗೊಳಿಸಲ್ಪಟ್ಟವು. ಒಂದೊಂದು ವಿಭಾಗವನ್ನೂ ಒಂದೊಂದು ಬುಟ್ಟಿ ಅಥವಾ ಪೆಟ್ಟಿಗೆ ಎಂದು ನಾಮಕರಣ ಮಾಡಿದರು. ಈ ಪೆಟ್ಟಿಗೆಗಳು ಬಹುಶಃ ಆಗಿನ ಕಾಲದಲ್ಲಿ ಬಳಕೆಯಲ್ಲಿದ್ದ ಬೆತ್ತ ಮೊದಲಾದ ಬೀಳುಗಳಿಂದ

ಮಾಡಿದವಾಗಿರಬೇಕು. ಕಲೆಹಾಕಿದ ಬಿಡಿ ಸಾಹಿತ್ಯವನ್ನು ಪೆಟ್ಟಿಗೆಯೆಂದು ಕರೆಯುವ ರೂಢಿ ಈಚೆಗಿನವರೆಗೂ ಇತ್ತು. ೧೭ನೇ ಶತಮಾನದ ಸಂಸ್ಕೃತ ಕವಿ – ಅಲಂಕಾರ ಶಾಸ್ತ್ರಿ ಜಗನ್ನಾಥ ಪಂಡಿತ ತನ್ನ ಬಿಡಿ ಪದ್ಯಗಳನ್ನು ''ಭಾಮಿನೀವಿಲಾಸ'' ಎಂಬ ಹೆಸರಿನಿಂದ ಕರೆದ. ''ಹಡಬೆಗೆ ಹುಟ್ಟಿದವರು (ಜಾರಜನ್ಮಾನಃ) ನನ್ನ ಪದ್ಯಗಳನ್ನು ಕದ್ದಾರೆಂದು ಅವನ್ನೆಲ್ಲ ಕಲೆಹಾಕಿ ಪೆಟ್ಟಿಗೆಯನ್ನು ಮಾಡಿದ್ದೇನೆ. (ಮಂಜೂಷೈಕಾ ಕೃತಾಮಯಾ)'' ಎಂದು ಹೇಳಿಕೊಂಡಿದ್ದಾನೆ. ''ಮಂಜೂಷಾ'' ಎಂದರೆ ಪೆಟ್ಟಿಗೆ, ಸಂದೂಕ.

ಅಲಾರಮ್ (alarum) ಎಂಬ ಶಬ್ದ ಈಗ ಸುಮಾರಾಗಿ ಗಡಿಯಾರ ಬಳುಸವವರಿಗೆಲ್ಲ ಗೊತ್ತು. ನಿಶ್ಚಿತ ಗಂಟೆಗೆ ಗಂಟೆ ಹೊಡೆದು ನಮ್ಮನ್ನು ಎಚ್ಚರಿಸುವ ಗಡಿಯಾರಕ್ಕೆ ಅಲಾರಮ್ ಅಥವಾ ಅಲಾರ್ಮ್ (alarm) ಗಡಿಯಾರ ಎನ್ನುತ್ತೇವೆ. Alarm ಎಂಬ ಇಂಗ್ಲೀಷ್ ಪದಕ್ಕೆ ಅಪಾಯದ ಎಚ್ಚರಿಕೆ ಎಂದು ಅರ್ಥ. ಅದರದೇ ಒಂದು ರೂಪ alarum. Alarm ಎಂಬ ಶಬ್ದಕ್ಕೆ ಈ ಕಾರಣದಿಂದ ಗಾಬರಿ, ಗಾಬರಿಗೊಳ್ಳು, ಗಾಬರಿಗೊಳಿಸು ಎಂಬರ್ಥಗಳೂ ಬಂದಿವೆ. ಇದರ ಮೂಲ ಇಟಾಲಿಯನ್; ಅಲ್ಲಿಂದ ಹಳೇ ಫ್ರೆಂಚಿಗೂ ಅಲ್ಲಿಂದ ಮಧ್ಯಕಾಲದ ಇಂಗ್ಲೀಷಿಗೂ ಬಂದು ಈಗ ಇಂಗ್ಲೀಷಿನಲ್ಲಿ ನೆಲೆನಿಂತಿದೆ. ಇಟಾಲಿಯನ್ನಿನಲ್ಲಿ ಅದು all'arme. ಅದರ ಅರ್ಥ to arms - ಅರ್ಥಾತ್ ಆಯುಧ ತೆಗೆದುಕೊಳ್ಳಿ. ಹೀಗೆ ಇದು ತುರ್ತಿನ ಯುದ್ಧಕ್ಕೆ ಕರೆ. ಯುದ್ಧಕ್ಕೆ ಸಜ್ಜಾಗಿರಿ – ಅಂತ. ಅನಂತರ ಅದು ಯುದ್ಧವಲ್ಲದ ಅಪಾಯಕ್ಕೂ ಎಚ್ಚರ ಕೊಡುವಂಥಾದ್ದಾಯಿತು. ಕಡೆಗೀಗ ಯಾವುದೇ ಜಾಗ್ರತೆಯ ಗಂಟೆಯಾಗಿದೆ. ಹಿಂದೆ ಯುರೋಪಿನಲ್ಲಿ ಬಹುತರವಾಗಿ ಇಗರ್ಜಿಗಳ ಗಂಟೆ ಬಾರಿಸಿ ಅಪಾಯದ ಸೂಚನೆ ಕೊಡುತ್ತಿದ್ದರೆಂಬ ತಥ್ಯವನ್ನಿದು ನೆನಪಿಸುತ್ತದೆ.

ಯುರೋಪಿನಲ್ಲಿ ಗಂಟೆ ಬಾರಿಸಿ ಊರಿಗೆಲ್ಲ ಎಚ್ಚರಿಕೆ ಕೊಡುವುದು ಇದೊಂದಕ್ಕೇ ಆಗಿರಲಿಲ್ಲ. ಕತ್ತಲಾದ ಮೇಲೆ ಎಲ್ಲ ಮನೆಗಳಲ್ಲಿಯೂ ದೀಪ ಮತ್ತು ಒಲೆ ಬೆಂಕಿಯನ್ನು ನಂದಿಸಬೇಕೆಂದು ಮಧ್ಯಯುಗದಲ್ಲಿ ನಿಯಮವಿತ್ತು. ಇದಕ್ಕೆ ಸೂಚನೆ ಕೊಡಲು ಗಂಟೆ ಬಾರಿಸಲಾಗುತ್ತಿತ್ತು. ಇದೇ ಇಂದಿಗೂ ಗಲಭೆಯ ಸಮಯದಲ್ಲಿ ಭಾರತದ ಪಟ್ಟಣಗಳಲ್ಲಿ ಪೋಲಿಸರು ಜಾರಿಗೆ ತರುತ್ತಿರುವ ಕರ್ಫ್ಯೂವಿನ ಮೂಲ. ಕಾಲಾಂತರದಲ್ಲಿ ರಾತ್ರಿಯಲ್ಲಿ (ಕೆಲವೊಮ್ಮೆ ಹಗಲಲ್ಲಿ ಕೂಡ) ಇಷ್ಟರಿಂದ ಇಷ್ಟು ಗಂಟೆಯವರೆಗೆ ಬೀದಿಯಲ್ಲಿ ಓಡಾಡಬಾರದೆಂದು ವಿಧಿಸುವುದಕ್ಕೂ ಕರ್ಫ್ಯೂ ಎಂಬ ಪದ ಪ್ರಯೋಗವಾಗತೊಡಗಿತು.

೧೫೪

ಭಾಷೆಯಿಂದ ಭಾಷೆಗೆ ಶಬ್ದಗಳು ವಲಸೆ ಹೋಗುವುದು ನಿರಂತರವಾಗಿ ನಡೆದು ಬಂದ ಪ್ರಕ್ರಿಯೆ. ಅಂದಾಕ್ಷಣ ಒಂದು ಭಾಷೆಯಿಂದ, ಇನ್ನೊಂದು ತೆಗೆದುಕೊಂಡ ಪದಗಳು ಮೂಲಾರ್ಥವನ್ನೇ ಇಟ್ಟುಕೊಂಡಿರುತ್ತವೆನ್ನಲು ಬರುವುದಿಲ್ಲ. ಸಂಸ್ಕೃತ, ದ್ರಾವಿಡ ವರ್ಗವನ್ನು ಒಳಗೊಂಡು ಎಲ್ಲ ಭಾರತೀಯ ಭಾಷೆಗಳಿಗೂ ಪದಗಳನ್ನು ಕೊಡುತ್ತ ಬಂದ ಭಾಷೆ. ಆದರೆ ಹೀಗೆ ಸ್ವೀಕೃತವಾದ ಪದಗಳನ್ನು ಅವು ಬೇರೆಯೆ ಅರ್ಥಕ್ಕೆ ತಿರುಗಿಸಿಕೊಂಡ ಒಂದೆರಡು ಉದಾಹರಣೆಗಳನ್ನು ಚರ್ಚಿಸುತ್ತೇನೆ.

ಉತ್ತರ ಕರ್ನಾಟಕದಲ್ಲಿ ನೀವು ಪ್ರವಾಸ ಎಂಬ ಪದವನ್ನು ಪದೇ ಪದೇ

ಕೇಳಿಸಿಕೊಳ್ಳುತ್ತೀರಿ. ಅಲ್ಲಿ ಇದು ಬೇರೆ ದೇಶ ಪ್ರದೇಶಗಳಲ್ಲಿ ಪ್ರಯಾಣ ಅಥವಾ ಸಂಚಾರ ಎಂಬ ಶಬ್ದಗಳಿಂದ ಸೂಚಿತವಾದ ಅರ್ಥವನ್ನು ಕೊಡುತ್ತದೆ. ಹೀಗೆ ''ಪ್ರವಾಸ ಭತ್ತೆ'' ಎಂದರೆ ಸರಕಾರ ಅಥವಾ ಸಂಸ್ಥೆಯ ಪರವಾಗಿ ಸಂಚಾರ ಅಥವಾ ಪ್ರಯಾಣ ಮಾಡಿದ್ದರ ಖರ್ಚಿನ ಭತ್ತೆ. ''ಪ್ರವಾಸ'' ಎಂಬ ಪದ ಸಂಸ್ಕೃತ ಎಂಬುದೇನೋ ನಿಜ. ಆದರೆ ಸಂಸ್ಕೃತದಲ್ಲಿ ಸಂಚಾರ ಎಂಬರ್ಥ ಅದಕ್ಕಿಲ್ಲ. ಅಲ್ಲಿ ಅದು ಪರದೇಶ ಅಥವಾ ದೂರದೇಶದಲ್ಲಿ ವಾಸಿಸುವುದು ಎಂಬರ್ಥ ಕೊಡುತ್ತದೆ; ಸಂಚರಿಸುವುದು ಎಂಬರ್ಥವನ್ನಲ್ಲ. ''ರೋಗೀ ಚಿರಪ್ರವಾಸೀ, ಪರೋಪಜೀವಿ, ಪರಾವಸಥವಾಸೀ'' ಎಂಬ ಪ್ರಸಿದ್ಧ ಶ್ಲೋಕವಿದೆ. ಇಲ್ಲಿ ''ಚಿರಪ್ರವಾಸೀ'' ಎಂದರೆ ಬಹಳ ಕಾಲ ಊರು ಬಿಟ್ಟು ಅನ್ಯದೇಶ – ಪ್ರದೇಶದಲ್ಲಿ ವಾಸ ಮಾಡಬೇಕಾಗಿ ಬಂದವನು. (ಅವನು ಬದುಕಿದ್ದರೂ ಸತ್ತಂತೆ ಎಂದು ಶ್ಲೋಕ ಹೇಳುತ್ತದೆ.) ಹೋಗಿ ಬರುವವನು ಅಥವಾ ಸಂಚರಿಸುವವನು ಎಂದಲ್ಲ. ಬಂಗಾಲಿಯಲ್ಲಿ ''ಪ್ರವಾಸಿ'' ಪದ ಸಂಸ್ಕೃತ ಕೋಶಗಳಲ್ಲಿ ಹೇಳುವ ಅರ್ಥವನ್ನೇ ಕೊಡುತ್ತದೆ. ಅಲ್ಲಿ ''ಪ್ರವಾಸೀ ಬಾಂಗ್ಲಾ ಸಾಹಿತ್ಯ ಪರಿಷತ್ತು'' ಒಂದಿದೆ. ಬಂಗಾಲ ಬಿಟ್ಟು ಹೊರಗೆ ನೆಲಸಿಯೂ ಬಂಗಾಲಿಯಲ್ಲಿ ಬರೆಯುವವರ ಸಂಘಟನೆ ಅದು. ಸಂಸ್ಕೃತದಲ್ಲಿ ''ಪ್ರವಾಸ'' ಶಬ್ದಕ್ಕೆ ಗಡಿಪಾರು ಮಾಡಲ್ಪಟ್ಟವನೆಂದೂ ಅರ್ಥವಿದೆ. (ಈಗ ''ನಿರ್ವಾಸಿತ'' ಎಂಬ ಪದವನ್ನು ಆ ಅರ್ಥದಲ್ಲಿ ಬಳಸುತ್ತೇವೆ.) ಹಿಂದಿಯಲ್ಲಿಯೂ ಪ್ರವಾಸ ಶಬ್ದಕ್ಕೆ ಮೂಲ ಸಂಸ್ಕೃತದಲ್ಲಿರುವ ಅರ್ಥವೇ ಇದೆ. ಉತ್ತರ ಕರ್ನಾಟಕದಲ್ಲಿ ಪ್ರಯಾಣ ಅಥವಾ ಸಂಚಾರ ಎಂಬರ್ಥ ಹೇಗೆ ಬಂತೆಂದರೆ, ಮರಾಠಿಯಲ್ಲಿ ಅದನ್ನು ಆ ಅರ್ಥದಲ್ಲಿ ಪ್ರಯೋಗಿಸುತ್ತಾರೆ; ಉತ್ತರ ಕರ್ನಾಟಕದವರು ಮರಾಠಿಯಿಂದ ಅದನ್ನು ಸ್ವೀಕರಿಸಿದ್ದಾರೆ ಎನ್ನಬೇಕಾಗುತ್ತದೆ.

ಅನೇಕ ವೇಳೆ ಸಂಸ್ಕೃತದಿಂದ ನೇರವಾಗಿ ತೆಗೆದುಕೊಳ್ಳದೆ ಪ್ರಾಕೃತ ಮೂಲಕ ಪದಗಳನ್ನು ಕನ್ನಡಕ್ಕೆ ತೆಗೆದುಕೊಂಡದ್ದು ಹಿಂದಿನ ಕಾಲದ ಸಾಹಿತ್ಯದಲ್ಲಿ ಕಾಣುತ್ತದೆ. ಹೀಗಾದಾಗ ಅರ್ಥಗಳು ಮೂಲಕ್ಕಿಂತ ಬಹುದೂರ ಹೋಗಿ ಬಿಟ್ಟಿವೆ. ನಮ್ಮ ಆಣೆಯನ್ನೇ ತೆಗೆದುಕೊಳ್ಳಿ. ಇದು ಆಜ್ಞೆಯ (ಆಜ್ಞಾ) ತದ್ಭವ ಎಂದು ವೈಯಾಕರಣಿಗಳು ಹೇಳಿದ್ದಾರೆ. ಆದರೆ ಅದು ಪ್ರಾಕೃತ ಮೂಲಕ ಆ ರೂಪದಲ್ಲಿ ಬಂದದ್ದು. ಆಜ್ಞೆಯೆಂದರೇನೆಂದು ಎಲ್ಲರಿಗೂ ಗೊತ್ತಿದೆ. ಆಣೆಯೆಂದರೇನೆಂಬುದೂ ಸರ್ವವಿದಿತ. ''ಆಣೆ ಹಾಕು'' ಅಂದರೆ ಯಾವುದಾದರೂ ದೇವತೆ, ಹಿರಿಯ ಅಥವಾ ಪ್ರೀತಿಪಾತ್ರ ವ್ಯಕ್ತಿಯ ಹೆಸರು ಹೇಳಿ ಏನನ್ನಾದರೂ ಸತ್ಯವೆಂದು ಪ್ರತಿಜ್ಞೆ ಮಾಡುವುದು ಅಥವಾ ಏನನ್ನಾದರೂ ಮಾಡದಿರುವಂತೆ ಯಾರನ್ನಾದರೂ ನಿರ್ಬಂಧಿಸುವುದು ''ಆಣೆ''. ದೇವರಾಣೆ, ನನ್ನ ಮಗುವಿನಾಣೆ ಇತ್ಯಾದಿ. ಹಳೆಯ ಸಾಹಿತ್ಯದಲ್ಲಿ ಈ ಪದವನ್ನು ಆಜ್ಞೆ (ಅಪ್ಪಣೆ-ತಾಕೀತು) ಎಂಬರ್ಥದಲ್ಲಿಯೂ ಬಳಸಿದ್ದುಂಟು. ಆದರೆ ಈಗ ಅದು ಉಳಿದಿರುವುದು ಮೇಲೆ ಹೇಳಿದ ಅರ್ಥದಲ್ಲಿ ಮಾತ್ರ. ಗಮನಿಸಬೇಕಾದ್ದೆಂದರೆ ಸಂಸ್ಕೃತದಲ್ಲಿ ''ಆಜ್ಞಾ'' ಶಬ್ದಕ್ಕೆ ಒಂದಕ್ಕಿಂತ ಹೆಚ್ಚು ಅರ್ಥಗಳಿದ್ದರೂ ಅವುಗಳಲ್ಲಿ ''ಆಣೆ''ಗೆ ಈಗ ಪ್ರಚಲಿತವಾಗಿರುವ ಅರ್ಥ ಸೇರಿಲ್ಲ. ಅಲ್ಲಿ ''ಆಣೆ''ಗೆ ಶಪಥ ಎಂಬ ಬೇರೆಯೇ ಶಬ್ದ ಇದೆ. ಆಣೆಗೆ ಆಜ್ಞೆಗಿಲ್ಲದ ಅರ್ಥ ಹೇಗೆ ಬಂತು? ದೇವತೆ ಅಥವಾ ಲೋಕೋತ್ತರ ವಸ್ತುವಿನ ಅಪ್ಪಣೆ ಇದು ಎಂದು ಭಾವಿಸಿ ನಡೆಸಬೇಕು ಎಂಬಭಿಪ್ರಾಯದಿಂದ ತೊಡಗಿ ಕಡೆಗೆ ಈಗಿರುವ ಶಪಥ ಎಂಬರ್ಥ ಮಾತ್ರ ಉಳಿದುಕೊಂಡಿರಬೇಕು.

ಜಾಣ ಎಂಬ ಇನ್ನೊಂದು ಪದ ''ಜ್ಞಾನ''ದ ತದ್ಭವವೆಂದು ಹೇಳಲಾಗಿದೆ. ಜ್ಞಾನವುಳ್ಳಾತ ಜಾಣ. ತಿಳಿವಳಿಕೆಯುಳ್ಳವ ಎನ್ನಿ. ಅದೂ ಪ್ರಾಕೃತ ಮೂಲಕ ಬಂದದ್ದೇ. ಆದರೆ ''ಜಾಣ'' ಶಬ್ದ ಇಂದು ಜ್ಞಾನಿ ಎಂಬರ್ಥವನ್ನು ಕೊಡುವುದಿಲ್ಲ. ಚತುರ ಎಂಬರ್ಥ ಮಾತ್ರ ಕೊಡುತ್ತದೆ. ''ಜ್ಞಾನಿ'' ಎಂಬುದು ಹೆಚ್ಚು ಹಿರಿದಾದ ಅರ್ಥ ಕೊಡುವುದಾಗಿ ಬೆಳೆದಿದೆ. ಈಗ ನಾವು ಜಾಣನಿಗೆ ಆರೋಪಿಸುವ ಗುಣ ಜ್ಞಾನಿಗೆ ಇಲ್ಲದೆಯೇ ಇರಬಹುದು. ಜಾಣನಿಗೆ ''ಜ್ಞಾನ'' ಇಲ್ಲದೆಯೂ ಇರಬಹುದು. ''ಜಾಣ'' ವ್ಯವಹಾರದಲ್ಲಿ ತಿಳಿವಳಿಕೆ ಉಳ್ಳವನಷ್ಟೆ.

''ಶ್ರೇಷ್ಠಿ'' ಸೆಟ್ಟಿಯಾದದ್ದನ್ನು ಬಹಳ ಹಿಂದೆ ಚರ್ಚಿಸಿದ್ದೇನೆ. ಪೋಲಿಸಪ್ಪ ಫೌಜದಾರನಾದದ್ದೂ ನಮಗೆ ಗೊತ್ತು. ಇದು ಕಾರ್ಯ ಸಾಧನೆಗಾಗಿ ಕೆಳಮಟ್ಟದ ಅಧಿಕಾರಿಯನ್ನು, ವ್ಯಕ್ತಿಯನ್ನು ಅದೇ ವರ್ಗದ ಮೇಲಿನ ಸ್ಥಾನದ ಉಪಾಧಿಯಿಂದ ಕರೆದು ಉಬ್ಬಿಸುವ ಭಾರತೀಯ ಪ್ರವೃತ್ತಿಗೊಂದು ದೃಷ್ಟಾಂತವೆನ್ನೋಣವೇ ? ಶ್ರೇಷ್ಠಿ ಸೆಟ್ಟಿಯಾದಂತೆ ನಮ್ಮಲ್ಲಿ ಜ್ಯೇಷ್ಠನೂ ಜೆಟ್ಟಿಯೂ ಆಗಿದ್ದಾನೆ. ಗರಡಿಯ ಹಿರಿಯ, ಮಲ್ಲಯುದ್ಧದಲ್ಲಿ ಹಿರಿಯನಾಗಿದ್ದವನಿಗೇ ಬಹುಶಃ ಇದು ಸಲ್ಲುತ್ತಿದ್ದಿರಬೇಕು. ಅದೇ ತದ್ಭವವಾದಾಗ ಮೆಲ್ಲಗೆ ಎಲ್ಲ ಮಲ್ಲರೂ ''ಜೆಟ್ಟಿ''ಗಳೆಂದು ಹೆಸರಿಸಲ್ಪಟ್ಟಿರಬೇಕು. ವಿಶಿಷ್ಟಕ್ಕಿದ್ದ ಅಭಿಧಾನ ಸಾಮಾನ್ಯಕ್ಕೆ ಸಲ್ಲುವಂತಾದ ಇನ್ನೊಂದು ಉದಾಹರಣೆ ಇದು. ಸಾವಕಾಶವಾಗಿ ಮೂಲದ ಅರ್ಥವೇ ಮರೆತು ಹೋಗಿಬಿಟ್ಟಿತು ! ಸಂಸ್ಕೃತದಲ್ಲಿ ''ಜ್ಯೇಷ್ಠ''ವನ್ನು ಮಲ್ಲರಿಗೆ ಅನ್ವಯಿಸಿದ್ದು ಕಾಣುವುದಿಲ್ಲ.

ಭಾಷೆಯಿಂದ ಭಾಷೆಗೆ ವಲಸೆ ಹೋಗುವಾಗ ಅರ್ಥವ್ಯತ್ಯಾಸವಾಗುವ ಉದಾಹರಣೆ ಸಂಸ್ಕೃತ ಶಬ್ದಗಳಿಗೆ ಮಾತ್ರ ಸೀಮಿತವಲ್ಲ. ಅರಬ್ಬೀ ಪದಗಳ ವಲಸೆಯಲ್ಲಿಯೂ ಈ ಪ್ರವೃತ್ತಿ ಕಾಣಿಸುತ್ತದೆ. ಮಾದಕ ವಸ್ತುಗಳನ್ನು ತೆಗೆದುಕೊಂಡಾಗ ಅದು ತಲೆಗೇರುವುದಕ್ಕೆ ನಾವೀಗ ಅಮಲು (ಅರಬ್ಬಿ-ಅಮಲ್) ಎನ್ನುತ್ತೇವಲ್ಲ. ಅರಬ್ಬಿಯಲ್ಲಿ ಈ ಪದಕ್ಕೆ ಕ್ರಿಯೆ (action) ಕ್ರಮ ಎಂದು ಮಾತ್ರ ಅರ್ಥವೆಂದು ಶಂಕರ ಕೆದ್ಲಾಯರು ತೋರಿಸಿದ್ದಾರೆ. ''ಜಾಮೀನನ್ನು ಅಮಲಿಗೆ ತಂದರು'' ಎನ್ನುವಾಗ, ಅಥವಾ ಡಿಕ್ರಿಯ ಅಮಲ್ಜಾರೀ ಎನ್ನುವಾಗ ನಾವು ಅದೇ ಅರ್ಥವನ್ನು ಅಭಿಪ್ರೇತವಾಗಿಟ್ಟುಕೊಳ್ಳುತ್ತೇವೆ. ಆದರೆ ಹಿಂದಿಗೆ, ಅಥವಾ ಉರ್ದುವಿಗೆ ಈ ಪದ ಸಂಕ್ರಮಿಸಿದಾಗ, ಅದು ಮಾದಕದ್ರವ್ಯ ತಲೆ ಗಡರುವುದು ಎಂಬ ಒಂದು ಹೆಚ್ಚಿನ ಅರ್ಥವನ್ನು ಸಂಪಾದಿಸುತ್ತದೆ. ಇದರ ಹಿಂದಿನ ತರ್ಕ ಮಾದಕ ದ್ರವ್ಯ ತನ್ನ ಕ್ರಿಯೆಯನ್ನು ಪ್ರಾರಂಭಿಸಿತು ಎಂಬುದಾಗಿರಬೇಕು.

೧೫೫

''ಅನುಕೂಲಶಾಸ್ತ್ರ'' ಅಥವಾ ''ಅನುಕೂಲಸಿಂಧು'' ಎಂದರೇನೆಂದು ಎಲ್ಲರಿಗೂ ತಿಳಿದದ್ದೇ. ನಮಗೆ ತೊಡಕಾಗಿರುವ ಧಾರ್ಮಿಕ ನಿಯಮಗಳನ್ನು ನಮ್ಮ ಅನುಕೂಲಕ್ಕೆ ಹೊಂದುವಂತೆ ತಿರಿಚುವುದು ಅನುಕೂಲಶಾಸ್ತ್ರ. ಉದಾಹರಣೆಗೆ ಬ್ರಾಹ್ಮಣ ಅಥವಾ ಜನಿವಾರದ ಜಾತಿಗಳಲ್ಲಿ ಸತ್ತವರಿಗೆ ಇದ್ದವರು ಹನ್ನೊಂದು ದಿನ ನಿತ್ಯ ಅಪರ ಕರ್ಮಗಳನ್ನು ಮಾಡಿ ''ಪ್ರೇತ'' ರಾಗಿದ್ದವರನ್ನು ''ಪಿತೃ''ಗಳ ಗುಂಪಿನಲ್ಲಿ ಸೇರಿಸುವುದು ಶಾಸ್ತ್ರವಿಧಿ.

ಅಷ್ಟೂ ದಿನ ಇಷ್ಟೊತ್ತು ತಣ್ಣೀರು ಮಿಂದು ಕರ್ಮಗಳನ್ನು ಮಾಡುವುದು ಎಲ್ಲಿಯ ರಗಳೆ ಎಂದು, ಕೊನೆಯ ಮೂರು ದಿನಗಳಲ್ಲಿ ಎಲ್ಲ ದಿನಗಳ ಕರ್ಮಗಳನ್ನು ಮಾಡಿ ಮುಗಿಸಿದರೆ ''ನಡೆ''ಯುತ್ತದೆ ಎಂದು ನಾವೇ, ಬಹುಶಃ ಯಾವ ಆಧಾರವೂ ಇಲ್ಲದೇ ಈಚೆಗೆ ಮಾಡಿಕೊಂಡದ್ದು ''ಅನುಕೂಲಶಾಸ್ತ್ರ''. ಅದನ್ನೇ ''ಅನುಕೂಲಸಿಂಧು'' ಎಂದು ಕರೆಯುವುದು. ನಮ್ಮ ಸಿನಿಕತನದ ಈ ತಿದ್ದುಪಡಿ ಶಾಸ್ತ್ರದಲ್ಲಿ ''ಸಿಂಧು'' (= ಸಮುದ್ರ) ಎಲ್ಲಿಂದ ಬಂತು ? ಎಂದು ಹಲವರು ಸೋಜಿಗಪಡಬಹುದು. ಹಿಂದೂ ಧರ್ಮ ಕರ್ಮ ವಿಧಿನಿಯಮಗಳನ್ನು ಸಂಗ್ರಹಿಸುವ ಎರಡು ನಿರ್ಣಾಯಕ ಗ್ರಂಥಗಳಿವೆ. ''ಧರ್ಮಸಿಂಧು'' ಮತ್ತು ''ನಿರ್ಣಯಸಿಂಧು'' ಎಂದು ಅವುಗಳ ಹೆಸರುಗಳು. ನಾವು ಅನುಕೂಲಕ್ಕೆ ಸರಿಯಾಗಿ ತಿರುಚಿಕೊಂಡ ಶಾಸ್ತ್ರಕ್ಕೆ ಅನುಕೂಲ ''ಸಿಂಧು'' ಎಂದು ವ್ಯಂಗ್ಯವಾಗಿ ಯಾರೋ ತಮಾಷೆಗಾರ ಶಬ್ದ ಸೃಷ್ಟಿ ಮಾಡಿದ. ಈ ಪದ ದ್ವಂದ್ವ ಯಾವಾಗ ಚಲಾವಣೆಯಲ್ಲಿ ಬಂತೋ ಗೊತ್ತಿಲ್ಲ. ಬರಹದಲ್ಲಿ ಅದು ಪ್ರಕಾಶವಾದದ್ದು ಈ ಶತಮಾನದಲ್ಲಿ ತಾನೆ. ಶಾಸ್ತ್ರ ನಿಯಮಗಳ ಮೇಲಿನ ಶ್ರದ್ಧೆ ಹೋಗಿ, ಕೇವಲ ತೋರಿಕೆಗೆ ಆಚರಣೆ ಮಾಡುವುದು ಈ ಶತಮಾನದಲ್ಲೇ ಹೆಚ್ಚಾದದ್ದು ಅಲ್ಲವೇ ?

ಶ್ರದ್ಧೆಗೆ ಸಂಬಂಧಿಸಿದ ಪದಗಳನ್ನು ಹಿಂದುಗಳಷ್ಟು ವ್ಯಂಗ್ಯಕ್ಕೆ ತಿರಿಚಿದವರು ಬೇರೆ ಯಾರಾದರೂ ಇದ್ದಾರೆಯೆ ಎಂದು ನನಗೆ ಸಂಶಯ. ನಮ್ಮ ''ಅಥರ್ವಣ''ವನ್ನು ನೋಡಿ, ನಮ್ಮ ಆದಿ ಪವಿತ್ರಗ್ರಂಥಗಳಾದ ವೇದಗಳಲ್ಲಿ ಇದು ನಾಲ್ಕನೆಯದು. ''ಅಥರ್ವಣ'' ಎಂಬ ಒಬ್ಬ ಋಷಿಯೂ ಇದ್ದಾನೆ. ಈ ವೇದದಲ್ಲಿ ಮದ್ದು ಮಾಯ ಮಾಟಗಳ ವಿಷಯವೂ ಇದೆ. ಆದ್ದರಿಂದ ಪುಂಡುಪೋಕರಿತನ, ದುರುದುಂಬಿತನ ಇತ್ಯಾದಿ ಅಕಲ್ಯಾಣ ವರ್ತನೆಗಳಿಗೆ ವ್ಯಂಗ್ಯವಾಗಿ ''ಅಥರ್ವಣ'' ಎಂಬ ಪದ ಪ್ರಯೋಗವಾಗಿದೆ. ''ಬರೇ ಅಥರ್ವಣ ಮನುಷ್ಯ''. ''ಅವನದೆಲ್ಲ ಅಥರ್ವಣ ಕೆಲಸವೇ'' ಇತ್ಯಾದಿ (ವಾಸ್ತವವಾಗಿ ಅಥರ್ವ ಋಷಿ ಅಗ್ನಿ ಪೂಜೆಯನ್ನು ಪ್ರಾರಂಭಿಸಿದವನೆಂದು, ಬ್ರಹ್ಮನ ಪ್ರಥಮ ಪುತ್ರನೆಂದು, ನಂಬಲಾದ ಮಹಾ ಪುರೋಹಿತ). ಹೀಗೆ ಅಥರ್ವಣವನ್ನು ಲೇವಡಿಗೊಳಪಡಿಸಿರುವವರು ಕನ್ನಡ-ತುಳು ಜನರು ಮಾತ್ರವೇ ಏನೋ. ಹಿಂದಿ, ಬಂಗಾಲಿ, ಮರಾಠಿ ಕೋಶಗಳಲ್ಲಿ ಅಥರ್ವ, ಅಥರ್ವಣ ಇದ್ದರೂ ಹೀಗೆ ಅದನ್ನು ವ್ಯಂಗ್ಯಕ್ಕೆ ಗುರಿಮಾಡಿದಂತೆ ಕಾಣೆ.

ಇದನ್ನು ಬರೆಯುತ್ತಿರುವಾಗಲೇ ವೈದಿಕರಲ್ಲದ ರಾಜಕೀಯ ಟಿಪ್ಪಣಿಕಾರರೊಬ್ಬರು ಬರೆದ ಲೇಖನದಲ್ಲಿ ''ತರ್ಪಣ'' ಕೊಟ್ಟ ಮಾತು ಓದಿದೆ. ''ಅನೂಚಾನವಾಗಿ ನಡೆದುಕೊಂಡು ಬಂದಿದ್ದ ಸಮಾಜವಾದಕ್ಕೆ'' ತರ್ಪಣ ಬಿಟ್ಟರು. ತರ್ಪಣ ಶಬ್ದಕ್ಕೆ ತೃಪ್ತಿಪಡಿಸುವುದು ಎಂದು ಸಾಮಾನ್ಯ ಅರ್ಥ. ''ಅನ್ನ ಸಂತರ್ಪಣೆ'' ಎಂದರೆ (ಬಹಳ ಜನಕ್ಕೆ) ಊಟ ಹಾಕಿ ತೃಪ್ತಿಪಡಿಸುವುದು. ಆದರೆ ವೈದಿಕ ಆಚಾರಗಳಲ್ಲಿ ಮೃತರಾದವರಿಗೆ ಬಾಂಧವರು ಎಳ್ಳಿನೊಡನೆ (ತಿಲತರ್ಪಣ) ಅಥವಾ ಬರೇ ನೀರನ್ನು (ಜಲಾಂಜಲಿ) ಬೊಗಸೆಯಿಂದ ಬಿಡುವುದು ಎಂದು ತಾಂತ್ರಿಕ ಅರ್ಥವಿದೆ. ಹೀಗೆ ನೀವು ಮಾಡಿದರೆ ಮೃತರಾದವರ ಆತ್ಮಕ್ಕೆ ತೃಪ್ತಿಯಾಗುವುದೆಂದು ನಂಬಿಕೆ. ದೇವತೆಗಳಿಗೆ ಜನಿವಾರ ಬಲಕ್ಕೆ ಹಾಕಿಕೊಂಡು, ಋಷಿಗಳಿಗೆ ಜನಿವಾರ ಮಾಲಾಕಾರ ಮಾಡಿಕೊಂಡು, ಮತ್ತು ಪಿತೃಗಳಿಗೆ ಜನಿವಾರ ಎಡಕ್ಕೆ ಹಾಕಿಕೊಂಡು, ತರ್ಪಣ ಬಿಡುವುದು ವಿಧಿ. ಆದರೆ ಬರೇ ''ತರ್ಪಣ ಬಿಡುವುದು'' ಎಂದರೆ ಸತ್ತವರಿಗೇ ಸರಿ. ಪ್ರತಿಯಾಗಿ ''ಸಮಾಜವಾದಕ್ಕೆ ತರ್ಪಣ

ಬಿಡುವುದು'' ಎಂದರೆ ಸಮಾಜವಾದ ಸತ್ತಿದೆ ಎಂದು ಗೃಹೀತವಾಗಿದೆಯೆಂದು ತಾತ್ಪರ್ಯ.

ಇಲ್ಲಿ ನಾನು ತೋರಿಸ ಹೊರಟಿರುವುದೆಂದರೆ, ವೈದಿಕ ಧರ್ಮವನ್ನು ಅನುಸರಿಸುವವರು ಮಾಡುವ ಒಂದು ವಿಶಿಷ್ಟ ಕರ್ಮದ ಸಾಮತಿಯನ್ನು ಅವೈದಿಕವಾದ ಒಂದು ಲೌಕಿಕ ವಿಷಯಕ್ಕೆ ವೈದಿಕರಲ್ಲದವರು ಕೂಡ ಅನ್ವಯಿಸಿದ್ದಾರೆ. ಭಾಷೆಯ ಮೇಲೆ ಅಲ್ಪಸಂಖ್ಯಾತ ಸಂಸ್ಕೃತಿ ಕೂಡ ಬೀರುವ ಪ್ರಭಾವಕ್ಕೆ ಇದೊಂದು ಉದಾಹರಣೆ. ಅದೇ ಪ್ರಕಾರ ಸಮಾಜವಾದದ ''ಸಮಾಧಿ'' ಕಟ್ಟಿದರು ಎಂದು ಶವವನ್ನು ದಹನ ಮಾಡುವ ಬ್ರಾಹ್ಮಣರೂ ಬರೆಯುತ್ತಾರೆ. ''ದಫನ'' ಮಾಡಿದರು ಎಂದೂ ಹೇಳುತ್ತೇವೆ. ಈ ಪದ ಅರಬ್ಬಿ. ಅದು ಮುಸ್ಲಿಂ ಶವಸಂಸ್ಕಾರಕ್ಕೆ ಅನ್ವಯಿಸುವ ಪದವಾದರೂ ಸಾರ್ವತ್ರಿಕ ಬಳಕೆಗೆ ಬಂದಿದೆ. ಇದೆಲ್ಲ ಈ ದೇಶದ ಮಹಾಸಾಂಸ್ಕೃತಿಕ ಕಲಸುಮೇಲೋಗರದ ದ್ಯೋತಕ.

''ಕಲಸುಮೇಲೋಗರ'' ಎಂದೆನಲ್ಲ, ಅದನ್ನು ದಕ್ಷಿಣ ಕನ್ನಡದವರು ಸಾಂಸ್ಕೃತಿಕ ''ಅವಿಲು'' ಎನ್ನಬಹುದು. ಅನೇಕ ತರದ ತರಕಾರಿಗಳ ಹೋಳುಗಳನ್ನು ಒಟ್ಟಾಗಿ ಬೇಯಿಸಿ ಮಾಡಿದ್ದು ''ಅವಿಲು''. (ತಮಿಳು – ''ಅವಿಯಲ್''). ಅದು ಆ ಜಿಲ್ಲೆಯಲ್ಲಿ ಜನಪ್ರಿಯವಾಗಿದೆ. ಇದು ಪಾಕಶಾಸ್ತ್ರ ಕೂಡ ಭಾಷೆಯನ್ನು ಪ್ರಭಾವಿತಗೊಳಿಸಬಹುದೆಂದು ತೋರಿಸುತ್ತದೆ.

* * *

ಈಗಿನ ತಲೆಮಾರಿನವರು ''ವರಹ'' ಎಂಬ ಹಣದ ಮಾನದ ಸುದ್ದಿ ಕೇಳಿರಲಿಕ್ಕಿಲ್ಲ. ಆದರೆ ನಮ್ಮ ತಲೆಮಾರಿನವರು ಕೇಳಿದ್ದೇವೆ. ''ಒಂದು ವರಹ ಉಡುಗರೆ ಮಾಡಿದ'' ಎಂದರೆ ಆಗ ದೊಡ್ಡ ಉಡುಗರೆಯೇ ಆಗಿತ್ತು. ನಮ್ಮ ಬಾಲ್ಯದಲ್ಲಿಯೂ ''ವರಹ'' ಎಂಬ ನಾಣ್ಯವೇನೂ ಇದ್ದಿಲ್ಲ. ಆದರೆ ನಾಲ್ಕು ರೂಪಾಯಿಯ ಮೊತ್ತವನ್ನು ''ವರಹ'' ವೆಂದು ಕರೆಯಲಾಗುತ್ತಿತ್ತಷ್ಟೇ. ''ವರಹ'' ಎಂಬುದು ಸಂಸ್ಕೃತ ''ವರಾಹ''ದ ತದ್ಭವ. ''ವರಹ'' ಎಂದರೆ ಕಾಡುಹಂದಿ. ಆದರೆ ಹಣದ ಒಂದು ಮಾನಕ್ಕೆ ಈ ಹೆಸರು ಹೇಗೆ ಬಂತು ? ಇದರ ಉತ್ತರಕ್ಕೆ ನಾವು ಇತಿಹಾಸ-ಪುರಾಣಗಳ ಕಡೆ ಹೋಗಬೇಕಾಗುತ್ತದೆ. ಕರ್ನಾಟಕದ ಪ್ರಥಮ ಚಕ್ರವರ್ತಿಗಳಾದ ಚಾಲುಕ್ಯ ವಂಶೀಯರು ತಮ್ಮ ರಾಜ್ಯ ಚಿಹ್ನವಾಗಿ ''ವರಾಹ'' ವನ್ನು ಅಂಗೀಕರಿಸಿದ್ದರು. ಆ ಚಿಹ್ನವನ್ನು ಅವರು ತಮ್ಮ ಮುದ್ರೆಯಲ್ಲಿ ಮತ್ತು ನಾಣ್ಯಗಳ ಮೇಲೂ ಮುದ್ರಿಸುತ್ತಿದ್ದರು. ಇದು ಕರ್ನಾಟಕದ ಅತಿ ಪ್ರಾಚೀನ ಬಂಗಾರದ ನಾಣ್ಯಗಳಲ್ಲೊಂದು. (ಇಂಥ ಒಂದು ಬಂಗಾರದ ವರಾಹ ನಾಣ್ಯವನ್ನು ನಾನು ವಿಜಾಪುರದ ದಿವಂಗತ ನಾರಾಯಣರಾವ್ ಕುಲಕರ್ಣಿಯವರ ಸಂಗ್ರಹದಲ್ಲಿ ನೋಡಿದ್ದೇನೆ.) ವರಾಹ ಮುದ್ರೆ ಇದ್ದದ್ದರಿಂದ ಅದು ಕೂಡ ವರಾಹ, ವರಹ ಎನಿಸಿತು. ವಿಷ್ಣು ವರಾಹ ರೂಪ ಧರಿಸಿ ಭೂಮಿಯನ್ನು ಉದ್ಧರಿಸಿದ. (ಅಂದರೆ ಮುಳುಗಿದ್ದುದನ್ನು ಎತ್ತಿ ಹಿಡಿದ.) ಹಾಗೆಯೆ ಚಾಲುಕ್ಯರೂ ತಾವೂ ಭೂಮಿಯನ್ನು (ಶತ್ರುಗಳಿಂದ) ಉದ್ಧರಿಸಿದೆವೆಂದು ಭಾವಿಸಿ ವರಾಹನ ಚಿಹ್ನವನ್ನು ಸ್ವೀಕರಿಸಿದ್ದರು. ಚಾಲುಕ್ಯರು ಹೋದರು; ಅವರ ರಾಜ್ಯ ಕೈಬಿಟ್ಟಿತು ಮತ್ತು ಪುನಃ ಸಂಪಾದಿಸಲ್ಪಟ್ಟು ಪುನಃ ಕೈಬಿಟ್ಟಿತು. ಆದರೆ ಕ್ರಿ.ಶ. ಸುಮಾರು ೫-೬ನೇ ಶತಮಾನದಿಂದ ೧೯ನೇ ಶತಮಾನದವರೆಗೂ ಈ ಆದ್ಯ ಕನ್ನಡ ಚಕ್ರವರ್ತಿಗಳು ಟಂಕಿಸಿದ ನಾಣ್ಯದ ಹೆಸರು ಉಳಿದುಕೊಂಡಿತು ! ಆ ಬಂಗಾರದ ನಾಣ್ಯ ಚಲಾವಣೆಯಲ್ಲಿ ಉಳಿಯದಿದ್ದರೂ !

೧೫೬

ಕೆಲವೊಮ್ಮೆ ತೀರ ಸಾಮಾನ್ಯ ನಿತ್ಯ ಸವಕಲು ಧಾತುಗಳು ಆಶ್ಚರ್ಯಕರವಾದ ಸಂಸಾರವನ್ನು ಬೆಳೆಸಿಕೊಳ್ಳುತ್ತವೆ. ಒಂದು ಉದಾಹರಣೆ ''ಮಾಡು'' ಎಂಬ ಕ್ರಿಯಾಪದ. ಈ ಶಬ್ದದ ಮೂಲಾರ್ಥ ಏನೆಂದು ವಿವರಿಸುವ ಆವಶ್ಯಕತೆಯೇನೂ ಇಲ್ಲ. ಅದು ಕನ್ನಡ ಭಾಷೆಯಷ್ಟೇ ಹಳೆಯದು; ಸುತ್ತಣ ತುಳು, ತಮಿಳು, ಮಲೆಯಾಳಿ, ತೆಲುಗುಗಳಲ್ಲೆಲ್ಲ ಅದಕ್ಕೆ ಅಕ್ಕ-ತಂಗಿಯರುಂಟು. ''ಕೆಯ್'', ''ಒಡರಿಸು'' ಇತ್ಯಾದಿ ಧಾತುಗಳನ್ನು ಕವಿಗಳು ಇದಕ್ಕೆ ಪರ್ಯಾಯವಾಗಿ ಬಳಸಿದ್ದಾರಾದರೂ ''ಮಾಡು'' ಅತ್ಯಂತ ಸಾಮಾನ್ಯ; ಜನನುಡಿಯಲ್ಲಿ ಪ್ರಧಾನ. ಕಿಟ್ಟೆಲ್‌ಕೋಶದಲ್ಲಿ ಕೇವಲ ಈ ಧಾತುವಿನ ಕ್ರಿಯಾಪದ ರೂಪದ ಕೆಳಗೇ ಒಂದಿಡೀ ಪುಟದಷ್ಟು ವಿಷಯ ದಾಖಲಾಗಿದೆ. ''ಮಾಡು'' ಬಹುತರವಾಗಿ ಶಾರೀರಿಕ ಕ್ರಿಯೆಯ ಸೂಚಕ.

ಈಗ ಮಾಡುವಿಕೆಯ ಸುತ್ತ ವಿಸ್ತರಿಸಬಹುದಾದ ಅರ್ಥಪರಂಪರೆಯನ್ನೆಲ್ಲ ಅಲ್ಲೇ ಬಿಡೋಣ. ಆದರೆ ''ಇವನನ್ನು ಹೀಗೇ ಬಿಡಬಾರದೆಂದು ಮಾಡಿದ್ದೇನೆ,'' ಎನ್ನುವಲ್ಲಿ ''ಮಾಡು'' ಯಾವುದೇ ಶಾರೀರಿಕ ಮಾಡುವಿಕೆಯನ್ನು ಕುರಿಯುತ್ತದೆಯೆಂದು ನನಗೆ ತೋರುವುದಿಲ್ಲ. ಇಲ್ಲಿ ''ಮಾಡು'' ಉದ್ದೇಶವನ್ನು ಧ್ವನಿಸುತ್ತದೆ. ''ನೀನು ಏನಂತ ಮಾಡಿದ್ದೀ?'' ಎಂಬಲ್ಲಿ ''ಮಾಡು'' ಎಣಿಸುವಿಕೆಯನ್ನು ಸೂಚಿಸುತ್ತದೆ. ''ನೀನು ಬರಲಿಕ್ಕಿಲ್ಲ ಅಂತ ಮಾಡಿದ್ದೆ,'' ಎಂಬಲ್ಲಿ ತಪ್ಪು ಊಹೆ ಅಭಿಪ್ರೇತವಾಗುತ್ತದೆ. ಜನರ ಮಾತುಗಳನ್ನು ಕಿವಿಗೊಟ್ಟು ಆಲಿಸುತ್ತಿದ್ದರೆ ''ಮಾಡು''ವಿನ ಇನ್ನೂ ಅನೇಕ ಅವತಾರಗಳು ಲೆಕ್ಕಕ್ಕೆ ಸಿಗಬಹುದು.

''ಮಾಡು''ವಿನ ಮೇಲ್ಕಾಣಿಸಿದ ಅರ್ಥಗಳಿಗೆ ಸಮೀಪವಾಗಿ ''ಮಾಡಿಕೊಳ್ಳು'' ವರ್ತಿಸುತ್ತದೆ. ''ಈ ಸಮಸ್ಯೆಯನ್ನು ಬಗೆಹರಿಸಿಬಿಡಬೇಕೆಂದು ಮಾಡಿಕೊಂಡಿದ್ದೇನೆ.'' ಇದು ಬರೇ ''ಮಾಡಿದ್ದೇನೆ'' ಎಂಬುದಕ್ಕಿಂತ ತುಸು ಹೆಚ್ಚು ದೃಢತೆಯನ್ನು ತೋರಿಸುತ್ತದೆ. ''ಮಾಡಿಕೊಳ್ಳು''ವುದಕ್ಕೆ ಇನ್ನೂ ಒಂದು ಅರ್ಥಚ್ಛಾಯೆ ಇದೆ. ಇವನನ್ನು ''ಎತ್ತಣಿಂದಲಿ ಮಾಡಿಕೊಂಡೆ'' ಎಂದು ಉತ್ತರಕುಮಾರನಿಂದ ಕುಮಾರವ್ಯಾಸ ಅರ್ಜುನ (ಬೃಹನ್ನಳೆ)ನ ಬಗ್ಗೆ ಹೇಳಿಸುವಾಗ ಗಂಟುಹಾಕಿಕೊಂಡೆ ಎಂದು ತಾತ್ಪರ್ಯ. ''ಅವಳನ್ನು ಮಾಡಿಕೊಂಡು'' ಎಂಬಲ್ಲಿ ಮದುವೆಯೆಂದು ಅಭಿಪ್ರಾಯ.

ಇದೆಲ್ಲ ''ಮಾಡು''ವಿನ ಕ್ರಿಯಾಪದ ರೂಪವನ್ನು ಕುರಿತದ್ದಾಯಿತು. ಇನ್ನು ಅದರ ನಾಮಪದ ರೂಪಗಳ ಕುತೂಹಲಕರ ಛಾಯೆಗಳನ್ನು ನೋಡೋಣ. ಈಗ ಅಷ್ಟಾಗಿ ಬಳಕೆಯಲ್ಲಿಲ್ಲದ, ಆದರೆ ಹಳಗನ್ನಡದಲ್ಲಿ ಪ್ರಯೋಗದಲ್ಲಿದ್ದ ''ಮಾಳ್ಕೆ'' (= ಮಾಡುವಿಕೆ) ಯನ್ನು ನೋಡಿ. ರಚನೆ, ನಿರ್ಮಾಣ ಎಂಬ ಅರ್ಥದ ಈ ಪದ ''ಅಂತಪ್ಪ ಮಾಳ್ಕೆಯೊಳ್'' ಎನ್ನುವಲ್ಲಿ ರೀತಿ ಎಂಬರ್ಥಕ್ಕೆ ತಿರುಗುತ್ತದೆ. ಹೀಗೆ ಎನ್ನುವುದಕ್ಕೆ ''ಈ ಮಾಳ್ಕೆಯೊಳ್'' ಎನ್ನುತ್ತಾರೆ ಹಳಗನ್ನಡ ಕವಿಗಳು.

ಇದಕ್ಕಿಂತ ವಿಶೇಷವಾದದ್ದು ''ಮಾಟ''. ಅದು ಮಾಡುವಿಕೆ ಎಂಬರ್ಥದ್ದೇ. ''ಮಾಟವಾದ ಆಕಾರ''. ಎನ್ನುವಾಗ ಆಕಾರ ಒಪ್ಪುವಂತಿದೆ ಎಂದು ತಾನೇ ಅರ್ಥ. ''ಅವಳ ಮಾಟವಾದ ಮೈಕಟ್ಟು'' ಎನ್ನಬಹುದು. ಸರಿಯಾದ ಅಂಗೋಪಾಂಗಗಳ ಪ್ರಮಾಣ (proportion) ಅಥವಾ ಪ್ರಮಾಣಬದ್ಧ ಎಂದು ತಾತ್ಪರ್ಯ. ಆದರೆ ''ಮಾಟ''ಕ್ಕೆ ಇನ್ನೊಂದು

ಪ್ರಸಿದ್ಧ ಅರ್ಥವಿದೆಯಲ್ಲ. ಅದು ಯಾರಿಗಾದರೂ ಕೆಡುಕಾಗುವಂತೆ ಮಾಡಿ ಅಭಿಚಾರಕ್ರಿಯೆ, ಮಂತ್ರ, ಮಾಯಕ ಎಂಬರ್ಥವನ್ನು ಸೂಚಿಸುತ್ತದೆ. ''ಅಂಗಡಿಗೆ ಮಾಟ ಮಾಡಿಸಿದ್ದಾರೆ'', ಇತ್ಯಾದಿ. ಇದಕ್ಕೆ ಸಂಸ್ಕೃತದಲ್ಲಿ ಹೋಲಿಕೆ ಸಿಗುತ್ತದೆ. ''ಕೃತ್ಯಾ'' ಎಂಬುದು ಸಂಸ್ಕೃತದಲ್ಲಿ ಮಾಟಕ್ಕೆ ಸಮಾನ ಪದ. ಅದೂ ಮಾಡು ಎಂಬರ್ಥದ ''ಕೃ'' (ಕೃಂಞ ಕರಣೇ) ಧಾತುವಿನಿಂದಲೇ ಹೊರಟದ್ದು.

ಸಂಸ್ಕೃತದಲ್ಲಿ ಕೂಡ ಈ ''ಕೃ'' ಧಾತುವಿನ ವಿಕರಣಗಳು ಬಗೆಬಗೆಯ ಬಣ್ಣಗಳಲ್ಲಿ ಅರ್ಥ ಕೊಡುತ್ತವೆ. ಸಂಸ್ಕೃತದಲ್ಲಿ ''ಕೃತ್ಯ'' ಎಂದರೆ ಕೆಲಸ, ಮಾಡಬೇಕಾದ್ದು. ಆ ಕೆಲಸ ಒಳ್ಳೆಯದೂ ಇರಬಹುದು, ಕೆಟ್ಟದ್ದೂ ಇರಬಹುದು. ಕನ್ನಡದಲ್ಲಿ ಮಾತ್ರ ''ಕೃತ್ಯ''ವನ್ನು ಕೆಟ್ಟ ಕೆಲಸಕ್ಕೆ ಅನ್ವಯಿಸುವುದೇ ಹೆಚ್ಚು. ಇಲ್ಲಿ ಕೃತ್ಯ = ದುಷ್ಕೃತ್ಯ, ಅಕೃತ್ಯ. ಕ್ರೈಸ್ತರು ಅವರ ಧಾರ್ಮಿಕ ಸಾಹಿತ್ಯವನ್ನು ಅನುವಾದಿಸುವಾಗ ಈ ರೂಢಿಯನ್ನು ಅಲಕ್ಷಿಸಿ, ''ಅಪೋಸ್ತಲರ ಕೃತ್ಯಗಳು'' (Acts of the Apostles) ಎಂದಿದ್ದಾರೆ ಎಂಬುದು ಬೇರೆ ಮಾತು. ನಾವು ಕೂಡ ''ಕೃತಕೃತ್ಯ'' ಎನ್ನುವಾಗ ಕೃತ್ಯಕ್ಕೆ ಕೆಟ್ಟ ಅರ್ಥವನ್ನು ಗಂಟು ಹಾಕಿಲ್ಲ. ಮಾಡಬೇಕಾದ (ಒಳ್ಳೇ) ಕೆಲಸ ಸಾಧಿಸಿದವನೆಂದೇ ಇಲ್ಲಿ ಅರ್ಥ.

ಕೆಲಸ, ಮಾಡುವಿಕೆ ಎಂದೇ ಅರ್ಥಕೊಡುವ ''ಕರ್ಮ'', ''ಕ್ರಿಯಾ'' ಶಬ್ದಗಳು ಕೂಡ ಹೀಗೆ ವಿಕೃತಾರ್ಥವನ್ನು ರೂಢಿ ಮೂಲಕ ಸಂಪಾದಿಸದೆ ಇಲ್ಲ. ''ನನ್ನ ಕರ್ಮ'' ಎನ್ನುವಾಗ ಈ ಜೀವನದಲ್ಲಿ ಅಲ್ಲ, ಹಿಂದಿನ ಜನ್ಮಗಳಲ್ಲಿ ಮಾಡಿರಬಹುದಾದ ಕೆಟ್ಟ ಕೆಲಸಗಳ ಕಲ್ಪನೆ ವ್ಯಂಜಿಸಲ್ಪಡುತ್ತದೆ. ಇವೆರಡೂ ಪದಗಳು ಸತ್ತವರಿಗಾಗಿ ಮಾಡುವ ಅಪರ ಕರ್ಮಗಳಿಗೂ ಅನ್ವಯಿಸುವುದುಂಟು.

ಮೇಲೆ ವಿವೇಚಿಸಿದ ಸಾಮಾನ್ಯ ಪದಗಳ ವಿಶಿಷ್ಟ ಅರ್ಥಪ್ರಸಕ್ತಿ ಎಲ್ಲ ಭಾಷೆಗಳಲ್ಲಿಯೂ ಇದೆ. ಇಂಗ್ಲೀಷಿನಲ್ಲಿ do (= ಮಾಡು)ವನ್ನು ನೋಡಬಹುದು. Doings ಮಾಡುವಿಕೆಗಳು ಎಂಬ ಭಾವನಾಮ ರೂಪಕ್ಕೆ ತಿರುಗಿದಾಗ do ಯಾವಾಗಲೂ ಒಳ್ಳೇ ಕೆಲಸವನ್ನೇ ಸೂಚಿಸುವುದಿಲ್ಲ. ಬಹುತರವಾಗಿ ಕೆಟ್ಟ ಕೆಲಸಗಳನ್ನೇ ಅದು ಸೂಚಿಸುತ್ತದೆ. ಆದರೆ Do come ಎನ್ನುವಾಗ do ಎಂಬುದು ಅರ್ಥವನ್ನು ಒತ್ತಿ ಹೇಳುತ್ತದೆ. ಅವಶ್ಯವಾಗಿ ಬನ್ನಿ ಎಂದಂತೆ. ಭೂತಕಾಲದಲ್ಲಿ ಅದೇ did come ಎಂದರೆ ಖಂಡಿತ ಬಂದಿದ್ದ. Do ವಿಗಿರುವ ಈ ಸಂದಿಗ್ಧಾರ್ಥಗಳಿಗೆ ಪ್ರತಿಯಾಗಿ ಅದೇ ಅರ್ಥದ work ಅಥವಾ makeಗೆ ದುಷ್ಟಾರ್ಥಗಳು ಸಂಗಡಿಸಲಿಲ್ಲ ಎನಿಸುತ್ತದೆ. ಯಾಕೆ ? ಗೊತ್ತಿಲ್ಲ.

ಅಂದ ಹಾಗೆ ಇಂಗ್ಲೀಷಿನ ಈ do ಧಾತು ಸಂಸ್ಕೃತದ ''ಧಾ'' ಧಾತುವಿನ ಜ್ಞಾತಿಯೆಂದು ಭಾಷಾಶಾಸ್ತ್ರಜ್ಞರು ಹೇಳಿದ್ದಾರೆ.

* * *

ಒಂದು ರಂಗಕ್ಕಾಗಿ ತಲೆಯೆತ್ತಿದ್ದ ಶಬ್ದ ಬೇರೊಂದು ರಂಗದಲ್ಲಿ ಬಳಕೆಗೆ ಬರುವುದು ಅಪರೂಪವಲ್ಲ. ''ಆಯುಧ'' ಶಬ್ದವನ್ನು ತೆಗೆದುಕೊಳ್ಳಿ. ''ಆಯುಧ'' ಯುದ್ಧದಲ್ಲಿ ಉಪಯೋಗಿಸುವಂಥ ಉಪಕರಣವೆಂಬುದು ಆ ಶಬ್ದದಿಂದಲೇ ವ್ಯಕ್ತವಾಗುತ್ತದೆ. (ಯುಧ್ = ಹೋರಾಡು) ಆದರೆ ಬೇರೆ ಬೇರೆ ಉದ್ಯೋಗಗಳಲ್ಲಿ ಬಳಸುವ ಉಪಕರಣಗಳನ್ನು ಕೂಡ ಈಗ ''ಆಯುಧ''ಗಳೆಂದೇ ಕರೆಯುತ್ತೇವೆ. ಹೀಗೆ ನವರಾತ್ರಿಯಲ್ಲಿ ನಡೆಯುವ ''ಆಯುಧಪೂಜೆ''ಯಲ್ಲಿ ನಾವು ಯಂತ್ರೋಪಕರಣಗಳನ್ನು ಪೂಜಿಸುತ್ತೇವೆ. ಆದರೆ ಇದೇ

ಅರ್ಥದಲ್ಲಿ ಬಹಳ ಜನ ಉಪಯೋಗಿಸುತ್ತಿರುವ ''ಹತ್ಯಾರ್'' (ಹಿಂದೀ-ಹಥಿಯಾರ್) ಶಬ್ದ ಮಾತ್ರ ಯುದ್ಧದೊಡನೆ ಯಾವುದೇ ಸಂಬಂಧ ಇಲ್ಲದ್ದು. ಅದು ''ಹಾಥ'' ಅಂದರೆ ಕೈಗೆ ಸಂಬಂಧಿಸಿದ್ದು. ವಿಜ್ಞಾನಿಗಳ ಪ್ರಕಾರ ಕೋಲು ಮೊದಲಾಗಿ ಎಲ್ಲ ''ಆಯುಧ''ಗಳು ಕೈಯದೇ ವಿಸ್ತರಣೆಗಳು. ಆ ಮಾತನ್ನು ''ಹಥಿಯಾರ್'' ಪದ ಸಿದ್ಧಪಡಿಸುತ್ತದೆ.



# ಮುಖ್ಯ ಆಧಾರ ಗ್ರಂಥಗಳು

Monier Williams : Sanskrit-English Dictionary

V.S. Apte : Students' Sanskrit Dictionary

Students' English-Sanskrit Dictionary

T. Borrow & M.B. Emeneau : *Dravidian Etymological Dictionary*

*The Oxford English Dictionary*

*The Concise Oxford Dictionary*

*The Twentieth Century Dictionary*

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು

F. Kittel : *Kannada-English Dictionary.*

(ಪ್ರೊ. ಎಂ. ಮರಿಯಪ್ಪಭಟ್ಟರಿಂದ ಪರಿಷ್ಕೃತ-ವಿಸ್ತೃತ)

ಗು. ಭೀ. ಜೋಶಿ : *ಸಂಸ್ಕೃತ ಕನ್ನಡ ಕೋಶ*

ರಾಮಚಂದ್ರಶುಕ್ಲ : *ಆದರ್ಶ ಹಿಂದೀ ಶಬ್ದಕೋಶ*

*ಹಿಂದೀ ಶಬ್ದ ಸಾಗರ*

*ನಾಲಂದಾ ಆದ್ಯತನ ಹಿಂದೀ ಶಬ್ದಕೋಶ*

ರಾಮಚಂದ್ರವರ್ಮ : ಉರ್ದು-ಹಿಂದೀ ಕೋಶ

ಮುಸ್ತಫಾ ಮಹಮ್ಮದ್‌ಖಾನ್ : ಉರ್ದು-ಹಿಂದೀ ಕೋಶ

ಬೇನೀ ಮಾಧವ ಗಾಂಗುಲಿ : *The Students' Bengali-English Dictionary*

ಆಶುತೋಷ ದೇವ : *The Students Favourite Bengali English Dictionary*

Dr. S.K. Chatterjee : *Selected Writings*

Shankara Kedilaya : *Foreign Loan Words in Kannada* (Arabic Persian)

*Bhavan's History of India*

*Encyclopaedia Britannica*

## ಪದ - ಲೇಖಸಂಖ್ಯಾಸೂಚಿ

ಘ



ಚ

# ನವಕರ್ನಾಟಕ ಪ್ರಕಟಣೆಗಳು

## ಪದಕೋಶಗಳು, ಅರ್ಥಕೋಶಗಳು

ಇಗೋ ಕನ್ನಡ. ಸಂಪುಟ-1 (ಸಾಮಾಜಿಕ ನಿಘಂಟು. 6ನೇ ಮುದ್ರಣ)
ಪ್ರೊ|| ಜಿ. ವೆಂಕಟಸುಬ್ಬಯ್ಯ 275.00

ಇಗೋ ಕನ್ನಡ. ಸಂಪುಟ-2 (ಸಾಮಾಜಿಕ ನಿಘಂಟು. 5ನೇ ಮುದ್ರಣ)
ಪ್ರೊ|| ಜಿ. ವೆಂಕಟಸುಬ್ಬಯ್ಯ 225.00

ಇಗೋ ಕನ್ನಡ. ಸಂಪುಟ-3 (ಸಾಮಾಜಿಕ ನಿಘಂಟು. 3ನೇ ಮುದ್ರಣ)
ಪ್ರೊ|| ಜಿ. ವೆಂಕಟಸುಬ್ಬಯ್ಯ 275.00

ಎರವಲು ಪದಕೋಶ (ಕನ್ನಡದಲ್ಲಿರುವ ಅನ್ಯದೇಶ್ಯಗಳ ನಿಘಂಟು)
(4ನೇ ಮುದ್ರಣ) ಪ್ರೊ|| ಜಿ. ವೆಂಕಟಸುಬ್ಬಯ್ಯ 175.00

ಪದಾರ್ಥ ಚಿಂತಾಮಣಿ (5ನೇ ಮುದ್ರಣ) ಪಾ. ವೆಂ. ಆಚಾರ್ಯ 225.00

ನವಕರ್ನಾಟಕ ವಿಜ್ಞಾನ-ತಂತ್ರಜ್ಞಾನ ಪದಸಂಪದ (ಸಂ: ಕೆ. ಎಲ್. ಗೋಪಾಲಕೃಷ್ಣ ರಾವ್,
ಟಿ. ಆರ್. ಅನಂತರಾಮು, ಸಿ. ಆರ್. ಕೃಷ್ಣರಾವ್) 650.00

ಮುದ್ದು ಮಗುವಿಗೊಂದು ಅರ್ಥಪೂರ್ಣ ಹೆಸರು (6000ಕ್ಕಿಂತ ಹೆಚ್ಚು ಹೆಸರುಗಳು)
(7ನೇ ಮುದ್ರಣ) ಶಾಂತಾ ನಾಡಗೀರ 75.00

## ಶಿಕ್ಷಣ

ಪರಿಣಾಮಕಾರಿ ಓದು. ಏನು ? ಹೇಗೆ ? (4ನೇ ಮುದ್ರಣ) ಪಿ. ಚಂದ್ರಶೇಖರಯ್ಯ 35.00

ಮಕ್ಕಳ ಬೆಳವಣಿಗೆ ಮತ್ತು ನಾವು (2ನೇ ಮುದ್ರಣ) ಜಿ. ಎಸ್. ಜಯದೇವ್ 75.00

ಶಿಕ್ಷಕರೆ, ಮಕ್ಕಳೆ, ಪಾಲಕರೆ, ಶೈಕ್ಷಣಿಕ ಯೋಜನಾಕಾರ್ಯ ಯೋಚಿಸುತ್ತಿದ್ದೀರಾ ?
(3ನೇ ಮುದ್ರಣ) ಅರವಿಂದ ಚೊಕ್ಕಾಡಿ 40.00

ಜೀವನ ವಿಜ್ಞಾನ ಶಿಕ್ಷಣ (3ನೇ ಮುದ್ರಣ) ಅರವಿಂದ ಚೊಕ್ಕಾಡಿ 60.00

ಜೀವನ ಕೌಶಲಗಳು (4ನೇ ಮುದ್ರಣ) ಅರವಿಂದ ಚೊಕ್ಕಾಡಿ 60.00

ಮಕ್ಕಳಿಗೆ ಮೌಲ್ಯ ಶಿಕ್ಷಣ (5ನೇ ಮುದ್ರಣ) ಅರವಿಂದ ಚೊಕ್ಕಾಡಿ 60.00

ಆಡಿ ಕಲಿಯೋಣ ಕನ್ನಡ (4ನೇ ಮುದ್ರಣ) ಬೇಂದ್ರೆ ಮಂಜುನಾಥ 45.00

ಪ್ರಾಥಮಿಕ ಶಾಲೆಗಳಲ್ಲಿ ಕನ್ನಡ ಬೋಧನೆ (ಪರಿಷ್ಕೃತ ವಿಸ್ತೃತ 6ನೇ ಮುದ್ರಣ)
ಡಾ|| ಮಹಾಬಲೇಶ್ವರ ರಾವ್ 75.00

ಪ್ರೌಢಶಾಲೆಗಳಲ್ಲಿ ಕನ್ನಡ ಬೋಧನೆ (ಪರಿಷ್ಕೃತ ವಿಸ್ತೃತ 2ನೇ ಮುದ್ರಣ)
ಡಾ|| ಮಹಾಬಲೇಶ್ವರ ರಾವ್ 125.00

ಮನೆ-ಶಾಲೆ (4ನೇ ಮುದ್ರಣ) ಡಾ|| ಮಹಾಬಲೇಶ್ವರ ರಾವ್ 50.00

ಬುದ್ಧಿಶಕ್ತಿ (4ನೇ ಮುದ್ರಣ) ಡಾ|| ಮಹಾಬಲೇಶ್ವರ ರಾವ್ 35.00

ಶಿಕ್ಷಣದಲ್ಲಿ ಮನೋವಿಜ್ಞಾನ (2ನೇ ಮುದ್ರಣ) ಡಾ|| ಮಹಾಬಲೇಶ್ವರ ರಾವ್ 160.00

ಮೆಕಾಲೆಯ ಮಕ್ಕಳು (ಶಿಕ್ಷಣ ನೀತಿಯ ಕುರಿತು ಒಂದು ಅಧ್ಯಯನ)
ಡಾ|| ಮಹಾಬಲೇಶ್ವರ ರಾವ್ 30.00

ಶಿಕ್ಷಣ ರೂಪಾಂತರ ವಿವಿಧ ಶಿಕ್ಷಣ ತಜ್ಞರು
(ವಿವಿಧ ಅನುವಾದಕರು ಸಂ: ವಿದ್ಯಾಂಕುರ) 100.00

ಗುರುಗಳಾಗಿ ತಾಯಿ-ತಂದೆ (4ನೇ ಮುದ್ರಣ) ಕೆ. ಟಿ. ಗಟ್ಟಿ 125.00

ಕಡ್ಡಾಯದ ಪ್ರಾಥಮಿಕ ಶಿಕ್ಷಣ (3ನೇ ಮುದ್ರಣ) ಜಯಕುಮಾರ್ ಅನಗೋಳ್ 35.00

ಶಿಕ್ಷಣದ ಭಾಷೆ ಮತ್ತು ಬುದ್ಧಿವಂತಿಕೆ (3ನೇ ಮು.) ಜಿ. ವಿ. ಶ್ರೀನಾಥ ಶಾಸ್ತ್ರಿ ಮತ್ತು ಇತರರು 30.00

... 'ಪದಾರ್ಥ ಚಿಂತಾಮಣಿ' ಈ ದಿಕ್ಕಿನಲ್ಲಿ [ಪದಪರಂಪರೆ (wordlore) ಎಂಬ ಜ್ಞಾನ ಪ್ರಕಾರಕ್ಕೆ ನಾಂದಿಹಾಕುವ ದಿಕ್ಕಿನಲ್ಲಿ] ಒಂದು ಮಹತ್ವದ ಹೆಜ್ಜೆ. ಇದನ್ನು ರಚಿಸಿರುವವರು ನಮ್ಮ ನಾಡಿನ ವಿರಳ ಬಹುಶ್ರುತರಲ್ಲಿ ಒಬ್ಬರಾದ ಪಾ. ವೆಂ. ಆಚಾರ್ಯ ಅವರು... ಪ್ರತಿಯೊಂದು ಪದಕ್ಕೂ ಅದರದೇ ಆದ ಚರಿತ್ರೆ ಉಂಟು, ಐತಿಹ್ಯವುಂಟು, ಕಥೆಯುಂಟು. 'ಪದಾರ್ಥ ಚಿಂತಾಮಣಿ'ಯಲ್ಲಿ ಕಾಣಿಸಿಕೊಳ್ಳುವ ಪ್ರತಿಯೊಂದು ಪದವನ್ನೂ ಈ ದೃಷ್ಟಿಗಳಿಂದ ಕಾಣಲಾಗಿದೆ... ಇದೊಂದು ಅಧ್ಯಯನಪೂರ್ಣ ಪುಸ್ತಕ. ಸಾಹಿತ್ಯ ಹಾಗೂ ಸಾಹಿತ್ಯೇತರ ಕ್ಷೇತ್ರಗಳಲ್ಲಿ ಆಚಾರ್ಯರು ಪಡೆದಿರುವ ಅಪಾರ ತಿಳಿವಳಿಕೆಗೆ ಸಾಕ್ಷಿ.

**ಹಾ. ಮಾ. ನಾಯಕ**

ಪಾವೆಂ ಅವರ ವ್ಯಂಗ್ಯ ವಿನೋದದ ಶೈಲಿಯನ್ನು ಮೆಚ್ಚಿ ಅವರನ್ನು ಆಗಾಗ ಅಭಿನಂದಿಸಿ ಕಾಗದ ಬರೆಯದೆ ಸಮಾಧಾನವಾಗುತ್ತಿರಲಿಲ್ಲ... ಪಾವೆಂ ಇವರ ಶೈಲಿಯ ಮಾರ್ದವ, ಶ್ರೀರಂಗರ ಪ್ರಖರತೆಯಲ್ಲಿ ಕಾಣದೊರೆಯದಿದ್ದರೆ ಸೋಜಿಗವಲ್ಲ...

**ಶಂ. ಬಾ. ಜೋಶಿ**

...ಪಾವೆಂ ಬಿಚ್ಚು ಮನಸ್ಸಿನ ಮನುಷ್ಯ ಎನ್ನುವುದು ನನಗೆ ಖಾತ್ರಿಯಾದ್ದು ಅವರು ಬ್ರಾಹ್ಮಣರ ಬಗ್ಗೆ 'ಕಸ್ತೂರಿ'ಯಲ್ಲಿ ಹಿಂದೊಮ್ಮೆ ಬರೆದದ್ದನ್ನು ಓದಿದಾಗ. ಕನ್ನಡದ ಕೆಲವು ಲೇಖಕರು ಜಾತಿಯ ಬಗ್ಗೆ ಪ್ರಶ್ನೆಯನ್ನು ಎತ್ತಿದ ಕ್ರಮ ಸಮಾಜಶಾಸ್ತ್ರದ ದೃಷ್ಟಿಯಿಂದಲೂ ಸಾಹಿತ್ಯದ ದೃಷ್ಟಿಯಿಂದಲೂ ಹಿಂದುಳಿದವರನ್ನು ಜಾಗೃತಗೊಳಿಸುವ ರಾಜಕೀಯದ ದೃಷ್ಟಿಯಿಂದಲೂ ಉಪಯೋಗಕ್ಕೆ ಬಾರದಂತೆ ವ್ಯಕ್ತಿನಿಂದೆ ಮತ್ತು ಅಪಪ್ರಚಾರಗಳಲ್ಲಿ ಬೆಳೆಯುತ್ತಿದ್ದ ಸಂದರ್ಭದಲ್ಲಿ ಪಾ. ವೆಂ. ಆಚಾರ್ಯರು ವಿಚಲಿತರಾಗದೆ ಬ್ರಾಹ್ಮಣರನ್ನು ಹೇಗೆ ಎಸೆದರೂ ಕಾಲಿನ ಮೇಲೆ ನೆಲ ತಲುಪುವ ಬೆಕ್ಕಿಗೆ ಹೋಲಿಸಿ ತಮ್ಮನ್ನು ತಾವೇ ಪರೀಕ್ಷಿಸಿಕೊಂಡಿದ್ದರು...

**ಯು. ಆರ್. ಅನಂತಮೂರ್ತಿ**

ಯಾವ ಸವಲತ್ತು ಸೌಲಭ್ಯಗಳೂ ಇಲ್ಲದೆ, ಅಲ್ಪವೇತನ ಇದ್ದಾಗಲೂ ತನ್ನ ಧರ್ಮಪಾಲನೆಗಾಗಿ ವ್ಯವಸಾಯ, ಅಧ್ಯಯನಗಳನ್ನು ಸಾಗಿಸಿದ ಪಾವೆಂ ಆಂಗ್ಲ ಪ್ರಪಂಚದ ವಾಲ್ಟರ್ ಲಿಪ್‌ಮನ್‌ನಂತೆ ಜ್ಞಾನಕ್ಕೂ (wisdom) ಆರ್ಟ್ ಬುಕ್‌ವಲ್ಡ್‌ನಂತೆ ಬರವಣಿಗೆಯ ಕಾಕು-ವ್ಯಂಗ್ಯ-ವಿನೋದಗಳಿಗೂ ಖ್ಯಾತರಾಗಿದ್ದಾರೆ. ಕನ್ನಡ ಪತ್ರಿಕಾ ರಂಗಕ್ಕೇನೆ ಒಂದು ಹೊಸಮುಖ ಆಯಾಮ ಒದಗಿಸಿದ ಅವರ ಸ್ವೋಪಜ್ಞತೆಯನ್ನು ಲಾಂಗೂಲ್ಯವನ್ನು ಪತ್ರಿಕಾ ಪ್ರಪಂಚ ನಿಡುಗಾಲ ಕೊಂಡಾಡುವುದು.

**ಕು. ಶಿ. ಹರಿದಾಸ ಭಟ್ಟ**

## ಪದಾರ್ಥ ಚಿಂತಾಮಣಿ

₹ 225 Code : 001587

ISBN 81-7302-348-4




www.navakarnataka.com
http://navakarnataka.blogspot.com